ಶ್ರೀ ವಾಲ್ಮೀಕಿ ಮಹರ್ಷಿ ವಿರಚಿತವೂ ಶ್ರೀ ವಸಿಷ್ಠ ಮಹರ್ಷಿ ಪ್ರೋಕ್ತವೂ
ಆದ

# ಯೋಗವಾಸಿಷ್ಠ

ಸಂಪುಟ ೨೦

## ನಿರ್ವಾಣ ಪ್ರಕರಣ

ಕನ್ನಡಿಸಿದವರು
[illegible]

ಮುದ್ರಕರು
ಮಾಡಲ್ ಮುದ್ರಾಕ್ಷರ ಶಾಲೆ,
ಚಿಕ್ಕಪೇಟೆ ಚೌಕ, ಬೆಂಗಳೂರು ನಗರ
೧೯೫೩

# ಯೋಗವಾಸಿಷ್ಠ

## ಸಂಪುಟ ೨೦

## ನಿರ್ವಾಣ ಪ್ರಕರಣ

ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲಾ — ಸಂಖ್ಯೆ ೩೪

ಶ್ರೀ ವಸಿಷ್ಠ ಮಹರ್ಷಿ ವಿರಚಿತವೂ ಶ್ರೀ ವಾಲ್ಮೀಕಿ ಮಹರ್ಷಿ ಪ್ರೋಕ್ತವೂ ಆದ

# ಯೋಗವಾಸಿಷ್ಠ

## ಸಂಪುಟ ೨೦

## ನಿರ್ವಾಣ ಪ್ರಕರಣ

ಜೀವುಡು ಕನ್ನಡಿಸಿದುದು

ಮುದ್ರಕರು
ಮಾಡಲ್ ಮುದ್ರಾಕ್ಷರ ಶಾಲಾ,
ಅಕ್ಕಿಪೇಟೆ ಚೌಕ, ಬೆಂಗಳೂರು ನಗರ
೧೯೫೩

# ಪೀಠಿಕೆ

ಯೋಗವಾಸಿಷ್ಠವು ಅದ್ವೈತಸಿದ್ಧಾಂತಕ್ಕೆ ಸೇರಿದ ಪ್ರಕರಣ ಗ್ರಂಥ ಇದಕ್ಕೆ ವಾಸಿಷ್ಠ ರಾಮಾಯಣ ಎಂದು ಹೆಸರುಂಟು ಅದ್ವೈತ ಗುರುಪರಂಪರೆಯ ಆದ್ಯರಾದ ವಸಿಷ್ಠರು "ಸೃಷ್ಟಿಯ ಮೊದಲು ದಿನಗಳಲ್ಲಿ ಲೋಕದಲ್ಲಿ ಶಾಂತಿಯು ನೆಲೆಗೊಳ್ಳಲೆಂದು ಭಗವಂತನಾದ ಚತುರ್ಮುಖನು ಉಪದೇಶಿಸಿದ ಜ್ಞಾನವಿದ್ಯೆ" ಯನ್ನು ಶ್ರೀ ರಾಮನ ಚಿತ್ತ ಶಾಂತಿಗಾಗಿ ಹೇಳಿದರೆಂದೂ, ಅದನ್ನೇ ವಾಲ್ಮೀಕಿಗಳು ಬ್ರಹ್ಮನ ಅನುಜ್ಞೆಯಿಂದ ಗ್ರಂಥವಾಗಿ ವಿರಚಿಸಿದರೆಂದೂ ಈ ಗ್ರಂಥದಲ್ಲಿ ಹೇಳಿದೆ ವಿದ್ಯಾರಣ್ಯರು, ನಿಶ್ಚಲದಾಸರು ಮೊದಲಾದ ಅದ್ವೈತಾಚಾರ್ಯರನೇಕರು ಈ ಗ್ರಂಥದ ಅನೇಕಾಂಶಗಳನ್ನು ತಮ್ಮ ಗ್ರಂಥಗಳಲ್ಲಿ ಸಂಗ್ರಹಿಸಿದ್ದಾರೆ ವಾಸಿಷ್ಠ ಸಿದ್ಧಾಂತವೂ ಶಾಂಕರಸಿದ್ಧಾಂತವೂ ಕೆಲವೆಡೆಗಳಲ್ಲಿ ಭಿನ್ನೈಸುವುದೆಂದು ಕೆಲವರ ಅಭಿಪ್ರಾಯವಿದೆ ಆದರೂ ಅದ್ವೈತ ಸಂಪ್ರದಾಯವನ್ನು ಹಿಡಿದ ಮುಮುಕ್ಷುಗಳೂ ಜಿಜ್ಞಾಸುಗಳೂ ಈ ಗ್ರಂಥವನ್ನು ಪರಮಾದರದಿಂದ ಅಧ್ಯಯನ ಮಾಡುತ್ತಾರೆ

ಭೋಗೈಕ ಪರಾಯಣವಾದ ಆಧುನಿಕ ನಾಗರೀಕತೆಯ ದೇಶಗಳಲ್ಲಿಯೇ ಹುಟ್ಟಿ ಬೆಳೆದ ಅನೇಕ ದಾರ್ಶನಿಕರು ನಿರೂಪಿಸಿರುವ ಸಿದ್ಧಾಂತಗಳಿಗೂ ಈ ವಾಸಿಷ್ಠ ಸಿದ್ಧಾಂತಕ್ಕೂ ಎಷ್ಟೋ ಅಂಶಗಳಲ್ಲಿ ಏಕತಾನತೆಯು ಇರುವುದು ಒಂದು ವಿಶೇಷ ಸಂಗತಿ

ಈ ಗ್ರಂಥದಲ್ಲಿ ನಿರ್ಣಯ ಸಾಗರ ಪ್ರೆಸ್ಸಿನಲ್ಲಿ ತಾತ್ಪರ್ಯ ಪ್ರಕಾಶವೆಂಬ ವಾಖ್ಯಾನದೊಡನೆ ಮುದ್ರಿತವಾಗಿರುವ ಮೂಲವನ್ನೇ ಬಹು ಮಟ್ಟಿಗೆ ಅನುಸರಿಸಲಾಗಿದೆ ಹಿಂದೆ ಆಸ್ಥಾನ ವಿದ್ವಾನ್ ಬ್ರಹ್ಮಶ್ರೀ॥ ಗುಂಡು ಶಾಸ್ತ್ರಿಗಳು ಕೃಷ್ಣರಾಜ ವೈಭವವೆಂಬ ಹೆಸರಿನಿಂದ ವೈರಾಗ್ಯ, ಮುಮುಕ್ಷು ವ್ಯವಹಾರ, ಉತ್ಪತ್ತಿ, ಸ್ಥಿತಿ, ಉಪಶಮಗಳೆಂಬ ಮೊದಲಿನ ಐದು ಪ್ರಕರಣಗಳನ್ನು ಮೂಲ-ಅನುವಾದ ಸಹಿತವಾಗಿ ಪ್ರಕಟಿಸಿದ್ದರು ಈಗ ಇಲ್ಲಿ ಪ್ರಕಟವಾಗಿರುವ ಅನುವಾದವು ಸ್ವತಂತ್ರವು ಅವಶ್ಯಕವೆಂದು ತೋರಿದ ಕಡೆಗಳಲ್ಲಿಯೂ, ಗ್ರಂಥಾಂತರಗಳಲ್ಲಿ ಹೇಳಿರುವುದು ಓದುಗರ ಗಮನಕ್ಕೆ ಬಂದು ಓದಿದ ವಿಷಯವು ದೃಢವಾಗಲೆಂದೂ, ಟಿಪ್ಪಣಿಗಳನ್ನು ಕೊಡಲಾಗಿದೆ

ಭಾರತವಿಂದು ಜಾಗ್ರತವಾಗಿದೆ ಮಾದರಿಯ ಮೈಸೂರು ಅಕ್ಷರ ಪ್ರಚಾರವನ್ನು ದೇಶಾದ್ಯಂತವೂ ಹರಡಿ ಕೀರ್ತಿವಂತವಾಗಿದೆ ನಾನಾ ಮುಖವಾಗಿ ಬೆಳೆಯುತ್ತಿರುವ ದೇಶದ ಸೌಭಾಗ್ಯ ಮಂದಿರಕ್ಕೆ ಕಲಶವಾಗಿ ಜನರಲ್ಲಿ ವಿದ್ಯಾವಂತರಾಗಬೇಕೆಂಬ ಆಸೆಯು ಬಲವಾಗುತ್ತಿದೆ ಕಲಿತ ವಿದ್ಯೆಗಳೆಲ್ಲವೂ, ಸಾರ್ಥಕವಾಗಬೇಕಾದರೆ ಬ್ರಹ್ಮವಿದ್ಯೆಯನ್ನು ಕಲಿಯಬೇಕೆಂಬ ಪ್ರಾಚೀನರ ಉಪದೇಶವಿಂದು ಎಲ್ಲರ ಮನಸ್ಸಿಗೂ ಬರುವ ಕಾಲವೂ ಬಂದಿದೆ ಇಂತಹ ಸಂಧಿ ಕಾಲಗಳಲ್ಲಿ ಈ ಗ್ರಂಥವು ಸುಲಭ ಕನ್ನಡದಲ್ಲಿ ಬರುವುದು ಕನ್ನಡ ಲೋಕದ ಸುದೈವವು ಕಾವ್ಯ ಶೈಲಿಯಲ್ಲಿ ವೇದಾಂತವನ್ನು ಇಷ್ಟು ಸುಂದರವಾಗಿ, ಸುಲಭವಾಗಿ, ಬೋಧಿಸುವ ಗ್ರಂಥವು ಇನ್ನೊಂದಿಲ್ಲ ಇದನ್ನು ಓದಿ ಅರ್ಥಮಾಡಿಕೊಳ್ಳಲು ಗ್ರಂಥಾಂತರಗಳ ಸಹಾಯವು ಬೇಕಿಲ್ಲ ಶ್ರದ್ಧೆಯೊಂದಿದ್ದರೆ ಸಾಕು ಆದುದರಿಂದ ಈ ಗ್ರಂಥದಿಂದ ಆಗುವ ಲೋಕೋಪಕಾರವು ಅಷ್ಟಿಷ್ಟಲ್ಲ

ಈ ಗ್ರಂಥವು ಈ ರೂಪದಲ್ಲಿ ಬರುವುದಕ್ಕೆ ಕಾರಣರು ನಮ್ಮನ್ನಾಳುವ ಶ್ರೀಮನ್ಮಹಾರಾಜರವರು ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ ಸಿ ಬಿ, ಜಿ ಸಿ ಎಸ್ ಐ ಅವರು ಈ ಗ್ರಂಥದ ಪಠನ ಪಾರನಗಳಿಂದ ಲಭಿಸುವ ಶ್ರೇಯಸ್ಸೆಲ್ಲವೂ ಮಹಾ ಸನ್ನಿಧಾನಕ್ಕೇ ಸೇರಿದುದು

ಈ ಕಾರ್ಯಕ್ಕೆ ತನ್ನನ್ನು ನಿಯಮಿಸಿದ ಆಳುವ ಮಹಾಸ್ವಾಮಿಯವರಿಗೆ ಅನುವಾದಕನು ಅತ್ಯಂತ ಕೃತಜ್ಞನಾಗಿ ಈ ಗ್ರಂಥದ ಅಧ್ಯಯನದಿಂದ ತನಗೆ ಆದ ಪರಮೋಪಕಾರವನ್ನು ನೆನೆದು ಸಮಸ್ತ ಸನ್ಮಂಗಳಾನಿ ಭವಂತು ಎಂದು ಹರಕೆಯನ್ನು ಹೊರುತ್ತಾನೆ.

ಬೆಂಗಳೂರು ನಗರ,
೧—೧೧—೧೯೫೩.

**ದೇವುಡು**

# ವಿಷಯ ಸೂಚಿಕೆ

ಶ್ರೀ

# ಯೋಗವಾಸಿಷ್ಠ

## ನಿರ್ವಾಣ ಪ್ರಕರಣ

### ತ್ರ್ಯಶೀತಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ —

ಚಿನ್ಮಾತ್ರಪರಮಾಕಾಶ ಏಷ ಯಃ ಕಥಿತೋ ಮಯಾ ।
ಏಷೋಽಸೌ ಶಿವ ಇತ್ಯುಕ್ತಸ್ತದಾ ರುದ್ರಃ ಪ್ರನೃತ್ಯತಿ ॥೧॥

ಯಾಸೌ ತಸ್ಯಾಕೃತಿರ್ನಾಸಾವಾಕೃತಿಃ ಕೃತಿನಾಂ ವರ ।
ತಚ್ಚಿನ್ಮಾತ್ರಘನಂ ವ್ಯೋಮ ತಥಾ ಕಚತಿ ತಾದೃಶಂ ॥೨॥

---

### ಎಂಭತ್ತಮೂರನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು —

೧ ಚಿನ್ಮಾತ್ರವಾದ ಪರಮಾಕಾಶವು ಯಾವುದುಂಟೋ ಅದನ್ನೇ ನಾನು ನಿನಗೆ ಹೇಳಿದೆನು ಅದನ್ನೇ ಶಿವವೆಂದೂ ಹೇಳಿದೆನು ಅವನೇ ರುದ್ರನಾಗಿ ನಾಟ್ಯವಾಡುವನು

೨ ಆ ರುದ್ರನ ಆಕೃತಿ ಯಾವುದುಂಟೋ ಅದನ್ನು ಬಲ್ಲವರು ಆಕಾರವೆಂದು ಗ್ರಹಿಸುವುದಿಲ್ಲ ಅದು ಚಿನ್ಮಾತ್ರಘನವಾದ ಆಕಾಶವು ಅದು ಆ ರೀತಿಯಾಗಿ ವರ್ತಿಸುವುದು : ಅಷ್ಟೇ !

ಮಯಾ ದೃಷ್ಟ್ವಾ ತದಾಕಾಶಮೇವ ಶಾಂತಂ ತದಾಕೃತಿಃ ।
ಮಯ್ಯೈವ ತತ್ಪರಿಜ್ಞಾತಂ ನಾನ್ಯಃ ಪಶ್ಯತಿ ತತ್ತಥಾ ॥೩॥

ಯಥಾ ನಾಮ ಸ ಕಲ್ಪಾಂತಃಸ ಚ ರುದ್ರಃ ಸಾ ಚ ಭೈರವೀ ।
ಮಾಯಾಮಾತ್ರಂ ತಥಾ ಸರ್ವಂ ಪರಿಜ್ಞಾತಮಲಂ ಮಯಾ ॥೪॥

ಚಿದ್ವ್ಯೋಮೈವ ಪರಂ ಶೂನ್ಯಂ ಸಂನಿವೇಶೇನ ತೇನ ತತ್ ।
ತಥಾ ಸಂಲಕ್ಷ್ಯತೇ ನಾಮ ಭೈರವಾಕಾರತಾಂ ಗತಂ ॥೫॥

ವಾಚ್ಯವಾಚಕಸಂಬಂಧಂ ವಿನಾ ಬೋಧೋ ನ ಜಾಯತೇ ।
ಯಸ್ಮಾತ್ತಸ್ಮಾತ್ತ್ವಯಿ ಮಯಾ ದೃಷ್ಟಮೇವ ಪ್ರವರ್ಣಿತಂ ॥೬॥

---

೩. ನಾನು ಶಾಂತವಾಗಿರುವ ಆ ಆಕಾಶವೇ ಆ ಆಕೃತಿಯಾಗಿರುವುದನ್ನು ಕಂಡೆನು ಕೂಡಲೇ ಅದೇನು ಎಂಬುದನ್ನೂ ತಿಳಿದೆನು. ತತ್ವದೃಷ್ಟಿಯಿಲ್ಲದವರು ಯಾರೂ ಈ ರಹಸ್ಯವನ್ನು ತಿಳಿಯರು.

೪ ಆ ಪ್ರಲಯವಾಗಲಿ, ಆ ರುದ್ರನಾಗಲಿ, ಆ ಭೈರವಿಯಾಗಲಿ, ಎಲ್ಲವೂ ಮಾಯೆಯೇ! ಮಾಯೆಯಲ್ಲದೆ ಇನ್ನೇನೂ ಅಲ್ಲ ಎಂಬುದನ್ನು ತಿಳಿದೆನು.

೫ ಇರುವುದೆಲ್ಲವೂ ಚಿದಾಕಾಶವೇ! ಅದು ಪರಮ ಶೂನ್ಯವು. ಸಂನಿವೇಶ ಬಲದಿಂದ ಬೇರೆಬೇರೆ ರೂಪವಾಗಿ ಕಾಣುವುದು. ಆ ರೂಪವು ಭೈರವಾಕಾರವೂ ಆಗುವುದು.

೬ ವಾಚ್ಯವಿದು, ವಾಚಕವಿದು, ಎಂದು ಹೇಳಿ ಸಂಬಂಧವನ್ನು ಕಲ್ಪಿಸಿ ತೋರಿಸಿದಲ್ಲದೆ ಬೋಧವು ಹುಟ್ಟುವುದಿಲ್ಲ. ಅದರಿಂದ ನಿನಗೆ ಗೊತ್ತಾಗಲೆಂದು ನಾನು ಕಂಡುದನ್ನು (ಈ ಸಂಬಂಧ ನಿರ್ದೇಶ ಪೂರ್ವಕವಾಗಿ) ವರ್ಣಿಸಿದೆನು.

ಯನೇವ ವಾಙ್ಮಾಪಾರೂಢಮೇತತ್ಕ್ರಾಮ ಸದ್ವೈವ ತೇ ।
ರೂಢಾಧಿಭೌತಿಕದೃಶಃ ಕ್ಷಣಾನ್ಮಾಯಾತ್ಮತಾಂ ಗತಂ　　॥೭॥

ನ ಭೈರವೀ ಸಾ ನೈವಾಸೌ ಭೈರವೋ ನೈವ ಸಂಕ್ಷಯಃ ।
ಸಮಸ್ತಮೇವ ತದ್ಭ್ರಾಂತಿಮಾತ್ರಂ ಚಿದ್ವ್ಯೋಮ ಭಾಸತೇ　　॥೮॥

ಸ್ವಪ್ನನಿರ್ಮಾಣಪುರವತ್ಸಂಕಲ್ಪರಣವೇಗವತ್ ।
ಕಥಾರ್ಥಸಾರ್ಥರಸವನ್ಮನೋರಾಜ್ಯವಿಲಾಸವತ್　　॥೯॥

ಯಥಾ ಸ್ವಪ್ನಪುರಂ ಸ್ವಚ್ಛೇ ವ್ಯೋಮ್ನಿ ಮೌಕ್ತಿಕಧೀರ್ಯಥಾ ।
ಯಥಾ ಕೊ ಕೋಂಡ್ರಕಂ ವ್ಯೋಮ್ನಿ ತಥಾಚಿದ್ಭಾತಿ ಚಿದ್ಘನೇ　　॥೧೦॥

---

೭　ನಾವು ಆಡುವಾಗ ಮಾತಿನಲ್ಲಿರುವ ಸತ್ ಯಾವುದುಂಟೋ ಅದೇ ಆಧಿಭೌತಿಕ ದೃಷ್ಟಿಯುಳ್ಳವನಿಗೆ ಒಂದೇ ನಿಮಿಷದಲ್ಲಿಯೇ ಸತ್ಯವು ಎನ್ನಿಸುವುದು. ಹೀಗಾಗುವುದೇ ಮಾಯಾತ್ಮತೆಯು.

೮　ಆ ಭೈರವಿಯೂ ಇಲ್ಲ. ಆ ಭೈರವನೂ ಇಲ್ಲ ಆ ಪ್ರಲಯವೂ ಇಲ್ಲ. ಎಲ್ಲವೂ ಬರಿಯ ಭ್ರಮೆಯೇ! ಭ್ರಾಂತಿಯಿಂದ ಚಿದಾಕಾಶವೇ ಹಾಗೆ ಕಾಣಿಸುವುದು.

೯　ಕನಸಿನಲ್ಲಿ ಕಂಡ ಊರಿನ ಹಾಗೆ, ಸಂಕಲ್ಪದಲ್ಲಿ ನಡೆವ ರಣದ ಸಂಭ್ರಮದಂತೆ, ಕಥೆಯಲ್ಲಿರುವ ಸನ್ನಿವೇಶಗಳ ಸ್ವಾರಸ್ಯದಂತೆ, ಮನೋರಾಜ್ಯದ ವಿಲಾಸದಂತೆ, ಇವೆಲ್ಲವೂ ಭ್ರಾಂತಿಯೇ!

೧೦　ಕನಸಿನಲ್ಲಿ ನಗರವು ಕಾಣಿಸುವಂತೆ, ನಿರ್ಮಲವಾಗಿರುವ ಆಕಾಶದಲ್ಲಿ ಮುತ್ತು ಕಾಣಿಸುತ್ತಿದೆಯೆಂದು ತೋರುವಂತೆ, ಆಕಾಶದಲ್ಲಿ ಕೋಕೋಂಡ್ರಕಗಳು ಕಾಣುವಂತೆ, ಚಿದ್ಘನದಲ್ಲಿ ಆ ಚಿತ್ತು ಕಾಣಿಸುವುದು. (ಕೋಕೋಂಡ್ರಕ ಎಂದರೆ ಕಣ್ಣು ಮುಂದೆ ಹಾರಾಡುವಂತೆ ಕಾಣುವ ಬಿಳಿಯ ತುಂಡುಗಳು)

ಚಿನ್ಮಾತ್ರಾಕಾಶಮೇವಾಚ್ಛಂ ಕಚತಿ ಸ್ವಾತ್ಮನಾತ್ಮನಿ ।
ತಥಾ ನಾಮ ಯದಾಭಾತಿ ತದಾತ್ಮೈವ ಜಗತ್ತಯಾ ।।೧೧।।

ಯಥಾ ಚಿದ್ವ್ಯೋಮ್ನಿ ಕಚತಿ ಸ್ವ ಏವಾತ್ಮಾ ತಥಾ ಪಟೇ ।
ತಥಾ ಕಚತಿ ತತ್ರತ್ರ ಕಲ್ಪಾಂತಾನಲನರ್ತನೇ ।।೧೨।।

ಶಿವಯೋರೇವಮಾಕಾರೋ ನಿರಾಕಾರೋಂಗ ವರ್ಣಿತಃ ।
ಅಧುನಾ ಶೃಣು ತೇ ವಕ್ಷ್ಯೇ ನೃತ್ಯಸ್ಯಾವೃತ್ತತಾಸ್ಥಿತಂ ।।೧೩।।

ಚೇತನಂ ಚೇತನಾಧಾತೋಃ ಕಿಂಚಿತ್ಸಂಸ್ಪಂದನಂ ವಿನಾ ।
ಕ್ವಚಿತ್ಸ್ಥಾತುಂ ನ ಶಕ್ನೋತಿ ವಸ್ತ್ವವಸ್ತುತಯಾ ಯಥಾ ।।೧೪।।

---

೧೧ ಚಿನ್ಮಾತ್ರವೇ ಹೊರತು ಇನ್ನೇನೂ ಅಲ್ಲದ ಶುದ್ಧಾಕಾಶವೇ, ತನ್ನಿಂದಲೇ, ತನ್ನಲ್ಲಿಯೇ ವರ್ತಿಸುವುದು. ಎಂದಾದಮೇಲೆ ಯಾವುದು ಯಾವುದು ಜಗತ್ತಿನ ರೂಪವಾಗಿ ಕಾಣುವುದೋ ಅದೆಲ್ಲವೂ ಆತ್ಮವೇ !

೧೨ ತನ್ನದೇ ಆದ ಚಿದಾಕಾಶದಲ್ಲಿ ವರ್ತಿಸುವಂತೆಯೇ ಆತ್ಮವು ಪ್ರಲಯಕಾಲದ ಕೊನೆಯ ಅಗ್ನಿತಾಂಡವದಲ್ಲಿಯೇ ತಾನೇ ವರ್ತಿಸುವುದು (ಕಚತಿ)

೧೩ ಶಿವಾಶಿವರ ಆಕಾರವು ಹೀಗೆ ನಿರಾಕಾರವೇ ! ಎಂಬುದನ್ನು ವರ್ಣಿಸಿದ್ದಾಯಿತು. ಇನ್ನು ಅವರ ನೃತ್ಯವೂ ಕೂಡ ಅನೃತ್ತತೆಯು ಎಂದರೆ ಅದೂ ಮಾಯಾಮಾತ್ರವೇ ಎಂಬುದನ್ನು ಹೇಳುವೆನು ಕೇಳು.

೧೪ ಚೇತನವು ಚೇತನವಾದ್ದರಿಂದಲೇ ಯಾವ ಸ್ಪಂದವೂ ಇಲ್ಲದೆ ಇರಲಾರದು. ಹಾಗೆ ಸ್ಪಂದವಿಲ್ಲದೆ ನಿಃಸ್ಪಂದವಾಗಿರಲು ಸಾಧ್ಯವೇ ಇಲ್ಲ. ವಸ್ತುವು ಯಾವಾಗಲಾದರೂ ಅವಸ್ತುವಾಗಿ ಇರಲು ಸಾಧ್ಯವಾದೀತೇನು ?

ಸ್ವಭಾವಾಚ್ಚೇತನಂ ತಸ್ಮಾದ್ರುದ್ರತ್ವೇನ ತಥಾ ಸ್ಥಿತಂ ।
ಹೇಮೇವ ರೂಪಕತ್ವೇನ ಸಂನಿವೇಶವಿಲಾಸಿನಾ ॥೧೫॥

ಯನ್ನಾಮ ಚೇತನಂ ಯತ್ರ ತದವಶ್ಯಂ ಸ್ವಭಾವತಃ ।
ಸ್ಪಂದಧರ್ಮಿ ಭವತ್ಯೇವ ವಸ್ತುತಾ ಹಿ ಸ್ವಭಾವಜಾ ॥೧೬॥

ಯಃ ಸ್ಪಂದಶ್ಚಿದ್ಘನಸ್ಯಾಸ್ಯ ಶಿವಸ್ಯಾಸ್ಯ ಸ ಏವ ನಃ ।
ಸ್ವವಾಸನಾವೇಶವಶಾತ್ ಸತ್ಯಮೇವ ವಿರಾಜತೇ ॥೧೭॥

ಅತಃ ಸ ಕಲ್ಪಾಂತಶಿವೋ ರುದ್ರೋ ರೌದ್ರಾಕೃತಿರ್ದ್ರುತಂ ।
ಯನ್ನೃತ್ಯತಿ ಹಿ ತದ್ವಿದ್ಧಿ ಚಿದ್ಘನಸ್ಪಂದನಂ ನಿಜಂ ॥೧೮॥

---

೧೫ ಅದರಿಂದ, ಚೇತನವು ತನ್ನ ಸ್ವಭಾವದಿಂದಲೇ (ಎಂದರೆ ಅನ್ಯ ಪ್ರೇರಣವಿಲ್ಲದೆಯೇ, ಅಕಾರಣವಾಗಿಯೇ) ರುದ್ರತ್ವವನ್ನು ಹೊಂದಿತು. ಚಿನ್ನವು ಬೇರೆ ಬೇರೆ ಸನ್ನಿವೇಶಗಳಲ್ಲಿ ಒಡವೆಯಾಗದಿರುವುದೆಂತು ?

(ಅತಏವ ಸದ್ರೂಪಂ ಬ್ರಹ್ಮ ಸರ್ವಜಗದ್ಘಟಿತೇ ದೇಹೇ ರುದ್ರದೇವ್ಯಾಕಾರ ವಿಪರ್ಯಾಸೇನ ಅಧಿಷ್ಠಾನತಾ ಸ್ವಭಾವೇನ ಸ್ಥಿತಮಿತ್ಯಾಹ—ತಾ. ಪ್ರ.)

೧೬ ಚೇತನವೆಂಬುದು ಯಾವದುಂಟೋ ಅದು ಅವಶ್ಯವಾಗಿ ಸ್ವಭಾವವಾಗಿಯೇ ಸ್ಪಂದಧರ್ಮವುಳ್ಳದು. ವಸ್ತುತೆಯು ವಸ್ತುವಿನ ಸ್ವಭಾವದಿಂದ ತಾನೇ ಆಗುವುದು ? ಹಾಗೆಯೇ ಇದೂ ಕೂಡ ! (ವಸ್ತುತಾ ಅಧಿಷ್ಠಾನತಾ —ತಾ. ಪ್ರ.)

೧೭ ಶಿವವಾದ ಚಿದ್ಘನದ ಸ್ವಭಾವದಿಂದಲೇ ಆಗುವ ಯಾವ ಸ್ಪಂದವುಂಟೋ ಅದೇ ನಮಗೆ, ನಮ್ಮ ವಾಸನಾಬಲದಿಂದ, ಸತ್ಯವಾಗಿ ಕಾಣಿಸುತ್ತದೆ.

೧೮ ಅದರಿಂದ, ಕಲ್ಪಾಂತ ಶಿವನೂ, ರೌದ್ರಾಕೃತಿಯ ರುದ್ರನೂ, ಆತನು ಕುಣಿದಾಡುವ ಅದ್ಭುತ ನರ್ತನವೂ, ಚಿದ್ಘನವು ನಿಜಭಾವವನ್ನು ಹಿಡಿದು ಮಾಡುವ ಸ್ಪಂದವೇ ಹೊರತು ಇನ್ನೇನೂ ಅಲ್ಲವೆಂದು ತಿಳಿ.

ಶ್ರೀರಾಮ ಉವಾಚ:—

ಪ್ರಾಮಾಣಿಕದೃಶಾ ದೃಶ್ಯಮಿದಂ ನಾಸ್ತ್ಯೇವ ವಸ್ತುತಃ ।
ಯದೇವಾಸ್ತೀವ ತತ್ಸರ್ವಂ ಕಲ್ಪಾಂತೇ ಪ್ರವಿನಶ್ಯತಿ ॥೧೯॥

ತತ್ಕಾಲ್ಪಾಂತೆ ಮಹಾಶೂನ್ಯೇ ಏತಸ್ಮಿನ್ಪರಮಾಂಬರೇ ॥
ಕಥಂ ಚಿನ್ನಾಮ ವಾ ಚೇತ್ಯಂ ಚೇತಾ ಚೇತತಿ ಚಿದ್ಘನಃ ॥೨೦॥

---

ಶ್ರೀರಾಮನು ಕೇಳಿದನು:—

೧೯ ನಿಜವಾಗಿ ನೋಡಿದರೆ, ಈ ದೃಶ್ಯವು ಪೃಥಕ್ಕಾದ ವಸ್ತುವಾಗಿ ಇಲ್ಲವೇ ಇಲ್ಲ. ಒಂದು ವೇಳೆ ಇದ್ದರೂ ಕಲ್ಪಾಂತದಲ್ಲಿ ಸಂಪೂರ್ಣವಾಗಿ ನಾಶವಾಗುವುದು

(ಪ್ರಾಮಾಣಿಕ ದೃಶಾ ನಾಸ್ತ್ಯೇವೇತಿ ನತಸ್ಮಿನ್ ಕಲ್ಪೇ ಪ್ರಶ್ನಃ ! ಅ ಪ್ರಾಮಾಣಿಕದೃಷ್ಟಿ ಕಲ್ಪೇ ಪೃಚ್ಛಾಮಿ—ಯದೇವ ಕಿಂಚಿದಸ್ತೀವ ತತ್ಸರ್ವಂ ಕಲ್ಪಾಂತೇ ಪ್ರವಿನಶ್ಯತಿ । —ತಾ. ಪ್ರ.)

೨೦ ಆದರಿಂದ, ಕಲ್ಪಾಂತದಲ್ಲಿ ಎಲ್ಲವೂ ಮಹಾಶೂನ್ಯವಾಗಿ ಪರಮಾಂಬರವೊಂದೇ ನಿಲ್ಲುವುದೆನಲು, ಚಿದ್ಘನವೆನ್ನುವುದು ಹೇಗೆ ? ಚೇತಾ ಎನ್ನುವುದು ಏನು ? ಚೇತತಿ ಎನ್ನುವುದು ಹೇಗೆ ? ಚೇತ್ಯ ಎನ್ನು ವುದು ಹೇಗೆ ?

(ತೆತ್ತಥಾ ಸತಿ ಚಿತಃ ಅಚೇತ್ಯಂ ಚೇತ್ಯರಹಿತಂ ಚಿನ್ನಾಮವಾ ಕಥಂ । ತಥಾ ಆಶ್ರಯಾ ಭಾವೇ ಚೇತಾ ಚೇತಯಿತಾವಾ ಕಥಂ । ಸ್ವಾತಿರಿಕ್ತಚಿತಿ ಕ್ರಿಯಾಭಾವೇ ಚಿಘ್ನನಶ್ಚೇತತಿವಾ ಕಥಂ । ತ್ರಿಪುಟೀನೋಪಪದ್ಯತೇ—ಇತ್ಯರ್ಥಃ । ಯದಿಚಾವಿದ್ಯಾ ತದಾನೀಮಸದಪಿ ದೃಶ್ಯಂ ದರ್ಶಯತೀತಿ ತತ ಏವ ತ್ರಿಪುಟೀ ಸಿದ್ಧಿರುಚ್ಯೇತ ತರ್ಹಿ ಸರ್ಗ ಪ್ರಲಯಯೋರವಿಶೇಷಃ । ನಹ್ಯಚೇತಿತೇ ಸರ್ವಜಗದ್ಘಟಿತೇ ರುದ್ರದೇವೀ ಶರೀರೇ ತನ್ನೃತ್ಯಂವಾ ಸಂಭವತಿ । ನಹಿಯುಗಪದ್ದ್ವೈತ ತದೈಕ್ಯಂಚ ಭಾವಯಿತುಂ ಶಕ್ಯಮಿತಿ ಭಾವಃ — ತಾ. ಪ್ರ.)

ಉಪಸಂಹಾರ ದೃಷ್ಟಿಯಿಂದ ಕಾರ್ಯವೆಲ್ಲವೂ ಕಾರಣದಲ್ಲಿ ಅಡಗಿಹೋಗುವುದು ಎಂದರೆ, ಕಾರಣವೊಂದೇ ನಿಲ್ಲುವುದು ಎಂದರೆ, ಅಲ್ಲಿ ಅಡಗಿಹೋದುದು

---

ತ್ರಿಪುಟಿಯೇ ಹೊರತು ಕಾರಣವಲ್ಲ. ಆದರಿಂದಲೇ ಕಾರ್ಯವು ಕಾರಣದಿಂದ ಆಯಿತು ಎನ್ನುವುದನ್ನು ಒಪ್ಪದೆ ಅದ್ವೈತವು ಕಾರ್ಯವೇ ಇಲ್ಲ ಎನ್ನುವುದು. ಹಾಗಾದರೆ ಕಾರ್ಯವು ಕಾಣುತ್ತಿವೆಯಲ್ಲ ಎಂದರೆ, ಇದು ಗಂಧರ್ವನಗರಾಕಾರವು : ಎಂದರೆ ಮಿಥ್ಯಾ : ಭ್ರಾಂತಿ. ಕನಸಿನ ಹಾಗೆ.

ಹಾಗಾದರೆ ಅಲ್ಲಿ ಅರ್ಥಕ್ರಿಯಾಕಾರಿತ್ವ ಎಂದರೆ ಇನ್ನೊಂದು ಫಲವನ್ನು ಕೊಡುವುದು ಕಾಣುವುದಲ್ಲಾ ಎಂದರೆ, ಫಲವು ಯಾರಿಗೆ? ಫಲವೆನ್ನುವುದು ಯಾವುದು ? ಅರ್ಥವು ಯಾವುದು ? ಯಾರಿಗೆ ? ಏತಕ್ಕೆ ? ಹೀಗೆ ನೋಡುವಾಗ, ಕನಸಿನಂತೆ ಎನ್ನುವುದರಿಂದ, ಜಗತ್ತಿನಲ್ಲಿ ಸಾರ್ವತ್ರಿಕವಾಗಿ ಅಂಗೀಕರಿಸಿರುವ ಕಾರ್ಯ-ಕಾರಣ ವಾದವು ಹಾರಿಹೋಗುವುದು. ಬ್ರಹ್ಮೇತರ ವಸ್ತುವೇ ಇಲ್ಲ ಎಂಬ ಅಖಂಡ ವಾದದಲ್ಲಿ, ತೆರೆಯಾಗಿ ಕಂಡರೂ, ನೊರೆಯಾಗಿ ಕಂಡರೂ, ಸುಳಿಯಾಗಿ ಕಂಡರೂ, ಹೊಳೆಯಾಗಿ ಕಂಡರೂ, ಅದೆಲ್ಲವೂ ನೀರೇ ಆಗಿರುವಂತೆ, ಆ ನೀರು ತನ್ನ ಸ್ವಭಾವದಿಂದಲೇ ಎಂದರೆ ತನ್ನ ದ್ರವತ್ವಸ್ವಭಾವದಿಂದಲೇ ಇದೆಲ್ಲವೂ ಆಗುವಂತೆ, ಚಿತ್ತೇ ತಾನು ಏಕರಸವಾಗಿ ಘನವಾಗಿದ್ದರೂ ಅನೇಕವಾಗಿ ಅಚಿತ್ತಾಗಿ ಕಾಣುವುದನ್ನು ಅದ್ವೈತ ಸಂಪ್ರದಾಯವು ಭ್ರಾಂತಿ ಎನ್ನುವುದು. ಈ "ಭ್ರಾಂತಿ"ಯು ಪೂರ್ಣವಾಗಿ ಅರ್ಥವಾಗಬೇಕಾದರೆ, ಜ್ಞಾನವು ತನ್ನಿಂದ ಬೇರೆಯಲ್ಲ ಎಂಬುದು ಅರ್ಥವಾಗಬೇಕು. ಜ್ಞಾನವು ಬಾಹ್ಯವನ್ನು ಏತದಹಂಜಾನಾಮಿ—ಇದನ್ನು ನಾನು ತಿಳಿಯುವೆನು ಎಂಬ ತ್ರಿಪುಟೀ ಕಾರ್ಯವಿರುವುದು. ಇದೇ ವೇದದಲ್ಲಿ ಹೇಳುವ ತ್ರಿವೃತ್ಕರಣ. ಈ ತ್ರಿಪುಟಿಯು ಭ್ರಾಂತಿಮೂಲ. ಇದರ ಆಚೆ ಎಂದರೆ ತ್ರಿಪುಟಿಯನ್ನು ಒಡೆದಾಗ ಸತ್ಯ. ಆದರಿಂದಲೇ ವಾಸಿಷ್ಠದಲ್ಲಿ ಉತ್ಪತ್ತಿ ಪ್ರಕರಣದಲ್ಲಿಯೇ ಎಂದರೆ ಸಿದ್ಧಾಂತೋಪದೇಶದ ಮೊದಲನೆಯ ಘಟ್ಟದಲ್ಲಿಯೇ ತ್ರಿಪುಟಿಯನ್ನು ಒಡೆದರೆ ಸತ್ಯದರ್ಶನವಾಗುವುದು ಎಂದು ಹೇಳಿರುವುದು. ತ್ರಿಪುಟಿ ಒಡೆಯುವುದು ಹೇಗೆ ಎಂದರೆ, ಯಾವುದಾದರೊಂದನ್ನು ಬಿಡು ಎಂದರೂ, ಜ್ಞಾತಾಜ್ಞಾನಜ್ಞೇಯಗಳಲ್ಲಿ ಯಾವುದೊಂದನ್ನು ಬಿಟ್ಟರೂ ಉಳಿಯುವುದು ಜ್ಞಾನವೊಂದೇ ! ಆ ಜ್ಞಾನವೇ ಕಾಲದೇಶಗಳಿಂದ ಅಬಾಧಿತವಾಗಿರುವುದರಿಂದ ಸತ್ ! ಅಖಂಡವಾಗಿ ಅಹತವಾಗಿರುವುದರಿಂದ ಆನಂದ. ಆ ಜ್ಞಾನವೇ ಚಿತ್ ! ಹೀಗೆ ಸಚ್ಚಿದಾನಂದವೊಂದೇ ಉಳಿಯುವುದು. ಅದರಿಂದ, ಈ ಸಚ್ಚಿದಾನಂದವೊಂದೇ ಎಂಬ ಪರಮಾರ್ಥ ದೃಷ್ಟಿಯಲ್ಲಿ ನೋಡುವಾಗ, ಅಜ್ಞದೃಷ್ಟಿಗೆ ಕಾಣುವ ತ್ರಿಪುಟಿಯೆನ್ನುವುದು ಹೇಗೆ ಹುಟ್ಟುವುದು ಎಂಬುದು ಪ್ರಶ್ನವು. ತ್ರಿಪುಟಿಯುಂಟೆಂಬ ದ್ವೈತವೂ, ತ್ರಿಪುಟಿ

ಶ್ರೀ ವಸಿಷ್ಠ ಉವಾಚಃ—

ಏತದೇವ ತದಾಪ್ಯಂಗ ದ್ವೈತೈಕ್ಯಾಂಭೋಧಿಶಾಂತಯೇ । ॥೨೧॥

ಯದಿ ಚಿನ್ಮಾತ್ರನಭಸಶ್ಚೇತ್ಯಮಸ್ತಿ ನ ಕಿಂಚನ
ನ ಕಿಂಚಿಚ್ಚೇತತಿ ತತಃ ಕ್ವಚಿತ್ಕಿಂಚಿತ್ಕದಾಚನ । ॥೨೨॥

ಸರ್ವಂ ಶಾಂತಂ ದೃಷನ್ಮೌನಂ ವಿಜ್ಞಾನಘನಮಂಬರಂ
ಯಚ್ಚೇದಂ ಚೇತ್ಯತೇ ನಾಮ ತತ್ಸ್ವಭಾವೋಸ್ಯ ವಲ್ಗತಿ । ॥೨೩॥

---

ಇಲ್ಲವೆಂಬ ಅದ್ವೈತವೂ ಏಕಕಾಲದಲ್ಲಿ ಹೇಗೆ ಸಾಧ್ಯ ಎಂಬ ಪ್ರಶ್ನದಲ್ಲಿಯೇ ಪರಮಾರ್ಥ ದೃಷ್ಟಿಯಿಂದ ಅದ್ವೈತ, ಅಜ್ಞದೃಷ್ಟಿಯಿಂದ ದ್ವೈತ ಎಂಬ ಉತ್ತರವೂ ಇದೆ ಎನ್ನುವುದನ್ನು ನೋಡಿ

ಶ್ರೀ ವಸಿಷ್ಠನು ಹೇಳಿದನು:—

೨೧ ದ್ವೈತವೋ ಐಕ್ಯವೋ ಎಂಬ ಸಂದೇಹದ ಸಮುದ್ರವು ಶಾಂತವಾಗಲೆಂದೇ ಹೇಳುವೆನು ಕೇಳು.

೨೨ ಯಾವಾಗ ಚಿನ್ಮಾತ್ರವಾದ ಆಕಾಶಕ್ಕಿಂತಲೂ ಬೇರೆಯಾದ ಚೇತ್ಯವು ಇನ್ನು ಯಾವುದೂ ಇಲ್ಲವೆಂದಾಯಿತೋ ಆಗ ಚೇತತಿ ಎನ್ನುವುದು ಯಾವುದನ್ನು ? ಚೇತತಿ ಎಲ್ಲಿ ? ಯಾವಾಗ ?

(ಕ್ರಿಯೆಗೆ ಕರ್ತೃ, ಕಾಲ, ದೇಶಗಳು ಬೇಕು. ಅವಿಲ್ಲವಾಗಿ ಅದೇ ಇಲ್ಲ ಎಂದು ಅಭಿಪ್ರಾಯ)

(ಯತ್ರತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್ — ಇತಿ ಶ್ರುತೇರಿತಿ ಭಾವಃ — ತಾ. ಪ್ರ.)

೨೩ ಇರುವುದೆಲ್ಲವೂ ಶಾಂತವೂ ದೃಷನ್ಮೌನವೂ ವಿಜ್ಞಾನಘನವೂ ಆದ ಚಿದಾಕಾಶವೊಂದೇ ! ಆದರಿಂದ ಚೇತ್ಯವೆಂದು ಆಗುವುದು ಕೂಡ ಅದರ ಸ್ವಭಾವವೇ ಎನ್ನಬೇಕು.

ಚಿತ್ಸ್ವಭಾವಸ್ಯ ಶಾಂತಸ್ಯ ಸ್ವಸತ್ತಾಯಾಮವಸ್ಥಿತೇಃ
ಯಥಾ ಸ್ವಪ್ನೇ ಚಿದೇವಾಂತಃ ಪುರಪತ್ತನವದ್ಭವೇತ್ । ॥೨೪॥

ಪುರಾದಿ ನತು ತತ್ಕಿಂಚಿದ್ವಿಜ್ಞಾನಾಕಾಶಮೇವ ತತ್
ಆತ್ಮನಾತ್ಮನಿ ಚಿಚ್ಛೂನ್ಯಂ ಜ್ಞಾತ್ವಾ ಚ ಜ್ಞೇಯಮಪ್ಯಲಂ ॥೨೫॥

ತಥಾ ಚ ಸರ್ಗಾದಾರಭ್ಯ ವೇತ್ತಿ ಸ್ವಂ ಕಚನಂ ಚ ತತ್
ಸ್ವಯಮಂತಃ ಕಚಂತೀ ಚಿತ್ಸ್ವಭಾವಾಕಾಶಕೋಟರೇ । ॥೨೬॥

---

(ತಥಾಚಾಯಂ ಪ್ರಾಮಾಣಿಕ ದೃಷ್ಟಿಸಿದ್ಧೋ ನಿತ್ಯ ಮುಕ್ತಾತ್ಮ ಸ್ವಭಾವ ಏವ ಪ್ರಲಯ ಇತಿ ತ್ವಯೋಪನ್ಯಸ್ತ ಇತಿ ಪ್ರಥಮ ಕಲ್ಪ ಏವ ಸಂಪನ್ನ ಇತ್ಯಾಹ ಸರ್ವಂ ಇತಿ ! ತಥಾಚ ಆ ಪ್ರಮಾಣಿಕ ದೃಶಾ ದ್ವಿತೀಯ ಕಲ್ಪಮಾಶ್ರಿತ್ಯ ಪ್ರಶ್ನೋ ನೋಚಿತ ಇತಿ ಭಾವಃ ॥ ಯದಿತು ಪ್ರಥಮ ಕಲ್ಪ ವೈಲಕ್ಷಣ್ಯಾಯ ಪ್ರಲಯೇ ಅವಿದ್ಯಾದಿ ಕಿಂಚಿಚ್ಛೇಷ್ಯಮಭ್ಯುಪಗಚ್ಛಸಿ, ತರ್ಹಿ ತೇನೈವ ತ್ರಿಪುಟೀ ಜಗದ್ಘಟಿತ ರುದ್ರ ದೇವೀ ಶರೀರೇ ತನ್ನತ್ಯಂಚ ಸೇತ್ಸ್ಯತೀತಿ ನಂ ಸಂಭಾವಿತಂ ಕಿಂಚಿನ್ಮಯೋಕ್ತ ಮಿತ್ಯಾಶಯೇನಾಹಯಚ್ಛೋತಿ ।

೨೪ ಸ್ವಸತ್ತೆಯನ್ನು ಅವಲಂಬಿಸಿ ಇರುವ ಚಿತ್ತಿನ ಶಾಂತವಾದ ಸ್ವಭಾವವೇ ಇದಿಷ್ಟನ್ನು ಮಾಡುವುದು. ಸ್ವಪ್ನದಲ್ಲಿ ಚಿತ್ತೇ ತಾನೇ ಒಳಗೇ ಪುರಪತ್ತನಾದಿಗಳಾಗುವುದು ಹೇಗೋ ಹಾಗೆಯೇ ಇದೂ !

೨೫ ಈ ಸ್ವಪ್ನಪುರಾದಿಗಳೆಲ್ಲವೂ ವಿಜ್ಞಾನಾಕಾಶವಲ್ಲದೆ ಇನ್ನೇನೂ ಅಲ್ಲ (ಇದು ಗೊತ್ತಾಗುವುದು ಹೇಗೆ ಎಂದರೆ) ಜ್ಞೇಯವನ್ನು ಸಂಪೂರ್ಣವಾಗಿ ತಿಳಿದಾಗ ಆಗ ಚಿತ್ತು ತನ್ನಿಂದಲೇ ತನ್ನಲ್ಲಿಯೇ ಎಲ್ಲವನ್ನೂ ಮಾಡಿದರೂ ಅದು ಶೂನ್ಯವೇ ಎಂಬುದು ತಿಳಿಯುವುದು.

೨೬ ಈ ಚಿತ್ತು ತನ್ನೊಳಗೇ, ತನಗೆ ಸಹಜವಾದ ಆಕಾಶ ಕೋಟರದಲ್ಲಿಯೇ ಕಚನ ಮಾಡುತ್ತ ಆ ಕಚನವು ಸರ್ಗವಾಗಿ ಕಾಣಿಸಿಕೊಂಡ ಕ್ಷಣದಿಂದ ಆಗುತ್ತಿರುವ ಆ ಕಚನ ವ್ಯಾಪಾರವನ್ನೆಲ್ಲ ತಿಳಿದೂ ತಿಳಿದಿರುವುದು.

ಕ್ಷಣಕಲ್ಪಜಗದ್ಭ್ರಾಂತಿಂ ಧತ್ತೇ ಕಲ್ಪನಯಾ ಸ್ವಯಾ
ಸ್ವಯಮಂತಃ ಕಚತ್ಯಾಂತಿಶ್ಚಿದಾಕಾಶಃ ಸ್ವಭಾವತಃ । ॥೨೭॥

ಅಯಂ ಸೋಽಹಮಯಂ ಚ ತ್ವಂ ಕರೋತೀತ್ಯಾದಿಕಲ್ಪನಂ
ತಸ್ಮಾನ್ನ ದ್ವೈತಮಸ್ತೀಹ ನ ಚೈಕ್ಯಂ ನ ಚ ಶೂನ್ಯತಾ
ನ ಚೇತನಾಚೇತನಂ ವೈ ಮೌನಮೇವ ನ ತಚ್ಚ ವಾ ॥೨೮॥

ನ ಚೇತತಿ ಕ್ವಚಿತ್ಕಿಂಚಿತ್ಕಶ್ಚಿಚ್ಚೇತ್ಯಾತ್ಮಭಾವತಃ ।
ತೇನ ಚೇತಾಪಿ ನಾಸ್ತೀವ ಮೌನಮೇವಾವಶಿಷ್ಯತೇ ॥೨೯॥

ನಿರ್ವಿಕಲ್ಪಸಮಾಧಿರ್ಹಿ ಸಿದ್ಧಾಂತಃ ಸರ್ವವಾಙ್ಮಯೇ ।
ತಚ್ಚ ಜೀವದ್ದೃಷನ್ಮೌನಂ ತೂಷ್ಣೀಮೇವಾತ ಆಸ್ಯತಾಂ ॥೩೦॥

---

೨೭ ಆಕಾಶಕ್ಕಿಂತ ನಿರಂಜನವಾಗಿರುವ ಚಿತ್ತು ತನಗೆ ಸಹಜವಾಗಿರುವ ಆಕಾಶದಲ್ಲಿ ತಾನೇ ಕಚನ ಮಾಡುತ್ತ ತನ್ನ ಕಲ್ಪನದಿಂದಲೇ ಕ್ಷಣ, ಕಲ್ಪ ಎಂಬ ಕಾಲಭ್ರಾಂತಿಯನ್ನೂ ಜಗತ್ತೆಂಬ ದೇಶಭ್ರಾಂತಿಯನ್ನೂ ತಳೆಯುವುದು.

೨೮ ಹಾಗೆಯೇ ಇವನು, ಅವನು, ನಾನು, ನೀನು, ಎಂಬ ವ್ಯಕ್ತಿ ಕಲ್ಪನೆಯನ್ನೂ ಮಾಡುವುದು. ಆದರಿಂದ ಈ ಭ್ರಾಂತಿಯಲ್ಲಿ ದ್ವೈತವಿಲ್ಲ : ಐಕ್ಯ ವಿಲ್ಲ : ಹಾಗೆಯೇ ಇದು ಶೂನ್ಯವೂ ಅಲ್ಲ ಇದಿಷ್ಟಕ್ಕೂ ಕಾರಣವಾದ ಚಿತ್ತನ್ನು ಚೇತನವೆನ್ನುವಂತಿಲ್ಲ ; ಅಚೇತನವೆನ್ನುವಂತಿಲ್ಲ : ಮೌನವೂ ಅಲ್ಲ : ಅಮೌನವೂ ಅಲ್ಲ.

೨೯ ಎಲ್ಲಿಯೂ ಯಾವುದೂ ಕಚನ ಮಾಡುವುದೂ ಇಲ್ಲ. ಚೇತ್ಯವೆಲ್ಲವೂ ಆತ್ಮವೇ ಆಗಿರುವುದರಿಂದ ಏನಿದೆ ಎನ್ನಬೇಕು. ಆದರಿಂದ ಚೇತವೂ ಇಲ್ಲ. ಹೀಗಾಗಲು ಉಳಿಯುವುದು ಒಂದೇ ಒಂದು ಮೌನ.

೩೦ ಹೀಗಿರುವುದರಿಂದ ಯಾವ ಶಾಸ್ತ್ರವನ್ನು ತೆಗೆದುಕೊಂಡರೂ ನಿರ್ವಿಕಲ್ಪ ಸಮಾಧಿಯೇ ಸಿದ್ಧಾಂತವು. ಆ ನಿರ್ವಿಕಲ್ಪ ಸಮಾಧಿಯು ಜೀವನು ದೃಷನ್ಮೌನವನ್ನು ವಹಿಸುವಿಕೆಯು. ಆದರಿಂದ ತೂಷ್ಣೀಂ ಇದ್ದುಬಿಡು.

ಕುರ್ವನ್ನಿಜಂ ಪ್ರಕೃತಮೇವ ಯಥಾ ಪ್ರವಾಹ- ।
ಮಾಚಾರಜಾಲಮಚಲಃ ಪರಮಾರ್ಥಮೌನಾತ್ ॥

ನಿರ್ಮಾನಮೋಹಮದಭೇದ ಮನಂಗಜೀವ-
ಮಾಕಾಶಕೋಶವಿಶದಾಶಯ ಶಾಂತಮಾಸ್ಸ್ವ ॥೩೧॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೆ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಪಾಷಾಣೋ
ಪಾಖ್ಯಾನೇ ವಿಶ್ವರೂಪದರ್ಶನಂ ನಾಮ ತ್ರ್ಯಶೀತಿತಮಃ ಸರ್ಗಃ

---

೩೧ ಹೀಗಿರುವುದರಿಂದ, ರಾಮ ನೀನು ಪ್ರಕೃತದಲ್ಲಿ ಪ್ರವಾಹರೂಪ ವಾಗಿ ಪರಂಪರಾ ಪ್ರಾಪ್ತವಾಗಿ ಬಂದಿರುವ ನಿಜಕರ್ಮವನ್ನೂ, ಆಚಾರ ಜಾಲ ವನ್ನೂ ನಿರ್ವಹಿಸುತ್ತ ಪರಮಾರ್ಥವನ್ನು ತಿಳಿದಾಗ ಬರುವ ಮೌನವನ್ನು ಸಾಧಿಸಿ ಕೊಂಡು, ಮಾನ ಮೋಹ ಮದ ಭೇದಗಳಿಗೆ ವಶನಾಗದೆ, ಅಂಗ, ಜೀವ, ಇವು ಗಳು ನಿಶ್ಶೇಷವಾಗಿ ಇಲ್ಲವೆಂಬುದನ್ನು ಕಂಡು, ಆಕಾಶಕೋಶದಂತೆ ಶುದ್ಧ ಹೃದ ಯನಾಗಿ, ಶಾಂತನಾಗಿ ಇದ್ದುಬಿಡು.

(ಹೇರಾಮ, ತ್ವಮಪಿ ಈಶ್ವರ ಇವ ಲೋಕದೃಶಾ ನಿಜಂ ಪ್ರಕೃತಮೇವ ರಾಜ್ಯ ತತ್ಪರಿಪಾಲನಾದ್ಯಾಚಾರಜಾಲಂ ಯಥಾ ಪ್ರವಾಹಂ ಪಿತೃಪಿತಾಮಹ ಪ್ರಾಪ್ತ ಕ್ರಮೇಣ ಕುವನ್ನೇವ ಸ್ವದೃಶಾ ಪರಮಾರ್ಥ ಮೌನಾನ್ನಿರ್ಮಾನಂ ನಿರ್ಮೋಹಂ ಅಪ ಗತಮದಭೇದಂ ಅಂಗೈಸ್ತದಭಿಮಾನಿ ಜೀವೇನ ಚ ರಹಿತಂ ಆಕಾಶ ಕೋಶ ವಿಶ ದಾಶಯಂಚ ಯಥಾ ಸ್ಯಾತ್ ತಥಾ ಶಾಂತಂ ನಿರ್ವಿಕ್ಷೇಪಮಾಸ್ವ—ತಾ.ಪ್ರ.)

ಇಂತಿದು ಆರ್ಷವೂ ವಾಲ್ಮೀಕಿ ಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ವಿಶ್ವರೂಪ ದರ್ಶನ" ಎಂಬ
ಎಂಭತ್ತ ಮೂರನೆಯ ಸರ್ಗವು



## ಚತುರಶೀತಿತಮಃ ಸರ್ಗಃ

ಶ್ರೀ ರಾಮ ಉವಾಚ:—

ಅನಂತರಂ ಮುನೇ ಬ್ರೂಹಿ ಕಾಲೀ ಕಿಮಿವ ನೃತ್ಯತಿ ।
ಕಿಂ ಶೂರ್ಪಫಲಕುದ್ದಾಲಮುಸಲಾದಿ ಸ್ರಜಾವೃತಾ

ಶ್ರೀ ವಸಿಷ್ಠ ಉವಾಚ —

ಸರ್ವಶಕ್ತಿಶ್ಚಿದಾಕಾಶಃ ಶಿವ ಇತ್ಯಭಿಧೀಯತೇ ।
ಅನನ್ಯಾ ತಸ್ಯ ತಾಂ ವಿದ್ಧಿ ಸ್ಪಂದಶಕ್ತಿಂ ಮನೋಮಯೀಮ್ ॥

## ಎಂಭತ್ತನಾಲ್ಕನೆಯ ಸರ್ಗವು

ಶ್ರೀ ರಾಮನು ಕೇಳಿದನು:—

೧ ಮತ್ತೆ ಮುನೀಂದ್ರನೇ ಆ ಕಾಲಿಯು ಏನಾಗಿ ನರ್ತಿಸುವಳು ಮತ್ತು ಏತಕ್ಕಾಗಿ ಮೊರ, ನೇಗಿಲು, ಗುದ್ದಲಿ, ಒನಕೆ ಮೊದಲಾದವುಗಳನ್ನು ಹಾರವಾಗಿ ಧರಿಸಿರುವಳು ?

ಶ್ರೀ ವಸಿಷ್ಠನು ಹೇಳಿದನು:—

೨ ಆ ಭೈರವನೇ ಚಿದಾಕಾಶವು. ಅವನನ್ನೇ ಶಿವನೆನ್ನುವರು. ಆತನಿಗಿಂತ ಬೇರೆಯಲ್ಲದ, ಆತನ ಮನಸ್ಸೇ ಆಗಿರುವ ಸ್ಪಂದಶಕ್ತಿಯೇ ಆ ಕಾಲಿಯೆಂದು ತಿಳಿ.

ಯಥೈಕಂ ಪವನಸ್ಪಂದಮೇಕಮೌಷ್ಣ್ಯಾನಲೌ ಯಥಾ ।
ಚಿನ್ಮಾತ್ರಂ ಸ್ಪಂದಶಕ್ತಿಶ್ಚ ತಥೈವೈಕಾತ್ಮ ಸರ್ವದಾ ॥೩॥

ಸ್ಪಂದೇನ ಲಕ್ಷ್ಯತೇ ವಾಯುರ್ವಹ್ನಿರೌಷ್ಣ್ಯೇನ ಲಕ್ಷ್ಯತೇ ।
ಚಿನ್ಮಾತ್ರಮಮಲಂ ಶಾಂತಂ ಶಿವ ಇತ್ಯಭಿಧೀಯತೇ ॥೪॥

ತತ್ಸ್ಪಂದಮಾಯಾಶಕ್ತ್ಯೈವ ಲಕ್ಷ್ಯತೇ ನಾನ್ಯಥಾ ಕಿಲ ।
ಶಿವಂ ಬ್ರಹ್ಮ ವಿದುಃ ಶಾಂತಮವಾಚ್ಯಂ ವಾಗ್ವಿದಾಮಪಿ ॥೫॥

---

(ಶಿವಸ್ಯ ಸ್ವರೂಪಮನಿರೂಪ್ಯ ತಚ್ಛಕ್ತಿ ನಿರೂಪಣಾಯೋಗಾತ್ ಉಭಯ ರೂಪಂ ಸಹೈವ ನಿರೂಪಯಿತು ಮುಪಕ್ರಮತೇ । ಸ ಇತಿ । ಚಲನ ಸ್ವಭಾವ ರಜೋಗುಣ ಪ್ರಾಧಾನ್ಯೇನ ಸ್ಪಂದಶಕ್ತಿಂ, ಸತ್ವಗುಣಸ್ವಚ್ಛತಾ ಪ್ರಾಧಾನ್ಯೇನ ಸರ್ವತಶ್ಚಿತ್ಪ್ರತಿಬಿಂಬ ವ್ಯಾಪ್ತ್ಯಾ ಜಗತ್ಸಂಸ್ಕಾರ ಘಟಿತತ್ವೇನ ಚ ಸರ್ಗಾದಿ ಸಂಕಲ್ಪ ವಿಕಲ್ಪ ಹೇತುತ್ವೇನ ಮನಃ ಸಾಮಾನ್ಯಮನೋಮಯೀಂ । ಶಿವೇ ತಾದಾತ್ಮ್ಯೇನ ಅಧ್ಯಾಸಾತ್ ತದಧೀನ ಸತ್ತಾ ಸ್ಫೂರ್ತಿಕತ್ವಾಚ್ಚ ತದನನ್ಯಾಂ ತಾಂ ಮಾಯಾಂ ವಿದ್ಧೀತ್ಯರ್ಥಃ — ತಾ. ಪ್ರ.)

೩ ಪವನಸ್ಪಂದಗಳೆರಡೂ ಒಂದೇ ಹೇಗೋ, ಬಿಸಿಯೂ ಬೆಂಕಿಯೂ ಒಂದೇ ಹೇಗೋ ಹಾಗೆಯೇ ಚಿನ್ಮಾತ್ರವೂ ಸ್ಪಂದಶಕ್ತಿಯೂ ಒಂದೇ ! ಯಾವಾಗಲೂ ಒಂದೇ !

೪ ಸ್ಪಂದದಿಂದ ವಾಯುವನ್ನು ಗುರುತಿಸುವರು : ಬಿಸಿಯಿಂದ ಬೆಂಕಿಯನ್ನು ಗುರುತಿಸುವರು. ಅಮಲವೂ ಶಾಂತವೂ ಆದ ಚಿನ್ಮಾತ್ರವೇ ಶಿವವೆನ್ನಿಸಿಕೊಳ್ಳುವುದು.

( "ಯತೋವಾ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ ಇತ್ಯಾದಿ ಶ್ರುತಿಷು ಜಗತ್ಸರ್ಗಪ್ರಾಣಸ್ಪಂದಾದಿ ತತ್ಕ್ರಿಯೈವ ಶಿವಸ್ಯ ಬ್ರಹ್ಮಣಃ ಲಕ್ಷಣಾದಪಿತದನನ್ಯತ್ವ ಮಿತ್ಯಾಹ "— ತಾ ಪ್ರ.)

೫ ಆ ಶಿವನು ತನ್ನ ಸ್ಪಂದ ರೂಪವಾದ ಮಾಯಾಶಕ್ತಿಯಿಂದ ಲಕ್ಷಿತನಾಗಬೇಕಲ್ಲದೆ ಬೇರೆಯಿಲ್ಲ. ಏಕೆಂದರೆ ಶಿವನು ಬ್ರಹ್ಮವು ಎನ್ನುವರು. ಶಾಂತವಾದ ಅದನ್ನು ವಾಗ್ವಿದರೂ ಏನೂ ಹೇಳಲಾರರು.

ಸ್ಪಂದಶಕ್ತಿಸ್ತದಿಚ್ಛೇದಂ ದೃಶ್ಯಾಭಾಸಂ ತನೋತಿ ಸಾ ।
ಸಾಕಾರಸ್ಯ ನರಸ್ಯೇಚ್ಛಾ ಯಥಾ ವೈ ಕಲ್ಪನಾಪುರಂ ॥೬॥

ಕರೋತ್ಯೇವ ಶಿವಸ್ಯೇಚ್ಛಾ ಕರೋತೀದಮನಾಕೃತೇಃ ।
ಸೈಷಾ ಚಿತಿರಿತಿ ಪ್ರೋಕ್ತಾ ಜೀವನಾಜ್ಜೀವಿತೈಷಿಣಾಂ ॥೭॥

ಪ್ರಕೃತಿತ್ವೇನ ಸರ್ಗಸ್ಯ ಸ್ವಯಂ ಪ್ರಕೃತಿತಾಂ ಗತಾ ।
ದೃಶ್ಯಾಭಾಸಾನುಭೂತಾನಾಂ ಕರಣಾತ್ಸೋಚ್ಯತೇ ಕ್ರಿಯಾ ॥೮॥

---

(ನನು ಶ್ರುತೌ ಸರ್ಗಾದಿ ಬ್ರಹ್ಮಲಕ್ಷಣಂ ತಚ್ಛಿವಸ್ಯ ಕಥಮುಚ್ಯತೇ ? ತತ್ರಾಹ—ಶಿವಮಿತಿ। ಯತಃ ಸರ್ವಾ ಶ್ರುತಯೋ ಬ್ರಹ್ಮವಿದಶ್ಚ ಶಿವಮೇವ ಬ್ರಹ್ಮವಿದುಃ, ಅತೋ ನಾಶಿವಂ ಬ್ರಹ್ಮಾದನ್ಯದಸ್ತೀತಿ ಅರ್ಥಃ—ತಾ.ಪ್ರ.)

೬ ಆತನ ಇಚ್ಛೆಯೇ ಸ್ಪಂದಶಕ್ತಿಯು ಅದೇ ಈ ದೃಶ್ಯಾಭಾವವನ್ನೆಲ್ಲ ಹರಡಿರುವುದು. ಸಾಕಾರನಾಗಿರುವ ನರನ ಇಚ್ಛೆಯು ಹೇಗೆ ಕಲ್ಪನಾಪುರವನ್ನು ಸೃಷ್ಟಿಸುವುದೋ ಅದೂ ಹಾಗೆಯೇ ?

(ಸೋಽಕಾಮಯುತ ಬಹು ಸ್ಯಾಂ ಪ್ರಜಾಯೇಯ । ಇತ್ಯಾದಿಷು ಸಾ ಸ್ಪಂದಶಕ್ತಿರೇವ ಶಿವಸ್ಯೇಚ್ಛೇತ್ಯುಕ್ತಾ, ಸೈವ ಸತ್ಯಕಾಮಸ್ಯ ತಸ್ಯ ಮನೋರಾಜ್ಯಮಿವ ಜಗತ್ತನೋತೀತ್ಯಾಹ—ತಾ.ಪ್ರ.)

೭ ಶಿವನ ಇಚ್ಛೆಯು ಮಾಡಲೇ ಮಾಡುವುದು. ಅನಾಕೃತಿಯಿಂದಲೇ ಆಕೃತಿಯುಳ್ಳುದಾಗಿ ಕಾಣುವ ಈ ದೃಶ್ಯವನ್ನು ಮಾಡುವುದು. ಅದೇ ಚಿತಿ, ಬದುಕಬೇಕು ಎನ್ನುವವರನ್ನು ಬದುಕಿಸುವುದರಿಂದ ಅದೇ ಜೀವ ಚೈತನ್ಯ ಎನ್ನುವರು.

೮ ಈ ಸೃಷ್ಟಿಗೆ ಮೂಲವು ತಾನೇ ಆಗಿ ಪ್ರಕೃತಿ ಎನ್ನಿಸಿಕೊಳ್ಳುವುದು. ದೃಶ್ಯಾಭಾಸವಾಗಿ ಅನುಭೂತವಾಗುವಾಗ ತಾನೇ ಕರಣವಾದ್ದರಿಂದ ಕ್ರಿಯಾ ಎನಿಸಿಕೊಳ್ಳುವುದು.

ವಡವಾಗ್ನಿಶಿಖಾಕಾರಾಚ್ಛೋಷ್ಯಾಚ್ಛುಷ್ಕೇತಿ ಕಥ್ಯತೇ ।
ಚಂಡಿತ್ವಾಚ್ಚಂಡಿಕಾ ಪ್ರೋಕ್ತಾ ಸೋತ್ಪಲೋತ್ಪಲವರ್ಣತಃ ।೯॥

ಜಯಾ ಜಯೈಕನಿಷ್ಠತ್ವಾತ್ಸಿದ್ಧಾ ಸಿದ್ಧಿಸಮಾಶ್ರಯಾತ್ ।
ಜಯಂತೀ ಚ ಜಯಾ ಪ್ರೋಕ್ತಾ ವಿಜಯಾ ವಿಜಯಾಶ್ರಯಾಃ ॥೧೦॥

ಪ್ರೋಕ್ತಾ ಪರಾಜಿತಾ ವೀರ್ಯಾದ್ದುರ್ಗಾ ದುರ್ಗ್ರಹರೂಪತಃ
ಓಂಕಾರಸಾರಶಕ್ತಿತ್ವಾದುಮೇತಿ ಪರಿಕೀರ್ತಿತಾ ॥೧೧॥

---

(ಪ್ರಕೃತಿತ್ವೇನ ಜಗದಾಕಾರ ಪರಿಣಾಮಿತ್ವೇನ । ತಥಾ ಚ ಶ್ರುತಿಃ " ಮಾಯಾಂತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ " ಇತಿ । ದೃಶ್ಯಾಭಾಸೇಷು ಅನುಭೂತಾನಾ- ಉತ್ಪತ್ತಿ, ಆಪ್ತಿ, ವಿಕೃತಿ, ಸಂಸ್ಕಾರ ಲಕ್ಷಣಾನಾಂ ಚತುರ್ವಿಧ ಫಲಾನಾಂ ಕರಣಾತ್ ।—ತಾ.ಪ್ರ.)

೯ ಬಡಬಾಗ್ನಿಯ ಜ್ವಾಲೆಯ ತುದಿಯಂತೆ ಇದ್ದು ಎಲ್ಲವನ್ನೂ ಶೋಷಿಸುವುದರಿಂದ ಶುಷ್ಕಾ ಎನ್ನುವರು : ಚಂಡಿಯಾದ್ದರಿಂದ ಚಂಡಿಕಾ ಎನ್ನುವರು : ಉತ್ಪಲವರ್ಣಳಾಗಿರುವುದರಿಂದ ಉತ್ಪಲಾ ಎನ್ನಿಸಿಕೊಳ್ಳುವಳು.

" ದ್ವೀಪಿಚರ್ಮ ಪರೀಧಾನಾ ಶುಷ್ಕಮಾಂಸಾತಿ ಭೈರವಾ " ಇತ್ಯಾದಿ ಪುರಾಣೇಷು ತಸ್ಯಾಃ ಶುಷ್ಕತಾ ಪ್ರಸಿದ್ಧೇರಪಿ ನಿಮಿತ್ತಮಾಹ — — ಯತಃ ಸಮುದ್ರಾದಿ ಜಲಾರ್ದ್ರ ಬ್ರಹ್ಮಾಂಡ ದೇಹಾ ಸಾ ಬಡಬಾಗ್ನಿ ಶಿಖಾಕಾರಾದ್ಧೈರ್ಯಾಷ್ಟಾದಿತ್ಯಾದಿ ಜ್ಯೋತಿಷಸ್ಸಕಾಶಾತ್ ಶೋಷ್ಯಾ ಅತಶ್ಶುಷ್ಕೇತಿ ಕಥ್ಯತೇ— ಇತಿ — ತಾ.ಪ್ರ)

೧೦ ಜಯೈಕನಿಷ್ಠಳಾದ್ದರಿಂದ ಜಯಾ ಎಂದೂ, ಸಿದ್ಧಸಮಾಶ್ರಯಳಾದ್ದರಿಂದ ಸಿದ್ಧಾ ಎಂದೂ, ವಿಜಯಾಶ್ರಯಳಾದ್ದರಿಂದ ಜಯಂತಿ, ಜಯಾ, ವಿಜಯಾ, ಎಂದೂ ಹೇಳುವರು.

೧೧ ವೀರ್ಯದಿಂದ ಅಪರಾಜಿತಾ ಎನ್ನಿಸಿಕೊಳ್ಳುವಳು . ದುರ್ಗ್ರಹರೂಪದಿಂದ ದುರ್ಗಾ ಎನ್ನಿಸಿಕೊಳ್ಳುವಳು : ಓಂಕಾರದ ಸಾರವಾದ ಶಕ್ತಿಯಾದ್ದರಿಂದ ಉಮಾ ಎನ್ನಿಸಿಕೊಳ್ಳುವಳು.

ಗಾಯತ್ರೀ ಗಾಯನಾತ್ಮತ್ವಾತ್ಸಾವಿತ್ರೀ ಪ್ರಸವಸ್ಥಿತೇಃ ।
ಸರಣಾತ್ಸರ್ವ ದೃಷ್ಟೀನಾಂ ಕಥಿತೈಷಾ ಸರಸ್ವತೀ ॥೧೨॥

ಗೌರೀ ಗೌರಾಂಗದೇಹತ್ವಾದ್ಭವದೇಹಾನುಷಂಗಿಣೀ ।
ಸುಪ್ತಾನಾಮಥ ಬುದ್ಧಾನಾಮುಮಾತ್ರೋಚ್ಚಾರಣಾದ್ಧೃದಿ ॥೧೩॥

---

(ಓಂಕಾರ ಘಟಕಾನಾಂ ಅಕಾರ ಉಕಾರ ಮಕಾರಾಣಾಂ ಉಮ ಅ ಇತಿ ವ್ಯತ್ಯಾಸೇನ ಘಟನೇ ಟಾಪಿ ಉಮಾಶಬ್ದ ನಿಷ್ಪತ್ತೇರಿತಿ ಭಾವಃ । ಸಮೇತಿ ಪರಿಕೀರ್ತಿತೇತಿ ಪಾಠೇತು, ಓಂಕಾರ ಲಕ್ಷ್ಯ ತುರೀಯ ಸ್ವರೂಪ ಸ್ಥೂಲ ಸೂಕ್ಷ್ಮಾದಿ ಸರ್ವ ಪ್ರಪಂಚ ಸಾರ ಚಿಚ್ಛಕ್ತಿತ್ವಾತ್ ಸರ್ವವೈಷಮ್ಯರಹಿತಾ— ಇತ್ಯರ್ಥಃ — ತಾ.ಪ್ರ.)

೧೨ ಗಾಯನಾತ್ಮಕಳಾದ್ದರಿಂದ ಗಾಯತ್ರೀ ಎಂದೂ, ಪ್ರಸವ ಮಾಡುವಳಾದ್ದರಿಂದ ಸಾವಿತ್ರೀ ಎಂದೂ, ಸರ್ವದೃಷ್ಟಿಗಳನ್ನೂ ಹರಡುವಳಾದ್ದರಿಂದ ಸರಸ್ವತೀ ಎಂದೂ ಪರಿಕೀರ್ತಿತಳಾಗಿರುವಳು.

(ಗಾಯನಾ ಜಾಪಕಾಸ್ತೇಷಾಂ ಪರಮ ಪುರುಷಾರ್ಥತ್ರಾತ್ರತ್ವಾತ್ । ಸ್ವರ್ಗಾಪವರ್ಗ ಸಾಧನ ಸರ್ವಕರ್ಮೋಪಾಸನ ಜ್ಞಾನ ದೃಷ್ಟೀನಾಂ ಸರಣಾತ್ ಪ್ರಸರಾತ್ ।— ತಾ.ಪ್ರ.)

೧೩ ಗೌರಾಂಗವುಳ್ಳ ದೇಹವಿರುವುದರಿಂದ ಗೌರೀ ಎನ್ನಿಸಿಕೊಳ್ಳುವಳು. ಈಕೆಯು ಭವನ ದೇಹದಲ್ಲಿ ಸೇರಿಕೊಂಡಿರುವಳು. ತ್ರಿಭುವನಗಳಲ್ಲಿಯೂ ಇರುವ ಸುಪ್ತರ ಮತ್ತು ಬುದ್ಧರ ಹೃದಯಗಳಲ್ಲಿ ಅಮಾತ್ರವಾಗಿ ಉಚ್ಚಾರಣ ಮಾಡುತ್ತಿರುವಳಾದ್ದರಿಂದ ಉಮೆಯು- ಇಂದು ಕಲೆಯು.

(ಭವತ್ಯಸ್ಮಾದ್ವಿಶ್ವಮಿತಿಭವಃ —— ಉಮಾ ನಾಮ ಪುನಃ ಪ್ರಕಾರಾಂತರೇಣ ವ್ಯಾಚಷ್ಟೇ । ಸುಪ್ತಾನಾಂ ಪ್ರಬುದ್ಧಾನಾಂ ಚ ತ್ರೈಲೋಕ್ಯಸ್ಥ ಸರ್ವ ಪ್ರಾಣಿನಾಂ ಹೃದಿ ಅನಾಹತನಾದಾತ್ಮನಾ ಅಕಾರಾದಿ ಮಾತ್ರಾತ್ರಯ ಶೂನ್ಯಸ್ಯ ಪ್ರಣವನಾದ ಭಾಗಸ್ಯ ಶಬ್ದ ಬ್ರಹ್ಮಾಖ್ಯಸ್ಯ ನಿತ್ಯಂ ಸರ್ವದೈವೋಚ್ಚಾರಣಾತ್ ಅಂಗುಷ್ಠ ಪರಿಮಿತ

ನಿತ್ಯಂ ತ್ರೈಲೋಕ್ಯಭೂತಾನಾಮುಮೇತೀಂದುಕಲೋಚ್ಯತೇ ।
ಶಿವಯೋರ್ವ್ಯೋಮರೂಪತ್ವಾದಸಿತಂ ಲಕ್ಷ್ಯತೇ ವಪುಃ ||೧೪||

ನಭೋ ಹಿ ಮಾಂಸಮೇತಾಭ್ಯಾಂ ದೃಷ್ಟಿಕೃಷ್ಟಂ ವಿಲೋಕ್ಯತೇ ।
ಅಸ್ತಿ ನಭೋ ನಭಸ್ಯೇವ ತೌ ನಭೋನಭಸಿ ಸ್ಥಿತೌ ||೧೫||

---

ಹೃತ್ಪುಂಡರೀಕಚ್ಛಿದ್ರೇ ಲಿಂಗಾಕಾರೇಣ ಸ್ಥಿತಸ್ಯ ದಹರಾಕಾಶಾಖ್ಯಸ್ಯ ಶಿವಸ್ಯಮೂರ್ಧ್ನಿ ಭೂಷಣಭೂತಾ ಬಿಂದುರೂಪಾ ಇಂದುಕಲಾ ಉಮೇತ್ಯುಚ್ಯತೇ । ತಥಾಚೋಕ್ತಂ ವಾಯವೀಯ ಸಂಹಿತಾಯಾಂ "ಓಮಿತ್ಯೇಕಾಕ್ಷರಂ ಬ್ರಹ್ಮ ಬ್ರಹ್ಮಣಃ ಪ್ರತಿಪಾದಕಂ । ಅ ಉ ಮೇತಿ ತ್ರಿಮಾತ್ರಾಭಿಃ ಪರಸ್ತಾದರ್ಧಮಾತ್ರಯಾ ತತ್ರಾಕಾರಃ ಸ್ಥಿತೋ ಭಾಗೇ ಜ್ವಾಲಾ ಲಿಂಗಸ್ಯ ದಕ್ಷಿಣೇ ! ಉಕಾರಶ್ಚೋತ್ತರೇ ತದ್ವತ್ ಮಕಾರಸ್ತಸ್ಯ ಮಧ್ಯತಃ । ಅರ್ಧಮಾತ್ರಾತ್ಮಕೋ ನಾದಃ ಶ್ರೂಯತೇ ಲಿಂಗ ಮೂರ್ಧನಿ " ಇತಿ । ಹಂಸೋಪನಿಷದಿ ಚ ಪೂರ್ವೇದಲೇ ಪುಣ್ಯಮಿತಿ ರೀತ್ಯಾದಿ ಹೃದಯಪುಂಡರೀಕ ದಲೇಷು ಜೀವಸ್ಯ ಮತಿಭೇದ ಮುಕ್ತ್ವಾ ಲಿಂಗೇ ಸುಷುಪ್ತಿಃ, ಪದ್ಮತ್ಯಾಗೇ ತುರೀಯಂ, ಯದಾ ಹಂಸೋ ನಾದೇ ವಿಲೀನೋ ಭವತಿ ತತ್ತುರೀಯಾತೀತಮಿತಿ ಲಿಂಗ ಮೂರ್ಧಸ್ಥೇ ನಾದೇ ಸರ್ವೋಪಾಧಿ ವಿಲಯೇನ ಬ್ರಹ್ಮಪ್ರತಿಷ್ಠಾ ತುರೀಯಾತೀತಾವಸ್ಥಾ ಇತ್ಯುಕ್ತಾ ಇತಿ ಭಾವಃ—ತಾ.ಪ್ರ.)

೧೪–೧೫ ಶಿವನೂ ಶಿವೆಯೂ ವ್ಯೋಮರೂಪರಾದ್ದರಿಂದ, ಅವರ ದೇಹವು ಅಸಿತ (ಕಪ್ಪು) ವಾಗಿ ಕಾಣುವುದು. ಇವರ ದೇಹದಲ್ಲಿರುವ ಮಾಂಸವೂ ಆಕಾಶವೇ ! ಆಕಾಶವೇ ಹಾಗೆ ಮಾಂಸವಾಗಿ ಕಾಣುವುದು. ನಭೋಮಯವಾದ ದೇಹದಲ್ಲಿ ನಭೋಮಯವಾದ ಮಾಂಸವು ಇರುವುದು. ಅವರೂ ಆಕಾಶ ದೇಹಿಗಳಾಗಿ ಆಕಾಶದಲ್ಲಿ ಇರುವರು.

(ನನು ಚಿದ್ರೂಪಯೋಶ್ಶಿವಯೋಃ ಜಡವ್ಯೋಮರೂಪತಾ ಕಥಂ ತತ್ರಾಹ— ಚಿದ್ರೂಪಾಭ್ಯಾಮೇವ ಏತಾಭ್ಯಾಂ ಮಾಂಸಮಯಂ ಸ್ವಶರೀರಮಿವ ಶ್ಯಾಮಂ ಸರ್ವ ಸಂಕಲ್ಪ ದೃಷ್ಟ್ಯಾ ದೃಷ್ಟಮತಃ ಶ್ಯಾಮಮಿವ ಜಡಮಿವ ಚ ವಿಲೋಕ್ಯತೇ । ನಿರಾಧಾರ ಸ್ಥಿತಿರಪಿ ತಯೋಃ ನಭೋವದೇವ ಅನುಮೇಯಾ ಇತ್ಯಾಹ ।—ತಾ.ಪ್ರ.)

ನಭೋನಿಭಾವಭೂತಾಂಗಾವಚ್ಛೌ ವ್ಯೋಮ್ನ ಇವಾಗ್ರಜೌ ।
ಹಸ್ತಪಾದಾಸ್ಯಮೂರ್ಧ್ನೋಃ ಯದ್ಬಹುತ್ವಾಲ್ಪತ್ವಭೇದತಃ ॥೧೬॥

ನಾನಾತ್ವಂ ಹಲಶೂರ್ಪಾದಿಸ್ರಗ್ಧರತ್ವಂ ಚ ತಚ್ಛೃಣು ।
ಸಾ ಹಿ ಕ್ರಿಯಾ ಭಗವತೀ ಪರಿಸ್ಪಂದೈಕರೂಪಿಣೀ ॥೧೭॥

ದದ್ಯಾತ್ಸ್ನಾಯಾಚ್ಚ ಜುಹುಯಾದಿತ್ಯಾದ್ಯಗ್ರಶರೀರಿಣೀ ।
ಚಿತಿಶಕ್ತಿರನಾದ್ಯಂತಾ ತಥಾ ಭಾತಾತ್ಮನಾತ್ಮನಿ ॥೧೮॥

---

೧೬ ಶಿವಾ ಶಿವರು ಆಕ ಶವಂತಿರುವರು : ಅಭೂತ-ಅಂಗರು. ಅಚ್ಛ ವಾಗಿರುವರು : ಆಕಾಶದ ಅ್ರ ರಂತಿರುವರು. ಆಕಾಶವು .ಹೆಚ್ಚಾಗಿರುವುದು ಕಡಿಮೆಯಾಗಿರುವುದು ಎ ಬುದರಿ ದ ಆವರ ದೇಹಗಳಲ್ಲಿ ಹಸ್ತ ಪಾದ ಮುಖ ಶಿರಸ್ಸು ಎಂಬ ವ್ಯವಸ್ಥೆಯು ಕಾಣು ದು.

(ಅಮೂರ್ತತ್ವ ಸ್ವಚ್ಛತ್ವೇ ಅಪಿ ತಯೋಃ ವ್ಯೋಮವದೇವ ಬೋಧ್ಯೇ ಇತ್ಯಾಹ — — — ಹಸ್ತಾದೇಃ ಯದ್ಬಹುತ್ವಾಲ್ಪತ್ವ ಭೇದತೋ ನಾನಾತ್ವಂ ವೈಚಿತ್ರ್ಯಂ— ತಾ.ಪ್ರ.)

೧೭–೧೮ ನಾನಾತ್ವ, ನೇಗಿಲು, ಮೊರ, ಮೊದಲಾದವುಗಳ ಹಾರ ವನ್ನು ಹಾಕಿಕೊಂಡಿರುವದು, ಮೊದಲಾದವನ್ನು ಹೇಳುವೆನು ಕೇಳು. ಆಕೆಯೇ ಕ್ರಿಯೆಯು. ಪರಿಸ್ಪಂದ ಮಾತ್ರವೇ ರೂಪವಾಗುಳ್ಳ ಭಗವತಿಯು. ಆಕೆಯು ಕೊಡುವಳು : ಮೀಯುವಳು : ಹೋಮ ಮಾಡುವಳು : ಈ ಕೆಲಸಗಳನ್ನೆಲ್ಲ ಮಾಡುವ ಆಕೆಯು ಅಗ್ರಶರೀರವನ್ನು ಧರಿಸಿದವಳು : ಚಿತಿಶಕ್ತಿಯು : ಆದಿ-ಅಂತಗಳಿಲ್ಲದವಳು : ಆತ್ಮನಾ ಆತ್ಮನಿ ಭಾತಳಾದವಳು.

(ಹಿ ಯಸ್ಮಾತ್ ಸಾ ಭಗವತೀ ಅನಾದ್ಯಂತಾ ಚಿತಿಶಕ್ತಿರಪಿ ಆತ್ಮನಾ ಸ್ವೇಚ್ಛಯೈವ ಸ್ವಾತ್ಮ ಸರ್ವವೈದಿಕ ಕ್ರಿಯಾರೂಪಾ ಭೂತ್ವಾ ದದ್ಯಾತ್, ಸ್ನಾಯಾತ್, ಜುಹು

ಸಾಕಾಶರೂಪಿಣೀ ಕಾಂತಾ ದೃಶ್ಯಶ್ರೀಃ ಸ್ಪಂದಧರ್ಮಿಣೀ ।
ದೇವ್ಯಾಸ್ತಸ್ಯಾ ಹಿ ಯಾಃ ಕಾಲ್ಯಾ ನಾನಾಭಿನಯನರ್ತನಾಃ ॥೧೯॥

ತಾ ಇಮಾ ಬ್ರಹ್ಮಣಃ ಸರ್ಗಜರಾಮರಣರೀತಯಃ ।
ಕ್ರಿಯಾಸೌ ಗ್ರಾಮನಗರದ್ವೀಪಮಂಡಲಮಾಲಿಕಾಃ ॥೨೦॥

ಸ್ಪಂದಾನ್ಕರೋತಿ ಧತ್ತೇಽಂತಃ ಕಲ್ಪಿತಾವಯವಾತ್ಮಿಕಾ ।
ಕಾಲೀ ಕಮಲಿನೀ ಕಾಲೀ ಕ್ರಿಯಾ ಬ್ರಹ್ಮಾಂಡಕಾಲಿಕಾ ॥೨೧॥

---

ಯಾತ್, ಇತ್ಯಾದಿ ವೇದವಿಹಿತ ದಾನ ಸ್ನಾನ ಯಾಗಾದಿ ಶ್ರೇಷ್ಠ ಶರೀರಚೇಷ್ಟಾ ಸಂಪನ್ನಾ ತಸ್ಮಾತ್ತಸ್ಯಾ ದೇವ್ಯಾ ಯಾ ನಾನಾವಿಧಾಭಿನಯ ಸಹಿತಾ ನರ್ತನಾಃ ತಾ ಇಮಾ ಬ್ರಹ್ಮಣಃ ಕರ್ಮಫಲರೂಪಾಃ ಸರ್ವ ಪ್ರಾಣಿ ಸರ್ಗ ಸ್ಥಿತಿ ಜರಾ ಮರಣ ರೀತಯಃ ಬೋಧ್ಯಾ ಇತಿ ಪರೇಣಾನ್ವಯಃ। —ತಾ.ಪ್ರ.)

೧೯ ಆಕೆಯು ಆಕಾಶರೂಪಿಣಿಯು : ಬಹು ಲಕ್ಷಣವಾದವಳು : ಜಗತ್ಸ್ವರೂಪಿಣಿಯು : ವ್ಯಾಪಾರವೇ ಧರ್ಮವಾಗುಳ್ಳವಳು ನಾನಾ ರೂಪವಾಗಿರುವ ಅಭಿನಯ ನರ್ತನಗಳೆಲ್ಲವೂ ಆ ಕಾಲೀದೇವಿಯವೇ !

೨೦ ಬ್ರಹ್ಮದ ಈ ಸರ್ಗ, ಜರಾ, ಮರಣ, ರೀತಿಗಳೆಲ್ಲವೂ, ಗ್ರಾಮ ನಗರ, ದ್ವೀಪ, ಮಂಡಲ, ಮಾಲಿಕೆಗಳೂ ಕ್ರಿಯಾರೂಪಳಾದ ಈ ದೇವಿಯೇ !

(ಯತಃ ಅಸೌದೇವೀ ಕ್ರಿಯಾ ಅತೋ ನಿರವಯವಯಾಃ ಕ್ರಿಯಾಯಾಃ ಅಪ್ರಸಿದ್ಧೇಃ, ಸ್ವರೂಪ ಪ್ರಸಿದ್ಧ್ಯರ್ಥಮೇವ ಕಲ್ಪಿತಹಸ್ತಪಾದಾದ್ಯವಯವಾತ್ಮಿಕಾ ಗ್ರಾಮ ನಗರ ದ್ವೀಪ ಮಂಡಲ ಮಾಲಿಕಾಃ ಶರೀರಾಂತರ್ಧತ್ತೇ । ತೈಃ ಸ್ಪಂದಾನ್ ಕರೋತಿ । ಸ್ವಂ ಕ್ರಿಯಾ ರೂಪತಾಂ ಪ್ರಕಟೀಕರೋತಿ —ತಾ.ಪ್ರ.)

೨೧ ಈಕೆಯು ಸ್ಪಂದಗಳನ್ನು ಮಾಡುವಳು. ಕಲ್ಪಿತವಾದ ಅವಯವಗಳುಳ್ಳವಳಾಗಿ ಕಾಲೀ, ಕಮಲಿನೀ, ಕ್ರಿಯಾ, ಬ್ರಹ್ಮಾಂಡಕಾಲಿಕಾ (ಮೊದಲಾದ ಹೆಸರುಗಳನ್ನು) ಉಳ್ಳವಳಾಗುವಳು.

ಧತ್ತೇ ಸ್ವಾವಯವೀಭೂತಾಂ ದೃಶ್ಯಲಕ್ಷ್ಮೀಮಿಮಾಂ ಹೃದಿ ।
ನ ಕದಾಚನ ಚಿದ್ದೇವೀ ನಿರ್ದೇಶ್ಯಾವಯವಾ ಕ್ವಚಿತ್ ॥೨೨॥

ಶಿವತ್ವಾವ್ಯತಿರೇಕೇಣ ಶಿವತ್ವೈವಂ ವಿದೃಶ್ಯತಾಂ !
ಯಥಾಂಗ ಶೂನ್ಯತಾ ವ್ಯೋಮ್ನಃ ಸ್ಪಂದನಂ ಮಾತರಿಶ್ವನಃ
ಜ್ಯೋತ್ಸ್ನಾಂಗಮಿಂದೋರೇವಂ ಹಿ ದೃಶ್ಯಮಂಗಂ ಚಿತೇಃ ಕ್ರಿಯಾ ॥೨೩॥

---

೨೨ ತನಗೆ ಅವಯವಗಳಂತಿರುವ ಬ್ರಹಾಂಡಾದಿ ರೂಪ ದೃಶ್ಯಲಕ್ಷ್ಮಿ ಯನ್ನು ಹೃದಯದಲ್ಲಿ ಧರಿಸುವಳು. ಆದರೂ ಈ ಚಿತ್ಸ್ವರೂಪಳಾದ ದೇವಿಯು ಎಲ್ಲಿಯೂ ನಿರ್ದೇಶ್ಯಾವಯವಳಲ್ಲ.

(ಕಾಲೀನಾಮ ನಿರ್ವಚನೇಽಪಿ ತಸ್ಯಾಃ ಕ್ರಿಯೈಕಸ್ವಭಾವತತ್ವಂ ಬ್ರಹ್ಮಾಂಡ ಶರೀರತಯಾ ಸರ್ವಲೋಕಾದ್ಯವಯವಧಾರಿಣೀತ್ವಂ ಚ ಪ್ರಸಿದ್ಧ್ಯತೀತ್ಯಾಶಯನೇ ನಾಹ ಕಾಲೀತಿ । ' ಕಲಗತೌ ಸಂಖ್ಯಾನೇ ಚ ' ಇತಿ ಧಾತೋರ್ಹಿ ಕಾಲಶಬ್ದಃ ಕಾಲೀ ಶಬ್ದಶ್ಚ ನಿಷ್ಪದ್ಯತೇ । ಕಲಿಃ ಕಾಮಧೇನುರಿತಿ ಚ ವೈಯಾಕರಣಾ ಧಾರ ಣಾದಿ ಸರ್ವ ಕ್ರಿಯಾವಾಚೀ ಕಲಧಾತುರಿತ್ಯಾಹುಃ । ತಥಾಚೇಯಂ ಬ್ರಹ್ಮಾಂಡ ಲಕ್ಷಣಾನಾಂ ಬೀಜಕೋಶಾನಾಂ ಕಾಲಿಕಾ ಕಲಯಿತ್ರೀ ನಿರ್ಮಾತ್ರೀ ಧಾರಯಿತ್ರೀ ಪರಿಣಾಮಾದಿ ವಿಕಾರ ಪ್ರಾಪಯಿತ್ರೀ ಚ ಕ್ರಿಯಾ ಸ್ವಯಂ ಸತೀ ಕಮಲಿನೀ ಪದ್ಮಿನೀ ಲತೇವ ಕ ಲೀ ಶ್ಯಾಮಲಾ ಸಂಪನ್ನಾ । ಅತಏವಹಿ ಖಪುಷ್ಪಾದ್ಯವಯವೀ ಭೂತಾ ಮಿಮಾಂ ಪೃಥಿವ್ಯಾದಿ ದೃಶ್ಯಲಕ್ಷ್ಮೀಂ ಹೃದಿಧತ್ತೇ ಇತ್ಯರ್ಥಃ । ಏವಂ ಜಗದ್ಬ್ರಹ್ಮ ಧಾರಣೇಽಪಿ ತಸ್ಯಾ ಅಸಂಗೋದಾಸೀನ ಚಿದ್ರೂಪ ಶಿವ ಸ್ವಭಾವತ್ವಾನ್ನಿರವಯವ ತ್ವಮೇವೇತ್ಯಾಹ—ತಾ.ಪ್ರ.)

೨೩ ಶಿವತ್ವವನ್ನೂ ಶಿವತೆಯನ್ನೂ ಬೇರೆ ಬೇರೆಯೆಂದು ನೋಡದಿರು. ಎರಡೂ ಒಂದೇ ! ವ್ಯೋಮದ ಶೂನ್ಯತೆಯೂ ವಾಯುವಿನ ಸ್ಪಂದನವೂ ಚಂದ್ರದ ಬೆಳದಿಂಗಳೂ ಹೇಗೆ ಒಂದಕ್ಕೊಂದು ಅಂಗವೋ, ಹಾಗೇ ಚಿತ್ತಿನ ಕ್ರಿಯೆಯೂ ಅಂಗ ವಾಗಿದ್ದು ದೃಶ್ಯವಾಗುವುದು.

ಶಿವಂ ಶಾಂತಮನಾಯಾಸಮವ್ಯಯಂ ವಿದ್ಧಿ ನಿರ್ಮಲಂ ।
ನ ಮನಾಗಪಿ ತತ್ರಾಸ್ತಿ ಸ್ತ್ರೈಮಿತ್ಯಂ ಸ್ಪಂದಧರ್ಮತಾ ॥೨೪॥

ಸಾ ಕ್ರಿಯೈವ ತಥಾರೂಪಾ ಸತಿ ಬೋಧವಶಾದ ದಾ ।
ವ್ಯಾವೃತ್ತೈವ ತಥೈವಾಸ್ತೇ ಶಿವ ಇತ್ಯುಚ್ಯತೇ ತದಾ ॥೨೫॥

ಚಿತಿಶಕ್ತೇಃ ಕ್ರಿಯಾದೇವ್ಯಾಃ ಪ್ರತಿಸ್ಥಾನಂ ಯದಾತ್ಮನಿ ।
ಯಥಾ ಭೂತಸ್ಥಿತೇರೇವ ತದೇವ ಶಿವ ಉಚ್ಯತೇ ॥೨೬॥

ದೇವ್ಯಾಃ ಕ್ರಿಯಾಯಾಶ್ಚಿಚ್ಛಕ್ತೇಃ ಸ್ವರೂಪಿಣ್ಯ ಮಹಾಕೃತೇಃ ।
ಕಲ್ಪಿತಾಕಾರಧಾರಿಣ್ಯಾ ಅನನ್ಯಾವಯವಾ ಇಮೇ ॥೨೭॥

---

೨೪ ಶಿವವೂ ಶಾಂತವೂ ಅವ ಯವೂ ಅನಾಯಾಸವೂ ಆದ ಬ್ರಹ್ಮವು ನಿರ್ಮಲವು : ಅದರಲ್ಲಿ ಸ್ತೈಮಿತ್ಯವಾಗಲೀ ಸ್ಪಂದಧರ್ಮಿತೆಯಾಗಲೀ ಕಿಂಚಿತ್ತೂ ಇಲ್ಲ.

೨೫ (ಆದರೆ)ಆ ಕ್ರಿಯೆಯು ಸ್ಪಂದ ಧರ್ಮಿಣಿಯು. ಅದೂ ಯಾವಾಗ ಬೋಧವಶದಿಂದ ಹಿಂತಿರುಗಿ ನಿಷ್ಕ್ರಿಯೆಯಾಗುವುದೋ, ಆಗ ಶಿವ ಎನ್ನಿಸಿಕೊಳ್ಳುವುದು.

೨೬ ಕ್ರಿಯಾದೇವಿಯಾದ ಚಿತಿಶಕ್ತಿಯ ಪ್ರತಿಸ್ಥಾನವು ಯಾವಾಗ ಆತ್ಮನಲ್ಲಿ ಮೊದಲಿನ್ವಂತೆ ಆಗುವುದೋ, ಆಗ ಶಿವ ಎನ್ನಿಸಿಕೊಳ್ಳುವುದು.

(ಯದಾ ಬೋಧವಶಾತ್ ಕ್ರಿಯಾಸ್ವಭಾವಾತ್ ವ್ಯಾವೃತ್ಯ ತಥೈವ ವಾಸ್ತವ ಸ್ವಭಾವೇನಾಸ್ತೇ ತದೇವ ಶಿವ ಇತ್ಯುಚ್ಯತೇ । ಕೂಟಸ್ಥಸ್ಯ ಚಿತಿ ಶಕ್ತ್ಯಾತ್ಮಿಕಾಯಾ ದೇವ್ಯಾ ಆತ್ಮನಿ ಸ್ವಸ್ಥಾ ಅವಿದ್ಯಾವಶಾತ್ ಪ್ರತಿಸ್ಥಾನಂ ಪ್ರತಿಕೂಲ ಸ್ಪಂದ ಜಡ ಭಾವೇನ ಅವಸ್ಥಾನಂ ತದೇವ ಕ್ರಿಯಾ–ಇತ್ಯುಚ್ಯತೇ ವಿದ್ಯಯಾ ಯಥಾ ಭೂತ ಚಿನ್ಮಾತ್ರ ಸ್ವಭಾವಸ್ಥಿತಿರೇವ ಹೇತೋಃ ಶಿವ ಉಚ್ಯತೇ ॥

೨೭ ಕ್ರಿಯಾದೇವಿಯೇ ಚಿಚ್ಛಕ್ತಿಯು. ಆಕೆಯು ಸ[illegible] ಇದ್ದುಕೊಂಡು ಮಹಾಕೃತಿಯಾಗಿ ಕಲ್ಪಿತವಾದ ಆಕಾರವನ್ನು ಧ[illegible]ಳು. ಆಗ ಅವಳ ಅವಯವಗಳೇ ಈ ದೃಶ್ಯ ಲಕ್ಷ್ಮಿಯರಾಗುವರು

ಸರ್ಗಾಃ ಸಜ್ಜನತಾವರ್ಗಾ ಲೋಕಾ ಆಲೋಕಭಾಸ್ವರಾಃ । ॥೨೮॥

ಸದ್ವೀಪಸಾಗರಾಃ ಪೃಥ್ವ್ಯಃ ಸವನಾವನಯೋದ್ರಯಃ ।
ಸಾಂಗೋಪಾಂಗಾಸ್ತ್ರಯೋ ವೇದಾಃ ಸವಿದ್ಯಾಸ್ಥಾನಗೀತಯಃ ॥೨೯॥

ಸವಿಧಿಪ್ರತಿಷೇಧಾರ್ಥಾಃ ಸಶುಭಾಶುಭಕಲ್ಪನಾಃ ।
ಸದಕ್ಷಿಣಾಗ್ನಯೋ ಯಜ್ಞಾಃ ಪುರೋಡಾಶಾದ್ಯಶಂಸಿನಃ ॥೩೦॥

ಭೂಪಾಲೋಲೂಖಲಬೃಸೀಶೂರ್ಪಯೂಪ ದಿಸಂಯುತಾಃ ।
ಸಂಗ್ರಾಮಾಃ ಸಾಯುಧಗ್ರಾಮಾಃ ಸಶೂಲಶರಶಕ್ತಯಃ ॥೩೧॥

---

(ತಥಾ ಚ ಕಲ್ಪಿತ ಜಗದ್ದೇಹ ಧಾರಿಣ್ಯಾ, ನೃತ್ಯೇ ಕಲ್ಪಿತಾ ಗೀತಯ ಇವ, ತಾದೃಶ ಶೂರ್ಪ ಮುಸಲಾದಿ ಸ್ರಗ್ದಾಮ ಭೂಷಣಮೇವೋಚಿತಮಿತಿ ವಕ್ತುಂ ಭೂಮಿಕಾಂ ರಚಯತಿ —ತಾ.ಪ್ರ.)

೨೮–೯ ಸಜ್ಜನರಿಂದ ಕೂಡಿ, ಬೆಳಕಿನಿಂದ ಬೆಳಗುತ್ತಿರುವ ಸರ್ಗಗಳು, ದ್ವೀಪ ಸಾಗರಗಳಿಂದ ವನ, ಭೂಮಿ, ಪರ್ವತಗಳಿಂದ ಕೂಡಿರುವ ಪೃಥ್ವೀಮಂಡಲಗಳು, ಅಂಗ–ಉಪಾಂಗಗಳಿಂದ ಕೂಡಿರುವ ಮೂರು ವೇದಗಳು, ವಿದ್ಯಾಸ್ಥಾನಗಳು, ಗೀತಿಗಳು,

೩೦ ವಿಧಿ ನಿಷೇಧಗಳು, ಶುಭ–ಅಶುಭಕಲ್ಪನಗಳು, ದಕ್ಷಿಣೆಗಳಿಂದಲೂ, ಅಗ್ನಿಗಳಿಂದಲೂ, ಪುರೋಡಾಶ, ದೇವತೆಗಳಿಂದಲೂ ಕೂಡಿರುವ ಯಜ್ಞಗಳು,

೩೧ (ಅದನ್ನು ಮಾಡುವ) ಭೂಪಾಲರು, (ಅದಕ್ಕೆ ಬೇಕಾಗುವ) ಉಲೂಖಲ ಬೃಸಿ (ಆಸನ), ಶೂರ್ಪ, ಯೂಪ ಮೊದಲಾದ ಸಾಧನಗಳು, ಆಯುಧಗ್ರಾಮಗಳು, ಶೂಲ, ಶರ, ಶಕ್ತಿಗಳು, ಇವುಗಳಿಂದ ಕೂಡಿದ ಸಂಗ್ರಾಮಗಳು

ಸ ಭುಶುಂಡೀ ಗದಾಪ್ರಾಸ ಹಯೇಭ ಭಟ ಭಾಸುರಾಃ ।
ಜ್ಞಾತಯೋ ಭೂತಸಂಘಾನಾಂ ಚತುರ್ದಶ ಸುರಾದಿಕಾಃ
ಚತುರ್ದಶಾಬ್ಧಿ ದ್ವೀಪೋರ್ವ್ಯಸ್ತಥಾ ಲೋಕಾಶ್ಚತುರ್ದಶ ॥೩೨॥

ಶ್ರೀರಾಮ ಉವಾಚಃ—

ಚಿತೇಃ ಕಲ್ಪಾಃ ಶರೀರಿಣ್ಯಾಃ ಸರ್ಗಾ ಯೇಂಗೇ ಸ್ಥಿತಾಸ್ತಥಾ ।
ತೇ ಕಿಮಾತ್ಮನಿ ತಿಷ್ಠಂತಿ ಉತಾಸತ್ಯಾ ವದೇತಿ ಭೋ ॥೩೩॥

---

೩೨ ಭುಶುಂಡಿ, ಗದಾ, ಪ್ರಾಸ, ಹಯ, ಗಜ, ಭಟರುಗಳಿಂದ ಕೂಡಿರುವ ಯುದ್ಧಗಳು, ಚತುರ್ದಶ ಭೂತಸಂಘಗಳ ಜ್ಞಾತಿಗಳಾದ ಸುರಾಸುರಾದಿಗಳಿಂದ ಕೂಡಿರುವ ಅಬ್ಧಿ, ದ್ವೀಪ, ಭೂಮಿಗಳಿಂದ ಕೂಡಿರುವ ಹದಿನಾಲ್ಕು ಲೋಕಗಳು—(ಇವೆಲ್ಲವೂ ಆ ದೇವಿಯ ಅವಯವಗಳು)

ಶ್ರೀರಾಮನು ಕೇಳಿದನು:—

೩೩ ಎಲೈ ಮುನೀಂದ್ರನೇ, ಶರೀರವನ್ನು ವಹಿಸಿರುವ ಚಿತಿಶಕ್ತಿಗೆ ಕಲ್ಪ (ಪ್ರಲಯ) ಗಳೂ ಸರ್ಗಗಳೂ ಆಕೆಯ ಶರೀರದಲ್ಲಿಯೇ ಇರುವುವೋ, ಇದ್ದಹಾಗೆ ಕಾಣಿಸುವುವೋ ಅದನ್ನು ಹೇಳು

(ಏವಂ ಪ್ರಶ್ನದ್ವಯೇ ತ್ವಯಾ ಸಮಾಹಿತೇಽಪಿ, ಮಮ ಪ್ರಾಕ್ಸರ್ಗಕೃತ ದ್ವೈತ ಕೈಕ್ಯಯೌಗಪದ್ಯಾಸಂಭವ ಶಂಕಾಯಾಃ ಸಮ್ಯಕ್ ಸಮಾಧಾನಂ ನ ವೃತ್ತಂ । ನಷ್ಟಸ್ಯ ಅಸತೋ ಅರ್ಥಕ್ರಿಯಾಕಾರಿತ್ವಾ ಸಂಭವಾತ್ । ಸ್ವಸತ್ತಾ ಬಲೇನ ಕಾರ್ಯ ಸಂಪಾದನ ಬಲಮೇವ ಹಿ ಕಾರಣಾನಾಂ ಕಾರ್ಯಾರ್ಥಕ್ರಿಯಾ । ಉಪಾದಾನೇನ ಕಾರ್ಯಸ್ಯ ತತ್ತ್ವಾಪಹಾರಶ್ಚ ನಾಶಃ । ನಚೈಕಸ್ಮಿನ್ನೇವ ಕಾಲೇ ಕಾರಣೇನ ಸ್ವಕಾರ್ಯೇ ಸತ್ತಾ ಸಂಪಾದ್ಯತೇ ಅಪಹ್ರಿಯತೇ ಚೇತಿ ಶ್ಲಿಷ್ಯತೇ । ನವಾ ಸರ್ವಕಾರಣ ಸದಾತ್ಮ ಪ್ರಕೃತ ಸತ್ತಾಕೈಃ ಪದಾರ್ಥೈಃ ಪ್ರಲಯೇ ಸ್ವಸ್ವಾರ್ಥ ಕ್ರಿಯಾ ಸಂಭಾವಯಿತುಂ ಶಕ್ಯಾ–ಇತ್ಯಾಶಯೇನ ರಾಮಃ ಪೃಚ್ಛತಿ–ಚಿತೇರಿತಿ – । ರುದ್ರಕಾಲೇ ಶರೀರಿಣ್ಯಾಶ್ಚಿತೇರಗ್ರೇ ಪ್ರಲಯಕಾಲೇಽಪ್ಯತೀತಾನಾಗತಾಃ ಸರ್ವೇ ಸರ್ಗಾ ಕಲ್ಪಾಃ ಪ್ರಲಯಾಶ್ಚ ಸ್ಥಿತಾ ಇತಿ ಯತ್ತ್ವಯಾ ವರ್ಣಿತಂ ತತ್ರ ಪೃಚ್ಛಾಮಿ । ಯೇ ಸ್ಥಿತಾಃ ಸರ್ಗಾಸ್ತೇ

ಶ್ರೀ ವಸಿಷ್ಠ ಉವಾಚ: —

ರಾಮಾಸೌ ಕಿಲ ಚಿಚ್ಛಕ್ತಿಸ್ತಯಾ ಯಚ್ಚೋದಿತಂ ತಥಾ ।
ತತ್ಪ್ರಚೇತಿತಮೇವಾಂತಃ ಸತ್ಯಂ ಚೇದಮಿವಾಖಿಲಂ ॥೩೪॥

ತತ್ಪ್ರತಿಬಿಂಬಿತಂ ಬಾಹ್ಯಾನ್ಮುಕುರಪ್ರತಿಬಿಂಬವತ್ ।
ಸತ್ಯಂ ತದಂತರೇವಾಸ್ತಿ ಚಿತೇರ್ನಾಸತ್ಯಮರ್ಥತಃ ॥೩೫॥

---

ಕಿಮಾತ್ಮನ್ಯರ್ಥಕ್ರಿಯಾ ಸಮರ್ಥೇ ಸತ್ಸ್ವಭಾವೇ ತಿಷ್ಠಂತಿ ಉತ ಅಸತ್ಯಾಸ್ತಾದೃಶ ಸತ್ಸ್ವಭಾವಶೂನ್ಯಾ ಮೃಗತೃಷ್ಣಾಂಬುಪ್ರಾಯಾ ಇತಿ ವದೇತ್ಯರ್ಥಃ — ತಾ.ಪ್ರ.)

ಶ್ರೀ ವಸಿಷ್ಠನು ಹೇಳಿದನು:—

೩೪ ರಾಮ, ಈ ರುದ್ರಕಾಲಿಯೇ ಚಿಚ್ಛಕ್ತಿಯಲ್ಲವೇ ? ಆದರಿಂದ ಯಾವುದು ಆಕೆಯಿಂದ ಉದಿತವಾಗುವುದೋ ಅದೆಲ್ಲವೂ ಆಕೆಯಿಂದ ಪ್ರಚೇತಿತವು : ಆದರಿಂದ ಎಲ್ಲವೂ ಸತ್ಯವೇ ।

(ಜಗತಃ ಪ್ರಲಯಸ್ಯ ಚ ಕದಾಚಿದಪಿ ನಾತ್ಯಂತಿಕಂ ಸತ್ವಂ ನಾಪ್ಯಸತ್ವಂ ಕಿಂತು ಸತ್ಯಸಂಕಲ್ಪಾನುಸಾರಿಚಿತಾ ಸತ್ಯಮಿತಿ ಚೇತಿತಂ, ಸತ್ಯಂ, ಅಸದಿತಿ ಚೇತಿ ತದಸತ್ಯಂ ನಸ್ವತೋಽಸ್ಯ ಕಿಂಚಿದ್ವ್ಯಪದೇಶಾರ್ಹಂ ರೂಪಮಸ್ತಿ । ತಥಾ ಚ ಪ್ರಲಯಕಾಲೇಽಪಿ ಐಂದವಸರ್ಗಾಸ್ಥಿತಾ ಅರ್ಥಕ್ರಿಯಾ ಸಮರ್ಥಾಶ್ಚ ತತ್ಸಂಕಲ್ಪಚಿತೋ ದೃಷ್ಟ್ಯಾ । ಇತರ ಸಂಕಲ್ಪ ದೃಷ್ಟ್ಯಾತು ತೇ ನಸ್ಥಿತಾ ನಪ್ರಲೀನಾಶ್ಚೇತಿ ಪ್ರಾಗ್ವರ್ಣಿತ ಮೇವೇತ್ಯಾಶಯೇನ ವಸಿಷ್ಠ ಉತ್ತರಮಾಹ–ರಾಮೇತ್ಯಾದಿನಾ । ಯದ್ವಸ್ತುತಯಾ ಸತ್ಯಸಂಕಲ್ಪಚಿತಾ ತತ್ತದ್ಭೋಕ್ತೃವಾಸನಾಕರ್ಮ ಬೀಜೋದ್ಭೇದನೇನ ಸರ್ಗಾಯವಾ ಪ್ರಲಯಾಯ ವಾ ಚೋದಿತಂ । ತಥಾ ತೈರ್ಭೋಕ್ತೃಭಿಃ ಪ್ರಚೇತಿತಮನುಭೂತಮೇವ । ಅತಸ್ತದನುಭವಿತ ದೃಶಾ ಇದಮಖಿಲಂ ಸತ್ಯಮಿವ । ಚಾತ್ ಅನ್ಯದೃಶಾ ಅತ್ಯಂತಾಪ್ರಸಿದ್ಧೇರಸತ್ಯಮಿವ । — ತಾ.ಪ್ರ.)

೩೫ ಆ ಚಿಚ್ಛಕ್ತಿ ಸ್ವರೂಪಿಣಿಯಾದ ಕ್ರಿಯಾದೇವಿಯು ಏನನ್ನು ಪ್ರತಿ ಬಿಂಬಿಸುವಳೋ ಅದೇ ಕನ್ನಡಿಯಲ್ಲಿ ಕಾಣುವ (ಬಾಹ್ಯದ) ಪ್ರತಿಬಿಂಬದಂತೆ ಸತ್ಯವು : ಏಕೆಂದರೆ ಆ ಪ್ರತಿಬಿಂಬವಿರುವುದೂ ಆಕೆಯಲ್ಲಿಯೇ । ಚಿತಿಗೆ ಅರ್ಥದೃಷ್ಟಿಯಿಂದ ಯಾವುದೂ ಅಸತ್ಯವಿಲ್ಲ.

ಚಿದ್ರೂಪಸ್ಯ ತಥಾಪ್ಯಂತಃ ಸತ್ಸಂಕಲ್ಪಪುರಂ ಭವೇತ್ ।
ದೃಢಧ್ಯಾನಾದ್ವಿಶುದ್ಧಾಯಾಶ್ಚಿತೇರ್ಭವತು ಸಾ ಕಥಂ ॥೩೬॥

ಆದರ್ಶೇಷ್ವಥವಾ ಸ್ವಪ್ನೇ ಸರ್ಗಃ ಸಂಕಲ್ಪನೇಽಸ್ತು ವಾ ।
ಸ ಆತ್ಮನ್ಯರ್ಥಕಾರಿತ್ವಾತ್ಸತ್ಯ ಇತ್ಯೇವ ಮೇ ಮತಿಃ ॥೩೭॥

ಮಮ ನಾರ್ಥಾಯ ಸ ಇತಿ ವಕ್ಷಿ ಚೇತ್ತತ್ಕಥಂ ಭವೇತ್ ।
ದೇಶಾಂತರಗತಾಃ ಸರ್ವೇ ಭವಂತ್ಯರ್ಥಾಯ ಸಂಪ್ರತಿ ॥೩೮॥

---

(ಕುತಸ್ಸತ್ಯಮಿವ ತತ್ರಾಹ-ತದಿತಿ । ಯತಸ್ತತ್ ಬಾಹ್ಯಾಸ್ಮೃತ್ಯಾದೇರ್ಬಿಂಬಾನ್ನಿಮಿತ್ತಾ ಮುಕುರ ಪ್ರತಿಬಿಂಬ‌ತ್ ಪೂರ್ವಾನುಭವ ವಾಸನಾದಿ ನಿಮಿತ್ತಾತ್ ತತ್ಸಾಕ್ಷಿಕಿಕಿ ಪ್ರತಿಬಿ ಬಿತಂ ತದಂತರೇವ ಸ್ತಿ ಅತೋಽರ್ಥತಃ ತಂಪ್ರತಿ ಸತ್ಯಮೇವ)

೩೬ ತಥಾಽಪಿ, ಚಿದ್ರೂಪದ ಒಳಗೆ ಸತ್ತೇ ಸಂಕಲ್ಪಪುರವಾಗುವುದು. ಆದರೆ ಧ್ಯಾನವು ದೃಢವಾಗಿ ಸಂಕಲ್ಪ ಕ್ಷೀಣವಾದಾಗ ಆ ಚಿತ್ತು ಶುದ್ಧವಾಗುವುದು. ಆಗ ಸಂಕಲ್ಪಪುರವು (ಆಗುವುದೆಂತು ?)

೩೭ ಆದರ್ಶದಲ್ಲಾಗಲಿ, ಸ್ವಪ್ನದಲ್ಲಾಗಲಿ, ಸಂಕಲ್ಪದಲ್ಲಿಯೇ ಆಗಲಿ, ಆತ್ಮದಲ್ಲಿ ಯಾಗಲಿ, ಯಾವುದು ಉತ್ಪತ್ತಿಯಾಗುವುದೋ ಅದು ಅರ್ಥಕಾರಿಯಾಗುವುದರಿಂದ ಸತ್ಯವೆಂದೇ ನನ್ನ ಮತವು

೩೮ ಅದು ನನಗೆ ಅರ್ಥಕಾರಿಯಲ್ಲ ಎಂದರೆ, ಅದು ಹೇಗಾದೀತು ? ದೇಶಾಂತರಗಳಲ್ಲಿರುವ ವಸ್ತುಗಳು ಸಾಂಪ್ರತದಲ್ಲಿ ಅರ್ಥಕಾರಿಗಳಾಗುವುದೆಂತು ?

ಸ ಆದರ್ಶಾಂತರ್ಗತೋ ಘಟಾದಿರ್ಮಮ ಬಾಹ್ಯ ಜಲಾದ್ಯಾಹರಣಾರ್ಥಾಯ ಸಮರ್ಥೋನೇತಿ ಚೇತ್, ತ್ವಂ ವಕ್ಷಿ ವದಸಿ, ತರ್ಹಿ ಶೃಣು । ತದಾದರ್ಶಾಂತರ್ಗತಂ ಬಹಿರರ್ಥಾಯ ಕಥಂ ಭವೇತ್ । ನಹ್ಯನ್ಯತ್ರ ವಿದ್ಯಮಾನಮನ್ಯತ್ರ ಜಲಾಹರಣಾದ್ಯಸಮರ್ಥಮಿತ್ಯೇತಾವತಾ ಅಸದ್ಭವತಿ । ಕಿಂ ತವ ದೇಶಾಂತರ ಗತಾಸ್ಸರ್ವೇ ಘಟಾದ್ಯರ್ಥಾಃ ಸಂಪ್ರತಿ ತೇ ಗೃಹೇ ಜಲಾಹರಣಾದ್ಯರ್ಥಾಯ ಸಮರ್ಥಾ

ಯಥಾ ದೇಶಾಂತರಗ್ರಾಮಸ್ತದ್ಗತಸ್ಯಾರ್ಥಕೃದ್ಭವೇತ್ ।
ಸರ್ವೇ ತಥೈವ ತದ್ಭಾವಂ ಗತಸ್ಯಾರ್ಥವಿನಿಶ್ಚಯಾತ್ ॥೩೯॥

ಯದ್ಯಥಾಭೂತಸರ್ವಾರ್ಥಕ್ರಿಯಾಕಾರಿ ಪ್ರದೃಶ್ಯತೇ ।
ತತ್ಸತ್ಯಮಾತ್ಮನೋಽನ್ಯಸ್ಯ ನೈವಾತತ್ತಾಮುಪೇಯುಷಃ ॥೪೦॥

ತಸ್ಮಾಚ್ಚಿಚ್ಛಕ್ತಿಕೋಶಸ್ಥಾಃ ಸರ್ವಾಃ ಸರ್ಗಪರಂಪರಾಃ ।
ಸತ್ಯಾ ಆತ್ಮೇತಿ ತದ್ಭಾವಂ ಗತಸ್ಯಾನ್ಯಸ್ಯ ನಾಖಿಲಾಃ ॥೪೧॥

ಭೂತಭವ್ಯಭವಿಷ್ಯಸ್ಥಾಃ ಸಂಕಲ್ಪಸ್ವಪ್ನಪೂರ್ಗಣಾಃ ।
ಸರ್ವೇ ಸತ್ಯಾಃ ಪರಂ ತತ್ತ್ವಂ ಸರ್ವಾತ್ಮ ಕಥಮನ್ಯಥಾ ॥೪೨॥

---

ಭವಂತೀತಿ ಕಾಕುಃ । ದೇಶಾಂತರೇ ತೇಷಾಮರ್ಥಕ್ರಿಯಾಕಾರಿತ್ವಮಿವ ದರ್ಪಣ ಸ್ವಪ್ನಾದ್ಯಂತರರ್ಥ ಕ್ರಿಯಾತು ಪ್ರತಿಬಿಂಬಾದೇರಪ್ಯಸ್ತ್ಯೇವ–ಇತ್ಯಾಹ– ಯಥೇ ತಿ । ತದ್ಭಾವಂ ಸ್ವಪ್ನಾದಿ ದೃಷ್ಟಭಾವಂ ।– ತಾ.ಪ್ರ.

೩೯ ದೇಶಾಂತರದಲ್ಲಿರುವ ಗ್ರಾಮವು ಅಲ್ಲಿರುವವನಿಗೆ ಏನಾದರೂ ಪ್ರಯೋಜನಕರವಾದೀತಲ್ಲದೆ, ದೂರದಲ್ಲಿರುವವರಿಗಲ್ಲ. ಹಾಗೆಯೇ ವಸ್ತುವನ್ನು ಪಡೆದವರಿಗೆ ಅದು ಪ್ರಯೋಜನಕಾರಿಯಾದುದರಿಂದ (ಅದು ಸತ್ಯವೆನ್ನಬೇಕು.)

೪೦ ಯಾವುದು ತನಗೇ ಆಗಲಿ ಇತರರಿಗೇ ಆಗಲಿ ಪ್ರಯೋಜನಕ್ಕೆ ಆಗುವುದೊ ಅದು ಸತ್ಯವು. ಆದರೆ ಸತ್ಯವೂ ಅತತ್ತನ್ನು ಹಿಡಿದವನಿಗೆ ಪ್ರಯೋಜನವಾಗುವುದಿಲ್ಲ (ಯಾವುದು ತನಗೆ ಪ್ರಯೋಜನ ಸಾಧನವಾಗುವುದೋ ಅದು ತನಗೆ ಸತ್ಯವು. ಪ್ರಯೋಜನ ಸಾಧನವಲ್ಲದವನಿಗೆ ಅಸತ್ಯವು––ತಾ.ಪ್ರ.)

೪೧ ಆದರಿಂದ ಚಿಚ್ಛಕ್ತಿಕೋಶದಲ್ಲಿರುವ ಸರ್ಗಪರಂಪರೆಗಳೆಲ್ಲವೂ ಆತ್ಮವೇ ಎಂದು ತದ್ಭಾವಂಗತನಾದವನಿಗೆ ಸತ್ಯಗಳು : ಇತರರಿಗೆ ಅಸತ್ಯಗಳು.

೪೨ ಭೂತ, ಭವ್ಯ, ಭವಿಷ್ಯದಲ್ಲಿರುವ, ಸಂಕಲ್ಪ, ಸ್ವಪ್ನ, ಪಟ್ಟಣ ಗಳಂತೆ, ಇರುವ, ಬ್ರಹ್ಮಾಂಡಗಳೆಲ್ಲವೂ ಸತ್ಯಗಳೇ ! ಏಕೆಂದರೆ, ಇರುವುದೆಲ್ಲವೂ ಪರತತ್ವವೇ ! ಅದ್ದರಿಂದ ಇವು ಸುಳ್ಳು ಎನ್ನುವುದಾದರೆ ಆ ಪರತತ್ವವು ಸರ್ವಾತ್ಮ

ಪ್ರಾಪ್ಯಂತೇ ಯೋಗಸಿದ್ಧೇನ ತದ್ಭಾವಂ ತು ಗತೇನ ತೇ ।
ಅನ್ಯೇನ ಪರ್ವತಾ ಗ್ರಾಮಾ ಗತ್ವಾ ದೇಶಾಂತರೇ ಯಥಾ ॥೪೩॥

ಚಾಲಿತಸ್ಯ ಯಥಾ ಗಾಢನಿದ್ರಸ್ಯ ಸ್ವಪ್ನಪತ್ತನಂ ।
ನ ಲುಠತ್ಯೇವ ಲುಠಿತಮಿತ್ಯಪ್ಯನುಮತಂ ಸ್ಫುಟಂ ॥೪೪॥

ತಥಾ ಚಲಂತ್ಯಾ ಲುಠಿತಂ ತಸ್ಯಾ ದೇಹಗತಂ ಜಗತ್ ।
ನ ಲುಠತ್ಯೇವ ಮುಕುರಪ್ರತಿಬಿಂಬಮಿವ ಸ್ಥಿತಂ ॥೪೫॥

---

ಆಗುವುದೆಂತು ? (ಆತ್ಮವು ಸರ್ವವನ್ನೂ ಒಳಗೊಂಡಿದೆಯೆಂದಮೇಲೆ ಈ ಬ್ರಹ್ಮಾಂಡಗಳು ಸುಳ್ಳಾಗುವುದೆಂತು ? )

೪೩ ಯೋಗಸಿದ್ಧನಾಗಿ ತದ್ಭಾವವನ್ನು ಹೊಂದಿದವನಿಗೆ ಅವೆಲ್ಲವೂ ದೊರೆಯುವುದು. ದೇಶಾಂತರಗಳಲ್ಲಿರುವ ಪರ್ವತ ಗ್ರಾಮ ಮೊದಲಾದವು ಅಲ್ಲಿಗೆ ಹೋದರೆ ತಾನೇ ಸಿಕ್ಕುವುದು ?

(ಅತಏವ ಪರಸ್ವಪ್ನಾದ್ಯರ್ಥಾ ಅಪಿ ಯೋಗಿಭಿಃ ಪ್ರಾಪ್ಯಂತೇ ಇಚ್ಛಯಾ ಉಪಭುಜ್ಯಂತೇ ಚೇತ್ಯಾಹ — ಪ್ರಾಪ್ಯಂತ ಇತಿ । ಅನ್ಯೇನ ತತ್ಸ್ವಪ್ನಪುರುಷಾತಿರಿಕ್ತೇನ ನಾಪಿ ಪರಕಾಯ ಪ್ರವೇಶೇನ ತದ್ಧೃದಯಂ ಪ್ರವಿಶ್ಯ ತನ್ಮನೋಭಾವಂಗತೇನ ಯಥಾ ದೇಶಾಂತರೇ ವಿದ್ಯಮಾನಾಃ ಪರ್ವತ ಗ್ರಾಮಾಸ್ತತ್ರಗತ್ವಾ ಪ್ರಾಪ್ಯಂತೇ ತದ್ವತ್ । — ತಾ.ಪ್ರ.)

೪೪ ಗಾಢನಿದ್ರೆಯಲ್ಲಿ(ಕನಸು ಕಾಣುತ್ತ)ಇರುವವನನ್ನು ಅಲ್ಲಾಡಿಸಿದರೆ ಅವನ ಕನಸಿನಲ್ಲಿ ಕಾಣುತ್ತಿರುವ ಸ್ವಪ್ನಪತ್ತನವು ಉರುಟಾಡಲೇಬೇಕೆಂಬುದು ಅನುಮಾನ ಪ್ರಮಾಣದಿಂದ ಸಿದ್ಧವಾಗುವುದು. ಆದರೆ ಹಾಗೆ ಉರುಟಾಡುವುದು ಉಂಟೇನು ?

೪೫ ಹಾಗೆಯೇ (ನರ್ತನ ಮಾಡುತ್ತಿರುವ ಕಾಲಿಯು) ಚಲಿಸುತ್ತಿದ್ದರೂ ಆಕೆಯ ದೇಹಗತವಾಗಿರುವ ಜಗತ್ತು, ಕನ್ನಡಿಯಲ್ಲಿ ಕಾಣಿಸುವ ಪ್ರತಿಬಿಂಬದಂತೆಯೇ, ಇದ್ದಂತೆಯೇ ಇರುವುದೇ ಹೊರತು ಅಲ್ಲಾಡುವುದೇ ಇಲ್ಲ.

ನ ತ್ರೈಲೋಕ್ಯಮಹಾರಂಭಃ ಸತ್ಯೋಽಪಿ ಭ್ರಾಂತಿಮಾತ್ರಕಂ ।
ಭ್ರಾಂತಿಮಾತ್ರಸ್ಯ ಕೇ ನಾಮ ಉತನಾಉತನೇ ವದ ॥೪೬॥

ಕದಾ ಸ್ವಪ್ನಪುರಂ ಸತ್ಯಂ ಕದಾ ಸ್ವಪ್ನಪುರಂ ಮುಧಾ ।
ಕದಾ ಸ್ವಪ್ನಪುರಂ ಭಗ್ನಂ ಕದಾ ಸ್ವಪ್ನಪುರಂ ಸ್ಥಿತಂ ॥೪೭॥

ಭ್ರಾಂತಿತ್ವಂ ಕೇವಲಂ ಸೈವ ದೃಶ್ಯಶ್ರೀರ್ಯಾವದಗ್ರಗಾ ।
ತ್ವಂ ವಿದ್ಧೀಮಾಮಪಿ ಭ್ರಾಂತಿಂ ಜಗಲ್ಲಕ್ಷ್ಮೀಮವಾಸ್ತವೀಂ ॥೪೮॥

ಸಂಕಲ್ಪನೇ ಮನೋರಾಜ್ಯೇ ಸ್ವಪ್ನೇ ಸಂಕಥನೇ ಭ್ರಮೇ ।
ಯಥಾಪುರಾನುಭವನಂ ತ್ರೈಲೋಕ್ಯಾನುಭವಂ ತಥಾ ॥೪೯॥

---

೪೬ ತ್ರೈಲೋಕ್ಯಮಹಾರಂಭವು ಕಾಣಿಸುತ್ತಿರುವುದರಿಂದ ಸತ್ಯವಾದರೂ ಭ್ರಾಂತಿ ಮಾತ್ರವೇ ! ಭ್ರಾಂತಿ ಮಾತ್ರದಿಂದ ಇರುವ ವಸ್ತುವಿಗೆ – ಉತನ, ಅಉತನ, ಎಂಬುವು ಎಲ್ಲಿಯವು ?

೪೭ ಸ್ವಪ್ನಪುರವು ಸತ್ಯವಾಮದು ಯಾವಾಗ ? ಸ್ವಪ್ನಪುರವು ಮಿಥ್ಯಾ ಆಗುವುದು ಯಾವಾಗ ? ಸ್ವಪ್ನಪುರವು ಭಗ್ನವಾದುದು ಯಾವಾಗ ? ಸ್ವಪ್ನ ಪುರವು ಇದ್ದುದು ಯಾವಾಗ ?

೪೮ ಎದುರಿಗೇ ಇದ್ದರೂ ದೃಶ್ಯಲಕ್ಷ್ಮಿಯು ಕೇವಲ ಭ್ರಾಂತಿಯೇ ಎಂದು ತಿಳಿ. ಈ ಜಗಲ್ಲಕ್ಷ್ಮಿಯು ಭ್ರಾಂತಿ ಮಾತ್ರವಲ್ಲ : ಅವಾಸ್ತವವೂ ಹೌದು ಎಂಬುವನ್ನು ಚೆನ್ನಾಗಿ ತಿಳಿ.

೪೯ ಸಂಕಲ್ಪದಲ್ಲಿ, ಮನೋರಾಜ್ಯದಲ್ಲಿ, ಸ್ವಪ್ನದಲ್ಲಿ, ಸಂಕಥನದಲ್ಲಿ, ಭ್ರಮದಲ್ಲಿ, ಅನುಭವಿಸುವ ಪಟ್ಟಣದಂತೆಯೇ ತ್ರೈಲೋಕ್ಯಾನುಭವವು ಎಂದು ತಿಳಿ.

ಅಹಮಿತಿ ಜಗದಿತಿ ನಾಂತ-
 ಭ್ರಾಂತಿರಿಯಂ ಪ್ರಕಚತೀವ ಚಿತಃ ।
ಪರಮಾಕಾಶಸ್ಯಶಾಖ್ಯಾ
 ಶಾಮ್ಯತಿ ನಿಪುಣಂ ಪರಿಜ್ಞಾತಾ ॥೫೦॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಪಾಷಾಣೋಪಾಖ್ಯಾನೇ "ಶಿವಶಕ್ತಿವರ್ಣನಂ" ನಾಮ ಚತುರಶೀತಿತಮಃ ಸರ್ಗಃ

---

೫೦ ಅಹಂ ಎಂದು, ಜಗತ್ತು ಎಂದು, ಯಾವಾಗಲೂ ಇಲ್ಲ. ಚಿತ್ತಿನೊಳಗೆ ಕಚನ ಮಾಡಿದಂತಾಗಿ ಉಂಟಾಗುವ ಭ್ರಾಂತಿಯಿದು. ಇದು ಪರಮಾಕಾಶದ ಒಂದು ಗೆರೆಯಂತೆಯೇ ಸರಿ. ಇದನ್ನು ಇದರ ಸ್ವರೂಪವೇನೆಂದು ಚೆನ್ನಾಗಿ ವಿಚಾರ ಮಾಡಿ ನೋಡಿದರೆ ಇಲ್ಲವಾಗುವುದು.

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ "ಶಿವಶಕ್ತಿವರ್ಣನ" ಎಂಬ ಎಂಭತ್ತ ನಾಲ್ಕನೆಯ ಸರ್ಗವು



# ಪಂಚಾಶೀತಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ —

ಇತಿ ನೃತ್ಯತಿ ಸಾ ದೇವೀ ದೀರ್ಘದೋರ್ದಂಡಮಂಡಲೈಃ ।
ಪರಿಸ್ಪಂದಾತ್ಮಕೈರ್ವ್ಯೋಮ ಕುರ್ವಾಣಾ ಘನಕಾನನಂ ॥೧॥

ಕ್ರಿಯಾಸೌ ನೃತ್ಯತಿ ತಥಾ ಚಿತಿಶಕ್ತಿರನಾಮಯಾ ।
ಅಸ್ಯಾ ವಿಭೂಷಣಂ ಶೂರ್ಪಕುದ್ದಾಲಪಟಲಾದಿಕಂ ॥೨॥

---

# ಎಂಭತ್ತಐದನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು —

೧ ಆ ದೇವಿಯು, ಹಿಂದೆ ಹೇಳಿದಂತೆ, ದೀರ್ಘವಾದ ತೋಳುಗಳನ್ನು ಎಸೆದಾಡುತ್ತ, ಅವುಗಳ ವ್ಯಾಪಾರದಿಂದ ಆಕಾಶವನ್ನು ದಟ್ಟವಾದ ಅರಣ್ಯವನ್ನು ಮಾಡುತ್ತ ಕುಣಿಯುವಳು

೨ ಅನಾಮಯಳಾದ ಚಿತಿಶಕ್ತಿಯೇ ತನ್ನನ್ನು ತಾನು ಅರಿಯದೆ ಹೋದಾಗ ಕ್ರಿಯಾ ಎನ್ನಿಸಿಕೊಳ್ಳುವಳು ಆಕಯು ನರ್ತಿಸುವಳು ಆಗ ಆಕೆಗೆ ಶೂರ್ಪ, ಕುದ್ದಾಲ, ಪಟಲಾದಿಕಗಳು ವಿಭೂಷಣಗಳು

ಶರಶಕ್ತಿಗದಾಪ್ರಾಸಮುಸಲಾದಿ ಶಿಲಾದಿ ಚ ।
ಭಾವಾಭಾವಪದಾರ್ಥೌಘಕಲಾಕಾಲಕ್ರಮಾದಿ ಚ ॥೩॥

ಚಿತ್ಸಂದೋಽಂತರ್ಜಗದ್ಧತ್ತೇ ಕಲ್ಪನೇವ ಪುರಂ ಹೃದಿ ।
ಸೈವ ಪಾ ಜಗದಿತ್ಯೇವ ಕಲ್ಪನೈವ ಯಥಾ ಪುರಂ ॥೪॥

ಪವನಸ್ಯ ಯಥಾ ಸ್ಪಂದಸ್ತಥೈವೇಚ್ಛಾ ಶಿವಸ್ಯ ಸಾ ।
ಯಥಾ ಸ್ಪಂದೋಽನಿಲಸ್ಯಾಂತಃ ಪ್ರಶಾಂತೇಚ್ಛಸ್ತಥಾ ಶಿವಃ ॥೫॥

ಅಮೂರ್ತೋ ಮೂರ್ತಮಾಕಾಶೇ ಶಬ್ದಾಡಂಬರಮಾನಿಲಃ ।
ಯಥಾ ಸ್ಪಂದಸ್ತನೋತ್ಯೇವಂ ಶಿವೇಚ್ಛಾ ಕುರುತೇ ಜಗತ್ ॥೬॥

---

೩ ಶರ, ಶಕ್ತಿ, ಗದಾ, ಪ್ರಾಸ, ಮುಸಲ, ಶಿಲೆ ಮೊದಲಾದ ಭಾವ, ಅಭಾವ ಪದಾರ್ಥ ಸಮೂಹಗಳೂ ಕಲಾ, ಕಾಲ, ಕ್ರಮ ಮೊದಲಾದವೂ ಆಕೆಗೆ ಆಭರಣಗಳು.

೪ ಚಿತ್ತಿನ ಸ್ಪಂದವು ಯಾವುದುಂಟೋ ಅದೇ, ಸಂಕಲ್ಪವು. ಮನಸ್ಸಿನಲ್ಲಿಯೇ ಪುರವನ್ನು ಮುಟ್ಟುವಂತೆ, ತನ್ನೊಳಗೇ ಜಗತ್ತನ್ನು ಮಾಡಿಕೊಳ್ಳುವುದು. ಅವಳೇ ಜಗತ್ತಾಗುವಳು. ಹಾಗೆ ಆಗುವುದು ಕಲ್ಪನೆಯೇ ಪುರವಾಗುವಂತೆ !

೫ ಪವನನಿಗೆ ಸ್ಪಂದವು ಹೇಗೋ ಹಾಗೆ ಹಾಗೆಯೇ ಶಿವನ ಇಚ್ಛೆಯೇ ಈ ಶಕ್ತಿಯು ! ಹೇಗೆ ಶಾಂತವಾದ ಸ್ಪಂದವು ಮಾರುತನಲ್ಲಿಯೇ ಇರುವುದೋ ಹಾಗೆಯೇ ಇಚ್ಛಾಶಕ್ತಿಯೂ ಶಾಂತವಾದರೆ ಕೇವಲ ಶಿವನೇ ಇರುವನು.

೬ ಅಮೂರ್ತವಾದ ಮಾರುತ ಸ್ಪಂದವು ಆಕಾಶದಲ್ಲಿ ಕಿವಿಗೆ ಕೇಳಿಸುವ ಮೂರ್ತವಾದ ಶಬ್ದಾಡಂಬರವನ್ನು ಮಾಡುವಂತೆ ಶಿವೇಚ್ಛೆಯೂ ಜಗತ್ತನ್ನು ಮಾಡುವುದು.

ನೃತ್ಯಂತ್ಯಾಥ ಯದಾ ತತ್ರ ತಥಾ ತಸ್ಮಿನ್ನಿರಾಂಬರೇ ।
ಕಾಕತಾಲೀಯಯೋಗೇನ ಸಂರಂಭವಶತಃ ಸ್ವಯಂ ॥೭॥

ನಿಕಟಸ್ಥಃ ಶಿವಃ ಸ್ಪೃಷ್ಟಃ ಸ ಮನಾಗಭ್ರಮಂತಿಕಂ ।
ವಾಡವೋಗ್ನಿಃ ಸ್ವನಾಶಾಯಾವಹಂತ್ಯೇವಾಂಬುಲೇಖಯಾ ॥೮॥

ಸ್ಪೃಷ್ಟಮಾತ್ರೇ ಶಿವೇ ತಸ್ಮಿಂಸ್ತತಃ ಪರಮಕಾರಣೇ ।
ಪ್ರವೃತ್ತಾ ಪ್ರಕೃತಿಂ ಗಂತುಂ ಸಾ ಶನೈಸ್ತನುತಾಂ ತಥಾ ॥೯॥

ಅನಂತಾಕಾರತಾಂ ತ್ಯಕ್ತ್ವಾ ಸಂಪನ್ನಾ ಗಿರಿಮಾತ್ರಿಕಾ ।
ತತೋ ನಗರಮಾತ್ರಾಸೌ ತತಶ್ಚ ದ್ರುಮಸುಂದರೀ ॥೧೦॥

---

೭-೮ ಆ ಪರಮಾಕಾಶದಲ್ಲಿ ಕಾಕತಾಲೀಯ ಯೋಗದಿಂದ ಕುಣಿಯುತ್ತಿರುವ ಆ ಶಕ್ತಿಯು ಸಂರಂಭವು (ಪ್ರೇಮ ನಿರ್ಭರವು) ತಾನಾಗಿ, ಶಿವನನ್ನು ಸೋಕಿದಾಗ, ಮಗ್ಗುಲಲ್ಲಿದ್ದ ಶಿವನು ತನ್ನನ್ನು ಮುಚ್ಚಿದ್ದ ಅಭ್ರವನ್ನು ಪರಿಹರಿಸುವನು: ಆಗ ಹರಿಯುತ್ತಿರುವ ನೀರು ಸ್ವನಾಶಕ್ಕಾಗಿಯೇ ಬಾಡಬವನ್ನು ಮುಟ್ಟಿದಂತಾಗುವುದು.

೯ ಪರಮಕಾರಣನಾದ ಶಿವನನ್ನು ಮುಟ್ಟಿದ ಮಾತ್ರದಿಂದಲೇ, ಆ ಶಕ್ತಿಯು ಪ್ರಕೃತಿಯನ್ನು ಹೊಂದಲು ಆರಂಭವಾಗುವುದು.

೧೦ ಆಗ ಅನಂತಾನಂತವಾಗಿದ್ದ ಮೂರ್ತಾಕಾರಗಳನ್ನೆಲ್ಲಾ ಬಿಟ್ಟು, ಗಿರಿಮಾತ್ರಕಳಾಗುವಳು: ಅನಂತರದಲ್ಲಿ ನಗರ ಮಾತ್ರಳಾಗಿ ಅನಂತರ ಮರದಂತೆ ಸುಂದರವಾಗಿ ಕಾಣುವಳು.

(ತತ್ರಾದೌ ಭೌತಿಕನಂತಾಕಾರ ತ್ಯಾಗೇನ ಭೂತಮಾತ್ರಭಾವಮಾಹ— ಅನಂತೇತಿ । ತತಃ ಪಂಚೀಕರಣತ್ಯಾಗೇನ ಸೂಕ್ಷ್ಮ ಭೂತಾತ್ಮನಾ ನಗರಮಾತ್ರಾ । ತತೋ ವಿಚಿತ್ರ ವಾಸನಾ ಮಾತ್ರ ಪಲ್ಲವ ಶಾಖಾ ಶಾಲಿತ್ವಾತ್ ದ್ರುಮ ಇವ ಸುಂದರೀ ॥—ತಾ.ಪ್ರ.)

ತತೋಽನ್ಯೋನ್ಯಸಮಾಕಾರಾ ಶಿವಸ್ಯೈವಾಕೃತಿಂ ತತಃ ।
ಸಾ ಪ್ರವಿಷ್ಟಾ ಸರಿಚ್ಛಾಂತಸಂರಂಭೇವ ಮಹಾರ್ಣವಂ ॥೧೧॥

ಏಕ ಏವಾಽವಪಥೋ ಶಿವಯಾ ಪರಿವರ್ಜಿತಃ ।
ಶಿವ ಏವ ಶಿವಃ ಶಾಂತ ಆಕಾಶೇ ಶಮನೋಽಭಿತಃ ॥೧೨॥

ಶ್ರೀರಾಮ ಉವಾಚ:—

ಭಗವನ್ ಶಿವಸಂಸ್ಪೃಷ್ಟಾ ಸಾ ಶಿವಾ ಪರಮೇಶ್ವರೀ ।
ಕಿಮರ್ಥಮಾಗತಾ ಶಾಂತಿಮಿತಿ ಮೇ ಬ್ರೂಹಿ ತತ್ತ್ವತಃ ॥೧೩॥

ಶ್ರೀ ವಸಿಷ್ಠ ಉವಾಚ:

ಸಾ ರಾಮ ಪ್ರಕೃತಿಃ ಪ್ರೋಕ್ತಾ ಶಿವೇಚ್ಛಾ ಪಾರಮೇಶ್ವರೀ ।
ಜಗನ್ಮಾಯೇತಿ ವಿಖ್ಯಾತಾ ಸ್ಪಂದಶಕ್ತಿರಕೃತ್ರಿಮಾ ॥೧೪॥

---

೧೧ ಅನಂತರ (ಅದೂ ಇಲ್ಲವೆ) ಆಕಾಶ ಸಮವಾದ ಆಕೃತಿಯುಳ್ಳವಳಾಗಿ ಶಿವನ ಆಕೃತಿಯನ್ನೇ ಹೊಂದುವಳು. ಆಗ ಮಹಾರ್ಣವವನ್ನು ಪ್ರವೇಶಿಸಿ ಪ್ರಶಾಂತವಾದ ನದಿಯ ಹಾಗೆ ಆಗುವಳು.

೧೨ ಆಗ ಶಿವೆಯು ಇಲ್ಲವಾಗಲು ಶಿವನು ಒಬ್ಬನೇ ಒಬ್ಬನಾಗಿ, ಶಾಂತವಾದ ಆಕಾಶದಲ್ಲಿ ಎತ್ತೆತ್ತಲೂ ಶಾಂತನಾದವನಾಗುವನು.

(ಆಕಾಶೇ ಪ್ರಾಗ್ವರ್ಣಿತೇ ಶಮನಃ ಸರ್ವಸಂಹರ್ತಾ ಸರ್ವೋಪಪ್ಲವಶಾಂತ್ಯಾ ಶಿವ ಏಕ ಏವಾಭಿತೋಽಭವತ್ ।—ತಾ ಪ್ರ.)

ಶ್ರೀರಾಮನು ಕೇಳಿದನು:—

೧೩ ಆ ಪರಮೇಶ್ವರಿಯಾದ ಶಿವೆಯು ಭಗವಂತನಾದ ಶಿವನನ್ನು ಮುಟ್ಟಿದ ಕೂಡಲೆ ಏತಕ್ಕಾಗಿ ಶಾಂತಿಯನ್ನು ಹೊಂದುವಳು ಎಂಬುದನ್ನು ತತ್ವತಃ ನನಗೆ ತಿಳಿಯುವಂತೆ ಹೇಳು.

ಶ್ರೀ ವಸಿಷ್ಠನು ಹೇಳಿದನು:—

೧೪ ಪರಮೇಶ್ವರಿಯಾದ ಆ ಶಿವೇಚ್ಛೆಯನ್ನೇ ಪ್ರಕೃತಿಯೆನ್ನುವರು, ರಾಮ ! ಆಕೆಯು ಜಗತ್ತು, ಮಾಯೆ, ಸ್ಪಂದಶಕ್ತಿ, ಅಕೃತ್ರಿಮಾ ಎಂದು ವಿಖ್ಯಾತಳಾಗಿರುವಳು.

ಸ ಪರಃ ಪ್ರಕೃತೇಃ ಪ್ರೋಕ್ತಃ ಪುರುಷಃ ಪವನಾಕೃತಿಃ ।
ಶಿವರೂಪಧರಃ ಶಾಂತಃ ಶರದಾಕಾಶಶಾಂತಿಮಾನ್ ॥೧೫॥

ಭ್ರಮತಿ ಪ್ರಕೃತಿಸ್ತಾವತ್ಸಂಸಾರೇ ಭ್ರಮರೂಪಿಣೀ ।
ಸ್ಪಂದಮಾತ್ರಾತ್ಮಿಕಾ ಸ್ವೇಚ್ಛಾ ಚಿಚ್ಛಕ್ತಿಃ ಪಾರಮೇಶ್ವರೀ ॥೧೬॥

ಯಾವನ್ನ ಪಶ್ಯತಿ ಶಿವಂ ನಿತ್ಯತೃಪ್ತಮನಾಮಯಂ ।
ಅಜರಂ ಪರಮಾದ್ಯಂತವರ್ಜಿತಂ ವರ್ಜಿತದ್ವಯಂ ॥೧೭॥

ಸಂವಿನ್ಮಾತ್ರೈಕಧರ್ಮಿತ್ವಾತ್ಕಾಕತಾಲೀಯ ಯೋಗತಃ ।
ಸಂವಿದ್ದೇವೀ ಶಿವಂ ಸ್ಪೃಷ್ಟ್ವಾ ತನ್ಮಯೀವ ಭವತ್ಯಲಂ ॥೧೮॥

---

**೧೫ ಆ ಶಿವನು ಪ್ರಕೃತಿಗಿಂತಲೂ ಪರನು. ಅತನೇ ಪುರುಷನು. ಆತನು ಪವನನಂತೆ ಆಕೃತಿಯಿಲ್ಲದವನು. ಶರದಾಕಾಶದ ಶಾಂತಿಯುಳ್ಳವನಾಗಿ ಶಾಂತನಾದ ಆತನೇ ಶಿವರೂಪಧರನಾಗಿರುವನು.**

೧೬ ಸಂಸಾರದಲ್ಲಿ ಪ್ರಕೃತಿಯು ಭ್ರಮರೂಪಿಣಿಯಾಗಿ ಭ್ರಮಣಮಾಡುತ್ತಿರುವಳು. ಆಕೆಯು ಸ್ಪಂದ ಮಾತ್ರ ರೂಪಿಣಿಯು. ಆಕೆಯು ಪರಮೇಶ್ವರನ ಇಚ್ಛಾರೂಪಳಾದ ಚಿಚ್ಛಕ್ತಿಯು.

೧೭ ನಿತ್ಯತೃಪ್ತನೂ ಅನಾಮಯನೂ ಅಜರನೂ ಪರನೂ ಆದ್ಯಂತವರ್ಜಿತನೂ ಅದ್ವಿತೀಯನೂ ಆದ ಶಿವನನ್ನುಎಂದಿನವರೆಗೆ ನೋಡುವುದಿಲ್ಲವೋ, (ಅಂದಿನ ವರೆಗೂ ಭ್ರಮಣಮಾಡುತ್ತಿರುವಳು.

೧೮ ಆಕೆಯೂ ಪರಬ್ರಹ್ಮನಂತೆ ಸಂವಿನ್ಮಾತ್ರಧರ್ಮಳಾದ್ದರಿಂದ, ಕಾಕತಾಲೀಯ ಯೋಗದಿಂದ ಸಂವಿದಾತ್ಮಕಳಾದ ದೇವಿಯು ಶಿವನನ್ನು ಮುಟ್ಟಿದೊಡನೆಯೇ ತನ್ಮಯಳಾಗಿಹೋಗುವಳು

ಪ್ರಕೃತಿಃ ಪುರುಷಂ ಸ್ಪೃಷ್ಟ್ವಾ ಪ್ರಕೃತಿತ್ವಂ ಸಮುಜ್ಝತಿ ।
ತದಂತರೇಕತಾಂ ಗತ್ವಾ ನದೀರೂಪಮಿವಾರ್ಣವೇ ॥೧೯॥

ಆಪಗಾ ಹಿ ಪಯೋಮಾತ್ರಂ ಸಂಗೇ ಅರ್ಣವ ಏವ ಸಾ ।
ಯದಾ ತದಾ ತಮೋಪಾಸು ಪ್ರಾಪ್ಯ ತತ್ರೈವ ಲೀಯತೇ ॥೨೦॥

ಚಿತಿಃ ಶಿವೇಚ್ಛಾ ಸಾ ದೇವಂ ತಮೇವಾಸಾದ್ಯ ಶಾಮ್ಯತಿ ।
ಜನ್ಮಸ್ಥಾನಶಿಲಾಂ ಪ್ರಾಪ್ಯ ತೀಕ್ಷ್ಣಧಾರಾ ಯಥಾಯಸೀ ॥೨೧॥

ಪುಂಸಶ್ಛಾಯಾಂ ನಿಜಚ್ಛಾಯಾ ಪ್ರವಿಷ್ಟಸ್ಯ ಶರೀರಕಂ ।
ಯಥಾಶು ಪ್ರವಿಶತ್ಯೇವ ಪ್ರಕೃತಿಃ ಪುರುಷಂ ತಥಾ ॥೨೨॥

---

೧೯ ಪ್ರಕೃತಿಯು ಪುರುಷನನ್ನು ಮುಟ್ಟುತ್ತಲೂ ತನ್ನ ಪ್ರಕೃತಿತ್ವವನ್ನು (ಕಾರ್ಯಕಾರಣ ಪರಿಣಾಮವನ್ನು) ಬಿಟ್ಟುಬಿಡುವಳು. ನದೀರೂಪವಾಗಿದ್ದ ಜಲವು ಮಹಾರ್ಣವರೂಪವಾದ ಜಲದಲ್ಲಿ ತನ್ನ ಪೂರ್ವರೂಪವನ್ನು ಬಿಡುವಂತೆ ಬಿಟ್ಟು ಪುರುಷನಲ್ಲಿ ಐಕ್ಯವಾಗುವಳು

೨೦ ಜಲಪ್ರವಾಹರೂಪವಾದ ನದಿಯು ಕೇವಲ ಜಲವೇ ಆದ್ದರಿಂದ ಅರ್ಣವದಲ್ಲಿ ಸಂಗವಾಗುತ್ತಲೂ ಅದೇ ಆಗಿ ಅಲ್ಲಿಯೇ ಲೀನವಾಗುವಂತೆ (ಪ್ರಕೃತಿಯೂ ತಾನೂ ಚಿತ್ತೇ ಆದ್ದರಿಂದ ಚಿತ್ಸ್ವರೂಪನಾದ ಪುರುಷನಲ್ಲಿ)ಲೀನವಾಗುವಳು.

೨೧ ಶಿವೇಚ್ಛೆಯೇ ಚಿತಿಸ್ವರೂಪಳಾದ ಪ್ರಕೃತಿಯು. ಅದರಿಂದಲೇ ದೇವನಾದ ಶಿವನನ್ನು ಪಡೆಯುತ್ತಲೂ ಶಾಂತಳಾಗುವಳು. ಕಬ್ಬಿಣದ ಉಳಿಯು ತೀಕ್ಷ್ಣಧಾರೆಯಿಂದ ಕೂಡಿದ್ದರೂ ಕಬ್ಬಿಣವು ಹುಟ್ಟುವ ಕಲ್ಲಿನ ಮೇಲೆ ಬೀಳುತ್ತಲೂ ಶಾಂತವಾಗುವ ಹಾಗೆ ಆಗುವುದು

೨೨ ಮರ ಮೊದಲಾದವುಗಳ ನೆರಳನ್ನು ಪ್ರವೇಶಿಸಿದ ಮನುಷ್ಯನ ನೆರಳು ಹೇಗೆ ಇಲ್ಲವಾಗುವುದೋ, ಹಾಗೆಯೇ ಪುರುಷನನ್ನು ಪ್ರವೇಶಿಸಿದ ಪ್ರಕೃತಿಯೂ (ಇಲ್ಲ) ಆಗುವಳು

ಚೇತಿತ್ವಾ ಚಿನ್ನಿಜಂ ಭಾವಂ ಪುರುಷಾಖ್ಯಂ ಸನಾತನಂ ।
ಭೂಯೋ ಭ್ರಮತಿ ಸಂಸಾರೇ ನೇಹ ತತ್ತಾಂ ಪ್ರಯಾತಿ ಹಿ ॥೨೩॥

ಸಾಧುರ್ವಸತಿ ಚೋರೌಘೇ ತಾವದ್ಯಾವದಸೌ ನ ತಂ ।
ಪರಿಜಾನಾತಿ ವಿಜ್ಞಾಯ ನ ತತ್ರ ರಮತೇ ಪುನಃ ॥೨೪॥

ದ್ವೈತೇ ತಾವದಸದ್ರೂಪೇ ರಮತೇ ಭ್ರಮತೇ ಚಿತಿಃ ।
ಪರಂ ಪಶ್ಯತಿ ನೋ ಯಾವತ್ತಂ ದೃಷ್ಟ್ವಾ ತನ್ಮಯೀ ಭವೇತ್ ॥೨೫॥

ಚಿತಿನಿರ್ವಾಣರೂಪಂ ಯತ್ಪ್ರಕೃತಿಃ ಪರಮಂ ಪದಂ ।
ಪ್ರಾಪ್ಯ ತತ್ತಾಮವಾಪ್ನೋತಿ ಸರಿದಬ್ಧಾವಿವಾಬ್ಧಿತಾಂ ॥ ೨೬॥

---

೨೩ ಚಿತ್ತು ಮತ್ತೆ ತಾನು ಚೇತನಳಾಗಿ ಸನಾತನನಾದ ಪುರುಷನನ್ನೂ ಚೇತನಗೊಳಿಸಿ, ಮತ್ತೆ ಸಂಸಾರದಲ್ಲಿ ಭ್ರಮಣಮಾಡುವಳು ಎನ್ನುವುದಿಲ್ಲ. ಏಕೆಂದರೆ ಪ್ರಕೃತಿಯು ಪುರುಷನಲ್ಲಿ ಸಂಪೂರ್ಣವಾಗಿ ಲೀನಳಾಗುವಳು

(ತರ್ಹಿ ವನಾದ್ಬಹಿರ್ನಿರ್ಗಮನೇ ಪುನಶ್ಛಾಯೇವ ಬ್ರಹ್ಮಪ್ರಾಪ್ತಸ್ಯಾಪಿ ಪುನಃ ಸಂಸೃತಿಃ ಸ್ಯಾತ್ತತ್ರಾಹ— ಚೇತಿತ್ವೇತಿ । ಪುನರಾಗಮನೇ ನಿಮಿತ್ತಸ್ಯಾಜ್ಞಾನಸ್ಯ ಬಾಧಾದಿತಿ ಭಾವಃ ।।—ತಾ.ಪ್ರ)

೨೪ ಚೋರರ ಮಧ್ಯದಲ್ಲಿ ವಾಸಮಾಡುತ್ತಿರುವ ಸಾಧುವು ಅವರು ಚೋರರೆಂದು ತಿಳಿಯುವವರೆಗೂ ಅವರಲ್ಲಿರುವನು. ತಿಳಿದಮೇಲೆ ಅಲ್ಲಿರುವುದಿಲ್ಲ

(ಪುನಃ ಸಂಸಾರೇಚ್ಛಾಯಾಂ ಹಿ ಪುನರಾಗಮಃ ಸಂಭಾವ್ಯೇತ ತತ್ತ್ವಬೋಧೇ ಸೈವ ದುರ್ಲಭೇತ್ಯಾಹ—ಸಾಧುರಿತಿ । ಚೋರಮೇವ ಭ್ರಾಂತ್ಯಾ ಯಾವತ್ಸ್ವಹಿತಂ ಪರಿಜಾನಾತಿ। ಚೋರೋಽಯಂ ಮಮಾಹಿತ ಇತಿ ವಿಜ್ಞಾಯ ತು ತತ್ರ ನ ರಮತೇ॥ —ತಾ. ಪ್ರ.)

೨೫ ಅಸದ್ರೂಪವಾದ ದ್ವೈತದಲ್ಲಿ ಚಿತಿಯು ಪರವನ್ನು ಕಾಣುವವರೆಗೂ ರಮಿಸುವುದು : ಭ್ರಮಿಸುವುದು. ಅದನ್ನು ಕಾಣುತ್ತಲೂ ಅದರಲ್ಲಿ ಸೇರಿಹೋಗುವುದು

೨೬ ಪ್ರಕೃತಿಯು ಪರಮಪದವನ್ನು ಸೇರಿ, ನದಿಯು ಸಮುದ್ರದಲ್ಲಿ ಸೇರಿ ಸಮುದ್ರವೇ ಆಗುವಂತೆ, ಪರಬ್ರಹ್ಮವೇ ಆಗಿಹೋಗುವಿಕೆಯು ಯಾವುದುಂಟೋ, ಅದೇ ಚಿತಿಯ ನಿರ್ವಾಣ ರೂಪವು.

ತಾವದ್ವಿಮೋಹವಶತಶ್ಚಿತಿರಾಕುಲೇಷು ।
ಸರ್ಗೇಷು ಸಂಸರತಿ ಜನ್ಮದಶಾಸು ತಾಸು
ಯಾವನ್ನ ಪಶ್ಯತಿ ಪರಂ ತಮುಥಾಶು ದೃಷ್ಟ್ವಾ ।
ತತ್ರೈವ ಮಜ್ಜತಿ ಘನಂ ಮಧುನೀವ ಭೃಂಗೀ　　॥೨೭॥

ಸಂಪ್ರಾಪ್ಯ ಕಸ್ತ್ಯಜತಿ ನಾಮ ತದಾತ್ಮತತ್ತ್ವಂ ।
ಪ್ರಾಪ್ಯಾನುಭೂಯ ಚ ಜಹಾತಿ ರಸಾಯನಂ ಕಃ
ಶಾಮ್ಯಂತಿ ಯೇನ ಸಕಲಾನಿ ನಿರಂತರಾಣಿ ।
ದುಃಖಾನಿ ಜನ್ಮಮೃತಿಮೋಹಮಯಾನಿ ರಾಮ　　॥೨೮॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಪಾಷಾಣೋ
ಪಾಖ್ಯಾನೇ ಪ್ರಕೃತಿಪುರುಷಕ್ರಮವರ್ಣನಂ ನಾಮ ಪಂಚಾಶೀತಿತಮಃ ಸರ್ಗಃ

---

೨೭　ವಿಮೋಹವಶಳಾಗಿ ಚಿತಿಯು ಆಕುಲಗಳಾದ ಸರ್ಗಗಳಲ್ಲಿಯೂ ಆಯಾ ಜನ್ಮದಶೆಗಳಲ್ಲಿಯೂ ಸಂಸರಣಮಾಡುತ್ತಿರುವಳು. ಆದರೆ ಆ ಪರನಾದ ಪುರುಷನನ್ನು ನೋಡುತ್ತಲೇ ಅಲ್ಲಿಯೇ ಭೃಂಗವು ಮಧುವಿನಲ್ಲಿ ಮಗ್ನನಾಗುವಂತೆ ಆತನಲ್ಲಿ ಘನವಾಗಿ ಮಗ್ನಳಾಗಿಹೋಗುವಳು

೨೮　ಆ ಆತ್ಮತತ್ವ (ಭೂಮಾನಂದ)ವನ್ನು ಪಡೆದವರು ಯಾರು ತಾನೇ ಅದನ್ನು ಬಿಡುವರು ? ರಸಾಯನವನ್ನು ಪಡೆದು ರುಚಿನೋಡಿ ಅನುಭವಿಸಿದವನು ಅದನ್ನು ಬಿಡುವುದುಂಟೆ ? ಆ ರಸಾಯನವನ್ನು ಸೇವಿಸಿದರೆ ನಿರಂತರಗಳಾದ ಜನನ ಮರಣ ಮೋಹಮಯಗಳಾದ ಸಕಲ ದು.ಖಗಳೂ, ರಾಮ, ಶಾಂತವಾಗುವುವು.

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಪ್ರಕೃತಿಪುರುಷ ಕ್ರಮವರ್ಣನ" ಎಂಬ
ಎಂಭತ್ತೈದನೆಯ ಸರ್ಗವು



# ಷಡಶೀತಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ —

ಶೃಣು ರಾಮ ಕಥಂ ತತ್ರ ಮಹಾಕಾಶೇ ತಥಾ ಸ್ಥಿತಃ ।
ದೇಹೇ ಭ್ರಾಂತಿಂ ತು ತಾಂ ತ್ಯಕ್ತ್ವಾ ಸ ರುದ್ರೋ್ಽವ್ಯವಶಾಮ್ಯತಿ ।೧॥

ಸ ರುದ್ರಸ್ತೌ ಜಗತ್ಖಂಡೌ ತದಾ ಚಿತ್ರ ಇವಾರ್ಪಿತಾಃ ।
ನಿಸ್ಪಂದಾ ಏವ ತತ್ರಾಸನ್ಪ್ರೇಕ್ಷಮಾಣೇ ಸ್ಥಿತೇ ಮಯಿ ।೨॥

---

# ಎಂಭತ್ತಾರನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು —

೧ ರಾಮ ಕೇಳು, ಆ ಮಹಾಕಾಶದಲ್ಲಿರುವ ಆ ರುದ್ರನು ಹೇಗೆ ದೇಹ ಭ್ರಾಂತಿಯನ್ನು ತೊರೆದು ಉಪಶಾಂತನಾಗುವನು ಎಂಬುದನ್ನು ಹೇಳುವೆನು

೨ ಮೇಲೆ ಕೆಳಗೆ ಇದ್ದ ಆ ಬ್ರಹ್ಮಾಂಡ ಖರ್ಪರಗಳೂ ಆ ರುದ್ರನೂ (ಮೂರೂ) ಆಗ ಚಿತ್ರದಲ್ಲಿರುವ ಬೊಂಬೆಗಳಂತೆ, ನಾನು ನೋಡುತ್ತಿರುವ ಹಾಗೆಯೇ, ನಿರ್ವ್ಯಾಪಾರ ಸ್ಥಿತಿಯನ್ನು ಪಡೆದರು

ತತೋ ಮುಹೂರ್ತಮಾತ್ರೇಣ ಸ ರುದ್ರಸ್ತೈ ನಭೋಂತರೇ ।
ಖಂಡಾನ್ ವಿಲೋಕಯಾಮಾಸ ದೃಶಾರ್ಕೇಣೇವ ರೋದಸೀ ॥೩॥

ತತೋ ನಿಮೇಷಮಾತ್ರೇಣ ಘ್ರಾಣಾತ್ಶ್ವಾಸೇನ ಖಂಡಕೌ
ತೌ ಸಮಾನೀಯ ಚಿಕ್ಷೇಪ ಪಾತಾಲಾಂತರವಾನಸೇ ॥೪॥

ಅತಿಷ್ಠದೇಕ ಏವಾಸಾವೇಕಂ ಖೇ ಖಮಿವಾಖಿಲೇ ।
ಭುಕ್ತಬ್ರಹ್ಮಾಂಡ ಖಂಡೋಗ್ರಸಂಡಮಂಡಕಮಂಡಲಃ ॥೫॥

ತತೋ ಮುಹೂರ್ತಮಾತ್ರೇಣ ಲಘುಃ ಸೋಭ್ರಮಿವಾಭವತ್ ।
ತತೋ ಭವದ್ಯಷ್ಟಿಸಮಸ್ತತಃ ಪ್ರಾದೇಶಮಾತ್ರಕಃ ॥೬॥

---

೩ ಇಷ್ಟೊಂದು ಮುಹೂರ್ತದೊಳಗಾಗಿ ನಭೋಂತರಾಳದಲ್ಲಿದ್ದ ರುದ್ರನ ಬ್ರಹ್ಮಾಂಡಖಂಡಗಳನ್ನು, ಸೂರ್ಯನು ಅಂತರಿಕ್ಷವನ್ನು ನೋಡುವಂತೆ, ತನ್ನ ಕಣ್ಣುಗಳಿಂದ ನೋಡಿದನು

(ರೋದಸೀ ದ್ಯಾವಾ ಭೂಮಿ ಭೂತೌ ತೌ ಜಗತ್ಖಂಡೌ—ತಾ. ಪ್ರ.)

೪ ಇಷ್ಟೊಂದು ನಿಮಿಷವು ಕಳೆಯುವುದರೊಳಗಾಗಿ, ಆತನು ತನ್ನ ಶ್ವಾಸಗಳಿಂದ ಆ ಖಂಡಗಳನ್ನು ಆಕರ್ಷಣಮಾಡಿ ತನ್ನ ಮುಖದಲ್ಲಿ ಹಾಕಿಕೊಂಡನು. ಅದು ಈ ದ್ಯಾವಾಭೂಮಿಗಳನ್ನು ಒಂದು ಪಾತಾಳದಲ್ಲಿ ಹಾಕಿದಹಾಗೆ ಆಯಿತು

೫ ಆ ರುದ್ರನು ದ್ಯಾವಾಭೂಮಿಗಳೆನಿಸ್ಸ ಆ ಬ್ರಹ್ಮಾಂಡಖಂಡಗಳನ್ನು ಹಾಲು ಒಡೆದಾಗ ತೇಲುವ ಖಂಡದ ಮಂಡಲಗಳನ್ನು ತಿನ್ನುವಷ್ಟು ಸುಲಭವಾಗಿ ತಿಂದು, ಆ ಆಕಾಶದಲ್ಲೆಲ್ಲಾ ಒಬ್ಬನೇ ಒಬ್ಬನಾಗಿ ಒಂದೇ ಒಂದು ಆಕಾಶಮಂಡಲದಂತೆ ಇದ್ದನು.

೬ ಇಷ್ಟೊಂದು ಗಳಿಗೆಯೊಳಗಾಗಿ ಆತನು ಲಘುವಾಗಿ ಅಭ್ರದಂತಾದನು. ಅನಂತರ ಒಂದು ಕೋಲಿನಷ್ಟಾಗಿ, ಮತ್ತೆ ಗೇಣಿನಷ್ಟಾದನು.

ತತಃ ಕಾಚಕಣಾಕಾರೋ ಮಯಾ ದೃಷ್ಟಃ ಸತಾದೃಶಃ ।
ತತಃ ಸೋಣೂಭವನ್ದೃಷ್ಟೋ ಮಯಾ ಖಾದ್ದಿವ್ಯದೃಷ್ಟಿನಾ ॥೭॥

ಪರಮಾಣುರಥೋ ಭೂತ್ವಾ ತತಸ್ತ್ವಂತರ್ಧಿಮಾಯಯೌ ।
ಇತ್ಯಸೌ ಶಮಮಾಯಾತಃ ಶರದಂಬುದ ಖಂಡವತ್
ತಾದೃಶೋಪಿ ಮಹಾರಂಭಃ ಪುರಃ ಪಶ್ಯತ ಏವ ಮೇ । ॥೮॥

ಇತಿ ಸಾವರಣೇ ತೇನ ತೇ ಬ್ರಹ್ಮಾಂಡಕವಾಟಕೇ
ವಿನಿಗೀರ್ಣೇ ಕ್ಷುಧಾರ್ತೇನ ಹರಿಣೇನೇವ ಪರ್ಣಕೇ ।
ಅಥಾಭೂನ್ನಿರ್ಮಲಂ ವ್ಯೋಮ ಶಾಂತಂ ಬ್ರಹ್ಮೈವ ಕೇವಲಂ ॥೯–೧೦ ।

---

೭ ಅಂತಹ ಆ ರುದ್ರನು ಇನ್ನೂ ಕಿರಿದಾಗಿ ಕಾಚಕಣದಷ್ಟಾದುದನ್ನು ನಾನು ಕಂಡೆನು. ಆತನು ಇನ್ನೂ ಚಿಕ್ಕದಾಗಿ ಒಂದು ಅಣುವಿನಷ್ಟಾದುದನ್ನು ನಾನು ಇದ್ದ ಆಕಾಶದಿಂದಲೇ, ದಿವ್ಯದೃಷ್ಟಿಯಿಂದ ನೋಡಿದೆನು

೮ ಆತನು ಪರಮಾಣುವಾಗಿ ಅಂತರ್ಧಾನವನ್ನು ಹೊಂದಿದನು. ಹೀಗೆ ಆ ಮಹಾರುದ್ರನು ಶರತ್ಕಾಲದ ಮೋಡದ ತುಂಡಿನಂತೆ ಇದ್ದಲ್ಲಿಯೇ ಶಾಂತವಾದನು. ಆ ಮಹಾಸೃಷ್ಟಿಯೂ ನಾನು ನೋಡುತ್ತಿದ್ದ ಹಾಗೆಯೇ ಇಲ್ಲವಾಯಿತ .

೯–೧೦ ಹೀಗೆ ಆ ರುದ್ರನು ಬ್ರಹ್ಮಾಂಡಕವಾಟರೂಪಗಳಾದ ಆವರಣಗಳನ್ನು, ಹಸಿದಿರುವ ಹರಿಣವು ಚಿಕ್ಕ ಎಲೆಯೊಂದನ್ನು ತಿಂದುಬಿಡುವಷ್ಟು ಸುಲಭವಾಗಿ ತಿಂದುಬಿಟ್ಟನು. ಆಗ ವ್ಯೋಮವು ನಿರ್ಮಲವಾಗಿ ಕೇವಲ ಬ್ರಹ್ಮವಾಗಿ ಆಗಿ ಹೋಯಿತು.

ಅನಾದಿಮಧ್ಯಪರ್ಯಂತಂ ಸಂವಿದಾಕಾಶಮಾತ್ರಕಃ ।
ಇತ್ಯಹಂ ದೃಷ್ಟವಾಂಸ್ತತ್ರ ಕಲ್ಪಾಂತಮುರುವಿಭ್ರಮಂ ॥೧೧॥

ದರ್ಪಣಪ್ರತಿಬಿಂಬಾಭಂ ಶಿಲಾಶಕಲಕೋಟರೇ ।
ಅಥ ತಾಮಂಗನಾಂ ಸ್ಮೃತ್ವಾ ತಾಂ ಶಿಲಾಂ ತಚ್ಚ ಸಂಭ್ರಮಂ ॥೧೨॥

ರಾಜದ್ವಾರಗತೋ ಗ್ರಾಮ್ಯ ಇವಾಹಂ ವಿಸ್ಮಯಂ ಗತಃ ।
ತಾಮಾಲೋಕಿತವಾನ್ಭೂಯಃ ಕಲಧೌತಶಿಲಾಮಹಂ ॥೧೩॥

ಯಾವತ್ಸರ್ವತ್ರ ಸಂತ್ಯತ್ರ ಸರ್ಗಾಃ ಕಾಲ್ಯಾ ಇವಾಂಗಕೇ ।
ಬುದ್ಧಿನೇತ್ರೇಣ ದೃಶ್ಯಂತೇ ದಿವ್ಯಾಕ್ಷ್ಣಾ ವಾ ನ ತೇ ಯಥಾ ॥೧೪॥

---

೧೧ ಆದಿ, ಮಧ್ಯ, ಅಂತ ಗಳೇನೂ ಇಲ್ಲದೆ, ಸಂವಿದಾಕಾಶವೊಂದೇ ಒಂದಾಗಿ, ಉಳಿಯಿತು ಎಂಬುದನ್ನೂ, ಕಲ್ಪದ ಕೊನೆಯವರೆಗೂ ಬೇಕಾದಷ್ಟು ವಿಭ್ರಮಗಳನ್ನು ಮಾಡಿದುವೆಲ್ಲವೂ ಸಂವಿದಾಕಾಶದಲ್ಲಿ ಲಯವಾಗಿ ಹೋಯಿತು ಎಂಬುದನ್ನೂ ಕಂಡೆನು.

೧೨ ಕನ್ನಡಿಯಲ್ಲಿ ಕಂಡ ಬಿಂಬದಂತೆ, ಆ ಶಿಲೆಯ ತುಂಡಿನ ಒಳಗೆ ಆ ದಿವ್ಯಾಂಗನೆಯನ್ನೂ, ಆ ಶಿಲಾಖಂಡವನ್ನೂ, ಅಲ್ಲಿ ನಡೆದ ಮಹಾಸಂಭ್ರಮವನ್ನೂ ನೆನೆದುಕೊಂಡೆನು.

೧೩ ರಾಜದ್ವಾರದಲ್ಲಿ ನಿಂತುಕೊಂಡ ಗ್ರಾಮ್ಯನಂತೆ ನಾನೂ ವಿಸ್ಮಯಪಡುತ್ತ, ಚೆನ್ನಾಗಿ ಹೊಳೆವಂತಿದ್ದ ಆ ಶಿಲೆಯನ್ನು ಮತ್ತೆ ಮತ್ತೆ ನೋಡಿದೆನು.

೧೪ ಬುದ್ಧಿನೇತ್ರದಿಂದ ನೋಡಿದರೆ, ಮಹಾಕಾಲಿಯ ಅಂಗದಲ್ಲಿದ್ದಂತೆಯೇ ಎಲ್ಲೆಲ್ಲಿಯೂ ಸರ್ಗಪರಂಪರೆಗಳು ತುಂಬಿರುವುದು ಕಂಡಿತು. ದಿವ್ಯದೃಷ್ಟಿಯಿಂದ ನೋಡಿದರೂ ಕೂಡ ಅವು ಹಾಗೆ ಕಾಣುವುವೋ ಇಲ್ಲವೋ ಎನ್ನುವಂತಿತ್ತು.

ಸರ್ವತ್ರ ಸರ್ವದಾ ಸರ್ವಂ ಯದಸ್ತ್ಯೇವ ತದಾ ತಥಾ ।
ದೂರವತ್ಪ್ರೇಕ್ಷ್ಯತೇ ಮಾಂಸದೃಶಾ ಯದ್ಯೇವ ಸಾ ಶಿಲಾ ॥೧೫॥

ದೃಶ್ಯತೇ ತಚ್ಛಿಲೈವೈಕಾ ನ ತು ಸರ್ಗಾದಿ ಕಿಂಚನ ।
ಸಾವಸ್ಥಿತಾ ಶಿಲೈವೈಕರೂಪಾ ನಿಬಿಡಮಂಡಲಾ ॥೧೬॥

ಕಲಧೌತಮಯೀ ಸ್ಫಾರಾ ಸಂಧ್ಯಾಜಲದಸುಂದರೀ ।
ತತೋಽಹಂ ವಿಸ್ಮಯಾವಿಷ್ಟಃ ಪ್ರವಿಚಾರಿತವಾನ್ಪುನಃ ॥೧೭॥

ಶಿಲಾಯಾಮಪರಂ ಭಾಗಂ ತಥೈವ ಪರಯಾ ದೃಶಾ ।
ಯಾವತ್ತಮಪಿ ಪಶ್ಯಾಮಿ ಜಗದಾರಂಭಮಂಥರಂ ॥೧೮॥

---

೧೫ ಯಾವುದು ಉಂಟೋ ಅದು ಸರ್ವವೂ ಸರ್ವದಾ ಸರ್ವತ್ರ ಇದ್ದೇ ಇರುವುದು. ಮಾಂಸದೃಷ್ಟಿಯಿಂದ ನೋಡಿದರೆ ಮಾತ್ರ ದೂರದಿಂದ ಆ ಶಿಲೆಯು ಶಿಲೆಯಾಗಿಯೇ ಕಾಣುವುದು.

೧೬ ಮಾಂಸ ಚಕ್ಷುಸ್ಸಿಗೆ ಆ ಶಿಲೆಯು ಮಾತ್ರ ಕಾಣುವುದಲ್ಲದೆ ಸರ್ಗಾದಿಗಳೊಂದೂ ಕಾಣಿಸುವುದಿಲ್ಲ. ಅದೂ ಕೂಡ, ಶಿಲೆಯೇ ಶಿಲೆಯಾಗಿ, ಅಲ್ಲಿ ಇನ್ನೇನೂ ಇಲ್ಲದಂತೆಯೇ ಕಾಣುವುದು.

೧೭ ಚೆನ್ನಾಗಿ ತೊಳೆದಿಟ್ಟಿರುವಂತೆ, ಸ್ಪಷ್ಟವಾಗಿ, ಸಂಧ್ಯಾಮೇಘದಂತೆ ಸುಂದರವಾಗಿ, ಆ ಶಿಲೆಯು ಕಾಣುತ್ತಿರಲು, ನಾನು ಬಹು ವಿಸ್ಮಯಪಡುತ್ತ ನಾನು ಕಂಡುದೆಲ್ಲವನ್ನೂ ಕುರಿತು ಮತ್ತೆ ಮತ್ತೆ ವಿಚಾರಮಾಡಿ ನೋಡಿದೆನು.

೧೮ ಅದೇ ಶಿಲೆಯಲ್ಲಿ ಇನ್ನೊಂದು ಭಾಗವನ್ನು ಪರಾದೃಷ್ಟಿಯಿಂದ ನೋಡಿದೆನು. ಅಲ್ಲಿಯೂ ಕೂಡ ಇನ್ನೊಂದು ಸೃಷ್ಟಿಯು ಆರಂಭವಾಗಿ ಬೇಕಾದ ಹಾಗೆ ಕಾರ್ಯಕಲಾಪಗಳು ನಡೆಯುತ್ತಿದ್ದುವು.

ತಥೈವ ಸುಷಿರಾಕಾರ ಇವ ನಾನಾರ್ಥಸುಂದರಂ ।
ಪುನರನ್ಯಂ ತಥೈವಾಹಂ ಪ್ರದೇಶಂ ಪರಿದೃಷ್ಟವಾನ್ ॥೧೯॥

ಸರ್ಗಸಂರಂಭವಲಿತಂ ಯಾವತ್ತಮಪಿ ತಾದೃಶಂ ।
ಯಂ ಯಂ ಪ್ರದೇಶಂ ಪಶ್ಯಾಮಿ ಶಿಲಾಯಾಸ್ತತ್ರತತ್ರ ವೈ ॥೨೦॥

ಜಗತ್ಪಶ್ಯಾಮಿ ವಿಮಲಮಾದರ್ಶ ಇವ ಬಿಂಬಿತಂ ।
ಮಯಾತಿಕೌತುಕೇನಾಥ ಸರ್ವಾಸ್ತಸ್ಯ ಗಿರೇಃ ಶಿಲಾಃ ॥೨೧॥

ಅನ್ವಿಷ್ಟಾ ಭೂಮಿಭಾಗಾಶ್ಚ ತೃಣಗುಲ್ಮಾದಯಸ್ತಥಾ ।
ಯಾವತ್ಸರ್ವತ್ರ ತತ್ತಾದೃಗ್ಜಗದಸ್ತಿ ಯಥಾಸ್ಥಿತಂ ॥೨೨॥

ಬುದ್ಧ್ಯೈವ ದೃಶ್ಯತೇ ನಾಕ್ಷ್ಣಾ ಪರಯಾ ವಿವಿಧಾಕೃತಿ ।
ಕ್ವಚಿತ್ಪ್ರಥಮಸರ್ಗಾತ್ಮ ಜಾಯಮಾನಪ್ರಜಾಪತಿ ॥೨೩॥

---

೧೯ ಹಿಂದೆ ಕಂಡಂತೆಯೇ ಅಲ್ಲಿ ಒಂದು ಸುಷಿರ; ಅದರಲ್ಲಿ ನಾನಾ ವ್ಯಾಪಾರಗಳು; ಅಲ್ಲಿ ಇನ್ನೊಂದು ಜಗತ್ತು ಇರುವ ಪ್ರದೇಶವನ್ನು ಕಂಡೆನು.

೨೦–೨೧ ಸೃಷ್ಟಿಯಾಗುತ್ತಿರುವಾಗ ನಡೆಯಬೇಕಾದುದೆಲ್ಲವೂ ನಡೆಯುತ್ತಿದೆ ಅದನ್ನು ಕಂಡು ಎತ್ತೆತ್ತ ತಿರುಗಿದರೂ, ಆ ಶಿಲೆಯಲ್ಲಿ ಯಾವ ಯಾವ ಪ್ರದೇಶದಲ್ಲಿ ನೋಡಿದರೂ ಅಲ್ಲೆಲ್ಲಾ ಒಂದೊಂದು ಸೃಷ್ಟಿಯು ಕನ್ನಡಿಯಲ್ಲಿ ಕಾಣುವ ಪ್ರತಿಬಿಂಬ ದಂತೆ, ಕಣ್ಣಿಗೆ ಬಿತ್ತು. ಅದನ್ನು ಕಂಡು ನನಗೆ ಕುತೂಹಲವು ಕೆರಳಿ ಆ ಬೆಟ್ಟದಲ್ಲಿ ರುವ ಶಿಲೆಗಳನ್ನೆಲ್ಲಾ ನೋಡಿದೆನು.

೨೨ ಆ ಗಿರಿಯಲ್ಲಿದ್ದ ಶಿಲೆಗಳಿರಲಿ, ಭೂಮಿಭಾಗಗಳು ತೃಣ ಗುಲ್ಮಾದಿ ಗಳು, ಮೊದಲುಗೊಂಡು ಸರ್ವವೂ ಜಗನ್ಮಯಗಳಾಗಿಯೇ ಕಂಡುವು. ಎಲ್ಲೆಲ್ಲಿಯೂ ಒಂದೊಂದು ಜಗತ್ತು ಇರುವುದು ಕಾಣಿಸಿತು.

೨೩ ಆ ಜಗತ್ತುಗಳೆಲ್ಲವೂ ಪರಾಬುದ್ಧಿ ಗೋಚರವಾಗುತ್ತಿದ್ದವೇ ಹೊ ರತು ಬರಿಯ ಕಣ್ಣಿಗೆ ಕಾಣಿಸುತ್ತಿರಲಿಲ್ಲ. ಒಂದೆಡೆ ಮೊದಲನೆಯ ಸರ್ಗವು ಆರಂಭ ವಾಗಲು, ಪ್ರಜಾಪತಿಯು ವ್ಯಕ್ತವಾಗುತ್ತಿದ್ದಾನೆ.

(ಪರಯಾ ಆದಿಭೌತಿಕ ದೇಹಭಾವ ಭ್ರಾಂತಿಶೂನ್ಯಯಾ ಸರ್ವಸಾಕ್ಷ್ಯ ಹಂಭಾವಬುದ್ಧ್ಯೈವ । —ತಾ. ಪ್ರ.)

ಕಲ್ಪ್ಯಮಾನರ್ಕ್ಷಚಂದ್ರಾರ್ಕದಿನರಾತ್ರ್ಯೃತುವತ್ಸರಂ ।
ಕ್ವಚಿತ್ಕ್ವಚಿನ್ಮಹೀಪೀಠಸಂಪನ್ನಜನಮಂಡಲಂ ।೨೪॥

ಕ್ವಚಿತ್ಕಿಂಚಿದಖಾತೋಗ್ರಚತುಃಸಾಗರಖಾತಕಂ ।
ಕ್ವಚಿತ್ಕಿಂಚಿದಸಂಜಾತ ಸುರಸಂಜಾತದಾನವಂ ॥೨೫

ಕ್ವಚಿತ್ಕಿಂಚಿತ್ಕೃತಯುಗಾಚಾರಸಜ್ಜನಭೂತಕಂ ।
ಕ್ವಚಿತ್ಕಿಂಚಿತ್ಕಲಿಯುಗಾಚಾರದುರ್ಜನಭೂತಕಂ ॥೨೬॥

ಕ್ವಚಿತ್ಕಿಂಚಿತ್ಪುರವ್ಯೂಹದೈತ್ಯಸಂಗರದುಸ್ತರಂ ॥೨೭॥

ಕ್ವಚಿತ್ಕಿಂಚಿನ್ಮಹಾಶೈಲಜಾಲನಿರ್ವಿವರಾವನಿ ।
ಕ್ವಚಿತ್ಕಿಂಚಿದಸಂಪನ್ನಸರ್ಗಮೇಕಾಂಬುಜೋದ್ಭವಂ ॥೨೮॥

---

೨೪ ಇನ್ನೊಂದೆಡೆ ತಾರಾಮಂಡಲ, ಸೂರ್ಯಚಂದ್ರಮಂಡಲಗಳು ದಿನ ರಾತ್ರಿ ರುತುವತ್ಸರಗಳೂ ವ್ಯಕ್ತವಾಗುತ್ತಿದ್ದುವು. ಒಂದೊಂದೆಡೆ, ಮಹೀಮಂಡಲವು ಜನಮಂಡಲದಿಂದ ಸಂಪನ್ನವಾಗುತ್ತಿತ್ತು.

೨೫ ಇನ್ನೊಂದೆಡೆ, ಚತುಸ್ಸಾಗರಗಳಾಗುವ ಖಾತವು ಆರಂಭವಾಗಿತ್ತು. ಇನ್ನೊಂದೆಡೆ ದಾನವರು ಹುಟ್ಟಿದ್ದರು : ಸುರರು ಇನ್ನೂ ಹುಟ್ಟಿರಲಿಲ್ಲ.

೨೬ ಒಂದೆಡೆ ಕೃತಯುಗದ ಆಚಾರಗಳನ್ನು ನಡೆಸುವ ಸಜ್ಜನರು ಪ್ರಾದುರ್ಭೂತರಾಗುತ್ತಿದ್ದರು. ಇನ್ನೊಂದೆಡೆ ಕಲಿಯುಗಾಚಾರವನ್ನುಳ್ಳ ದುರ್ಜನರ ತಂಡವು ಕಾಣಿಸುತ್ತಿತ್ತು.

೨೭ ಅಲ್ಲೊಂದೆಡೆ ಪುರವ್ಯೂಹಗಳನ್ನು ಕಟ್ಟಿಕೊಂಡು ದೈತ್ಯರು ಅಸಾಧ್ಯವಾದ ಸಂಗ್ರಾಮವನ್ನು ನಡೆಸುತ್ತಿದ್ದರು.

೨೮ ಒಂದೆಡೆ ಯಾವುದೋ ಒಂದು ಮಹಾಶೈಲಪಂಕ್ತಿಯು ಭೂಮಿಯನ್ನು ನಿರ್ವಿವರವಾಗಿ ತುಂಬಿರುವುದು : ಇನ್ನೊಂದೆಡೆ, ಒಬ್ಬ ಕಮಲಸಂಭವನು ಹುಟ್ಟಿದ್ದನು - ಸರ್ಗವು ಮೊಳೆಯುತ್ತಿತ್ತು.

ಕ್ವಚಿತ್ಕಿಂಚಿಜ್ಜರಾಮೃತ್ಯುನ್ಮುಕ್ತಭೂತಲಮಾನವಂ ।
ಕ್ವಚಿತ್ಕಿಂಚಿದಸಂಜಾತಚಂದ್ರಶೂನ್ಯಶಿರಃಶಿವಂ ॥೨೯॥

ಅನಿರ್ಮಥಿತದುಗ್ಧಾಬ್ಧಿ ಮೃತ್ಯುಮತ್ಸುರಪೂರಿತಂ ।
ಅಸಂಜಾತಾಮೃತಾಶ್ವೇಭವೈದ್ಯಗೋಕಮಲಾವಿಷಂ ॥೩೦॥

ಶುಕ್ರಪ್ರಮರ ಮಹಾವಿದ್ಯಾನಾಶನೋತ್ಕಸುರವ್ರಜಂ ।
ಕ್ವಚಿತ್ಕಿಂಚಿಚ್ಚ ಗರ್ಭಾಂಗಕರ್ತನೋತ್ಕಸುರೇಶ್ವರಂ ॥೩೧॥

ಅಪರಿಮ್ಲಾನಧರ್ಮತ್ವಾತ್ಸ್ವಪ್ರಕಾಶಾಖಿಲವ್ರಜಂ ।
ಕ್ವಚಿತ್ಕಿಂಚಿಚ್ಚ ಪೂರ್ವಾನ್ಯಸಂನಿವೇಶಕ್ರಮಸ್ಥಿತಿ ॥೩೨॥

ಅಪೂರ್ವವೇದಶಾಸ್ತ್ರಾರ್ಥಸಮಾಚಾರ ವಿಚಾರಣಂ ।
ಕ್ವಚಿತ್ಕಿಂಚಿನ್ನ ಕಲ್ಪಾಂತ ಸಂಕ್ಷೋಭಮಿವ ಸಂಸ್ಥಿತಂ ॥೩೩॥

---

೨೯ ಇನ್ನೊಂದೆಡೆ ಜರಾಮೃತ್ಯುಗಳಿಲ್ಲದ ಮಾನವರು ತುಂಬಿರುವ ಭೂಲೋಕವಿತ್ತು. ಮತ್ತೊಂದೆಡೆ, ಚಂದ್ರನು ಇನ್ನೂ ಹುಟ್ಟಿರಲಿಲ್ಲವಾಗಿ ಶಿವನ ಶಿರಸ್ಸು ಭೂಷಣಶೂನ್ಯವಾಗಿತ್ತು.

೩೦ ಇನ್ನೊಂದೆಡೆಯಲ್ಲಿ ಇನ್ನೂ ಸಮುದ್ರಮಂಥನವಾಗಿರಲಿಲ್ಲವಾಗಿ ಮರ್ತ್ಯರೇ ಆಗಿದ್ದ ಸುರರು ತುಂಬಿದ್ದರು: ಹಾಗೆಯೇ ಆ ಲೋಕವೂ ಅಮೃತ, ಉಚ್ಚೈಃಶ್ರವ, ಐರಾವತ, ಧನ್ವಂತರಿ, ಮಹಾಲಕ್ಷ್ಮಿ, ಕಾಮಧೇನು, ಕಾಲಕೂಟ, ಇವು ಯಾವವೂ ಇಲ್ಲದ್ದಾಗಿತ್ತು.

೩೧ ಇನ್ನೊಂದೆಡೆ ಶುಕ್ರನು ಸಂಪಾದಿಸಿರುವ ಮೃತಸಂಜೀವಿನೀ ವಿದ್ಯೆಯನ್ನು ನಾಶಮಾಡಬೇಕು ಎಂದು ಸುರರು ಒದ್ದಾಡುತ್ತಿದ್ದರು. ಇನ್ನೊಂದೆಡೆ ದೇವೇಂದ್ರನು ದಿತಿದೇವಿಯ ಗರ್ಭವನ್ನು ಕತ್ತರಿಸಲು ಹೊಂಚುಹಾಕುತ್ತಿದ್ದನು.

೩೨–೩೩ ಧರ್ಮಸ್ಥಿತಿಯು ಗ್ಲಾನಿಯನ್ನು ಪಡೆಯದೇ ಇರುವುದರಿಂದ ವಸ್ತುಗಳೆಲ್ಲವೂ ಸ್ವಪ್ರಕಾಶವಾಗಿದ್ದ ಸ್ಥಲವೊಂದು: ಇನ್ನೊಂದೆಡೆ ಮೊದಲಿದ್ದುದಕ್ಕಿಂತ ಭಿನ್ನವಾಗಿರುವ ಸನ್ನಿವೇಶ, ಕ್ರಮ, ಸ್ಥಿತಿಗಳು; ಅಪೂರ್ವವಾದ ವೇದ, ಶಾಸ್ತ್ರ, ಅರ್ಥ, ಸಮಾಚಾರ ವಿಚಾರಗಳು ಇದ್ದುವು. ಇನ್ನೊಂದೆಡೆ ಪ್ರಲಯವಾಗುತ್ತಿತ್ತು.

ಕ್ವಚಿತ್ಕಿಂಚಿಚ್ಚ ದೈತ್ಯೌಘವಿಲುಂಠಿತಸುರಾಲಯಂ ।
ಕ್ವಚಿತ್ಕಿಂಚಿತ್ಸರೋದ್ಯಾನಗಾಯದ್ಗಂಧರ್ವಕಿನ್ನರಂ ॥೩೪॥

ಕ್ವಚಿತ್ಕಿಂಚಿತ್ಸಮಾರಬ್ಧಗೀರ್ವಾಣಾಸುರ ಸೌಹೃದಂ ।
ಭೂತಭವ್ಯಭವಿಷತ್ಸ್ಥಜಗದಾಡಂಬರಂ ಮಯಾ ॥೩೫॥

ತದಾನುಭೂತಂ ವಪುಷಿ ಮಹಾವಿಶ್ವಗಣಾತ್ಮನಿ ।
ಏಕತ್ರ ಕಲ್ಪವಿಕ್ಷುಬ್ಧಪುಷ್ಕರಾವರ್ತಮಂಥರಂ ॥೩೬॥

ಏಕತ್ರ ಸೌಮ್ಯಸಕಲಭೂತಸಂತತಿಸಂಸ್ಥಿತಂ ।
ಏಕತ್ರ ಸಮನುಕ್ಷುಬ್ಧಸುರಾಸುರನರೇಶ್ವರಂ ॥೩೭॥

ಏಕತ್ರಾಸಂಭವದ್ಭಾನುನಿತ್ಯಾಭಿನ್ನತಮೋಘನಂ ।
ಏಕತ್ರಾಸಂಭವಧ್ವಾಂತಂ ಕಾಂತಂ ಜ್ವಾಲೋದರೋಪಮಂ ॥೩೮॥

---

೩೪ ಇನ್ನೊಂದೆಡೆ ದೈತ್ಯರು ಸ್ವರ್ಗವನ್ನು ಲೂಟಿಮಾಡುತ್ತಿದ್ದರು. ಮತ್ತೊಂದೆಡೆ ನಂದನ ವನದಲ್ಲಿ ಗಂಧರ್ವರೂ ಕಿನ್ನರರೂ ಹಾಡುತ್ತಿದ್ದರು.

೩೫–೩೬ ಮತ್ತೂ ಒಂದೆಡೆ ದೇವತೆಗಳೂ ದಾನವರೂ ಸ್ನೇಹವಾಗಿರಲು ಆರಂಭಿಸಿದ್ದರು. ಹೀಗೆ ಭೂತ, ಭವ್ಯ, ಭವಿಷ್ಯತ್‌ಗಳ ಜಗದಾಡಂಬ[illegible] ಮಹಾ ವಿಶ್ವಗಣಗಳನ್ನು ಧರಿಸಿರುವ ಮಾಯಾಶಬಲ ಚಿದ್ವಪುವಿನಲ್ಲಿ ನೋ[illegible] ಅಲ್ಲಿಯೇ, ಪ್ರಲಯಕಾಲದ ಪುಷ್ಕರಾವರ್ತ ಮೇಘಗಳು ವಿಕ್ಷೋಭಗೊಂ[illegible] ವನ್ನೂ ತಳಮೇಲು ಮಾಡುತ್ತಿದ್ದುದನ್ನೂ ನೋಡಿದೆನು.

೩೭ ಒಂದೆಡೆ ಎಲ್ಲ ಭೂತಸಂತತಿಗಳೂ ಸೌಮ್ಯವಾಗಿ ಇದ್ದ[illegible] ಇನ್ನೊಂದೆಡೆ ಸುರ, ಅಸುರ, ನರ, ಈಶ್ವರರೆಲ್ಲರೂ ಬಹು ಕ್ಷೋಭಗೊಂಡಿದ್ದರು.

೩೮ ಇನ್ನೊಂದೆಡೆ ಇನ್ನೂ ಸೂರ್ಯನು ಸೃಷ್ಟಿಯೇ ಆಗಿರಲಿಲ್ಲವಾದ್ದ[illegible] ತಮಸ್ಸು ಅಚ್ಛಳಿಯದೆ ಘನವಾಗಿತ್ತು. ಇನ್ನೊಂದೆಡೆ ತಮಸ್ಸು ಸೃಷ್ಟಿಯಾ[illegible] ವಾಗಿ ಎಲ್ಲವೂ ಜ್ವಾಲಾಗರ್ಭದಲ್ಲಿರುವಂತೆ ಪ್ರಕಾಶಮಯವಾಗಿ ಮನೋಹರವಾ[illegible]

ಏಕತ್ರ ನಲಿನೀನಾಲನಿಲೀನಮಧುಕೈಟಭಂ ।
ಏಕತ್ರ ಪದ್ಮಮಂಜೂಷಾಸುಪ್ತಬಾಲನವಾಬ್ಜಜಂ ॥೩೯॥

ಏಕತ್ರೈಕಾರ್ಣವೋಧಗ್ರವೃಕ್ಷವಿಶ್ರಾಂತಮಾಧವಂ ।
ಏಕತ್ರ ಕಲ್ಪರಜನೀನಿಃಶೂನ್ಯತಿಮಿರಾಕುಲಂ ॥೪೦॥

ಶಿಲಾಜಠರನಿಸ್ಪಂದಂ ವ್ಯೋಮ್ನೈವ ವಿತತಾಕೃತಿ ।
ಸುಷುಪ್ತಜಠರಾಕಾರಮಪ್ರಜ್ಞಾತಮಲಕ್ಷಣಂ ॥೪೧॥

ಅಪ್ರತರ್ಕ್ಯಮವಿಜ್ಞೇಯಂ ಸುಷುಪ್ತಮಿವ ಸರ್ವತಃ ।
ಏಕತ್ರ ಪಕ್ಷನಿಕ್ಷುಬ್ಧಶೈಲಕಾಕಾಕುಲಾಂಬರಂ ॥೪೨॥

---

೩೯ ಒಂದೆಡೆ ಒಂದು ಕಮಲದ ನಾಳದಲ್ಲಿ ಮಧುಕೈಟಭರಿದ್ದರು. ಇನ್ನೊಂದೆಡೆ ಒಂದು ಪದ್ಮಮಂಜೂಷ (ಪೆಟ್ಟಿ) ದಲ್ಲಿ ಬಾಲಕನಾದ ಬ್ರಹ್ಮನು ಮಲಗಿದ್ದನು.

೪೦ ಒಂದೆಡೆ ಏಕಾರ್ಣವವಾಗಿ ಅದರ ತಲೆಯ ಮೇಲಿನ ಅಕ್ಷಯ ವಟ ವೃಕ್ಷದಲ್ಲಿ ಮಾಧವನು ವಿಶ್ರಾಂತಿಯನ್ನು ಪಡೆಯುತ್ತಿದ್ದನು ಇನ್ನೊಂದೆಡೆ ಪ್ರಲಯರಾತ್ರಿಯು ಬಂದಿದ್ದು, ಕತ್ತಲು ತಾನೇತಾನಾಗಿ ಆಂಜಿಸುತ್ತಿತ್ತು.

೪೧ ಶಿಲಾಗರ್ಭದಲ್ಲಿರುವಂತೆ ಅಲ್ಲಾಡುವುದಕ್ಕೂ ಇಲ್ಲದಂತೆ ಆಕಾಶ ವೊಂದೇ ತುಂಬಿತ್ತು. ಅದು ಗಾಢನಿದ್ರೆಯಲ್ಲಿರುವವನ ಜಠರದಂತೆಯೂ ಅಪ್ರಜ್ಞಾತವಾಗಿಯೂ ಅಲಕ್ಷಣವಾಗಿಯೂ ಇತ್ತು.

೪೨ ಎಲ್ಲವೂ ಮಲಗಿರುವುದೋ ಎಂಬಂತೆ ಎಲ್ಲೆಲ್ಲಿಯೂ ಅಪ್ರತರ್ಕ್ಯವಾಗಿಯೂ ಅವಿಜ್ಞೇಯವಾಗಿಯೂ ಇತ್ತು. ಇನ್ನೊಂದೆಡೆ ಸಪಕ್ಷಗಳಾದ ಪರ್ವತಗಳು ಹಾರಾಡುತ್ತಿರಲು, ಕಾಗೆಗಳು ಆಕಾಶದ ತುಂಬಾ ತುಂಬಿವೆಯೋ ಎಂಬಂತಿತ್ತು.

ಏಕತ್ರ ವಜ್ರನಿಷ್ಪೇಷದ್ರುವದ್ಭೂಧರಭಾಸುರಂ ।
ಏಕತ್ರೋದ್ವೃತ್ತಮತ್ತಾಬ್ಧಿ ಹ್ರಿಯಮಾಣಧರಾಚಲಂ ॥೪೩॥

ಏಕತ್ರ ಪುರವೃತ್ರಾಂಧಬಲಿಸಂಗರಸಂಕುಲಂ ।
ಏಕತ್ರಮತ್ತಪಾತಾಲಗಜಕಂಪಿವಸುಂಧರಂ ॥೪೪॥

ಏಕತ್ರ ಶೇಷಶಿರಸಃ ಕಲ್ಪಾಂತಲುಠಿತಾವನಿ ।
ಕ್ವಚಿದಲ್ಪೇನ ರಾಮೇಣ ಹತರಾವಣರಾಕ್ಷಸಂ ॥೪೫॥

ರಾಕ್ಷಸಾ ರಾವಣೇನೈವ ಕ್ವಚಿದ್ವಿಹತರಾಘವಂ ।
ಭೂಸ್ಥಪಾದೇನ ದೇವಾದ್ರಿಶಿರಸ್ಥಶಿರಸಾ ಪರಂ ॥೪೬॥

---

೪೩ ಒಂದೆಡೆ ವಜ್ರಾಯುಧದ ಏಟುತಿಂದು ಪುಡಿಪುಡಿಯಾಗಿ ಕರಗುತ್ತಿರುವ ಪರ್ವತಗಳು. ಇನ್ನೊಂದೆಡೆ ಮರ್ಯಾದೆಮೀರಿ ರೇಗಿ ನುಗ್ಗಿ ಬರುತ್ತಿರುವ ಸಮುದ್ರವು ಪರ್ವತವನ್ನು ನಾಚಿಸುತ್ತಿರುವುದು.

೪೪ ಒಂದೆಡೆ ತ್ರಿಪುರರೂ ವೃತ್ರನೂ ಅಂಧಕನೂ ಬಲಿಯೂ ಯುದ್ಧ ಮಾಡುತ್ತಿರುವ ಘೋರದೃಶ್ಯವು; ಮದವೇರಿದ ದಿಗ್ಗಜಗಳು ತಲೆ ಜೊಡವಲು, ನಡುಗುತ್ತಿರುವ ಭೂಮಂಡಲವು ಇನ್ನೊಂದೆಡೆ.

೪೫ ಶೇಷನು ತಲೆಯಮೇಲೆ ಹೊತ್ತಿದ್ದ ಭೂಮಂಡಲವು ಪ್ರಲಯದಲ್ಲಿ ಹೇಗೋ ಹಾಗೆ ಅಲ್ಲಾಡುತ್ತಿರುವುದು. ಇನ್ನೊಂದೆಡೆ ಸಣ್ಣರಾಮನು ದೊಡ್ಡ ರಾಕ್ಷಸ ರಾವಣನನ್ನು ಕೊಂದಿರುವನು.

೪೬ ಇನ್ನೊಂದೆಡೆ ರಾಕ್ಷಸರಾಜನಾದ ರಾವಣನೇ ರಾಮನನ್ನು ಹೊಡೆದಿರುವನು : ಆ ರಾವಣನು ಪಾದಗಳು ಭೂಮಿಯಲ್ಲೂ ತಲೆಯು ಮೇರುಪರ್ವತದ ಮೇಲೆಯೂ ಇರುವಷ್ಟು ದೊಡ್ಡವನು.

ಪಶ್ಯಾಮ್ಯಂಬರಮಾಕ್ರಾಂತಂ ಕ್ವಚಿದ್ವೈ ಕಾಲನೇಮಿನಾ ।
ಕ್ವಚಿಚ್ಚಾಪಸುರೈರ್ನಿತ್ಯಂ ದಾನವೈರೇವ ಪಾಲಿತಂ ॥೪೭॥

ಕ್ವಚಿಚ್ಚ ಭ್ರಷ್ಟದನುಜೈರಮರೈರೇವ ಪಾಲಿತಂ
ಜಿಷ್ಣುಯುಕ್ತೇನ ಗುಪ್ತೇನ ವಿಷ್ಣುಪಾಂಡವಕೌರವೈಃ
ಕ್ವಚಿದ್ಭಾರತಯುದ್ಧೇನ ನಿಹತಾಕ್ಷೌಹಿಣೀಗಣಂ । ॥೪೮॥

ಶ್ರೀರಾಮ ಉವಾಚ:—

ಕಿಮಹಂ ಭಗವನ್ಪೂರ್ವಮಭವಂ ಕಥಯೇತಿ ಮೇ ।
ಅಭವಂ ಚೇದಸೇನೈವ ಸಂನಿವೇಶೇನ ತತ್ಕಥಂ । ॥೪೯॥

ಶ್ರೀ ವಸಿಷ್ಠ ಉವಾಚ:—

ಸರ್ವ ಏವ ವಿವರ್ತಂತೇ ರಾಮ ಭಾವಾಃ ಪುನಃಪುನಃ ।
ಪೂರ್ಯಮಾಣಾ ಯಥಾ ಮಾಷಾಃ ಕ್ರಮೇಣಾನ್ಯೇನ ತೇನ ವಾ ।೫೦॥

---

೪೭　ಮತ್ತೊಂದೆಡೆ ಕಾಲನೇಮಿಯು ಆಕಾಶವನ್ನೆಲ್ಲ ಆಕ್ರಮಿಸಿರುವನು: ಇನ್ನೊಂದೆಡೆ ದಾನವರು ದೇವತೆಗಳನ್ನೆಲ್ಲ ಓಡಿಸಿ ತಾವೇ ರಾಜ್ಯವಾಳುತ್ತಿರುವರು.

೪೮　ಇನ್ನೊಂದೆಡೆ ದನುಜರು ಓಡಿಹೋಗಲು ದೇವತೆಗಳೇ ಪಾಲಿಸುತ್ತಿರುವರು : ಇನ್ನೊಂದೆಡೆ ಪಾಂಡವರು ಕೌರವರು ಅರ್ಜುನ ಮೊದಲಾದವರೊಡನೆ ವಿಷ್ಣುವು ರಕ್ಷಿಸುತ್ತಿರುವನು ; ಇನ್ನೊಂದೆಡೆ ಭಾರತ ಯುದ್ಧವಾಗಿ ಅಕ್ಷೋಹಿಣೀ ಸೇನೆಗಳೆಲ್ಲ ಧ್ವಂಸವಾಗಿರುವುವು.

ಶ್ರೀರಾಮನು ಕೇಳಿದನು:—

೪೯　ಎಲೈ ಭಗವಂತನೆ, ನಾನು ಹಿಂದೆ ಹುಟ್ಟಿದ್ದೆನೇ ಹೇಳು ? ಹುಟ್ಟಿದ್ದೆನಾದರೆ, ಆಗಲೂ ಇದೇ ಸಂನಿವೇಶವಿತ್ತೇ ? ಇತ್ತು ಎನ್ನುವುದಾದರೆ ಅದು ಹೇಗೆ ?

ಶ್ರೀ ವಸಿಷ್ಠನು ಹೇಳಿದನು:—

೫೦　ರಾಮ, ಎಲ್ಲವೂ ಮತ್ತೆ ಮತ್ತೆ ವಿವರ್ತನವಾಗುತ್ತಲೇ ಇರುವುವು. ಉದ್ದಿನರಾಶಿಯನ್ನು ಮಾಡುತ್ತಿದ್ದರೆ ಆಗುವಹಾಗೆ, ಕ್ರಮವು ಒಂದೇ ಇರಬಹುದು : ಬೇರೆಯಾದರೂ ಆಗಬಹುದು.

ಸರ್ವಕ್ರಮಸಮಾಃ ಕೇಚಿತ್ತ್ರಯ್ಯೈವಾನ್ಯೇನ ವಾ ಮಿಥಃ
ಸ್ಫುರಂತ್ಯರ್ಥಸಮಾ ಭಾವಾಃ ಕೇಚಿದಬ್ಧಿತರಂಗವತ್ । ||೫೧||

ಪುನಸ್ತ್ವಂ ಪುನರೇವಾಹಂ ಪುನಃ ಪುನರಿಮೇ ಜನಾಃ
ನ ಕದಾಚನ ಸ್ವೈವಾನ್ಯೇ ಸಂಭವಂತ್ಯಖಿಲಂ ಪರೇ । ||೫೨||

ತ ಏವಾನ್ಯೇಽಥವಾಂಬೋಧೌ ತರಂಗಾ ಇವ ನಿರ್ಣಯಃ ।
ಯದ್ವನ್ನ ಜಾಯತೇ ತದ್ವದ್ಭೂತಾನಾಂ ಭ್ರಮತಾಂ ಭವೇಶ್ । ||೫೩||

---

೫೧ ಸರ್ವವೂ ಒಂದೇ ಕ್ರಮದಲ್ಲಿ ಇರುವುದೂ ಉಂಟು. ಬೇರೆಯಾಗುವುದೂ ಉಂಟು. ಕೆಲವುಕಡೆ ಅರ್ಥ ಸಮವಾಗಿ ಭಾವವೂ ಬದಲಾಯಿಸುವುದು : ಇನ್ನು ಕೆಲವೆಡೆ ಸಮುದ್ರತರಂಗಗಳ ಹಾಗೆ ಒಂದರ ಹಿಂದೆ ಒಂದು ಬರುವುದೂ ಉಂಟು.

೫೨ ಮತ್ತೆ ನೀನು, ಮತ್ತೆ ನಾನು, ಮತ್ತೆ ಮತ್ತೆ ಇದೇ ಇದೇ ಜನರು, ಬರುವುದುಂಟು. ಪರಮವಸ್ತುವಿನಲ್ಲಿ ಮತ್ತೆ ಬೇರೆಯಾಗಿ ಹುಟ್ಟುವುದು ಎಂಬುದು ಯಾವಾಗಲೂ ಇಲ್ಲ.

೫೩ ಅನ್ಯರೆಂಬುದು ಇಲ್ಲವೇ ಇಲ್ಲ : ಅಥವ ಅನ್ಯವೆನ್ನುವುದಾದರೆ, ಅಂಬುಧಿಯಲ್ಲಿರುವ ನೀರೇ ತರಂಗವಾಗುವಂತೆ ಎಂಬುದೇ ನಿರ್ಣಯವು ! ಅಥವಾ ಹೊಸದಾಗಿ ಹುಟ್ಟುವುದು ಎನ್ನುವುದೇ ಇಲ್ಲ : ಭೂತಗಳು ಬರುತ್ತಿರುವುವು ಹೋಗುತ್ತಿರುವುವು.

(ಮಾಯಾದೃಶಾ ತ ಏವ ಜಾಯಂತೇ ಅನ್ಯೇವಾಜಾಯಂತೇ ಇತ್ಯನಿರ್ಣಯಃ ಏವೇತ್ಯಾಹ— ನಿರ್ಣಯೋ ಯದ್ವನ್ನ ಜಾಯತೇ ಇತ್ಯನ್ವಯಃ—ತಾ. ಪ್ರ.)

ಆಯಾಂತಿ ಯಾಂತ್ಯನಂತಾನಿ ಭೂತಾನೀಹ ಭವಭ್ರಮೈಃ
ತಾನ್ಯೇವಾನ್ಯಾನಿ ಚಾನ್ಯಾನಿ ಸಮಾನಿ ವಿಷಮಾಣಿ ಚ । ॥೫೪॥

ಆ ವೃತ್ತಿಮಂತಿ ತಾನ್ಯೇವ ತಥೈವಾನ್ಯಾನಿ ಚಾಭಿತಃ
ವಿದ್ಧಿ ಶೀಕರಜಾಲಾನಿ ಭೂತಾನಿ ಜಗದಂಬುಧೇಃ । ॥೫೫॥

ವಿತ್ತಬಂಧುವಯಃ ಕರ್ಮವಿದ್ಯಾವಿಜ್ಞಾನಚೇಷ್ಟಿತೈಃ
ತೈರೇವ ಕೇಚಿಜ್ಜಾಯಂತೇ ಭೂಯೋಭೂಯಃ ಶರೀರಿಣಃ । ॥೫೬॥

---

೫೪ ಅನಂತವಾದ ಭೂತಗಳು ಬರುವುವು: ಹೋಗುವುವು. ಇದೇ ಸಂಸಾರ ಭ್ರಮಣವು. ಅವೇ ಮೊದಲಿನಂತೆಯೇ ಇರಬಹುದು; ಬೇರೆಯಾಗಿರ ಬಹುದು, ಆ ಅನ್ಯಗಳೂ ಮೊದಲಿನವಕ್ಕೆ ಸಮವಾಗಿರಬಹುದು-ವಿಷಮವೂ ಆಗಿರ ಬಹುದು.

(ಒಂದು ಮನೆಯನ್ನು ಒಡೆದು ಇನ್ನೊಂದು ಮನೆ ಕಟ್ಟಿದರೆ, ಆ ಮನೆಯ ಲ್ಲಿದ್ದ ಇಟ್ಟಿಗೆಗಳಿಂದಲೇ ಈ ಮನೆಯಾಗಿದ್ದರೂ ಸನ್ನಿವೇಶವು ಸಮವೂ ಆಗಬ ಹುದು: ವಿಷಮವೂ ಆಗಬಹುದು. ಹಾಗೆ.)

೫೫ ಜಗತ್ತೆಂಬ ಸಮುದ್ರದಿಂದ ಹಾರಿದ ತುಂತುರುಗಳೇ ಈ ಭೂತಗ ಳೆಂದು ತಿಳಿ. ಅವೇ ಪದೇಪದೇ ಬರುತ್ತಿರುವುವು: ಎಲ್ಲ ಕಡೆಯಿಂದಲೂ ಬರು ತ್ತಿರುವುವು: ಅವೇ ಅನ್ಯವೆಂಬಂತೆಯೂ ಇರುವುವು: ಅನ್ಯವಾಗಿಯೂ ಇರುವುವು.

೫೬ ಶರೀರಧಾರಿಗಳಾದ ಪ್ರಾಣಿಗಳು ವಿತ್ತ, ಬಂಧು, ವಯಸ್ಸು, ಕರ್ಮ, ವಿದ್ಯಾ, ವಿಜ್ಞಾನ, ವ್ಯಾಪಾರಗಳಿಂದ ಅನನ್ಯವಾಗಿ ಭೂಯೋ ಭೂಯಃ ಹುಟ್ಟುವುದೂ ಉಂಟು.

(ಮೇಲೆ ಹೇಳಿರುವವೆಲ್ಲ ಪ್ರತ್ಯಭಿಜ್ಞಾಕಾರಣಗಳು ಈ ಕಾರಣಗಳಿಂದ ಜೀವನು ತಾನು ಪ್ರತ್ಯೇಕನೆಂದು ಗುರುತುಹಿಡಿದುಕೊಳ್ಳುವನು.)

ಅರ್ಧೈರ್ಗಸ್ತ್ರ್ಯೈಃ ಸದೃಶಾಃ ಕೇಚಿತ್ಕೇಚಿತ್ಪಾದೇನ ತೈಃ ಸಮಾಃ
ತಜ್ಜೀವಾಸ್ತ್ರೈರ್ವಿಸದೃಶಾ ಭವಂತ್ಯನ್ಯಶರೀರಿಣಃ । ॥೫೭॥

ಸರ್ವೈರೇಭಿಃ ಸಮಾಃ ಕೇಚಿತ್ಕಾಲೇನೈವ ವಿಲಕ್ಷಣಾಃ
ಕಾಲೇನ ಸದೃಶಾಃ ಕೇಚಿದನೇನ ಚ ವಿಲಕ್ಷಣಾಃ । ॥೫೮॥

ಕಾಲೇನಾಕುಲಚೇಷ್ಟಯಾನ್ಯ ಇವ ತೇ ಗಚ್ಛಂತ್ಯಧೋರ್ಧ್ವಂ ಪುನ
ರ್ದೀರ್ಘಕಾಲೇಖಿನ್ನಖೇದಿತಾನ್ಯಗಣಿತಾನ್ಯನ್ಯಾನಿ ಚಾನ್ಯಾನ್ಯಲಂ ॥

---

೫೭ ಕೆಲವೆಡೆಗಳಲ್ಲಿ ಅರ್ಧಸಮವು, ಕೆಲವೆಡೆ ಪಾದಸಮವು: ಅದೇ ಜೀವರಾದರೂ ತಾವು ಅನ್ಯಶರೀರಿಗಳಾದುದರಿಂದ ವಿಸದೃಶರೂ ಆಗಬಹುದು.

೫೮ (ಆದರೂ) ಕೆಲವು ಜೀವರು ಸರ್ವವಿಧದಲ್ಲೂ ಸಮರಾಗಿಯೇ ಇದ್ದರೂ ಕಾಲದಿಂದ ಮಾತ್ರ ಭಿನ್ನರಾಗಿರುವರು. ಕಾಲದಿಂದ ಸದೃಶರಾದವರು ಕೆಲವರು ಇನ್ನು ಯಾವದರಿಂದಲೋ ಭಿನ್ನರಾಗಿರುವರು.

(ಜೀವೈಕ್ಯೇ ಸದೃಶಾನ್ಯೇವ ಶರೀರಾಣಿ ಭವಂತೀತ್ಯಪ್ಯನಿಯಮ ಇತ್ಯಾಹ: – ಜೀವಭೇದೇ ವಿಸದೃಶಾನ್ಯೇವ ತಾನೀತ್ಯಪಿಅನಿಯಮ ಇತ್ಯಾಶಯೇನಾಹ–ತಾ.ಪ್ರ.)

೫೯ ಆ ಜೀವರುಗಳು ಕಾಲನಿಂದ ಪ್ರೇರಿತರಾಗಿ ರಾಗ ದ್ವೇಷ ಭೋಗ ಲಾಂಪಟ್ಯಾದಿ ದೋಷಗಳಿಂದ ಕೂಡಿರುವ ವ್ಯಾಪಾರಗಳನ್ನು ಮಾಡುತ್ತಾ ಸ್ವರ್ಗ ನರಕಗಳಿಗೆ ಏರುತ್ತಾ ಇಳಿಯುತ್ತಾ ಇರುವರು. ಅಲ್ಲಲ್ಲಿಗೆ ತಕ್ಕಂತೆ ವಿಚಿತ್ರವಾದ

ಭೂತಾಂಬೂನಿ ವಹಂತಿ ಸಂಸೃತಿಮಯೀ ಯಾನ್ಯಂಬುಧೌ ಚಂಚಲೇ
ಚಕ್ರಾವೃತ್ತಿಮಯಾನಿ ಸಂಕಲಯಿತುಂ ಶಕ್ನೋತಿ ಕಸ್ತಾನ್ಯಲಂ । ||೫೯||

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಪಾಷಾಣೋ
ಪಾಖ್ಯಾನೇ ಜಗದಸ್ವಾಸ್ಥ್ಯವರ್ಣನಂ ನಾಮ ಷಡಶೀತಿತಮಃ ಸರ್ಗಃ

---

ನಾನಾ ದೇಹಗಳನ್ನು ಧರಿಸಿ ಯಾರೋ ಏನೋ, ಎಂಬಂತಾಗಿ ಅಗಣಿತವಾಗಿರುವರು ಚಂಚಲವಾದ ಸಂಸಾರಗಳಿಂದ ತುಂಬಿರುವ ಈ ಅಂಬುಧಿಯಲ್ಲಿ ಭೂತಗಣಗಳೆಂಬ ಈ ಜಲೌಘಗಳು ಅಲ್ಲಲ್ಲಿ ಸುತ್ತುತ್ತಿರುವ ಸುಳಿಗಳಂತಿರುವುವು ಅವುಗಳನ್ನೆಲ್ಲ ಹೀಗೇ ಎಂದು ಗೊತ್ತುಮಾಡಲು ಯಾರಿಂದ ತಾನೇ ಸಾಧ್ಯ ?

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಜಗದಸ್ವಾಸ್ಥ್ಯ" ಎಂಬ
ಎಂಭತ್ತಾರನೆಯ ಸರ್ಗವು



# ಸಪ್ತಸಪ್ತತಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ:—

ತತಶ್ಚಿದಾಕಾಶವಪುರ್ವ್ಯಾಪ್ಯನಂತೋ ನಿರಾಮಯಃ ।
ದತ್ತಾವಧಾನೋ ವಪುಷಿ ತದಾ ಪಶ್ಯಾಮ್ಯಹಂ ಕ್ವಚಿತ್ ॥೧॥

ಯಾವದಂತರ್ಗತಃ ಸರ್ಗಃ ಸಂಸ್ಥಿತೋಽಂಕುರಿತೋಪಮಃ ।
ಕುಸೂಲಸ್ಯೇವ ಬೀಜಸ್ಯ ಸಿಕ್ತಸ್ಯೈವಾಂಕುರೋ ಹೃದಿ ॥೨॥

ಊರ್ಧ್ವಗವಏಚ್ಛೂನ ಏವಾಂತಃ ಸೇಕಾದ್ವೀಜೇ ಯಥಾಂಕುರಃ ।
ಆಕಾರವತ್ಯನಾಕಾರೇ ಚಿತ್ತ್ವಾಚಿತ್ತ್ವೇ ತಥಾ ಜಗತ್ ॥೩॥

# ಎಂಭತ್ತೇಳನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧ ಅನಂತರ ನಾನು ನನ್ನ ದೇಹವನ್ನು ನೋಡಿಕೊಂಡೆನು. ಅದೂ ಚಿದಾಕಾಶಮಯವಾದ್ದರಿಂದ, ಅದೂ ವ್ಯಾಪಿಯಾಗಿ ಅನಂತವಾಗಿ, ನಿರಾಮಯವಾಗಿ ಇರುವುದು ಎಂಬುದನ್ನು ಕಂಡೆನು.

೨ ನನ್ನೊಳಗೇ ಒಂದು ಸೃಷ್ಟಿಯು ಇತ್ತು. ಅದು ಆ ವೇಳೆಗೇ ಮೊಳೆತಿತ್ತು. ಕೊಂಬೆಯಲ್ಲಿದ್ದ ಒಂದು ಕಾಳನ್ನು ನೀರಿನಲ್ಲಿ ನೆನೆಸಿ ಹೃದಯದಲ್ಲಿ ಬಿತ್ತಿದಂತೆ ಆಗಿತ್ತು.

೩ ಆ ಬೀಜವು ಮೊಳೆತಿತ್ತು. ಅದರಲ್ಲಿ ಚಿತ್ತ್ವ ಅಚಿತ್ತ್ವಗಳೆರಡೂ ಕಂಡು, ಒಂದೆಡೆ ಆಕಾರದಿಂದ ಕೂಡಿ, ಇನ್ನೊಂದೆಡೆ ಇನ್ನೂ ಆಕಾರ ಕಾಣದ ಜಗತ್ತೇ ಒಂದು ಇತ್ತು.

ಯಥೋನ್ಮಿಷತಿ ದೃಶ್ಯಶ್ರೀಃ ಸುಷುಪ್ತಾದ್ಬೋಧಮೇಯುಷಃ ।
ಜಾಗ್ರದ್ವಾ ವಿಗತೇ ಸ್ವಪ್ನೇ ಚಿನ್ಮಾತ್ರಸ್ಯ ಸ್ವಚೇತನಾತ್ ॥೪॥

ತಥೈವಾತ್ಮನಿ ಸರ್ಗಾದಾವನುಭೂತಸ್ವರೂಪಿಣಿ ।
ಹೃದಿ ಸರ್ಗೋದಯೋ ನಾನ್ಯರೂಪ ಆಕಾಶರೂಪತಃ ॥೫॥

ಶ್ರೀರಾಮ ಉವಾಚ:—

ಆಕಾಶರೂಪ ಆಕಾಶೇ ಪರಮಾಕಾಶ ಕಥ್ಯತಾಂ ।
ಭೂಯೋ ನಿಪುಣಬೋಧಾಯ ಕಥಂ ಸರ್ಗಃ ಪ್ರವರ್ತತೇ ॥೬॥

ಶ್ರೀ ವಸಿಷ್ಠ ಉವಾಚ:—

ಶೃಣು ರಾಮ ಯಥಾಪೂರ್ವಂ ಸ್ವಯಂಭೂತ್ವಂ ಮಯಾ ತದಾ ।
ಅನುಭೂತಮಸತ್ಸದ್ವದಿದಂ ಸ್ವಪ್ನಪುರೋಪಮಂ ॥೭॥

---

೪ ಸುಷುಪ್ತಿಯಿಂದ ಎಚ್ಚರಗೊಳ್ಳುತ್ತಿರುವವನಿಗೆ ಹೇಗೆ ದೃಶ್ಯಸಂಪತ್ತು ಕೊಂಚಕೊಂಚವಾಗಿ ಅರಿವಿಗೆ ಬರುವುದೋ, ಕನಸು ಹಾರಿದಾಗ ಹೇಗೆ ಮೆಲ್ಲಮೆಲ್ಲನೆ ಜಾಗ್ರತ್ತು ಬರುವುದೋ (ಹಾಗೆ) ಚಿನ್ಮಾತ್ರವಾದ ಸ್ವಚೇತನದಿಂದಲೇ,

೫ ಆತ್ಮನಲ್ಲಿಯೇ, ಸರ್ಗದ ಮೊದಲಲ್ಲಿ ಅನುಭೂತವಾದಂತೆ, ಹೃದಯದಲ್ಲಿ ಸರ್ಗದ ಆರಂಭವಾಯಿತು. ಅದೂ ಆಕಾಶರೂಪವಾಗಿತ್ತಲ್ಲದೆ, ಅದಕ್ಕೆ ಬೇರೆ ಇನ್ನು ಯಾವ ರೂಪವೂ ಇರಲಿಲ್ಲ.

ಶ್ರೀರಾಮನು ಕೇಳಿದನು:—

೬ (ಹೃದಯ) ಆಕಾಶರೂಪವಾದ (ಚಿತ್) ಆಕಾಶದಲ್ಲಿ ಪರಮಾಕಾಶವು ಹೇಗೆ ಜಗದಾದಿರೂಪವಾಗಿ ಹರಡುವುದು ಎಂಬುದನ್ನು, ಪರಮಾಕಾಶರೂಪನಾದ ಬ್ರಹ್ಮನೆ. ವೃಥವಾಗಿ ಚೆನ್ನಾಗಿ ತಿಳಿಯಲೆಂದು ಮತ್ತೊಮ್ಮೆ ಹೇಳುವವನಾಗು.

ಶ್ರೀ ವಸಿಷ್ಠನು ಹೇಳಿದನು:—

೭ ಎಲೈ ರಾಮ, ನನಗೆ ಆಗ ಸ್ವಯಂಭೂತ್ವವು ಬಂದುದು ಹೇಗೆ ಎಂಬುದನ್ನು ಮೊದಲಿನಿಂದಲೂ ಹೇಳುವೆನು ಕೇಳು. ಆ ಸೃಷ್ಟಿಕರ್ತೃತ್ವವು ಬಂದಂತೆ ಕಾಣುತ್ತಿದ್ದರೂ ಅದು ಅಸತ್ತೇ! ಅನುಭವಕ್ಕೆ ಬಂದುದರಿಂದ ಸತ್ ಇದ್ದಂತೆ ಇದ್ದರೂ ಅದು ಸ್ವಪ್ನಪುರದಂತೆಯೇ ಇತ್ತು.

ತಮಾಲೋಕ್ಯ ಮಹಾಕಲ್ಪಸಂಭ್ರಮಂ ವ್ಯೋಮರೂಪಿಣಾ ।
ಭಾಗೇನ್ಯತ್ರ ಶರೀರಸ್ಯ ಸಂವಿದುನ್ಮೇಷಿತಾ ಮಯಾ ॥೮॥

ಯದೈವ ಸಾಮಲಾ ಸಂವಿತ್ಕಿಂಚಿದುನ್ಮೇಷಿತಾ ಸ್ಥಿತಾ ।
ತದೈವಾಹಂ ಕ್ವಚಿತ್ತತ್ರ ಪಶ್ಯಾಮ್ಯಾಕಾಶತಾಮಿವ ॥೯॥

ಗತಂ ಸ್ವಭಾವಂ ಚಿದ್ವ್ಯೋಮ ಯಥಾ ತ್ವಂ ರಾಮ ನಿದ್ರಯಾ ।
ಜಾಗ್ರದ್ವಾ ಸ್ವಪ್ನಲೋಕಂ ವಾ ವಿಶನ್ವೇತ್ಸಿ ಸಮಂ ಘನಂ ॥೧೦॥

ದಿಙ್ಮಾತ್ರಾಕಾಶಮೇವಾದೌ ತತೋಽಸ್ಮೀತ್ಯೇವ ವೇದನಂ ।
ತದ್ಘನಂ ಕಥ್ಯತೇ ಬುದ್ಧಿಃ ಸಾ ಘನಾ ಮನ ಉಚ್ಯತೇ ॥೧೧॥

---

೮ ನಾನು ಆಗ ಚಿದಾಕಾಶರೂಪನಾಗಿದ್ದೆನು. ಮಹಾಕಲ್ಪವೊಂದು ಆರಂಭವಾಗಿರುವುದು ಕಾಣಿಸಿತು. ಶರೀರದ ಯಾವುದೋ ಒಂದು ಭಾಗದಲ್ಲಿ ಸಂವಿತ್ತನ್ನು ಪ್ರೇರಿಸಿದೆನು.

೯ ಯಾವಾಗ ಆ ಪರಿಶುದ್ಧವಾದ ಸಂವಿತ್ತು ಕೊಂಚಕೊಂಚವಾಗಿ ಉನ್ಮೇಷಿತವಾಯಿತೋ, ಆಗಲೇ ಕೊಂಚಕೊಂಚವಾಗಿ ಆಕಾಶವು ಹರಡುತ್ತಿರುವುವನ್ನು ಕಂಡೆನು.

೧೦ ಚಿದಾಕಾಶವು ತನ್ನ ಸ್ವಭಾವವನ್ನು ಬಿಟ್ಟಿತು. ಅದು ಹೇಗೆನ್ನುವೆಯಾ? ರಾಮ, ನೀನು ನಿದ್ರೆಯಲ್ಲಿಯೂ ಜಾಗ್ರತ್ತಿನಲ್ಲಿಯೂ, ಸ್ವಪ್ನದಲ್ಲಿಯೂ "ನನಗೆ ಪ್ರತ್ಯೇಕವಾದ ಆಧಾರವೊಂದಿದೆ : ಅದನ್ನು ಅವಲಂಬಿಸಿ ಕಾರ್ಯಮಾಡುತ್ತಿದ್ದೇನೆ" ಎಂದುಕೊಳ್ಳುವುದಿಲ್ಲವೆ? ಅದರಂತೆಯೇ!

೧೧ ಅನಂತರ ಆಕಾಶದಲ್ಲಿ ದಿಕ್ಕುಗಳು ಏರ್ಪಟ್ಟುವು. ಅನಂತರ ನಾನು ಅಹಮಸ್ಮಿ ಎಂಬ ಅನುಭವವನ್ನು ಪಡೆದೆನು. ಆ ಅಹಮಸ್ಮಿಯೇ ಬುದ್ಧಿಯಾಯಿತು. ಅದೇ ಘನವಾಗಿ ಮನಸ್ಸಾಯಿತು.

ತದ್ವೇತ್ತಿ ಶಬ್ದತನ್ಮಾತ್ರಂ ತನ್ಮಾತ್ರಾಣೀತರಾಣ್ಯಥ ।
ಪಂಚೇಂದ್ರಿಯಾಣಿ ತತ್ಸ್ಥೌಲ್ಯಾದಿತೀಂದ್ರಿಯಗಣೋದಯಃ ॥೧೨॥

ಸುಷುಪ್ತಾದ್ವಿಶತಃ ಸ್ವಪ್ನಂ ಜಗದ್ದೃಶ್ಯಘನೋದಯಂ ।
ಯಥಾ ತಥೈವ ಸರ್ಗಾದೌ ದುಃಖಂ ಭಾತಿ ನಿಮೇಷತಃ ॥೧೩॥

ತುಲ್ಯಕಾಲಮನಂತೇಽಸ್ಮಿನ್ದೃಶ್ಯಜಾಲಾವಭಾಸನೇ ।
ಕಥಯಂತಿ ಕ್ರಮಂ ಕೇಚಿತ್ಕೇಚಿನ್ನ ಕಥಯಂತಿ ಚ ॥೧೪॥

ಪರಮಾಣುಕಣೇ ಕಾಂತೇ ಸಂಪನ್ನಮನುಭೂತವಾನ್ ।
ಅಹಂ ಚೇತನಮಾತ್ಮಾನಂ ವಸ್ತುತೋಽಮಲಮೇವ ಖಂ ॥೧೫॥

---

೧೨. ಅದು ಶಬ್ದತನ್ಮಾತ್ರವನ್ನೂ, ಇತರ ತನ್ಮಾತ್ರಗಳನ್ನೂ ತಿಳಿಯುವುದು. ಹಾಗೆ ತಿಳಿತಿಳಿದಹಾಗೆಲ್ಲಾ, ಆ ತನ್ಮಾತ್ರಗಳು ಘನವಾಗಿ ಸ್ಥೂಲಸ್ವರೂಪವನ್ನು ಹೊಂದಿ ಇಂದ್ರಿಯ ಗಣಗಳು ಆಗುವುವು.

೧೩. ಸುಷುಪ್ತಿಯಿಂದ ಸ್ವಪ್ನಕ್ಕೆ ಬರುತ್ತಿರುವವನು ಜಗತ್ತೆಂಬ ದೃಶ್ಯ ಸ್ವರೂಪವಾದ ಮೋಡಗಳನ್ನು ಕಾಣುವಂತೆ, ಸರ್ಗದ ಮೊದಲಲ್ಲಿ ಒಂದೇ ಗಳಿಗೆಯಲ್ಲಿ ದುಃಖವನ್ನು ಹೊಂದುವನು.

(ದುಃಖಂಭಾತಿನಿಮೇಷತಃ ಎಂದಿದೆ. ಪೂರ್ಣನಾಗಿದ್ದಾಗ ಭೂಮಾನಂದ ಸ್ವರೂಪನಾಗಿದ್ದವನು ಈಗ ಅಪೂರ್ಣನೆಂದುಕೊಂಡಾಗ ಇನ್ನೇನಾಗಬೇಕು ?)

೧೪ ಅನಂತವಾಗಿ ದೃಶ್ಯಪ್ರಪಂಚ ದರ್ಶನವು ತುಲ್ಯಕಾಲದಲ್ಲಿ ಹರಡಿ ಬಿಡುವುದು. ಹಾಗೆ ಹರಡುವುದರಲ್ಲಿ ಕೆಲವರು ಕ್ರಮವನ್ನು ಹೇಳುವರು : ಇನ್ನು ಕೆಲವರು ಕ್ರಮವನ್ನು ಹೇಳುವುದಿಲ್ಲ.

೧೫ ಮನೋಹರವಾದ ಪರಮಾಣುಕಣದಲ್ಲಿ, ನಾನು ನನ್ನ ಚೇತನವು, ವಾಸ್ತವ್ಯವಾಗಿ ಶುದ್ಧಾಕಾಶವೇ ಆಗಿದ್ದರೂ, ಸರ್ವದೃಶ್ಯ ಸಂಪನ್ನವಾಗಿರುವುದನ್ನು ಅನುಭವಿಸಿದೆನು.

ಯಥಾ ಸ್ವಭಾವತೋ ವ್ಯೋಮ್ನಿ ಚಲತ್ಯೇವಾನಿಶಂ ಮರುತ್ ।
ತಥಾ ಸ್ವಭಾವಾತ್ಸರ್ವತ್ರ ಪಶ್ಯತ್ಯೇವ ವಪುಸ್ತ್ವತಿ ॥೧೬॥

ಯಾದೃಶಂ ಚೇತಿತಂ ರೂಪಂ ಶಕ್ತ್ಯಾ ಪರಮಯಾ ತಯಾ ।
ತಚ್ಛಕ್ನೋತ್ರನ್ಯಥಾ ಕರ್ತುಂ ನೈಷಾ ಯತ್ನೇನ ಭೂಯಸಾ ॥೧೭॥

ತತಃ ಪಶ್ಯಾಮ್ಯಹಂ ಯಾವತ್ಸಂಪನ್ನೋಽವ್ಯಣುರೂಪಕಃ ।
ಚಿತ್ತ್ವಾಚ್ಚೇತಸ್ತದೇವಾಶು ತಥಾಭೂತೋಽಸ್ಮಿ ಸಂಸ್ಥಿತಃ ॥೧೮॥

ತತೋಽಹಂ ಬುದ್ಧವಾನ್ರೂಪಂ ತನು ತೇಜಃಕಣಾಕೃತಿ ।
ತದೇವ ಭಾವಯನ್ಪಶ್ಚಾದ್ಗತೋಽಹಂ ಸ್ಥೂಲತಾಮಿವ ॥೧೯॥

---

೧೬ ಹೇಗೆ ಆಕಾಶದಲ್ಲಿ ಮರುತನು ಯಾವಾಗಲೂ ಸ್ವಭಾವವಾಗಿಯೇ ಬೀಸುತ್ತಿರುವನೋ, ಹಾಗೆಯೇ ಸ್ವಭಾವದಿಂದಲೇ ಜಗದ್ದೇಹವಾಗಿ ಆಕಾಶವೇ ತನ್ನನ್ನೇ ನೋಡಿಕೊಳ್ಳುವುದು.

೧೭ ಆ ಚಿಚ್ಛಕ್ತಿಯು ಯಾವ ರೂಪವಾಗಿ ಚೇತಿತವಾಗುವುದೋ ಅದೇ ಸ್ವಭಾವವಾಗಿ ನಿಲ್ಲುವುದು. ಅದನ್ನು ಏನೇ ಪ್ರಯತ್ನ ಎಷ್ಟೇ ಮಾಡಿದರೂ ಅನ್ಯಥಾ ಮಾಡುವುದಕ್ಕಾಗುವುದಿಲ್ಲ.

೧೮ ಹೀಗೆ ನಾನು ಅಣುರೂಪನೇ ಆಗಿರುವುದನ್ನು ಕಂಡೆನು. ಚಿತ್ತ್ವವು ಚೇತವಾಗಿ, ಅದೇ ತಾನಾದೆನೆಂದುಕೊಂಡು ಆ ರೂಪದಲ್ಲಿ (ಅಭಿಮಾನವುಳ್ಳವನಾಗಿ) ಇದ್ದೆನು.

೧೯ ಆಗ ನಾನು ರೂಪವುಳ್ಳವನು, ಸಾಕಾರನು, ಎಂದುಕೊಂಡೆನು. ಒಂದು ತೇಜಸ್ಸಿನ ಕಣದಷ್ಟು ಮಾತ್ರ ಇದ್ದೆನು. ಅದನ್ನು ಹಾಗೆಯೇ ಭಾವಿಸುತ್ತ ಭಾವಿಸುತ್ತ ಸ್ಥೂಲತ್ವವನ್ನು ಹೊಂದಿದೆನು.

(ತನುಸೂಕ್ಷ್ಮಂ ಲಿಂಗಶರೀರಂ ಚಿತ್ಪ್ರತಿಬಿಂಬವ್ಯಾಪ್ತ್ಯಾ ತೇಜಃಕಣಾಕೃತಿ ।— ತಾ. ಪ್ರ.)

ಪ್ರೇಕ್ಷೇ ತಾವದಹಂ ಕಿಂಚಿದಿತಿ ಬೋಧಾಲ್ಲಘೋಽಸ್ತ್ರತಃ ।
ಏನಾಗಾಲೋಕನಾಯೈವ ಸಂಪ್ರವೃತ್ತೋಽನುಭೂತವಾನ್ ॥೨೦॥

ಯನ್ನಾಮ ತತ್ರ ತತ್ಕಿಂಚಿತ್ತಸ್ಯೇಹಾದ್ಯ ರಘೂದ್ವಹ ।
ಶೃಣು ನಾಮಾನಿ ಮುಖ್ಯಾನಿ ಕಲ್ಪಿತಾನಿ ಭವಾದೃಶೈಃ ॥೨೧॥

ದ್ರಷ್ಟುಂ ಪ್ರವೃತ್ತೋ ರಂಧ್ರೇಣ ಯೇನ ತಚ್ಚಕ್ಷುರುಚ್ಯತೇ ।
ಯಚ್ಚ ಪಶ್ಯಾಮಿ ತದ್ದೃಶ್ಯಂ ದರ್ಶನಂ ತು ಫಲಂ ತತಃ ॥೨೨॥

ಯದಾ ಪಶ್ಯಾಮಿ ಕಾಲೋಽಸೌ ಯಥಾ ಪಶ್ಯಾಮಿ ಸ ಕ್ರಮಃ ।
ಪೌಢಾ ನಿಯತಿರಿತ್ಯಸ್ಯ ಯತ್ರ ಪಶ್ಯಾಮಿ ತನ್ನಭಃ ॥೨೩॥

---

೨೦ ನಾನು ನೋಡಬೇಕು ಎಂಬ ಸಂಕಲ್ಪವು ಹುಟ್ಟುತ್ತಿದ್ದ ಹಾಗೆಯೇ, ನೋಡುವುದಕ್ಕಾಗಿ ಬೇಕಾದ ಇಂದ್ರಿಯವೂ ಹುಟ್ಟಿತು. ಹಾಗೆ ಹುಟ್ಟಿರುವುದು ಎಂಬುದು ಅನುಭವಕ್ಕೂ ಬಂತು.

೨೧ ಆಗ ಅಲ್ಲಿ ಏನೇನಿತ್ತೊ ಅದೆಲ್ಲಕ್ಕೂ ನಿಮ್ಮಂತಹವರು ಒಂದೊಂದು ಹೆಸರನ್ನು ಕಲ್ಪಿಸಿರುವರು. ಅದರಲ್ಲಿ ಮುಖ್ಯವಾದುವುಗಳನ್ನು ಹೇಳುವೆನು, ಕೇಳು.

೨೨ ನೋಡುವುದಕ್ಕೆ ಅನುಕೂಲವಾದ ರಂಧ್ರವು ಯಾವುದೋ ಅದನ್ನು ಚಕ್ಷುವೆನ್ನುವರು. ಯಾವುದನ್ನು ನೋಡುವೆನೋ ಅದು ದೃಶ್ಯವು. ಹಾಗೆ ನೋಡುವುದೆಂಬ ಫಲವು ಯಾವುದುಂಟೋ ಅದೇ ದರ್ಶನವು.

೨೩ ಯಾವಾಗ ನೋಡುವೆನೋ ಅದೇ ಕಾಲವು. ಯಾವ ರೀತಿಯಲ್ಲಿ ನೋಡುವೆನೋ ಅದೇ ಕ್ರಮವು. ಇದೆ ಪ್ರಬಲವಾಗಿರುವ ನಿಯತಿಯು. ಎಲ್ಲಿ ನೋಡುವೆನೋ ಅದೇ ಆಕಾಶವು.

ಸ್ಥಿತೋಽಸ್ಮಿ ಯತ್ರ ದೇಶೋಽಸಾವಿತ್ಯಧ್ಯೈಷಾ ಪ್ರಕಲ್ಪನಾ ।
ತದಾ ತ್ವಹಂ ಚಿದುನ್ಮೇಷಮಾತ್ರಾತ್ತನ್ಮಾತ್ರಕಾರಣಂ ||೩೪||

ಪಶ್ಯಾಮೀತಿ ತತಸ್ತತ್ರ ಮನಾಗ್ಬೋಧೋ ಮಮೋದಭೂತ್ ।
ತತೋ ರಂಧ್ರದ್ವಯೇನಾಹಮಪಶ್ಯಂ ಯತ್ತದಪ್ಯಖಂ ||೩೫||

ಯಾಭ್ಯಾಮಪಶ್ಯಂ ರಂಧ್ರಾಭ್ಯಾಂ ತ ಇಮೇ ಲೋಚನೇ ಸ್ಥಿತೇ ।
ತತಃ ಕಿಂಚಿಚ್ಛೃಣೋಮೀತಿ ಸಂವಿದಿತ್ಯುದಿತಾ ಮಮ ||೩೬||

ತತಃ ಕಿಂಚಿನ್ಮನಾಂಗ್ಮಾತ್ರಂ ಝುಂಕಾರಂ ಶ್ರುತವಾನಹಂ ।
ಪ್ರಧ್ಮಾತಸ್ಯೇವ ಶಂಖಸ್ಯ ಶಬ್ದಂ ವ್ಯೋಮ್ನಃ ಸ್ವಭಾವಜಂ ||೩೭||

---

೩೪ ಎಲ್ಲಿ ಇರುವೆನೋ ಅದೇ ದೇಶವು. ಇದು ಎಂಬ ನಿಶ್ಚಯವು ಯಾವುದೋ ಅದೇ ಪ್ರಕಲ್ಪನವು. ಇವೆಲ್ಲಕ್ಕೂ ಕಾರಣನಾಗಿರುವ ಚಿತ್ತಿನ ಉನ್ಮೇಷಸ್ವರೂಪನಾಗಿ, ತನ್ಮಾತ್ರಕ್ಕೆ ಕಾರಣನಾದವನು ಯಾರೋ ಅವನೇ ನಾನು.

೩೫ ಪಶ್ಯಾಮಿ ಎಂಬ ಬೋಧವೂ, ಆ ಕೂಡಲೇ ನನಗೆ ಬಂತು. ಆಗ ಆ ರಂಧ್ರದ್ವಯಗಳಿಂದ ಆಕಾಶವನ್ನೇ ನೋಡಿದೆನು.

೩೬ ಯಾವ ರಂಧ್ರಗಳಿಂದ ನೋಡಿದೆನೋ ಅವೇ ಲೋಚನಗಳಾದುವು. ಆಗ ಏನಾದರೂ ಕೇಳಬೇಕು ಎಂಬ ಸಂವಿತ್ತು ನನಗೆ ಹುಟ್ಟಿತು.

೩೭ ಆಗ ಕೂಡಲೇ ಯಾವುದೋ ಒಂದು ಝುಂಕಾರವನ್ನು ಕೇಳಿದೆನು. ಶಂಖವನ್ನು ಊದಿದರೆ ಹೇಗೋ ಹಾಗೆ ಇತ್ತು ಆ ಶಬ್ದ. ಆ ಶಬ್ದವೂ ಇನ್ನು ಯಾವುದೂ ಅಲ್ಲ; ಆಕಾಶದ ಸ್ವಭಾವದಿಂದ ಹುಟ್ಟಿದ್ದು.

ಯಾಭ್ಯಾಮಹಮಥಾಶ್ರೌಷಂ ತ ಇಮೇ ಶ್ರವಣವ್ರಜೇ ।
ಪ್ರದೇಶಾಭ್ಯಾಂ ವಿಚರತಾ ಮರುತಾ ವಿತತಸ್ವನಂ ॥೨೮॥

ಸ್ಪರ್ಶಸಂವೇದನಂ ಕಿಂಚಿದಹಮತ್ರಾನುಭೂತವಾನ್ ।
ಯೇನ ನಾಮ ಪ್ರದೇಶೇನ ತೇನ ಸಾ ತ್ವಕ್ತ ಕಥ್ಯತೇ ॥೨೯॥

ಯೇನ ಸ್ಪೃಷ್ಟವಿಃವಾಂಗಂ ತತ್ತದಾಹಮನುಭೂತವಾನ್ ।
ಸತ್ಸಂವೇದನಮಾತ್ರಾತ್ಮಾ ಸೋಽಯಂ ವಾಯುರಿತಿ ಸ್ಮೃತಃ ॥೩೦॥

ಸ್ಪರ್ಶನೇಂದ್ರಿಯತನ್ಮಾತ್ರಮಿತಿ ವೇದಿನಿ ಸಂಸ್ಥಿತಂ ।
ಆಸ್ವಾದಸಂವಿದ್ಯಾಭೂನ್ಮೇ ತದಾಸ್ವಾದ್ಯರಸೇಂದ್ರಿಯಂ ॥೩೧॥

---

೨೮ ಯಾವ ರಂಧ್ರಗಳಿಂದ ಅದನ್ನು ಕೇಳಿದೆನೋ ಅದೇ ಶ್ರವಣಾಗಳಾಗಿ ನಿಂತುವು. ಅವು ತಮ್ಮ ಸ್ಥಾನದಲ್ಲಿ ಚಲಿಸುತ್ತಿರುವ ಮಾರುತದಿಂದ ಬಹು ಶಬ್ದಗಳಾದುವು.

೨೯–೩೦ ಏನೋ ಮೈಯೆಲ್ಲ ಮುಟ್ಟಿದಂತಾಯಿತು. ಅದನ್ನು ನಾನು ಅನುಭವಿಸಿದೆನು. ಆ ಅನುಭವಕ್ಕೆ ಕಾರಣವಾದುದು ಯಾವುದುಂಟೋ ಅದೇ ವಾಯು ಎನ್ನಿಸಿಕೊಂಡಿತು.

(ವಾಯುಗ್ರಹಣಂ ತ್ವಗ್ವಿಷಯಮಾತ್ರೋಪಲಕ್ಷಣಂ । ಸತ್ಸಂವೇದನಂ ಸತ್ಯಸಂಕಲ್ಪಸ್ತಾನ್ಮಾತ್ರಾತ್ಮಾ—ತಾ. ಪ್ರ.)

೩೧. ಹೀಗೆ ವೇದನಾತ್ಮಕನಾದ ನನ್ನಲ್ಲಿ ಸ್ಪರ್ಶನೇಂದ್ರಿಯವು ತನ್ಮಾತ್ರದಿಂದ ಹುಟ್ಟಿತು. ನನಗೆ ಆಸ್ವಾದನ ಮಾಡಬೇಕೆಂದು ಯಾವ ಸಂವಿತ್ತು ಹುಟ್ಟಿತೋ ಅದೇ ಆಸ್ವಾದನಕ್ಕೆ ಸಾಧನವಾದ ರಸನೇಂದ್ರಿಯವಾಯಿತು.

ಪ್ರಾಣಾನ್ಮೇ ಘ್ರಾಣತನ್ಮಾತ್ರಮುದಿತಂ ವ್ಯೋಮರೂಪಿಣಃ ।
ಇತ್ಥಂ ನ ಕಿಂಚಿತ್ಸಂಪನ್ನಂ ಸರ್ವಂ ಸಂಪನ್ನಮತ್ರ ಮೇ ॥೩೨॥

ಏವಮಿಂದ್ರಿಯತನ್ಮಾತ್ರಜಾಲಂ ಚೇತ್ತತ್ರ ಸಂಸ್ಥಿತಃ ।
ಯಾವತ್ತಾವದ್ವಿದಃ ಪಂಚ ಬಲಾದೇವ ಮಮೋದಿತಾಃ ॥೩೩॥

ಶಬ್ದರೂಪರಸಸ್ಪರ್ಶಗಂಧಮಾತ್ರಶರೀರಿಕಾಃ ।
ಅನಾಕಾರಾಸ್ತಥಾ ಭಾತಸ್ವರೂಪಿಣ್ಯೋ ಭ್ರಮಾತ್ಮಿಕಾಃ ॥೩೪॥

ಏವಂರೂಪಮಹಂ ಜಾಲಂ ಭಾವಯನ್ನ್ಯತ್ಸದಾಸ್ಥಿತಃ ।
ತದಹಂಕಾರ ಇತ್ಯದ್ಯ ಕಥ್ಯತೇ ತ್ವಾದೃಶೈರ್ಜನೈಃ ॥೩೫॥

---

೩೨. ವ್ಯೋಮರೂಪಿಯಾದ ನನ್ನ ಪ್ರಾಣದಿಂದ (ಆ ಘ್ರಾಣ ಸಂಕಲ್ಪಾಕೃಷ್ಟ ಪ್ರಾಣಭೇದವಾದ ಅಪಾನದಿಂದ) ಗಂಧತನ್ಮಾತ್ರವೇ ಘ್ರಾಣವಾಯಿತು. ಹೀಗೆ, ಏನೂ ಇಲ್ಲದಿದ್ದವನಿಗೆ, ಎಲ್ಲವೂ ಬಂದು ಒದಗಿತು.

೩೩. ಹೀಗೆ, ತನ್ಮಾತ್ರಗಳು ಇಂದ್ರಿಯಗಳಾಗಲು, ಅವುಗಳ ಸಂಬಂಧಿಗಳಾದ (ಅಸತ್ತುಗಳಾದರೂ ಸತ್ಸರೂಪಿಗಳಂತೆ ತೋರುವ) ಭೋಗ ಸಂವಿತ್ತುಗಳೂ ಬಲಾತ್ಕಾರವಾಗಿ ಹುಟ್ಟಿಕೊಂಡುವು.

೩೪. ಈ ಭೋಗಸಂವಿತ್ತುಗಳೆಲ್ಲವೂ, ಎಂದರೆ ಶಬ್ದ, ರೂಪ, ರಸ, ಸ್ಪರ್ಶ, ಗಂಧ ಎಂಬ ಶರೀರಗಳುಳ್ಳ ಈ ಸಂವಿತ್ತುಗಳು ನಿಜವಾಗಿ ಆಕಾರವಿಲ್ಲದವು: (ಅನುಭವ ಕಾಲದಲ್ಲಿ ಮಾತ್ರ ಇರುವ) ಭೂತಸ್ವರೂಪಗಳು : ಭ್ರಮಾಸ್ವರೂಪಗಳು.

೩೫. ಈ ರೀತಿಯಾಗಿರುವ ಬಲೆಯನ್ನು ನಾನಾಗಿ ನೇಯ್ದುಕೊಂಡು, ಅದನ್ನೇ ಧ್ಯಾನಿಸುತ್ತಾ (ಅಭಿಮಾನಿಸುತ್ತ) ಇದ್ದೆನು. ಅದನ್ನೇ ನಿಮ್ಮಂತಹವರು ಅಹಂಕಾರವೆಂದು ಈಗ ಹೇಳುತ್ತಾರೆ.

ಏಷ ಏವ ಘನೀಭೂತೋ ಬುದ್ಧಿರಿತ್ಯಭಿಧೀಯತೇ ।
ಸಾಥ ಬುದ್ಧಿರ್ಘನೀಭೂತಾ ಮನ ಇತ್ಯಭಿಧೀಯತೇ ॥೩೬॥

ಅಂತಃಕರಣರೂಪತ್ವಮೇವಮತ್ರಾಹಮಾಸ್ಥಿತಃ ।
ಆತಿವಾಹಿಕದೇಹಾತ್ಮಾ ಚಿನ್ಮಯವ್ಯೋಮರೂಪವಾನ್ ॥೩೭॥

ಪವನಾದ್ಯಪ್ಯಹಂ ಶೂನ್ಯಃ ಕೇವಲಾಕಾಶಮಾತ್ರಕಃ ।
ಸರ್ವೇಷಾಮೇಷ ಭಾವಾನಾಂ ಶೂನ್ಯಾಕೃತಿರರೋಧಕಃ ॥೩೮॥

ಅಥೈವಂಭಾವನಾಢ್ಯೋಹಂ ಯದಾ ತತ್ರ ಚಿರಂ ಸ್ಥಿತಃ ।
ತದಾಹಂ ದೇಹವಾನ್ಸ್ಪಷ್ಟ ಇತಿ ಮೇ ಪ್ರತ್ಯಯೋಭವತ್ ॥೩೯॥

---

೩೬. ಈ ಅಹಂಕಾರವೇ ಘನೀಭೂತವಾದಾಗ ಬುದ್ಧಿಯೆನ್ನಿಸಿಕೊಳ್ಳುವುದು. ಅದೇ ಬುದ್ಧಿಯು ಘನೀಭೂತವಾದಾಗ ಮನಸ್ಸು ಎನ್ನಿಸಿಕೊಳ್ಳುವುದು.

(ಘನೀಭೂತೋ ದೃಢಾಧ್ಯವಸಾಯೇನ ಬಹುಲೀಭೂತಃ| ಮನೋಽಪಿ ಪುನಃಪುನಃ ವಿಷಯಾನ್ ಸ್ಮರಚ್ಚಿತ್ತಂ ಸಂಪನ್ನಮಿತ್ಯಪಿಬೋಧ್ಯಂ ॥—ತಾ. ಪ್ರ.)

೩೭. ನಾನು ಈಗ ಅಂತಃಕರಣರೂಪವನ್ನು ಹೊಂದಿದ್ದೆನು. ಚಿನ್ಮಯ ವ್ಯೋಮರೂಪಿಯಾಗಿ ಆತಿವಾಹಿಕ ದೇಹಾತ್ಮನಾಗಿದ್ದೆನು. (ಅರ್ಥಾತ್, ಇನ್ನೂ, ಇಷ್ಟಾದರೂ ನನ್ನ ಆಕಾಶತ್ವವು ನನ್ನನ್ನು ಬಿಟ್ಟಿರಲಿಲ್ಲ)

೩೮. ಪವನಾದಿಗಳಾಗಿದ್ದರೂ ನಾನು ಶೂನ್ಯನಾಗಿ ಕೇವಲ ಆಕಾಶಮಾತ್ರ ಕನಾಗಿದ್ದೆನು. ಅದರಿಂದಲೇ ಎಲ್ಲಾ ಭಾವಗಳಿಗೂ ಆಶ್ರಯನಾಗಿ, ಶೂನ್ಯಾಕೃತಿ ಯಾಗಿರುವುದರಿಂದಲೇ ಅನಿರೋಧಕನಾಗಿದ್ದೆನು.

೩೯. ಅನಂತರದಲ್ಲಿ ಈ ಭಾವನಾ ವಿಶೇಷಗಳಿಂದ ಕೂಡಿ ನಾನು ಅಲ್ಲಿ ದೀರ್ಘಕಾಲವಿದ್ದೆನು. ಆಗ "ನನಗೆ ಒಂದು ದೇಹವಿದೆ: ನಾನು ದೇಹವಾನ್ ಆದೆನು" ಎಂಬ ಪ್ರತ್ಯಯವು (ನಂಬಿಕೆಯು) ಬಂತು

ತೇನಾಹಂಪ್ರತ್ಯಯೇನಾಥ ಶಬ್ದಂ ಕರ್ತುಂ ಪ್ರವೃತ್ತವಾನ್ ।
ಶೂನ್ಯ ಏವ ಯಥಾ ಸುಪ್ತಃ ಸ್ವಪ್ನೋಡ್ಡೀನನರೋ ರವಂ ॥೪೦॥

ಅಥ ಪೂರ್ವಂ ಕೃತಃ ಶಬ್ದೋ ಬಾಲೇನೇವ ತದೋಮಿತಿ ।
ತತಃ ಸ ಏಷ ಓಂಕಾರ ಇತಿ ನೀತಃ ಪುನಃ ಪ್ರಥಾಂ ॥೪೧॥

ತತಃ ಸ್ವಪ್ನನರೇಣೇವ ಯತ್ಕಿಂಚಿದ್ಗದಿತಂ ಮಯಾ ।
ತದೇತದ್ವಿದ್ಧಿ ವಾಚಂ ತ್ವಂ ಪಶ್ಚಾನ್ನೀತಾಂ ಪ್ರಥಾಮಿಹ ॥೪೨॥

ಬ್ರಹ್ಮೈವ ಸೋಽಸ್ಮಿ ಸಂಪನ್ನಃಸೃಷ್ಟೇಃ ಕರ್ತಾ ಜಗದ್ಗುರುಃ ।
ತತೋ ಮನೋಮಯೇನೈವ ಕಲ್ಪಿತಾಃ ಸೃಷ್ಟಯೋ ಮಯಾ ॥೪೩॥

---

೪೦. ಆ ದೇಹವೇ ನಾನೆಂಬ ಪ್ರತ್ಯಯದಿಂದ ಕೂಡಿದ್ದ ನಾನು ಶಬ್ದ ಮಾಡುವುದಕ್ಕೆ ಆರಂಭಿಸಿದೆನು. ಶೂನ್ಯದಲ್ಲಿ ಮಲಗಿರುವವನು ಸ್ವಪ್ನದಲ್ಲಿ ಹಾರಾಡುವದು ಹೇಗೋ, ಹಾಗೆ ನಾನು ಶಬ್ದ ಮಾಡಿದೆನು.

(೩೯–೪೦. ತತ್ರ ತಸ್ಮಿನ್ಪೂರ್ವಕಲ್ಪಿತೇ ಬ್ರಹ್ಮಾತ್ಮಕ ವೇಷೇ ಚಿರಂ ಯದಾ ಸ್ಥಿತಸ್ತದಾ ತದಂತಃ ಅಹಂ ಸ್ವೇನೈವ ಚತುರ್ಮುಖದೇಹವಾನ್ ಸೃಷ್ಟಃ॥ ತೇನ ತಾದೃಶದೇಹಪ್ರತ್ಯಯೇನ ಸ್ವಪ್ನೇ ಉಡ್ಡೀನೋ ನಭಸಿ ಸಂಚರನ್ ನರೋ ಯಥಾರವಂ ಕರೋತಿ ತಥಾ ಶಬ್ದಂ ಕರ್ತುಂ ಪ್ರವೃತ್ತವಾನ್—ತಾ. ಪ್ರ.)

೪೧. ಅನಂತರದಲ್ಲಿ ಮೊದಲು ಮಾಡಿದ ಯಾವ ಶಬ್ದವುಂಟೋ ಅದು ಹುಡುಗರ ಕೂಗಿನಂತೆ ಇತ್ತು. ಅದೇ ಓಂ ಎಂದಾಯಿತು. ಅದನ್ನೇ ಓಂಕಾರ, ಪ್ರಣವ, ಎಂದು ಎಲ್ಲರೂ ಅಂಗೀಕರಿಸಿದರು : ಅದು ಹಾಗೆಯೇ ಪ್ರಸಿದ್ಧವಾಯಿತು.

೪೨. ಆಗ ಕನಸು ಕಾಣುತ್ತಿರುವವನು ಮಾತನಾಡುವಂತೆ, ನಾನು ಆಡಿದ ಮಾತುಗಳೇ ಮುಂದೆ ವಾಕ್ಕು ಎಂದು ಪ್ರಸಿದ್ಧಿಯಾಯಿತು.

*(೪೧–೪೨ ತತ್ರ ವಿಶೇಷಾಭಿಲಾಪೇ ವಿನಿಗಮಕಾ ಭಾವಾತ್ ಸರ್ವಸಾಧಾರಣಾರ್ಥಕಃ ಶಬ್ದಸಮಷ್ಟ್ಯಾತ್ಮಾ ಓಂಕಾರ ಏವ ಪ್ರಥಮ ಮುಚ್ಚಾರಿತಃ-ಯತ್ಕಿಂಚಿತ್, ವ್ಯಾಹೃತಿ ಗಾಯತ್ರೀ ವೇದಾದಿ ಪ್ರಾಗಭ್ಯಸ್ತಂ ಗದಿತಂ ॥—ತಾ. ಪ್ರ)

೪೩. ಇಂತಹ ನಾನು ಬ್ರಹ್ಮನಾಗಿ, ಸೃಷ್ಟಿಕರ್ತನಾಗಿ, ಜಗದ್ಗುರುವಾದೆನು. ಅನಂತರ ಮನೋಮಯದಿಂದಲೇ ನಾನು ಸೃಷ್ಟಿಗಳನ್ನು ಕಲ್ಪಿಸಿದೆನು.

ಏವಮಸ್ಮಿ ಸಮುತ್ಪನ್ನೋ ನ ತು ಜಾತೋಽಸ್ಮಿ ಕಿಂಚನ ।
ದೃಷ್ಟವಾನಸ್ಮಿ ಬ್ರಹ್ಮಾಂಡಂ ಬ್ರಹ್ಮಾಂಡಾಂತಂ ನ ಕಿಂಚನ ॥೪೪॥

ಏವಂ ಜಗತಿ ಸಂಪನ್ನೇ ಮನ್ಯೇತಸ್ಮಿನ್ಮನೋಮಯೇ ।
ನ ಕಿಂಚಿತ್ತತ್ರ ಸಂಪನ್ನಂ ತಚ್ಛೂನ್ಯಂ ವ್ಯೋಮ ಕೇವಲಂ ॥೪೫॥

ಇತ್ಥಂ ಸಂಶೂನ್ಯಮೇವೇದಂ ಸರ್ವಂ ವೇದನಮಾತ್ರಕಂ ।
ಮನಾಗಪಿ ನ ಸಂತ್ಯೇತೇ ಭಾವಾಃ ಪೃಥ್ವ್ಯಾದಯಃ ಕಿಲ ॥೪೬॥

ಜಗನ್ಮೃಗತೃಡಂಬೂನಿ ಭಾಂತಿ ಸಂವಿದಿ ಸಂವಿದಃ ।
ನ ಬಾಹ್ಯಮಸ್ತಿ ನೋ ಬಾಹ್ಯೇ ಖೇ ತದ್ವ್ಯೋಮ ತಥಾ ಸ್ಥಿತಂ ॥೪೭॥

---

೪೪. ಹೀಗೆ, ನಾನು ಸಮುತ್ಪನ್ನನಾದೆನಲ್ಲದೆ ಹೊಸದಾಗಿ ಹುಟ್ಟಿಬರಲಿಲ್ಲ. ನಾನು (ನನಗಿಂತ ಪ್ರತ್ಯೇಕವಾದ) ಬ್ರಹ್ಮಾಂಡವನ್ನು ಕಾಣಲಿಲ್ಲ. ಬ್ರಹ್ಮಾಂಡದ ಕೊನೆಯನ್ನೂ ಕಾಣಲಿಲ್ಲ.

(ಸ್ವೀಯ ಸ್ಥೂಲದೇಹಭೂತಂ ಬ್ರಹ್ಮಾಂಡಂ ಸಾವರಣಂ। ಬ್ರಹ್ಮಾಂಡಾಂತಂ ಬ್ರಹ್ಮಾಂಡಬಹಿರ್ಭೂತಂ ॥—ತಾ. ಪ್ರ.)

೪೫. ನನ್ನ ಮನಸ್ಸಿನಿಂದಲೇ ಆದ ಜಗತ್ತೆಲ್ಲವೂ ಹೀಗೆ ಸಂಪೂರ್ಣವಾಗಲು, ಹೊಸದಾಗಿ ಏನೂ ಹುಟ್ಟಿದಂತಾಗಲಿಲ್ಲ. ಏಕೆಂದರೆ, ಅವೆಲ್ಲಕ್ಕೂ ಕಾರಣವಾದ ಆಕಾಶವೇ ಶುದ್ಧವಾಗಿ ಶೂನ್ಯವಾಗಿರುವಾಗ, ಅದರಲ್ಲಿ ಹುಟ್ಟುವುದೂ ಆಕಾಶವಲ್ಲದ ಇನ್ನೇನಾಗಿದ್ದೀತು ?

೪೬. ಹೀಗೆ ಇದಂ ಎಂಬ ಸರ್ವವೂ (ಆಕಾಶದಂತೆ) ಸಂಪೂರ್ಣವಾಗಿ ಶೂನ್ಯವೇ ಆಗಿರುವುದು. ಎಲ್ಲವೂ ಒಂದು ಸಂವೇದನ ಮಾತ್ರವು. (ನಾನು ಈಗ ಹೇಳಿದ ನ್ಯಾಯವು ಎಲ್ಲಾ ಸರ್ಗಗಳಿಗೂ ಅನ್ವಯಿಸುವುದು.) ಈ ಭಾವಾಭಾವಗಳೆಲ್ಲವೂ ಪ್ರತ್ಯೇಕಗಳಾಗಿ ಇಲ್ಲವೇ ಇಲ್ಲ. ಪೃಥಿವ್ಯಾದಿಗಳು ಘನವಾಗಿರುವುವು: ಅವಾದರೂ ಉಂಟೇ ಎಂದರೆ ಅವೂ ಇಲ್ಲ.

೪೭. ಜಗತ್ತೆಂಬ ಮೃಗತೃಷ್ಣಾಜಲವು ಸಂವಿತ್ತಿನಲ್ಲಿ ಸಂವಿತ್ತಿನಿಂದಲೇ ಮೆರೆಯುವುದು. ಅದು ಬಾಹ್ಯವಾಗಿ (ಬೇರೆಯಾಗಿ) ಇಲ್ಲ. ಅದು ಪ್ರತ್ಯೇಕವಾದ ಆಕಾಶದಲ್ಲಿಲ್ಲ : ಆಕಾಶವೇ ಆ ರೂಪವಾಗಿರುವುದು.

ಮರೌ ನಾಸ್ತ್ಯೇವ ಸಲಿಲಂ ಸಂವಿತ್ಪಶ್ಯತಿ ತತ್ತಥಾ ।
ನಿರ್ಮೂಲಮಂತಃ ಸಂತಪ್ತಾ ಸ್ವಸಂಭ್ರಮವತೀ ಭ್ರಮಂ ॥೪೮॥

ನಾಸ್ತ್ಯೇವ ಬ್ರಹ್ಮಣಿ ಜಗತ್ಸಂವಿತ್ಪಶ್ಯತಿ ತತ್ತಥಾ ।
ನಿರ್ಮೂಲಮೇವ ಸಂವಿತ್ತ್ವಾದೇವಂ ಭ್ರಾಂತೇಶ್ಚ ಸಂಭ್ರಮಂ ॥೪೯॥

ಅಸದೇವೇದಮಾಭಾತಿ ಹೃದ್ಯೇವ ಜಗದಾತತಂ ।
ಸಂಕಲ್ಪನ ಮನೋರಾಜ್ಯಂ ಯಥಾ ಸ್ವಪ್ನಪುರಾದಿವತ್ ॥೫೦॥

ಪಾರ್ಶ್ವಸುಪ್ತಜನಸ್ವಪ್ನಸ್ತಚ್ಚಿತ್ತಾವೇಶನಂ ವಿನಾ ।
ಯಥಾ ನ ಕಿಂಚಿತ್ತಚ್ಚಿತ್ತಾವೇಶನಾದನುಭೂಯತೇ ॥೫೧॥

---

೪೮. ಮರುಭೂಮಿಯಲ್ಲಿ ನೀರುಂಟೆ ? ಆದರೂ ಸಂವಿತ್ತು ಅಲ್ಲಿರುವಂತೆ ಭಾವಿಸಿಕೊಂಡು ನೋಡುವುದು. ಅಂತಸ್ಸಂತಪ್ತವಾಗಿ ನೀರು ಬೇಕು ಬೇಕು ಎಂದು ಕೊಳ್ಳುತ್ತ ನೀರಿಗಾಗಿ ಸಂಭ್ರಮಪಡುತ್ತಿರುವ ಸಂವಿತ್ತೂ, ಮೂಲವಿಲ್ಲದ ಭ್ರಮ ವನ್ನು ವಹಿಸಿ ಮರುವಿನಲ್ಲಿ ನೀರನ್ನು ಕಾಣುವುದು.

೪೯. ಹಾಗೆಯೇ, ಬ್ರಹ್ಮದಲ್ಲಿ ಜಗತ್ತು ಇಲ್ಲ. ಆದರೂ ಸಂವಿತ್ತು ಇದೆ ಯೆನ್ನುವುದು : ಎಂದುಕೊಂಡು ಕಾಣುವುದು. ಆ ಸಂವಿತ್ತಾದರೂ ಸಮೂಲವಾ ಗಿದೆಯೆ ಎಂದರೆ ಅದೂ ನಿರ್ಮೂಲವು. ಅದರಿಂದ ಆ ಸಂವಿತ್ತು ಕೂಡ ಭ್ರಾಂತಿಯ ಸಂಭ್ರಮವು.

೫೦. ಅದರಿಂದ, ಇದಂ ಎನ್ನಿಸಿಕೊಳ್ಳುವ ಸರ್ವವೂ ವಾಸ್ತವ್ಯವಾಗಿ ಇಲ್ಲ ವೇ ಇಲ್ಲವಾದರೂ ಚಿತ್ತದಲ್ಲಿಯೇ ವಿಸ್ತಾರವಾಗಿರುವ ಜಗತ್ತಿನಂತೆ ಕಾಣಿಸುವುದು. ಇದೆಲ್ಲವೂ ಸಂಕಲ್ಪನವು. ಮನೋರಾಜ್ಯವು. ಇದಿಷ್ಟೂ ಸ್ವಪ್ನಪುರಾದಿಗಳಂತೆಯೇ !

೫೧. ಮಗ್ಗುಲಲ್ಲಿ ಮಲಗಿರುವವನು ಕಾಣುತ್ತಿರುವ ಕನಸು, ಅವನ ಚಿತ್ತ ದಲ್ಲಿ ಪ್ರವೇಶ ಮಾಡಿದವನಿಗೆ ಕಾಣಿಸಬಹುವೇ ಹೊರತು, ಇತರರಿಗೆ ಹೇಗೆ ಎಳ್ಳ ಷ್ಟೂ ತಿಳಿಯುವುದಿಲ್ಲವೋ ಹಾಗೇ, ಚಿತ್ತದ ಆವೇಶನವುಳ್ಳವರಿಗೆ ಮಾತ್ರ ಈ ಜಗತ್ತು ಉಂಟು.

(ಪರಕಾಯಪ್ರವೇಶೇನ ಸ್ವಪ್ನದೃಷ್ಟಿ ಚಿತ್ತಾವೇಶನಾತ್ ಯೋಗಿಭಿರನು ಭೂಯತೇ— ತಾ. ಪ್ರ.)

ತಥಾ ಜಗತ್ತದ್ವ್ಯಪದಂ ಸಂಪ್ರವಿಶ್ಯಾನುಭೂಯತೇ ।
ಆದರ್ಶಬಿಂಬಿತಾಕಾರಂ ದೃಷ್ಟಮಪ್ಯನ್ಯಥಾಪ್ಯಸತ್ ॥೫೨॥

ಆದಿಭೌತಿಕಭಾವೇನ ನೇತ್ರೇಣ ಯದಿ ಲಕ್ಷ್ಯತೇ ।
ತತ್ತನ್ನ ದೃಶ್ಯತೇ ಕಿಂಚಿದ್ಗಿರಿರೇವ ಪ್ರದೃಶ್ಯತೇ ॥೫೩॥

ಆತಿವಾಹಿಕದೇಹೇನ ಪರಂ ಬೋಧದೃಶಾ ಯದಿ ।
ಪ್ರೇಕ್ಷ್ಯತೇ ದೃಶ್ಯತೇ ಸರ್ಗಃ ಪರಮಾತ್ಮೈವ ಚಾಮಲಃ ॥೫೪॥

ಸರ್ವತ್ರ ಸರ್ಗನಿರ್ವಾಣಂ ಪ್ರಜ್ಞಾಲೋಕೇನ ಲಕ್ಷ್ಯತೇ ।
ಬ್ರಹ್ಮಾತ್ಮೈವಾನ್ಯಥಾ ಚೇತ್ತನ್ನ ಕಿಂಚಿದಭಿಲಕ್ಷ್ಯತೇ ॥೫೫॥

---

೫೨. ಮೇಲೆ ಹೇಳಿದಂತೆಯೇ ಜಗತ್ ಎಂಬುದೂ ಒಂದು ಚಿಪ್ಪಿಲೆಯು (ಹೊರಗೆ ನೋಡಿದಾಗ ಏನೂ ಇಲ್ಲದಿದ್ದರೂ) ಒಳಗೆ ಪ್ರವೇಶಮಾಡಿದರೆ, ಏನೇನೋ ಅನುಭವವಾಗುವುದು. ಅದಷ್ಟೂ ಆದರ್ಶವಲ್ಲಿ ಕಂಡ ಪ್ರತಿಬಿಂಬದಂತೆ ಇರುವುದು. ಕಂಡರೂ, ದೃಗ್ಗೋಚರವಾದರೂ ಅದಷ್ಟೂ ಅಸತ್ಯವು.

೫೩. ಆದಿಭೌತಿಕವಾದ ಭಾವವುಳ್ಳ ಚರ್ಮಚಕ್ಷುಸ್ಸಿನಿಂದ ಕಾಣುವುದು ಎಂದರೆ, ಆ ಕಾಣುವುದು ನಿಜವಲ್ಲ. ಹಿಂದೆ ನಾನು ಕಂಡ ಲೋಕಾಲೋಕಗಿರಿಯಂತೆ ಅದೂ ಒಂದು ಗಿರಿಯಾಗಿ ಕಾಣುವುದು.

೫೪. ಆತಿವಾಹಿಕದೇಹದಿಂದ, ಉತ್ತಮವಾದ ಜ್ಞಾನಚಕ್ಷುಸ್ಸಿನಿಂದ ನೋಡಿದರೆ, ಆಗ ಸರ್ಗವೆಲ್ಲವೂ ಅಮಲವಾದ ಪರಮಾತ್ಮವೇ ಎಂಬುವುದು ಗೋಚರವಾಗುವುದು.

೫೫. ಎಲ್ಲೆಲ್ಲಿಯೂ ಅಷ್ಟೇ! ಸರ್ಗನಿರ್ವಾಣವು ಎಂದರೆ ಸರ್ಗದ ಸತ್ಯಾಸತ್ಯತೆಯು ಪ್ರಜ್ಞಾದೃಷ್ಟಿಯಿಂದಲೇ ತಿಳಿಯುವುದು. ಸರ್ಗವೆಲ್ಲವೂ ಬ್ರಹ್ಮಾತ್ಮಕವಾದುದು. ಹಾಗಲ್ಲದೆ ಬೇರೆಯಾಗಿದೆ ಎನ್ನುವುದಾದರೆ, ಆ ಬೇರೆಯಾಗಿರುವುದು ಯಾವುದೂ ಗುರುತು ಕೂಡ ಸಿಕ್ಕುವುದಿಲ್ಲ.

ಯತ್ಪಶ್ಯತ್ಯವದಾತಾ ಧೀಃ ಸೋಪಪತ್ತಿವಿಚಾರಣಾ ।
ನ ತನ್ನೇತ್ರೈಸ್ತ್ರಿಭಿಃ ಶರ್ವೋ ನೇಂದ್ರೋ ನೇತ್ರಶತೈರಪಿ ॥೫೬॥

ಯಥಾ ಖಮಾವೃತಂ ಸರ್ಗೈಸ್ತಥಾ ಭೂರಿತಿ ಬುದ್ಧವಾನ್ ।
ತದಾಹಮಭವಂ ಧ್ಯಾತಾ ಧರಾಧಾರಣಯಾನ್ವಿತಃ ॥೫೭॥

ತಯಾ ಧರಾಧಾರಣಯಾ ಧರಾರೂಪಧರೋಽಭವಂ ।
ಅತ್ಯಜನ್ನೇವ ಚಿದ್ವ್ಯೋಮವಪುಃ ಸಮ್ರಾಡಿವಾಚಿರಾತ್ ॥೫೮॥

---

೫೬. ಯಾವುದು ಶುದ್ಧವಾದ ಬುದ್ಧಿಗೆ ಗೋಚರವಾಗುವುದೋ ಅದೇ ಉಪಪತ್ತಿಯಿಂದ ಕೂಡಿ ವಿಚಾರಣದಿಂದ ಸಿದ್ಧವಾಗುವುದು. ಅದನ್ನು ಶರ್ವನು ಮೂರು ಕಣ್ಣುಗಳಿದ್ದರೂ, ಕಾಣಲಾರನು. ಇಂದ್ರನು ನೂರುಕಣ್ಣುಗಳಿದ್ದರೂ ಕಾಣಲಾರನು.

೫೭ ಆಕಾಶವು ಹೇಗೆ ಸೃಷ್ಟಿಗಳಿಂದ ತುಂಬಿದೆಯೋ ಹಾಗೆಯೇ ಭೂಮಿಯೂ ಸರ್ಗಗಳಿಂದ ತುಂಬಿದೆಯೆಂಬುದನ್ನು ತಿಳಿದೆನು. ಆಗ ನಾನು ಭೂಧಾರಣದಿಂದ ಕೂಡಿ ಧ್ಯಾನದಲ್ಲಿ ಕೂತೆನು.

(ತತ್ರ ಸ್ವಸ್ಯ ತತ್ವಜ್ಞಸ್ಯ ಯದಾ ಜೀವನ್ಮುಕ್ತಯೋಗಿದೃಶಾ ಪಶ್ಯತ ಆಕಾಶಮಿವ ಭೂರಪಿ ಸರ್ವತಃ ಸರ್ಗೈರ್ವ್ಯಾಪ್ತೇತಿ ಬುದ್ಧಿರುತ್ಪನ್ನಾ ತದಾಕ್ರಮಾದ್ಭೂಮ್ಯಾದಿ ಏಕೈಕಭೂತಾಹಂಭಾವಧಾರಯಾ ಯದ್ಯತ್ಕೌತುಕಂ ಸ್ವೇನದೃಷ್ಟಂ ತತ್ಸರ್ವಂ ವಿಸ್ತರಾದ್ವರ್ಣಯಿಷ್ಯನ್ ಪ್ರಥಮಂ ಧರಾಧಾರಣಾದ್ದೃಷ್ಟಂ ತದ್ವಕ್ತುಮುಪಕ್ರಮತೇ—ಯಥೇತಿ–ತಾ. ಪ್ರ.)

೫೮. ಧರಾಧಾರಣವನ್ನು ಧರಿಸುತ್ತಲೂ ನಾನು ಭೂಮಿಯ ರೂಪವನ್ನು ಚಿದ್ವ್ಯೋಮ ಶರೀರವನ್ನು ಬಿಡದೆಯೇ ಪಡೆದೆನು. ಅದು ಹೇಗೆನ್ನುವೆಯೋ ? ಸಮ್ರಾಟನು ತನ್ನ ದೇಹದ ಅಭಿಮಾನವನ್ನು ತೊರೆಯದೆಯೇ ತನ್ನ ಸಾಮ್ರಾಜ್ಯದ ಅಭಿಮಾನವನ್ನು ವಹಿಸುವಂತೆ ಅದು.

ಧರಾಧಾರಣಸಾಮರ್ಥ್ಯಾತ್ ಚೈವ ಧರಾಧಾತೂದರಂ ಗತಃ ।
ದ್ವೀಪಾದ್ರಿ ತೃಣ ವೃಕ್ಷಾದಿ ದೇಹೋಽಹಮನುಭೂತವಾನ್ ॥೫೯॥

ಸಂಪನ್ನೋಽಸ್ಮ್ಯಥ ಭೂಪೀಠಂ ನಾನಾವನತನೂರುಹಂ ।
ನಾನಾರತ್ನಾವಲೀವ್ಯಾಪ್ತಂ ನಾನಾನಗರಭೂಷಣಂ ॥೬೦॥

ಗ್ರಾಮಗಹ್ವರಸರ್ವಾಗ್ನಂ ಪಾತಾಲಸುಷರೋದರಂ ।
ಕುಲಾಚಲಭುಜಾಶ್ಲಿಷ್ಟದ್ವೀಪಾಬ್ಧಿವಲಯಾನ್ವಿತಂ ॥೬೧॥

ತೃಣೌಘತನುರೋಮಾಢ್ಯಂ ಗಿರಿಖಂಡಕಗುಲ್ಮಕಂ ।
ದಿಗ್ವಾರಣಕಟವ್ಯೂಹಧೃತಂ ಶೇಷಶಿರಃಶತೈಃ ॥೬೨॥

---

೫೯. ಧರಾಧಾರಣ ಸಾಮರ್ಥ್ಯದಿಂದ ಭೂಧಾತುವಿನ ಉದರವನ್ನು ಪ್ರವೇಶಿಸಿ, ದ್ವೀಪ, ಅದ್ರಿ, ತೃಣ, ವೃಕ್ಷ ಮೊದಲಾದವುಗಳನ್ನುಳ್ಳ ದೇಹವನ್ನು ನಾನು ಅನುಭವಿಸಿದೆನು.

(ಧರಾಧಾತುಃ ಭೂಮ್ಯಭಿಮಾನೀ ಜೀವಃ, ತದುದರಂ, ತದ್ಬುದ್ಧಿ ತಾದಾತ್ಮ್ಯಂ ಗತಸ್ಸನ್—ತಾ. ಪ್ರ.)

೬೦. ಆಗ ನಾನು ಭೂಪೀಠವೇ ಆದೆನು. ಆಗ ನಾನಾ ವನಗಳು ರೋಮಗಳಾದುವು. ನಾನಾ ರತ್ನಾವಲಿಗಳು ನನ್ನಲ್ಲಿ ತುಂಬಿದ್ದುವು. ನಾನಾ ನಗರಗಳೆಂಬ ಒಡವೆಗಳು ನನ್ನ ಮೈಯಲ್ಲಿದ್ದುವು.

೬೧. ಗ್ರಾಮ, ಗಹ್ವರ, ಎಂಬ ಪರ್ವಗಳು, ಪಾತಾಲವೆಂಬ ತೂತು ಉಳ್ಳ ಉದರವು, ಕುಲಾಚಲ ಭುಜಗಳಿಂದ ಕೂಡಿರುವ ದ್ವೀಪಗಳುಳ್ಳ ಅಬ್ಧಿಗಳು ಎಂಬ ವಲಯಗಳು ಇದ್ದುವು.

೬೨. ತೃಣಸಮೂಹಗಳೆಂಬ ಸೂಕ್ಷ್ಮರೋಮಗಳು, ಗಿರಿಖಂಡಗಳೂ ಗುಲ್ಮಗಳೂ ಉಳ್ಳ ಈ ಭೂಮಿಯನ್ನು ದಿಗ್ಗಜಗಳು ವಹಿಸಿದ್ದುವು: ಶೇಷನು ತನ್ನ ಸಾವಿರ ಹೆಡೆಗಳಲ್ಲಿ ಧರಿಸಿದ್ದನು.

ಕ್ರಿಯಮಾಣಂ ಮಹೀಪಾಲೈಃ ಶೋಭಮಾನೇಭ ತಂತುಭಿಃ ।
ಪ್ರಾಣಿಭಿರ್ಭುಜ್ಯಮಾನಾಂಗಂ ವರ್ಧಮಾನಂ ವ್ಯವಸ್ಥಯಾ ॥೬೩॥

ಹಿಮವದ್ವಿಂಧ್ಯಸುಸ್ಕಂಧಂ ಸುಮೇರೂದಾರಕಂಧರಂ ।
ಗಂಗಾದಿ ಸರಿದಾಪೂರ ಮುಕ್ತಾಹಾರ ರಣತ್ತನುಂ ॥೬೪॥

ಗುಹಾಗ ನ ಕಚ್ಛಾದಿಸಾಗರಾದರ್ಶಮಂಡಲಂ ।
ಮರೂಷರ ಸ್ಥಲ ಶ್ವೇತ ಸುವರಾಂಬರ ಸುಂದರಂ ॥೬೫॥

ಭೂತಪೂರ್ವೈಃ ಪರಾಪೂರ್ಣಂ ಪರಿಪೂತಂ ಮಹಾರ್ಣವೈಃ ।
ಅಲಂಕೃತಂ ಪುಷ್ಪವನೈಃ ಸಮಾರಬ್ಧಂ ರಜೋಘನೈಃ ॥೬೬॥

---

೬೩. ಶೋಭಿಸುತ್ತಿರುವ ಆನೆಗಳೆಂಬ ಸೇನಾಜಾಲ ತಂತು ಗ್ರಂಥಿಗಳಿಂದ ಕೂಡಿರುವ ಚತುರಂಗ ಬಲಗಳುಳ್ಳ ಮಹೀಪಾಲರು ಅಲ್ಲಲ್ಲಿ ರಾಜ್ಯಕ್ಕಾಗಿ ಹೊಡೆದಾಡುವರು. ಪ್ರಾಣಿಗಳು ಅಲ್ಲಲ್ಲಿ ಭೋಗಪಡುತ್ತಿರುವುವು. ವ್ಯವಸ್ಥಾಪೂರ್ವಕವಾಗಿ ನೋಡಿಕೊಂಡರೆ ವರ್ಧಿಸುವ (ಈ ಭೂಭಾಗವು ನನಗೆ ಅಂಗವಾಗಿತ್ತು.)

೬೪. ಹಿಮವಂತ, ವಿಂಧ್ಯ, ಎಂಬ ಒಳ್ಳೆಯ ಸ್ಕಂಧಗಳನ್ನುಳ್ಳ, ಸುಮೇರುವಿನ ಉದಾರವಾದ ಕಂಧರವನ್ನುಳ್ಳ, ಗಂಗಾದಿ ಮಹಾನದಿಗಳೆಂಬ ದೊಡ್ಡ ದೊಡ್ಡ ಮುಕ್ತಾಹಾರಗಳನ್ನುಳ್ಳ,

೬೫. ಗುಹಾ, ಅರಣ್ಯ, ಕಚ್ಛ (ಪರ್ವತಗಳ ಮಗ್ಗುಲಿನ ಪ್ರದೇಶ) ಮೊದಲಾದ ಭಾಗಗಳನ್ನುಳ್ಳ ಸಾಗರವೆಂಬ ಕನ್ನಡಿಯನ್ನುಳ್ಳ, ಮರು, ಊಷರ, ಸ್ಥಲ, ಗಳೆಂಬ ಬಿಳಿಯ ದುಕೂಲವನ್ನುಟ್ಟು ಸುಂದರವಾದ ಭೂಮಿಯೇ ನಾನಾಗಿದ್ದೆನು.

೬೬. ಮೊದಲು ಬೇಕಾದಷ್ಟು ಪ್ರಾಣಿಗಳು ಮೊದಲಾದವನ್ನುಳ್ಳುದಾಗಿದ್ದು ಈಗೆಲ್ಲ ಜಲರಾಶಿಯಾಗಿರುವ ಮಹಾಸಾಗರಗಳಿಂದ ಚೆನ್ನಾಗಿ ತುಂಬಿರುವ, ಪುಷ್ಪವನಗಳಿಂದ ಅಲಂಕೃತವಾಗಿರುವ ರಜೋಧೂಳಿಯನ್ನು ಲೇಪಿಸಿಕೊಂಡಿರುವ,

ನಿತ್ಯಂ ಕೃಷೀವಲೈಃ ಕೃಷ್ಟಂ ವಿಜಿತಂ ಶಿಶಿರಾನಿಲೈಃ ।
ತಾಪಿತಂ ತಪಸ್ತೈಸ್ತಪ್ತೈರುಕ್ಷಿತಂ ಪ್ರಾವೃಡಂಬುಭಿಃ　　　　॥೧೭॥

ವಿಪುಲಾಗ್ರಸ್ಥಲೋರಸ್ಕ ಪದ್ಮಾಕರಕೃತೇಕ್ಷಣಂ ।
ಸಿತಾಸಿತಘನೋಷ್ಣೀಷಂ ದಶಾಶೋದರ ಮಂದಿರಂ　　　　॥೧೮॥

ಲೋಕಾಲೋಕಮಹಾಖಾತ ವಲಯೋಗ್ರಾಸ್ಯಭೀಷಣಂ ।
ಅನಂತಭೂತಸಂಘಾತ ಪರಿಸ್ಪಂದೈಕಚೇತನಂ　　　　॥೧೯॥

ವ್ಯಾಪ್ತಮಂತರ್ಬಹಿಶ್ಚೈವ ನಾನಾಭೂತಗಣೈಃ ಪೃಥಕ್ ।
ದೇವದಾನವಗಂಧರ್ವೈರ್ಬಹಿರಂತಸ್ತು ಕೀಟಕೈಃ　　　　॥೨೦॥

---

(ಪೂರ್ವಂಭೂತ್ಯೈಃ ಭೂತಪೂರ್ವೈಃ ಮಹಾರ್ಣವೈಃ ಪ್ರಲಯಕಾಲೇ ಪರಾಪೂರ್ಣ ಮತ ಏವಸಾಂಪ್ರತಂ ಸ್ವಾತ್ಮ್ಯೋದ್ಧೃತಮಿವ ಪರಿತಃ ಪೂತಃ ಪವಿತ್ರಂ। ಪುಷ್ಪವನೈರ್ಮಾಲ್ಯೈರಿವಾಲಂಕೃತಂ। ಚಂದನಸ್ಥಾನೀಯೈ ರಜೋಘನೈಸ್ಸಮಾಲಬ್ಧಂ ಲಿಪ್ತಂ—ತಾ. ಪ್ರ.)

೧೭. ದಿನದಿನವೂ ಕೃಷೀವಲರು ಉಳುತ್ತಿರುವ, ತಂಗಾಳಿಗಳು ನಿತ್ಯವೂ ಬೀಸುತ್ತಿರುವ, ಚೆನ್ನಾಗಿ ಬೆಳಗುತ್ತಿರುವ ಸೂರ್ಯಕಿರಣಗಳಿಂದ ಸುಡುತ್ತಿರುವ, ಮಳೆಯ ನೀರುಗಳಿಂದ ತೊಯ್ಯುವ,

೧೮. ವಿಪುಲವಾದ ಸಮಭೂಮಿ ಪ್ರದೇಶಗಳೆಂಬ ಎದೆಯೂ, ಪದ್ಮಾಕರಗಳೆಂಬ ಕಣ್ಣುಗಳೂ, ಬೆಳ್ಳಗೂ ಕಪ್ಪಗೂ ಇರುವ ಮೋಡಗಳೆಂಬ ರುಮಾಲೂ, ಹತ್ತುದಿಕ್ಕುಗಳನ್ನು ಒಳಗೊಂಡಿರುವ ಮನೆಯೂ, (ಇತ್ತು)

೧೯. ಲೋಕಾಲೋಕ ಗಿರಿಯ ಮಗ್ಗುಲಲ್ಲಿ ಬಳಸಿರುವ ಮಹಾಖಾತವೆಂಬ ಉಗ್ರವೂ ಭೀಷಣವೂ ಆದ ಮುಖವು. ಅನಂತವಾದ ಭೂತಸಂಘಾತಗಳ ವ್ಯಾಪಾರವೊಂದರಿಂದಲೇ ಸಚೇತನವಾಗಿರುವಂತೆ ಕಾಣುವುದು.

೨೦. ಅಂತರ್ಬಾಹ್ಯಗಳೆರಡರಲ್ಲೂ ತುಂಬಿರುವ ದೇವದಾನವ ಗಂಧರ್ವರುಗಳಿಂದಲೂ ನಾನಾ ಭೂತಗಣಂಗಳಿಂದಲೂ, ಕೀಟಕಗಳಿಂದಲೂ ತುಂಬಿತ್ತು.

ಪಾತಾಲೇಂದ್ರಿಯರಂಧ್ರೇಷು ನಾಗಾಸುರಕೃಮಿವ್ರಜೈಃ ।
ಸಪ್ತಸ್ವರ್ಣವಕೋಶೇಷು ನಾನಾಜಾತಿಜಲೇಚರೈಃ ॥೭೧॥

ವ್ಯಾಪ್ತಂ ನದೀವನಸಮುದ್ರದಿಗಂತಶೈಲ ।
ದ್ವೀಪಾಖ್ಯಜಂತುವಿಷಯಸ್ಥಲಜಂಗಲೌಘೈಃ ॥
ನಾನಾವಲೀವಲಿತಮಂಡಲಕೋಶಖಂಡಂ ।
ವಲ್ಲೀಸರಃಸರಿದರಾತಿಗಣಾಬ್ಧಖಂಡೈಃ ॥೭೨॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಪಾಷಾಣೋಪಾಖ್ಯಾನೇ ಪಾರ್ಥಿವಧಾತ್ವಂತರ್ಗತ ಜಗದಾನಂತ್ಯ ಪ್ರತಿಪಾದನಂ ನಾಮ ಸಪ್ತಾಶೀತಿತಮಃ ಸರ್ಗಃ

---

೭೧. ಪಾತಾಲಗಳೆಂಬ ಇಂದ್ರಿಯ ರಂಧ್ರಗಳಲ್ಲಿ ನಾಗಾಸುರ ಕೃಮಿಗಳ ಗುಂಪುಗಳಿಂದಲೂ ಅರ್ಣವಗಳೆಂಬ ಸಪ್ತಕೋಶಗಳಲ್ಲಿ ನಾನಾ ಜಾತಿಯ ಜಲಚರಗಳಿಂದಲೂ ಪೂರ್ಣವಾಗಿತ್ತು.

೭೨. ಆ ಭೂಪೀಠಸ್ವರೂಪವಾದ ನನ್ನ ದೇಹವು ನದಿ, ವನ, ಸಮುದ್ರ, ದಿಗಂತ, ಶೈಲ, ದ್ವೀಪಗಳಿಂದಲೂ, ಜಂತುಗಳಿಂದಲೂ, ದೇಶ, ಸ್ಥಲ, ಜಂಗಲಗಳಿಂದಲೂ, ನಾನಾ ಜಾತಿಯ ಜನರುಗಳ ಗಣಗಳಿಂದ ತುಂಬಿರುವ ದೇಶಗಳ ಖಂಡಗಳಿಂದಲೂ, ಬಳ್ಳಿಗಳಂತೆ ಹರಡಿರುವ ಸರಸ್ಸು ನದಿ ಮೊದಲಾದವುಗಳಿಂದಲೂ ಆರಾತಿ ಭೂತವಾದ ಅಬ್ಧಖಂಡಗಳಿಂದಲೂ ತುಂಬಿತ್ತು.

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ "ಪಾರ್ಥಿವಧಾತ್ವಂತರ್ಗತ ಜಗದಾನಂತ್ಯ ಪ್ರತಿಪಾದನ" ಎಂಬ ಎಂಭತ್ತೇಳನೆಯ ಸರ್ಗವು



# ಅಷ್ಟಾಶೀತಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚಃ—

ಭೂಪೀಠೇನ ಸತಾ ತತ್ರ ಮಯಾ ತದನು ಮಾನವ ।
ಅನುಭೂತಂ ನದನದೀಸ್ವಸಂವೇದನಸಂಸ್ಥಿತೇಃ ॥೧॥

ಕ್ವಚಿನ್ಮರಣಸಾಕ್ರಂದನಾರೀಕರುಣವೇದನಂ ।
ಕ್ವಚಿದುತ್ತಾಂಡವಸ್ತ್ರೈಣ ಮಹೋತ್ಸವಮಹಾಸುಖಂ ॥೨॥

ಕ್ವಚಿದ್ದುರ್ವಾರದುರ್ಭಿಕ್ಷದುರಾಕ್ರಂದಂ ಮರೀಹಿತಂ ।
ಕ್ವಚಿತ್ಸಕಲಸಸ್ಯೌಘಸಂಪನ್ನಘನಸೌಹೃದಂ ॥೩॥

---

# ಎಂಭತ್ತೆಂಟನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧. ಹೀಗೆ ಭೂಪೀಠದೇಹನಾದ ನಾನು. ಎಲೈ ಮಾನವೇಂದ್ರನೆ, ಅನಂತರ ನದನದೀರೂಪವಾದ ಸ್ವಸಂವೇದನವನ್ನು ಅನುಭವಿಸಿದೆನು.

೨. ಒಂದೆಡೆ ಮರಣವನ್ನು ಅನುಭವಿಸುತ್ತ ಅಳುತ್ತಿರುವ ನಾರಿಯರ ಕರುಣ ವೇದನವು : ಇನ್ನೊಂದೆಡೆ ಉತ್ತಾಂಡವವನ್ನಾಡುತ್ತಿರುವ ಸ್ತ್ರೀಕದಂಬಕದ ಮಹೋತ್ಸವದ ಮಹಾಸುಖವು.

೩. ಒಂದೆಡೆ ತಪ್ಪಿಸುವುದಕ್ಕಾಗದ ದುರ್ಭಿಕ್ಷದಿಂದ ಆಗುತ್ತಿರುವ ಊಹಿಸುವುದಕ್ಕೂ ಆಗದಷ್ಟು ಕಠಿನವಾದ ಮಹಾರೋದನವು. ಇನ್ನೊಂದೆಡೆ ಸಕಲ ಸಸ್ಯೌಘಗಳಿಂದ ಕೂಡಿ ಸುಖವಾಗಿರುವಿಕೆಯು.

ಕ್ವಚಿದಗ್ನಿಮಹಾದಾಹ ದಗ್ಧದೇಹೋಗ್ರವೇದನಂ ।
ಕ್ವಚಿಜ್ಜಲಪ್ಲವಾಲೂನಪುರಪತ್ತನಖಂಡಕಂ ॥೪॥

ಕ್ವಚಿಚ್ಚಪಲಸಾಮಂತಕೃತಲುಂಠನಮಂಡಲಂ ।
ಕ್ವಚಿದುದ್ದಾಮದೌರಾತ್ಮ್ಯರಕ್ಷಃ ಪೈಶಾಚಮಂಡಲಂ ॥೫॥

ಕ್ವಚಿಜ್ಜಲಾಶಯೋಲ್ಲಾಸವೇಲ್ಲನೋತ್ಪಲಕಾಗ್ರಕಂ ।
ಕಂದರೋದರನಿಷ್ಕ್ರಾಂತವಾತವೇಲ್ಲಿತವಾರಿದಂ ॥೬॥

ಸಂವಿದ್ಬೋಧೋನ್ನಮತ್ಸ್ವಾಂಗಕೇಶೋತ್ಥಾಂಕುರಲೋಮಕಂ ।
ವಾರಿವಾಹನ ವಿಕ್ಷೋಭ ನತೋನ್ನತ ಲಸತ್ತಲಂ ॥೭॥

---

೪. ಒಂದೆಡೆ ಅಗ್ನಿಯ ಮಹಾದಾಹದಿಂದ ಸುಟ್ಟುಹೋಗಿರುವ ದೇಹಗಳುಳ್ಳವರ ಉಗ್ರವೇದನವು : ಇನ್ನೊಂದೆಡೆ ಜಲಪ್ಲವ (ಪ್ರವಾಹ) ದಿಂದ ಮೂಲೋಚ್ಛಿನ್ನವಾಗಿರುವ ಪತ್ತನಗಳ ಖಂಡಖಂಡಗಳು.

೫. ಚಪಲರಾದ ಸಾಮಂತರ ಚೇಷ್ಟೆಗಳಿಂದ ಲೂಟಿಯಾಗಿರುವ ದೇಶವೊಂದೆಡೆ: ಇನ್ನೊಂದೆಡೆ ಸಹಿಸಲಾಗದ ದೌರಾತ್ಮ್ಯದಿಂದ ವರ್ತಿಸುತ್ತಿರುವ ರಾಕ್ಷಸರು ಪಿಶಾಚಗಳು ಇವರು ತುಂಬಿರುವ ದೇಶವು.

೬. ಒಂದೆಡೆ, ನೀರು ಪೂರಾತುಂಬಿ ಸಂತೋಷವಾಗಿ ಬೆಳೆದಿರುವ ಸಸ್ಯಗುಲ್ಮಾದಿಗಳ ಸಮೂಹಗಳು. ಬೆಟ್ಟಗಳ ಬುಡಗಳಲ್ಲಿ ಹುಟ್ಟಿ ಗಾಳಿಗಳಿಂದ ಆಟವಾಡಿಸಲ್ಪಡುತ್ತಿರುವ ಮೋಡಗಳು ಒಂದೆಡೆ.

೭. ಅತಿಶಯವಾದ ಜ್ಞಾನವನ್ನು ಪಡೆದ ಆನಂದದಿಂದ ಪುಲಕಗಳೆದ್ದಂತೆ ಆಗಿರುವ ಸಸ್ಯರೋಮಗಳು ಎಲ್ಲೆಲ್ಲೂ ತುಂಬಿರುವುದು ಒಂದುಕಡೆ: ಇನ್ನೊಂದೆಡೆ ಮಳೆಯ ಏಟಿಗೆ ಸಿಕ್ಕಿ ವಿಕ್ಷೋಭಪಟ್ಟು ಹಳ್ಳದಿಣ್ಣೆಗಳಾಗಿರುವ ಭೂಮಿಯು.

ಸಶೃಂಗ ಭೈರವ ಶ್ವಭ್ರ ಪುರಾದ್ರಿ ವನ ಪತ್ತನಂ ।
ಸಂವಿನ್ಮಂಡಲ ಸಂಚಾಲ ಲೇಖಾಂಕ ಮೃದುಕಲ್ಪನಂ ॥೮॥

ಕ್ವಚಿತ್ಸಾಮಂತ ಸಂಕ್ಷುಬ್ಧ ಸೈನ್ಯಸಂಹರಣಂ ರಣೇ ।
ಕ್ವಚಿತ್ಸೌಮ್ಯಸುಖಾಸೀನ ಸರ್ವ ಸಾಮಂತಮಂಡಲಂ ॥೯॥

ಅರಣ್ಯಂ ಕ್ವಚಿದಾಶೂನ್ಯಮುಲ್ಲಸದ್ವಾತಝುಂಕೃತಿ ।
ಜಂಗಲಂ ಕ್ವಚಿದಾಲೂನಸವ್ಯುಪ್ತಸಂಪನ್ನಸಸ್ಯಕಂ ॥೧೦॥

ಹಂಸಕಾರಂಡವಾಕೀರ್ಣ ಸರಃ ಫುಲ್ಲಾಬುಜಂ ಕ್ವಚಿತ್ ।
ಕ್ವಚಿನ್ಮರುಸ್ಥಲಸ್ಥೂಲ ಸ್ತಂಭನಾರ್ಜುನ ಮಾರುತಂ ॥೧೧॥

---

೮. ಭಾರಿಯ ಶಿಖರಗಳಿಂದಲೂ, ಹಾಗೆಯೇ ಭಯಂಕರವಾದ ಹಳ್ಳಗಳಿಂದಲೂ ಪುರಿ ಗಿರಿ ಅಟವಿ ಪತ್ತನಗಳಿಂದಲೂ ಕೂಡಿ, ಅಲ್ಲಿರುವ ಜನರು ಓಡಾಡುವುದರಿಂದ ಕಂಪಿಸುತ್ತಿರುವುದೋ ಎಂಬಂತಿರುವ ಭಾಗವಿನ್ನೊಂದೆಡೆ.

(ಸಂವಿದಂತೀತಿ ಸಂವಿದೋ ನಾಗರಾದಿ ಜನಾಃ—ತಾ. ಪ್ರ.)

೯. ಒಂದೆಡೆ ಸಾಮಂತರ ಹೋರಾಟದಿಂದ ತಲ್ಲಣಗೊಂಡು ಸಾಯುತ್ತಿರುವ ಜನರುಳ್ಳ ರಣಾಂಗಣ: ಇನ್ನೊಂದೆಡೆ ಸಮಸ್ತ ಸಾಮಂತರೂ ಸೌಮ್ಯವಾಗಿ ಸುಖಾಸನಗಳಲ್ಲಿ ಕುಳಿತು ಸೇರಿ ವಿರಾಜಿಸುತ್ತಿರುವ ಸಭಾಂಗಣ.

೧೦. ಇನ್ನೊಂದೆಡೆ ಭರ್ರನೆ ಬೀಸುತ್ತಿರುವ ಬಿರುಗಾಳಿಗಳ ಭೋಂಕಾರದಿಂದ ಎಲ್ಲವೂ ಶೂನ್ಯವಾಗಿರುವಂತೆ ಕಾಣುವ ಅರಣ್ಯ: ಇಟ್ಟಿದ್ದ ಬೆಳೆಯನ್ನೆಲ್ಲ ಕುಯ್ದುಕೊಂಡು ಮತ್ತೆ ಇಟ್ಟಿರುವ ಬೆಳೆಯು ಚೆನ್ನಾಗಿ ಬೆಳೆದಿರುವ ಭೂಮಿಯಿನ್ನೊಂದೆಡೆ.

೧೧. ಹಂಸ, ಕಾರಂಡವ, ಮೊದಲಾದ ಜಲಪಕ್ಷಿಗಳಿಂದ ಕೂಡಿ, ಅರಳಿರುವ ತಾವರೆಗಳಿಂದ ವಿರಾಜಿಸುತ್ತಿರುವ ಸರಸ್ಸೊಂದೆಡೆ: ಮರುಭೂಮಿಗಳಲ್ಲಿ ಎದ್ದ ಧೂಳಿಯಿಂದ ತುಂಬಿ ದಪ್ಪದಪ್ಪ ಕಂಬಗಳನ್ನು ಮಾಡಿಕೊಂಡು, ಬೆಳ್ಳಗೆ ಬೀಸುತ್ತಿರುವ ಮಾರುತಗಳು ಇನ್ನೊಂದೆಡೆ.

(ಸಹರಾ ಮರುಭೂಮಿಯಲ್ಲಿ ಹೀಗೆ ಬೆಳ್ಳಗಿರುವ ಮರಳನ್ನು ಎತ್ತಿಕೊಂಡು ಭಾರಿಯ ಕಂಭಗಳನ್ನು ಮಾಡಿ ಅವುಗಳನ್ನು ಹೊತ್ತುಕೊಂಡು ತಿರುಗುವ ಸುಂಟರಗಾಳಿಗಳುಂಟು ಎಂದು ಅಲ್ಲಿಗೆ ಹೋಗಿಬಂದ ಪ್ರಯಾಣಿಕರು ಹೇಳುತ್ತಾರೆ.

ಕ್ವಚಿನ್ನದನದೀವಾಹೆ ಹೇಲಾನಿಕಷ ಘರ್ಘರಂ ।
ಕ್ವಚಿದಂಕುರ ಕಾರ್ಯಾಂಗ ಸಿಕ್ತಬೀಜಸ್ಯ ಜೃಂಭಣಂ ॥೧೨॥

ಕ್ವಚಿದಂತಸ್ಸ್ಥ ಕೀಟಾಸ್ಯ ಮೃದು ಸ್ಪಂದನ ವೇದನಂ ।
ಮಾಂ ತ್ವಮೇವಾಶು ಬುದ್ಧ್ವೇಹ ತ್ರಾಯಸ್ವೇತೀವ ಬೋಧನಂ ॥೧೩॥

ಶಾಖಾಪರಿಕರಾಭೋಗಂ ವೃದ್ಧ್ಯಾಗಾಂಗ ನಿಪೀಡನೈಃ ।
ಮೂಲಜಾಲಮವಷ್ಟಭ್ಯ ಕ್ವಚಿದ್ವಿಟಪಧಾರಿಣಂ ॥೧೪॥

ಅನ್ಯೋನ್ಯಮಲಮಾಕ್ರಮ್ಯ ದಿಕ್ತಟಾಂಗನಿಪೀಡನೈಃ ।
ಕ್ವಚಿದದ್ರ್ಯಸ್ಥಿ ನಿವಿಡೈರರ್ಣವೋಲ್ಲಾಸವೇಲ್ಲಿತಂ ॥೧೫॥

---

೧೨. ಇನ್ನೊಂದೆಡೆ ನದನದಿಗಳ ಪ್ರವಾಹದ ಭಾರಿಯ ಮೊರೆತ : ಇನ್ನೊಂದೆಡೆ ಬೆಳೆಯಲೆಂದು ನೆಟ್ಟು ಯಾತ ಮೊದಲಾದವುಗಳಿಂದ ನೀರು ಹಾಯಿಸಿರುವ ಕ್ಷೇತ್ರದಲ್ಲಿರುವ ಭತ್ತ ಮೊದಲಾದ ಬೀಜಗಳು ಮೊಳಕೆಯಾಗುತ್ತಿರುವುದು.

೧೩. ಇನ್ನೊಂದು ಮೂಲೆಯಲ್ಲಿ ಯಾವುದೋ ಒಂದು ಹುಳುವಿನ ಮುಖದಿಂದ ಹೊರಟಿರುವ ಮೃದುವಾದ ರೋದನದ ಶಬ್ದವು, "ನನ್ನನ್ನು ನೀನಾಗಿ ಬಂದು ಬೇಗ ಕಾಪಾಡಬೇಕು" ಎಂದು ನುಡಿಯುತ್ತಿರುವುದು.

೧೪. ಒಂದಾಲದಮರವು ವಿಸ್ತಾರವಾಗಿ ಬೆಳೆದು ಅದರ ಕೊಂಬೆಗಳೆಲ್ಲ ಭಾರದಿಂದ ನೆಲದಮೇಲೆ ಮಲಗಿರಲು, ಬುಡವನ್ನು ಮಣ್ಣುತಿಂದಿರಲು, ಬುಡವನ್ನು ಮುಚ್ಚಿ ಬರಿಯ ಕೊಂಬೆಗಳೇ ಕಾಡಾಗಿ ಕಾಣುತ್ತಿರುವುದೊಂದೆಡೆ.

೧೫. ಇನ್ನೊಂದೆಡೆ ಒಂದನ್ನೊಂದು ಆಕ್ರಮಿಸಿ ಮರಗಳು ಬೆಟ್ಟಗಳ ಬಂಡೆಗಳನ್ನು ಮುಚ್ಚಿಕೊಂಡು ದಿಕ್ತಟದವರೆಗೂ ಹಬ್ಬಿರಲು, ಅವೆಲ್ಲವೂ ಒಂದು ಹಸಿರು ಬಣ್ಣದ ಕಡಲಿನಂತೆ ಹರಡಿರುವುದು ಒಂದೆಡೆ.

ಶುಕ್ಲಪಲ್ಲವ ಸಂಕೋಚ ನಿಬಿಡಾಂಗ ನಿಪೀಡನಂ ।
ಆಪುರ್ಷಣ್ಯೈಃ ಕರ್ರೈರಾರ್ಕ್ಯೈಃ ಸ್ವರಸಾಕರ್ಷಣಂ ಕ್ವಚಿತ್ ||೧೬||

ಶೃಂಗಮಂದಿರ ಮಾತಂಗ ಪ್ರಹಾರಾಶನಿ ಭೂರುಹಾಂ ।
ನಿಬಿಡಾಂಗೋತ್ಕಟಸ್ಥ್ಯೈರ್ಯಪರುಷಾಪತನಂ ಕ್ವಚಿತ್ ||೧೭||

ನಿಮಿಲಿತೇಕ್ಷಣಾನಂದತನೂನಾಮುಸಮಾಕ್ರಮಂ ।
ಕ್ವಚಿತ್ಸೂಕ್ಷ್ಮತರೋಲ್ಲೇಖಮಂಕುರೋಲ್ಲಾಸನಂ ನವಂ ||೧೮||

ಮಕ್ಷಿಕಾ ಯೌಕ ಮಶಕ ನಿವಾಸ ಸದೃಶಂ ಕ್ವಚಿತ್ ।
ಕುಡ್ಯಲೇಶಕುಭೃಂಗಾರಿ ಹಲಹೇಲಾನಿಕರ್ಷಣಂ ||೧೯||

---

೧೬. ತಾವು ಭೂಮಿಯನ್ನು ಮುಟ್ಟದಂತೆ ತಡೆದವಲ್ಲ ಎಂಬ ಕೋಪದಿಂದ, ಸೂರ್ಯನ ಕಿರಣಗಳು, ಹಾಗೆ ಹಬ್ಬಿರುವ ಮರಗಳ ಚಿಗುರುಗಳನ್ನು ಬೇಕೆಂದು ಒಣಗಿಸಿ ಒದ್ದಾಡಿಸುತ್ತಿರುವುದೊಂದುಕಡೆ.

೧೭. ಬೆಟ್ಟಗಳ ಶಿಖರಗಳಲ್ಲಿ ಮನೆಮಾಡಿಕೊಂಡಿರುವ ಆನೆಗಳ ಕೊಂಬಿನೇಟು ಎಂಬ ಸಿಡಿಲಿಗೆ ಸಿಕ್ಕಿ ಒತ್ತಾಗಿರುವ ಮರಗಳಲ್ಲಿ ಒಂದು ಇನ್ನೊಂದರಮೇಲೆ ಬಿದ್ದು ಎರಡೂ ಧೊಪ್ಪನೆ ಬೀಳುವ ದೃಶ್ಯವಿನ್ನೊಂದೆಡೆ.

೧೮. ಕಣ್ಣನ್ನು ಮುಚ್ಚಿಕೊಂಡು ಆನಂದಪಡುವವರ ಮೈಯಲ್ಲೇಳುವ ರೋಮಾಂಚದಂತೆ, ಸೂಕ್ಷ್ಮವಾದರೂಸುಳ್ಳಿಲ್ಲದ ಬೀಜಾಂಕುರಗಳು ನವವಿಜೃಂಭಣ ಮಾಡುತ್ತಿರುವುದು ಇನ್ನೊಂದೆಡೆ.

೧೯. ನೊಣಗಳು, ಕೂರೆಗಳು. ಸೊಳ್ಳೆಗಳು, ಇವುಗಳ ನಿವಾಸಗಳಿಗೆ ಸರಿಯಾಗಿರುವ ಪಾಳುಗೋಡೆಗಳಲ್ಲಿ ಮನೆ ಮಾಡಿಕೊಂಡಿರುವ ಸಣ್ಣದುಂಬಿಗಳನ್ನು ತಿಂದುಹಾಕಲು ಬರುವ ಶತ್ರುಗಳ ಆಟ ಹಾರಾಟಗಳು ಇನ್ನೊಂದುಕಡೆ.

ಶೀತಂ ಶೀತವಿಶೀರ್ಣಾಂಗಜರ್ಜರತ್ವ ಗ್ವಿಶೀರ್ಣವತ್ ।
ಪಾಷಾಣೀಭೂತಸಲಿಲಂ ಕ್ವಚಿತ್ಪರುಷಮಾರುತಂ ॥೨೦॥

ಉದ್ದಾಲೀಭೂತವ್ಯದ್ವಂಗಮಜ್ಜದಂತಃ ಕ್ರಿಮಿವ್ರಜಂ ।
ಕ್ವಚಿದುದ್ಭವದಂಗಾದಿಮೂಲಂ ಜಲನಿಮಜ್ಜನಂ ॥೨೧॥

ಶನ್ಯೈರಂತರ್ನಿಲೀನಾಂಬುಕೃತಾಹ್ಲಾದಂ ಬಹಿಶ್ವರ ।
ಸೋನ್ನಾಮಾಂಕುರ ರೋಮೌಘಂ ಕ್ವಚಿದ್ವರ್ಷವಿಜೃಂಭಿತಂ ॥೨೨॥

---

೨೦. ಇನ್ನೊಂದೆಡೆ ಶೀತಹಿಡಿದ್ದು, ಆ ಶೀತದಿಂದ ಒಡೆದುಹೋಗಿರುವ ಅಂಗಾಂಗಗಳಿಂದ ಬಿದ್ದುಹೋಗುತ್ತಿರುವ ಚರ್ಮವುಳ್ಳ ಜನರಿರುವ ದೇಶ: ಹಾಗೆಯೇ ಕಲ್ಲಾಗಿರುವ ನೀರಿರುವ ದೇಶವಿನ್ನೊಂದೆಡೆ: ಇನ್ನೊಂದೆಡೆ ತಡೆಯಲಾಗದಷ್ಟು ಜೋರಾಗಿ ಬೀಸುತ್ತಿರುವ ಗಾಳಿ.

೨೧. ಒಡೆದುಹೋಗಿರುವ ಮೃದುವಾದ ಅಂಗಾಂಗಗಳಲ್ಲಿ ಸೇರಿಕೊಂಡಿರುವ ಕ್ರಿಮಿಗಳಿರುವ ಜನರಿರುವುದೊಂದೆಡೆ: ಇನ್ನೊಂದೆಡೆ ಹೋಗಿರುವ ಅಂಗಗಳು ಹುಟ್ಟುತ್ತಿರುವುದು. ಮತ್ತೊಂದು ಕಡೆ ದೇಶವೆಲ್ಲವೂ ನೀರಲ್ಲಿಮುಳುಗಿಹೋಗಿರುವುದು

೨೨. ಒಂದೆಡೆ ನೀರು ಇಂಗಿರುವ ವೈಭವ, ಇನ್ನೊಂದೆಡೆ ಹೊರಗೆ ನೀರು ಕಾಣುತ್ತ ಅಂಕುರಗಳು ಬೆಳೆಯುತ್ತಿರುವುದು. ಮತ್ತೊಂದು ಕಡೆ ವರ್ಷವು ವಿಜೃಂಭಿಸುತ್ತಿರುವುದು.

ತನುತರಪವನ ವಿಕಂಪಿತ ।
ಕೋಮಲ ನಲಿನೀ ದಲಾಸ್ತರಣ್ಯೈಃ ॥
ವಿಹರಣಮಿವ ಮೇ ವಿಹಿತಂ ।
ಸರೋಭಿರಂಗೇಷು ನಿರ್ವಾಣಂ ॥೩೩॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಪಾಷಾಣೋ
ಪಾಖ್ಯಾನೇ ಭೂಮಂಡಲಗತ ವಿಶೇಷವರ್ಣನಂ ನಾಮಾಷ್ಟಾಶೀತಿತಮಃ ಸರ್ಗಃ

---

೩೩ ಇನ್ನೊಂದೆಡೆ ನನಗೆ, ಹಗುರವಾದ ಗಾಳಿಯಿಂದ ಅಲ್ಲಾಡುತ್ತಿರುವ ಕೋಮಲವಾದ ನಲಿನೀದಲಗಳೆಂಬ ಹಾಸುಗೆಯಲ್ಲಿ ಇಟ್ಟು ತೂಗಿದಷ್ಟು ಸುಖವಾಗಿ, ನನ್ನ ಭೂದೇಹದಲ್ಲಿದ್ದ ಸರಸ್ಸುಗಳಿಂದ ಬಹು ಆನಂದವಾಗುತ್ತಿತ್ತು

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಭೂಮಂಡಲಗತ ವಿಶೇಷ ವರ್ಣನ"
ಎಂಬ ಎಂಭತ್ತೆಂಟನೆಯ ಸರ್ಗವು



# ಏಕೋನನವತಿತಮಃ ಸರ್ಗಃ

ಶ್ರೀ ರಾಮ ಉವಾಚಃ—

ಪಾರ್ಥಿವೀಂ ಧಾರಣಾಂ ಬದ್ಧ್ವಾ ಜಗಂತಿ ಸಮವೇಕ್ಷಿತುಂ ।
ಸಂಪನ್ನಸ್ತ್ವಮಸೌ ಭೂಮಿಲೋಕಃ ಕಿಮುತ ಮಾನಸಃ ॥೧॥

ಶ್ರೀ ವಸಿಷ್ಠ ಉವಾಚಃ—

ಇದಂ ಚ ಮಾನಸಂ ಚಾಹಂ ಸಂಪನ್ನಃ ಪೃಥುಭೂತಲಂ ।
ನೇದಂ ನ ಮಾನಸಂ ನೈವ ಸಂಪನ್ನೋ ವಸ್ತುತಸ್ತ್ವಹಂ ॥೨॥

---

# ಎಂಭತ್ತೊಂಭತ್ತನೆಯ ಸರ್ಗವು

ಶ್ರೀರಾಮನು ಕೇಳಿದನು:—

೧. ಎಲೈ ವಸಿಷ್ಠ ಮಹರ್ಷಿಯೆ, ನೀನು ಜಗತ್ತುಗಳನ್ನು ನೋಡಬೇಕೆಂದು ಪಾರ್ಥಿವೀಧಾರಣೆಯನ್ನು ಧರಿಸಿದೆಯಲ್ಲಾ, ಆಗ ನೀನು ನೋಡಿದ ಲೋಕವು ನಮಗೆಲ್ಲಾ ಕಾಣಿಸುವ ಭೂಲೋಕವೋ? ಅಥವಾ ನೀನಾಗಿ ಮನಸ್ಸಿನಲ್ಲಿ ಕಲ್ಪಿಸಿಕೊಂಡ ಮತ್ತೊಂದು ಲೋಕವೊ?

ಶ್ರೀ ವಸಿಷ್ಠನು ಹೇಳಿದನು: —

೨. ಇಷ್ಟು ವಿಸ್ತಾರವಾದ ಭೂತಲವಾಗಿ ನಾನು ಆದುದು ಯಾವುದುಂಟೊ ಅದು ಮಾನಸವೇ! ಆದರೆ, ರಾಮ, ಆ ದೃಶ್ಯವು ಮಾನಸವಲ್ಲ: ನಾನು ಹಾಗೆ ಆದುದೂ ಇಲ್ಲ: ವಾಸ್ತವ್ಯವಾಗಿ ನಾನು ನಾನೇ ಆಗಿದ್ದೆನು.

(ಕಲ್ಪನಾದೃಶಾ ತತ್ತ್ವದೃಶಾ ವಾ ವಿಮರ್ಶೇ, ಕೋಟಿದ್ವಯಭೇದಾಪ್ರಸಿದ್ಧೇಃ ಸಂಶಯಾನುಪಪತ್ತಿಂ ಸೂಚಯನ್ ವಸಿಷ್ಠ ಉತ್ತರಮಾಹ—ಇದಂಚೇತಿ । ಯದಿ ಕಲ್ಪನಾದೃಶಾ ಪೃಚ್ಛಸಿ ತರ್ಹಿ ಇದಂ ಮೃತ್ಪಾಷಾಣಮಯತ್ವೇನ ಪ್ರಸಿದ್ಧಂ ಚ ತದೇವ ಮನೋಮಾತ್ರವಿಕಾರತ್ವಾನ್ಮಾನಸಂಚೇತಿ ಸಮುಚ್ಚಯಃ ಸಂಪನ್ನಃ। ಯದಿ ತುತತ್ತ್ವದೃಶಾ ಪೃಚ್ಛಸಿ ತರ್ಹಿ ನೋಭಯಮಪಿ ಸಂಪನ್ನ ಇತ್ಯರ್ಥಃ—ತಾ. ಪ್ರ.)

ಅಮಾನಸಂ ಮಹೀಪೀಠಂ ನ ಸಂಭವತಿ ಕಿಂಚನ ।
ಋಪಸದ್ವೇತ್ಸಿ ಯತ್ಸದ್ವಾ ಮನೋಮಾತ್ರಕಮೇವ ತತ್ ॥೩॥

ಚಿದಾಕಾಶಮಹಂ ಶುದ್ಧಂ ತಸ್ಯ ಮೇ ತತ್ಪದಾತ್ಮನಃ ।
ಯಚ್ಚಿನ್ಮಾತ್ರಾತ್ಮಕಚನಂ ತತ್ಸಂಕಲ್ಪಾಭಿಧಂ ಸ್ಮೃತಂ ॥೪॥

ತನ್ಮನಸ್ತನ್ಮಹೀಪೃಷ್ಠಂ ತಜ್ಜಗತ್ಸ ಪಿತಾಮಹಃ ।
ಸಂಕಲ್ಪಪುರವದ್ವ್ಯೋಮ್ನಿ ಕಚತ್ಯೇತನ್ಮನೋನಭಃ ॥೫॥

ಏವಂ ಸಂಕಲ್ಪಮಾತ್ರಂ ಮೇ ಮನೋಮಾತ್ರಂ ತದಾತತಂ ।
ಧಾರಣಾಭ್ಯಾಸಸಂಪುಷ್ಟಂ ಭೂಮಂಡಲಮಿತಿ ಸ್ಥಿತಂ ॥೬॥

---

೩. ಮಾನಸವಲ್ಲದ ಮಹೀಪೀಠವು ಸಂಭವಿಸುವುದಾದರೂ ಉಂಟೇನು ? ಈ ಮಹೀಪೀಠವನ್ನು ಸತ್ ಎಂತಲೋ ಅಸತ್ ಎಂದಲೋ ಹೇಗೆ ಬೇಕಾದರೂ ನೋಡು. ಇದು ಹೇಗೆಹೇಗೂ ಮನೋಮಾತ್ರಕವೇ !

೪. ನಾನು ಶುದ್ಧವಾಗಿ ಚಿದಾಕಾಶಮಯನು. ಇಂತಹ ನನಗೆ ಈ ಮಹೀಪೀಠವು ನನ್ನದೇ ಆದ ವಿಸ್ತಾರವು (ತತ್ಪದಂ). ಯಾವುದು ಚಿನ್ಮಾತ್ರವಾದ ಆತ್ಮನ ಕಚನವೋ ಅದೇ ಸಂಕಲ್ಪವೆನ್ನಿಸಿಕೊಳ್ಳುವುದು.

೫. ಆ ಮನಸ್ಸು, ಆ ಮಹೀಪೀಠ, ಆ ಜಗತ್ತು, ಆ ಪಿತಾಮಹ, ಇವೆಲ್ಲವೂ ಸಂಕಲ್ಪಪುರವು ಆಕಾಶದಲ್ಲಿ ಗೋಚರವಾದಂತೆ, ಎಲ್ಲವೂ ಬರಿಯ ಮನೋನಭವೇ!

೬. ಹೀಗೆ ಸಂಕಲ್ಪಮಾತ್ರನಾಗಿರುವ ನನ್ನ ಮನೋಮಾತ್ರವೇ ಹಾಗೆ ನಾನಾ ರೂಪಗಳನ್ನು ಧರಿಸಿ ಹರಡಿತು. ಧಾರಣಾಭ್ಯಾಸದಲ್ಲಿರುವಾಗ ಕಾಣಿಸುತ್ತ ಭೂಮಂಡಲದಂತೆ ಕಾಣಿಸುತ್ತಿತ್ತು.

ನೇದಂ ಭೂಮಂಡಲಂ ತದ್ವೈವ ತದನ್ಯದ್ಧಿ ಮನೋಮಯಂ ।
ಆಕಾಶಮಾತ್ರಕಚನಮಚೇತ್ಯಂ ಕಚನಂ ಚಿತೇಃ ॥೭॥

ತದೇವಾಕಾಶಮಾತ್ರಾತ್ಮ ತಥಾಭೂತಂ ಚಿರಂ ಸ್ಥಿತಂ ।
ಇದಂಪ್ರತ್ಯಯಲಬ್ಧತ್ವಾನ್ಮಾನಸತ್ವಂ ಸಮುಜ್ಝತಿ ॥೮॥

---

೭. ಹಾಗೆ ನನಗೆ ಕಾಣಿಸಿದ ಭೂಮಂಡಲವು ಸ್ವತಂತ್ರವಾದುದೂ ಅಲ್ಲ: ಮನೋಮಯದಿಂದ ಭಿನ್ನವಾದುದೂ ಅಲ್ಲ. ಅದು ಆಕಾಶಮಾತ್ರ ಕಚನವು. ಚಿತಿಯ ಕಚನವಾದ್ದರಿಂದ ಅದು ಅಚೇತ್ಯವು.

(ಅಜ್ಞಪ್ರಸಿದ್ಧ ವೃದ್ದಾರುಪಾಷಾಣಾದಿಮಯತ್ವಸ್ಯ "ಅಪಾಗಾದಗ್ನೇರಗ್ನಿತ್ವಂ ತ್ರೀಣಿರೂಪಾಣಿತ್ಯೇವಸತ್ಯಂ" ಇತ್ಯಾದಿ ಶ್ರುತಿನಿಷಿದ್ಧತ್ವಾತ್ತತ್ತ್ವಜ್ಞಸ್ಯ :ಧಾರಣಾಯಾಂದೃಷ್ಟಂ ನಾಜ್ಞದೃಷ್ಟಿ ಪ್ರಸಿದ್ಧ್ಯಾ ಇದಂರೂಪಮಿತ್ಯ ಸಮುಚ್ಚಯೋ ವಾಸ್ತು. ಇತ್ಯಾಶಯೇನಾಹ—ತಾ. ಪ್ರ.)

೮. ಆ ಕಚನವೇ ಆಕಾಶಮಾತ್ರಾತ್ಮವಾದರೂ ಆ ರೀತಿಯಾಗಿ ಬಹುಕಾಲ ನಿಲ್ಲುತ್ತದೆ: ಮತ್ತು, ಅದನ್ನು ಇದಂ ಎಂದು ನಿರ್ದೇಶಮಾಡಬಹುದಾದ್ದರಿಂದ ಅದು ಮಾನವ ಸತ್ವವನ್ನು ಬಿಡುತ್ತದೆ

(ಯದ್ಯಾಕಾಶಮಾತ್ರಸ್ಯ ಅಮೂರ್ತಸ್ಯ ಏವ ಇತ್ಥಂ ಕಾಚನಂ ತರ್ಹಿಕಥಂ ಮೂರ್ತೇದಂ ಪ್ರತ್ಯಯಮಾಧತ್ತೇ ತತ್ರಾಹ—ತದೇವೇತಿ । ತರ್ಹಿಕಿಂದಧಿತ್ವೇ ದುಗ್ಧತ್ವಮಿವ ಮಾನಸತ್ವಂ ಮುಂಚತಿ ? ನೇತ್ಯಾಹ । ಇದಂ ಪ್ರತ್ಯಯೇತಿ । ಸ್ವಪ್ನಾದೌ ಅಸ್ಥೂಲಸ್ಯ ಕೇವಲ ಮಾನಸಸ್ಯ ಪೃಥಿವ್ಯಾದೇಃ ಜಾಗ್ರದ್ವದಿದಂ ಪ್ರತ್ಯಯೇನೋಪಲಬ್ಧತ್ವಾತ್ ಸಮುಗ್ಧತ್ವಸಾಮ್ಯಂ ಕಿಂತು ತರಂಗ ಕಟಿಕಶಾಟ ಟಕಾದಿ ಬಾವೇ ಪಿ ಜಲಕನಕ ಕಾರ್ಪಾಸ ಮಯತ್ವವದಿದಂ ಬೋಧ್ಯಮಿತಿ ಭಾವಃ—ತಾ. ಪ್ರ.)

(ಈಗ ನಾವು ಬರೆದು ಪ್ರಕಟಿಸುವ ಪುಸ್ತಕಗಳನ್ನು ನೋಡಿ. ಅವು ಮಾನಸವಾದರೂ ಇದಂ ಪ್ರತ್ಯಯವನ್ನು ಹುಟ್ಟಿಸಬಲ್ಲಷ್ಟು ಭಾವನಾಘನವಾಗಿಲ್ಲವೇ ? ಹಾಗೇ ಇದು : ಮಾನಸವಾದರೂ ಅಮಾನಸ ಪ್ರತ್ಯಯವನ್ನುಂಟುಮಾಡಬಲ್ಲುದು).

ಇದಂ ಸ್ಥಿರಂ ಸುಕಠಿನಂ ವಿತತಂ ಭೂಮಿಮಂಡಲಂ ।
ಅಸ್ತೀತಿ ಜಾಯತೇ ಬುದ್ಧಿರ್ವ್ಯೋಮ್ನೀವ ಚಿರವೇದನಾತ್ ॥೯॥

ನ್ಯಾಯೇನೇದಮಿಮಾನೇನ ನ ಸ್ಥಿತಂ ವಸುಧಾತಲಂ ।
ಇದಂ ಜ್ಞಪ್ತ್ಯೈಕಮೇವಾದ್ಯ ಸರ್ಗಾದ್ಯಾದ್ಯಮುಪಾಗತಂ ॥೧೦॥

ಯಥಾ ಸ್ವಪ್ನೇ ಪುರತ್ವೇನ ಚಿದೇವ ವ್ಯೋಮ್ನಿ ಭಾಸತೇ ।
ತಥಾ ಚಿದೇವ ಸರ್ಗಾದಾವಿದಂ ಜಗದಿತಿ ಸ್ಥಿತಂ ॥೧೧॥

---

೯. ಈ ಇಂದ್ರಿಯ ಗೋಚರವಾಗುತ್ತಿರುವ ಸ್ಥಿರವೂ ಸುಕಠಿನವೂ ಆಗಿ ಹರಡಿರುವ ಭೂಮಿಮಂಡಲವು (ಪ್ರತ್ಯೇಕವಾಗಿ) ಉಂಟು ಎಂಬುದೊಂದು ಬುದ್ಧಿಯು, ಬಹುಕಾಲ ಗೋಚರವಾಗುತ್ತಿರುವುದರಿಂದ, ಆಕಾಶದಲ್ಲಿ ನೀಲಾದಿಬುದ್ಧಿಯು ಹುಟ್ಟಿದಹಾಗೆ ಹುಟ್ಟುತ್ತದೆ.

೧೦. ಈ ನ್ಯಾಯದಿಂದ ಎಂದರೆ ಆಕಾಶದಲ್ಲಿ ನೀಲಿಯು ಕಾಣುವಂತೆ ವಸುಧಾತಲವೂ ಪ್ರತ್ಯೇಕವಾದ ಸ್ಥಿತಿಯಿಲ್ಲದ್ದು ಎಂದು ತಿಳಿ. ಸರ್ಗದ ಮೊದಲಲ್ಲಿದ್ದ ಏಕಮೇವ ಚಿದ ಆತ್ಮವೇ ಈ ರೂಪವಾಗಿರುವುದು.

(ವಾಚಾರಂಭಣ ಶ್ರುತಿದರ್ಶಿತನ್ಯಾಯೇನ ತು, ದರ್ಶನೇ ಇದಮಿವ ಆಜ್ಞಪ್ರಸಿದ್ಧರೂಪೇಣ ವಸುಧಾತಲಂ ನ ಸ್ಥಿತಂ ತು ಆದ್ಯಸರ್ಗಸ್ಯ ಮನೋರೂಪಸ್ಯ ಆದ್ಯಂ ಸೂಕ್ಷ್ಮಂ ಯದೇಕಮೇವರೂಪಂ ತದೇವೋಪಾಗತಂ ಸ್ಥಿತಂ । ತ್ರೀಣಿರೂಪಾಣೀತ್ಯೇವ ಸತ್ಯಂ ಇತಿ ಶ್ರುತ್ಯೋಪದರ್ಶಿತಮಿತ್ಯರ್ಥಃ)

೧೧. ಚಿತ್ತು ಸ್ವಪ್ನಾಕಾಶದಲ್ಲಿ ಪುರವಾಗಿ ಭಾಸವಾಗುವಂತೆಯೇ ಚಿತ್ತೇ ಸರ್ಗಾದಿಯಲ್ಲಿ ಈ ಜಗತ್ತಾಗಿ ಕಾಣುವುದು.

ವಿದ್ಧಿ ಚಿದ್ರೂಪಬಾಲಸ್ಯ ಮನೋರಾಜ್ಯಂ ಜಗತ್ತ್ರಯಂ ।
ಮಹೀತಲಾದಿಕಂ ದೃಶ್ಯಮಿದಂ ಸರ್ವಂ ಚ ಸರ್ವದಾ ॥೧೨॥

ಚಿದ್ರೂಪಸ್ಯಾತ್ಮನೋ ನಾನ್ಯಃ ಸಂಕಲ್ಪಸ್ತನ್ಮಯಂ ಜಗತ್ ।
ವಸ್ತುತಸ್ತು ನ ಸತ್ಯಾತ್ಮ ನ ಪಿಂಡಾತ್ಮ ನ ಭಾಸುರಂ ॥೧೩॥

ದೃಶ್ಯಮಸ್ತ್ಯಪರಿಜ್ಞಾತಂ ಪರಿಜ್ಞಾತಂ ನ ವಿದ್ಯತೇ ।
ಪರಿಜ್ಞಾತಂ ತದೇವಾಸ್ಯ ಶೃಣೋಷಿ ಯದಿದಂ ಚಿರಂ ॥೧೪॥

ಸರ್ವಂ ಚಿತ್ಮಾತ್ರಮಾಶಾಂತಂ ಪ್ರಕಟತ್ಯಾತ್ಮನಾತ್ಮನಿ ।
ಭೂಮಂಡಲಾತ್ಮ ದೃಶ್ಯಾತ್ಮ ದ್ವೈತೈಕ್ಯಾಭ್ಯಾಂ ವಿವರ್ಜಿತಂ ॥೧೫॥

---

೧೨. ಚಿತ್ತೆಂಬ ಬಾಲಕನ ಮನೋರಾಜ್ಯವೇ ಈ ಜಗತ್ತ್ರಯವೆಂದು ತಿಳಿ. ಮಹೀಮಂಡಲಾದಿ ದೃಶ್ಯವೆಲ್ಲವೂ ಯಾವಾಗಲೂ ಹೀಗೆಯೇ!

(ಚಿದ್ರೂಪ ಬಾಲಕಸ್ಯ ಚತುರ್ಮುಖಸ್ಯ—ತಾ. ಪ್ರ.)

೧೩. ಆ ಚಿದ್ರೂಪನಾದ ಆತ್ಮನು ಬೇರೆಯಲ್ಲ: ಆತನ ಸಂಕಲ್ಪವು ಬೇರೆಯಲ್ಲ. ಅದರಿಂದ ಜಗತ್ತು ಕೂಡ ತನ್ಮಯವೇ ಎಂದರೆ ಚಿನ್ಮಯವೇ! ಆದರೂ, ಅದು ಪ್ರತ್ಯೇಕವಾಗಿ ಇಲ್ಲ. ಅದು ಎಂದರೆ ಜಗತ್ತು ಸತ್ಯಾತ್ಮವಲ್ಲ, ಪಿಂಡಾತ್ಮವಲ್ಲ, ಭಾಸುರವೂ ಅಲ್ಲ.

೧೪. ಅಪರಿಜ್ಞಾತವಾದಾಗ ದೃಶ್ಯಸತ್ತಾ ಉಂಟು: ಪರಿಜ್ಞಾತವಾದಾಗ ಇಲ್ಲ—ನೀನು ನನ್ನ ಉಪದೇಶವನ್ನು ಚಿರಕಾಲ ಕೇಳಿರುವೆಯಾಗಿ ನೀನು ಈ ಜಗತ್ತಿನ ಸ್ವರೂಪವಿಂಥಾದ್ದೆಂದು ತಿಳಿದೇ ಇರುವೆ.

೧೫. ದಿಕ್ತಟಗಳವರೆಗೂ ಇರುವ ಸರ್ವವೂ ಚಿತ್ತಲ್ಲದೆ ಇನ್ನೇ[illegible] ಅಲ್ಲ. ಆತ್ಮನಿಂದ ಆತ್ಮನಲ್ಲಿಯೇ ಆದ ಪ್ರಕಟನವು ಇದು. ಅದರಿಂದ ಭೂ[illegible]ಲವಾಗಿ ಕಾಣಿಸುವುದೂ ಆತ್ಮವೇ! ದೃಶ್ಯವೂ ಆತ್ಮವೇ! ಇದು ದ್ವೈತ, ಐ[illegible] ಭಾವ, ಭೇದಗಳು ಇಲ್ಲದ್ದು.

ಮಣಿರ್ಯಥಾ ಸ್ವಭಾವೇನ ಶುಕ್ಲಪೀತಾದಿಕಾನ್ತಿವಃ ।
ಅಕುರ್ವನ್ನೇವ ಕುರುತೇ ಚಿದಾಕಾಶಸ್ತಥಾ ಜಗತ್ ॥೧೬॥

ಯತೋ ನ ಕಿಂಚಿತ್ಕುರುತೇ ನ ಚ ರೂಪಂ ಸಮುಜ್ಝತಿ ।
ತಸ್ಮಾನ್ನ ಮಾನಸಂ ನೇದಂ ಕಿಂಚಿದಸ್ತಿ ಮಹೀತಲಂ ॥೧೭॥

ಮಹಿತಲಮಿವಾಭಾತಿ ಚಿದ್ವ್ಯೋಮೈವ ನಿರಂತರಂ ।
ಆತ್ಮನ್ಯೇವಾತಲಂ ವ್ಯೋಮ ಯಥಾಮಲತಲಂ ಸ್ಥಿತಂ ॥೧೮॥

---

೧೬. ಒಂದು ರತ್ನವು ಸಹಜವಾಗಿ, ತನ್ನ ಸ್ವಭಾವಾನುಸಾರವಾಗಿ ಶುಕ್ಲ, ಪೀತ, ಮೊದಲಾದ ಕಾಂತಿಯನ್ನು ಹೊಂದಿರುವುದು. ಅದರಂತೆಯೇ ಚಿದಾಕಾಶವು ತಾನು ಸೃಷ್ಟಿಮಾಡಬೇಕೆಂದುಕೊಳ್ಳದೆಯೇ ಜಗತ್ತನ್ನು ಮಾಡುವುದು.

(ಅಕುರ್ವನ್ನೇವ ಇಚ್ಛ್ಯಾಪ್ರಿಯಮಾಣ ಏವ—ತಾ. ಪ್ರ.)

೧೭. ಯಾವ ಕಾರಣದಿಂದ ಅದು (ಚಿತ್ತು) ಯಾವುದನ್ನು ಮಾಡುವುದಿಲ್ಲವೋ, ಮತ್ತು ಯಾವ ಕಾರಣದಿಂದ ಅದು ತನ್ನ ರೂಪವನ್ನು ಬಿಡುವುದಿಲ್ಲವೋ ಅದರಿಂದ ಅದು ಪ್ರತ್ಯೇಕವಾದ ಮನಸ್ಸತ್ತೆಯಿಂದ ಆದುದಲ್ಲ: ಈ ದೃಶ್ಯರೂಪವಾದ ಮಹೀತಲವು ತದ್ಭಿನ್ನವಾಗಿ ಇಲ್ಲವೂ ಇಲ್ಲ.

(ಅಕನೇತಿನೇತ್ಯಾದಿ ಶ್ರುತಿ ಪರ್ಯಾಲೋಚನೇನ ಉಪಸಂಹರತಿ ಯತ ಇತಿ ।—ತಾ. ಪ್ರ.)

೧೮. ಚಿದಾಕಾಶವೇ ನಿರಂತರವಾಗಿ ಮಹೀತಲವಾಗಿ ಆಭಾಸವಾಗುವುದು. ಆತ್ಮಾಕಾಶವು ಅ+ತಲವಾಗಿದ್ದರೂ ನೀಲಿಮಾಮಲವಿಶಿಷ್ಟತಲ ಸಹಿತವಾಗಿರುವಂತೆ ಕಾಣಿಸುವುದಿಲ್ಲವೇ ?

ಸ್ವಭಾವಮಾತ್ರಕಚನಂ ತತ್ತವೇವ ಯಥಾಸ್ಥಿತಂ ।
ಭೂಮಂಡಲಮಿವಾತ್ಯಚ್ಛಂ ಖಮೇವ ವಿಶತಾಂತರಂ ॥೧೯॥

ಇದಂ ಭೂಮಂಡಲಂ ತಚ್ಚ ದ್ವಯವೇ ೀತನ್ಮಹಾಚಿತೇಃ ।
ಸ್ವರೂಪಮೇವ ಕಚತಿ ತವ ಸ್ವಪ್ನಪುರಂ ಯಥಾ ॥೨೦॥

ಇದಮಾಕಾಶಮಾತ್ರಾತ್ಮ ತದಪ್ಯಾಕಾಶಮಾತ್ರಕಂ ।
ಅಜ್ಞಾನಾತ್ಮಪರಿಜ್ಞಾನಾಜ್ಞಾನಾನ್ನೇದಂ ನ ತತ್ಕಚಿತ್ ॥೨೧॥

---

೧೯. ಸ್ವಭಾವದಿಂದಲೇ ಕಚನವಾಗುವುದು. ಆದರೂ ಚಿತ್ತು ಯಥಾಸ್ಥಿತವಾಗಿಯೇ ಇರುವುದು ಆಕಾಶವೇ ಭೂಮಂಡಲವಾಗಿ ಕಾಣಿಸುವುದು. ಅಂತರವನ್ನು ಪ್ರವೇಶಿಸಿ ಪ್ರತ್ಯೇಕವಾಗಿ ಭೂಮಂಡಲದಂತೆ ಕಾಣಿಸುತ್ತಿದ್ದರೂ ಆದಷ್ಟೂ ಅತಿಶುದ್ಧವಾದ ಆಕಾಶವೇ !

೨೦. ದೃಶ್ಯವಾಗಿ ಕಾಣುವ ಈ ಭೂಮಂಡಲವು, ಇದನ್ನು ಕಾಣುತ್ತಿರುವದಕ್ಕೂ. ಇವೆರಡೂ ಮಹಾಚಿತಿಯಿಂದಲೇ ಬಂದುವು. ಚಿತ್ಸ್ವರೂಪವೇ ಕಚನಮಾಡಿ, ನಿನಗೆ ಸ್ವಪ್ನದಲ್ಲಿ ಕಾಣುವ ಪುರದಂತೆ (ಅಸತ್)ಸ್ಥಿತಿಯನ್ನು ಪಡೆಯುವುದು

(ತತ್ರಧಾರಣಾಕಲ್ಪಿತ ಭೂಮಂಡಲಮಿದಂ ಭೂಮಂಡಲಂಚ ತುಲ್ಯಮೇವ ಚಿದ್ವಿವರ್ತತೇ—ತಾ. ಪ್ರ.)

೨೧. ಇದೂ ಆಕಾಶಮಾತ್ರವೇ ! ಅದೂ ಆಕಾಶಮಾತ್ರವೇ ! ಇವೆರಡೂ ಇರುವುದು ಆತ್ಮಪರಿಜ್ಞಾನವನ್ನು ತಿಳಿಯುವುದರಿಂದ ! ಜ್ಞಾನವು ತಲೆದೋರುತ್ತಲೂ ಇದೂ ಇಲ್ಲ : ಅದೂ ಇಲ್ಲ.

(ಅಜ್ಞಾನೋಪಹಿತ ಆತ್ಮಪರಿಜ್ಞಾನಾದ್ಭಾತಿ । ಜ್ಞಾನಾತ್ತುನಇದಂ ನಾಪಿ ತತ್ ಧಾರಣಾಸ್ಥಂ ।— ತಾ. ಪ್ರ.)

ತ್ರೈಲೋಕ್ಯಭೂತ ಜಾಲಾನಾಂ ಕಾಲತ್ರಿತಯಭಾವಿನಾಂ ।
ಸಂಭ್ರಮಃ ಸ್ವಪ್ನಸಂಕಲ್ಪೋ ಮನೋರಾಜ್ಯದಶಾಸ್ಥಿತಾ ॥೨೨॥

ಭೂತಾನ್ಯಥ ಭವಿಷ್ಯಂತಿ ವರ್ತಮಾನಾನಿ ಯಾನಿ ಚ ।
ಭೂಮಂಡಲಾನಿ ತಾನ್ಯಂಗ ಸತ್ತಾಸಾಮಾನ್ಯತಾಂ ಗತಾ ॥೨೩॥

ಅಹಮೇವ ಸಮಗ್ರಾಣಿ ತೇಷಾಮಂತರಗತಾನ್ಯಪಿ ।
ತೇನ ತಾನ್ಯನುಭೂತಾನಿ ತಥಾ ದೃಷ್ಟಾನಿ ಚಾಖಿಲಂ ॥೨೪॥

---

೨೨. ತ್ರಿಕಾಲಭಾವಿಗಳಾದ ತ್ರೈಲೋಕ್ಯಭೂತ ಜಾಲಗಳಿಗೆಲ್ಲ ಭ್ರಾಂತಿಯೇ ಕಾರಣವು. ಅವೆಲ್ಲವೂ ಸ್ವಪ್ನಸಂಕಲ್ಪದಂತೆ! ಮನೋರಾಜ್ಯದಂತೆಯೇ ಹೊರತು ಅನ್ಯಥಾ ಅಲ್ಲ.

೨೩. ಹಿಂದೆ ಇದ್ದ, ಈಗ ಇರುವ, ಮುಂದೆ ಸಂಭವಿಸುವ ಭೂಮಂಡಲಗಳು ಯಾವ ಯಾವವುಂಟೋ ಅವೆಲ್ಲವೂ ಸತ್ತಾ ಸಾಮಾನ್ಯಗಳು ಎಂದರೆ ಒಂದೇ ಸತ್ತಾ ಉಳ್ಳವು : ಎಂದು ತಿಳಿ.

(ಸಾಮಾನ್ಯತಾಂ ಸರ್ವಾಧಿಷ್ಠಾನತ್ವಾತ್ ಸಾಧಾರಣಕಾಂಗತಾ ಆತ್ಮಸತ್ತೈವ ತಾನಿ ಸರ್ವಾಣಿ ಸತ್ತಾಸಾಮಾನ್ಯಮೇವ, ತೇನಹೇತುನಾ ತಾನಿ ತದಂತರ್ಗತಾನಿಚ ಸರ್ವವಸ್ತೂನಿ ಅಹಮೇಲೇತಿಧಾರಣಾಯಾಂ ಮಯಾ ಮನಸಾ ಅನುಭೂತಾನಿ ಸಾಕ್ಷಿಸ್ವರೂಪೇಣಚ ಅಖಿಲಂ ನಿಶ್ಶೇಷಂ ಯಥಾ ಸ್ಯಾತ್ ತಥಾದೃಷ್ಟಾನೀತ್ಯರ್ಥ—ತಾ.ಪ್ರ.)

೨೪. ಅಹಂ ಎಂಬುದೇ ಆ ಭೂಮಂಡಲಗಳ ಒಳಗಿರುವ ವಸ್ತುಗಳಾಗಿಯೂ ಇರುವುದು. ಆ ವಸ್ತುಗಳು ಉಂಟು ಎಂಬ ಅನುಭವವನ್ನು ಪಡೆಯುವುದೂ ಅಹಮ್ಮೇ! ಅಹಮ್ಮೇ ದೃಶ್ಯವಾಗಿ ದೃಕ್ಕಾಗಿ ಇರುವುದು ಎಂಬುದನ್ನು ನಾನು ಕಂಡೆನು.

ಚಿನ್ಮಾತ್ರಮೇತದಜರಂ ಪರಮಾತ್ಮತತ್ತ್ವಂ ।
ಶುದ್ಧಾತ್ಮತಾಮಜಹದಂಗಗತಂ ಬಿಭರ್ತಿ ॥
ಸರ್ವಂ ಯಥಾಸ್ಥಿತಮಿದಂ ಜಗದಾತ್ತಭೇದಂ ।
ಬುದ್ಧ ಸದಂಗ ನ ಬಿಭರ್ತಿ ತು ಕಿಂಚನಾಪಿ ॥೨೫

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಪಾಷಾಣೋ
ಪಾಖ್ಯಾನೇ ದೃಶ್ಯಮನೋಮಾತ್ರತ್ವ ಪ್ರತಿಪಾದನಂ ಏಕೋನನವತಿತಮಃ ಸರ್ಗಃ

---

೨೫ ಈ ಕಣ್ಣಿಗೆ ಕಾಣುವ ದೃಶ್ಯವು ಯಾವುದುಂಟೋ ಅದು ಚಿನ್ಮಾತ್ರವು ಅಜರವು ಪರಮಾತ್ಮತತ್ವವು. ತನ್ನ ಶುದ್ಧಾತ್ಮ ತತ್ವವನ್ನು ಬಿಡದೆ ಎಲ್ಲವನ್ನೂ ತನ್ನಲ್ಲಿ ಭರಣಮಾಡುತ್ತಿರುವುದು ಭೇದಗಳಿಂದ ಭಿನ್ನವಿಭಿನ್ನವಾಗಿ ಕಾಣುತ್ತಿರುವ ಯಥಾಸ್ಥಿತವಾದ ಈ ಜಗತ್ತೆಲ್ಲವೂ ತಿಳಿದ ಕಣ್ಣಿಂದ ನೋಡಿದರೆ, ಸತ್ ಅಲ್ಲದ ಇನ್ನೇನೂ ಅಲ್ಲ ಅದು ಏಕಾಂಡವಾದ ಚಿತ್ ಆದ್ದರಿಂದ ಅದರಲ್ಲಿ ಅಂಗಗಳು ಯಾವವೂ ಇಲ್ಲ (ಎಂಬುದು ತಿಳಿಯುವುದು)

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ದೃಶ್ಯಮನೋಮಾತ್ರತ್ವ ಪ್ರತಿಪಾದನ"
ಎಂಬ ಎಂಭತ್ತೊಂಭತ್ತನೆಯ ಸರ್ಗವು



# ನವತಿತಮಃ ಸರ್ಗಃ

**ಶ್ರೀರಾಮ ಉವಾಚ:—**

ಅನಂತರಂ ವದ ಬ್ರಹ್ಮನ್ ಜಗಂತಿ ಭವತಾ ತದಾ ।
ಭೂಮಂಡಲಾನಾಂ ಹೃದಯೇ ಕ್ವಚಿದ್ದೃಷ್ಟಾನಿ ನ್ವೈವ ವಾ ॥೧॥

**ಶ್ರೀ ವಸಿಷ್ಠ ಉವಾಚ:—**

ಪರಾತ್ಮಜಾಗ್ರತ್ಸ್ವಪ್ನೇಷು ಭೂಮಂಡಲೌಘಾತ್ಮನಾ ಮಯಾ ।
ತತೋಽನುಭೂತಂ ಹೃದಯೇ ದೃಷ್ಟಂ ಚ ಪರಯಾ ದೃಶಾ ॥೨॥

---

# ತೊಂಭತ್ತನೆಯ ಸರ್ಗವು

**ಶ್ರೀರಾಮನು ಕೇಳಿದನು:—**

೧. ಇದಿಷ್ಟೂ ಆದಮೇಲೆ, ಎಲೈ ಬ್ರಹ್ಮನ್, ಭೂಮಂಡಲಗಳ ಒಳಗೆ ಜಗತ್ತುಗಳನ್ನು ನೋಡಿದೆಯಾ ಇಲ್ಲವೆ ಹೇಳು.

(ಯಥಾ ಪ್ರಸಿದ್ಧೇ ಜಗತಿ ಕಲಧೌತಶಿಲಾದಿ ಪ್ರದೇಶಭೇದೇಷು ಅನೇಕಾನಿ ಬ್ರಹ್ಮಾಂಡಾನಿ ಸಂತಿ ತಥಾಧಾರಣಾದೃಷ್ಟೇಷ್ವಪಿ ಭೂಮಂಡಲೇಷು ಪ್ರತಿಪನ್ನಾನಿ ಸಂತಿ ನವಾ ಇತಿ ಸಂದಿಹಾನೋ ರಾಮಃ ಪೃಚ್ಛತಿ—ತಾ. ಪ್ರ.)

**ಶ್ರೀ ವಸಿಷ್ಠನು ಹೇಳಿದನು:—**

೨. (ಭೂಧಾರಣೆಯಲ್ಲಿದ್ದ) ನಾನು ಜಾಗ್ರತ್ತಿನಲ್ಲಿ ಕಾಣುವ ಭೂಮಂಡಲಗಳೂ ಸ್ವಪ್ನದಲ್ಲಿ ಕಾಣುವ ಭೂಮಂಡಲಗಳೂ ಎಲ್ಲವೂ ಪರಮಾತ್ಮಸ್ವರೂಪವೇ ಎಂಬುದನ್ನು ಹೃದಯದಲ್ಲಿ ಅನುಭವಿಸಿದೆನು: ಪರಾದೃಷ್ಟಿಯಿಂದ ಕಂಡೂ ಕಂಡೆನು.

(ಹೃದಯೇ ಪರಯಾ ಈಶ್ವರಸಾಕ್ಷಿದೃಶಾ ಸಾಕ್ಷಾದ್ದೃಷ್ಟಂ ಮನಸಾಚ ವಿಮೃಶ್ಯ ಅನುಭೂತಂ—ತಾ. ಪ್ರ.)

ಯಾವತ್ತತ್ರೈವ ಸರ್ವತ್ರ ಜಗಜ್ಜಾಲಮವಸ್ಥಿತಂ ।
ಸರ್ವಂ ದೃಶ್ಯಮಯಂ ಶಾಂತಮಪಿ ದ್ವೈತಮಯಾತ್ಮಕಂ ॥೩॥

ಜಗಂತಿ ಸಂತಿ ಸರ್ವತ್ರ ಸರ್ವತ್ರ ಬ್ರಹ್ಮಸಂಸ್ಥಿತಂ ।
ಸರ್ವಂ ಶೂನ್ಯಂ ಪರಂ ಶಾಂತಂ ಸರ್ವಮಾರಂಭಮಂಥರಂ ॥೪॥

ಸರ್ವತ್ರೈವಾಸ್ತಿ ಪೃಥ್ವ್ಯಾದಿ ಸ್ಥೂಲಂ ತಚ್ಚ ನ ಕಿಂಚನ ।
ಚಿದ್ವ್ಯೋಮ್ನೈವ ಯಥಾ ಸ್ವಪ್ನಪುರಂ ಪರಮಜಾತವತ್ ॥೫॥

ನೇಹ ನಾನಾಸ್ತಿ ನೋ ನಾನಾ ನ ನಾಸ್ತಿತ್ವಂ ನ ಚಾಸ್ತಿತಾ ।
ಅಹಮಿತ್ಯೇವ ನೈವಾಸ್ತಿ ಯತ್ರ ತತ್ರ ಕುತೋಽಸ್ತಿ ಕಿಂ ॥೬॥

---

೩. ಪೂರ್ವದಲ್ಲಿ ಆ ಪಾಷಾಣದಲ್ಲಿ ಕಂಡಂತೆಯೇ ಅಲ್ಲಿಯೂ ಜಗಜ್ಜಾಲವಿತ್ತು. ಎಲ್ಲವೂ ದೃಶ್ಯವೇ ಆಗಿತ್ತು. ಶಾಂತವಾಗಿದ್ದರೂ ದ್ವೈತಮಯವಾಗಿತ್ತು

೪. ಬ್ರಹ್ಮವು ಎಲ್ಲೆಲ್ಲಿಯೂ ಇರುವುದು : ಜಗತ್ತುಗಳೂ ಎಲ್ಲೆಲ್ಲಿಯೂ ಇರುವುವು. ಆದರೂ ಎಲ್ಲವೂ ಶೂನ್ಯವು ಪರವು, ಶಾಂತವು. ಎಲ್ಲವೂ ಆರಂಭ (ಕಾರ್ಯ) ದಿಂದ ತುಂಬಿರುವುದು.

೫. ಪೃಥಿವ್ಯಾದಿ ಭೂತಗಳಿಂದ ಆದ ಜಗತ್ತು ಸ್ಥೂಲವಾಗಿ ಎಲ್ಲೆಲ್ಲಿಯೂ ಇರುವುದು. ಆದರೆ ದೃಕ್, ದೃಶ್ಯ, ವಿಭಾಗವನ್ನು ತಿಳಿದವನಿಗೆ ಅದು ಯಾವುದೂ ಇಲ್ಲ. ಇರುವುದೆಲ್ಲ ಬರಿಯ ಒಂದು ಚಿದಾಕಾಶವೇ ! ಕಾಣಿಸುವುದೆಲ್ಲವೂ ಪರಮಬ್ರಹ್ಮವೇ ! ಎಲ್ಲೆಲ್ಲೂ ಅಜಾತವಾದ ಸ್ವಪ್ನಪುರವೇ ಇರುವುದು.

೬. "ಇಲ್ಲಿ ನಾನಾ ಎಂಬುದಿಲ್ಲ." "ನಾನಾ ಎಂಬುದು ಇಲ್ಲ" "ಇಲ್ಲ ಎನ್ನುವುದು ಇಲ್ಲ" "ಇದೆ ಎಂಬುದೂ ಇಲ್ಲ" ಇದೆಲ್ಲಕ್ಕೂ ಮೂಲಭೂತವಾದ 'ನಾನು' ಎಂಬುದೇ ಇಲ್ಲ. ಉಂಟು ಎನ್ನುವುದಾದರೆ, ಎಲ್ಲಿ ಉಂಟು ? ಹೇಗೆ ಉಂಟು ? ಏನು ಉಂಟು ?

ಅನುಭೂತಂ ಪರಿಜ್ಞಾತಂ ಸದಹಮಿತ್ಯಾದಿರೂಪಕಂ ।
ನಾಸ್ತ್ಯೇವ ಯದಿ ವಾಪ್ಯಸ್ತಿ ತದ್ಬ್ರಹ್ಮಾಜಮನಾಮಯಂ ॥೭॥

ಯತ್ಸ್ವಪ್ನಪುರವತ್ಸರ್ಗೇ ಸರ್ಗಾದಾವೇವ ಚಿನ್ನಭಃ ।
ಅಸ್ತಿತಾನಾಸ್ತಿತೇ ತತ್ರ ಕೀದೃಶೀ ಕ್ವ ಕುತಃ ಸ್ಥಿತೇ ॥೮॥

ಯಥಾಹಂ ದೃಷ್ಟವಾಂಸ್ತಾನಿ ಜಗಂತ್ಯವನಿರೂಪಧೃಕ್ ।
ತಥಾ ಮಯಾ ಜಲೀಭೂಯ ದೃಷ್ಟಂ ತಾವ್ಯತಮೇವ ತತ್ ॥೯॥

---

(ನಾನು ಎಂಬುದು ಒಂದುಂಟು ಎಂದರೆ ಅದರ ಜತೆಯಲ್ಲಿಯೇ ನೀನೂ ಅವನೂ ಉಂಟು. ಅಹಂ ಇದ್ದರೆ ಇದಂ ಉಂಟೇ ಉಂಟು. ಆದರೆ ಆ ಅಹಂ ಎಂಬುದು ಅಂತಃಕರಣದ ಭಾಗವೇ ಹೊರತು, ಸ್ವತಂತ್ರವಾಗಿ ಅಹಂ ಎಂಬ ಒಂದು ಪದಾರ್ಥವಿಲ್ಲ. ಇರುವುದೆಲ್ಲಾ ಸಾಕ್ಷಿ; ಆ ಸಾಕ್ಷಿಯಾದ ಶಿವವಲ್ಲವೆ ಮತ್ತೇನೂ ಇಲ್ಲವಾಗಿ, ಸರ್ವವೂ ಅದೇ ! ಹಾಗಿದ್ದರೆ ನಾನಾ ಕಾಣುತ್ತಿದೆಯಲ್ಲ ಎಂದರೆ ಇದೊಂದು ಕನಸು.)

೭. ಅಹಂ ಎಂಬುದು ಉಂಟು ಎಂದು ಅನುಭವಕ್ಕೆ ಬರುತ್ತಿದ್ದರೂ ಅದು ಇಲ್ಲವೇ ಇಲ್ಲ. ಒಂದು ವೇಳೆ ಇದೆ ಎನ್ನುವುದಾದರೆ, ಹಾಗೆ ಇರುವುದಾದರೆ ಅದು ಬ್ರಹ್ಮವು, ಅಜವು, ಅನಾಮಯವು.

೮. ಸರ್ಗದ ಆದಿಯಲ್ಲಿ ಚಿದಾಕಾಶವು ಒಂದೇ ಇದ್ದು ಅದೇ ಸ್ವಪ್ನಪುರದಂತೆ ಜಗತ್ತಾಗಿ ಹರಡಿರುವುದು. ಅದರಲ್ಲಿ ಅಸ್ತಿತಾ, ನಾಸ್ತಿತಾ ಎಂಬ ವ್ಯವಹಾರವು ಎಂಥದು ? ಎಲ್ಲಿಯದು ? ಹೇಗೆ ಬಂತು ?

೯. ನಾನು ಅವನಿರೂಪವನ್ನು ಧರಿಸಿಕೊಂಡಾಗ ಯಾವ ಯಾವ ಜಗತ್ತುಗಳನ್ನು ನೋಡಿದೆನೋ ಹಾಗೆಯೇ ಜಲವಾದಾಗಲೂ ಅದೇ ರೀತಿಯಾಗಿ ಎಲ್ಲವನ್ನೂ ಕಂಡೆನು.

ವಾರಿಧಾರಣಯಾ ವಾರಿ ಭೂತ್ವಾ ಜಡಮಿವಾಜಡಂ ।
ಸಮುಪ್ರಮಂದಿರೇಷ್ವಂತಶ್ಚಿರಂ ಗುಲುಗುಲಾಯಿತಂ ॥೧೦॥

ತೃಣವೃಕ್ಷಲತಾಗುಲ್ಮವಲ್ಲೀನಾಂ ಸ್ತಂಭನಾಡಿಷು ।
ಮೃದ್ವಲಕ್ಷಿತಮಾರೂಢಂ ತವಾಂಗೇಷ್ವಿವ ಯೂಕಯಾ ॥೧೧॥

ಸರ್ವೋತ್ಥಾನೋಪಮಾಸ್ತಂಭೇ ತಚ್ಛೇದೇ ವಲಯೋಪಮಾ ।
ಮೃದ್ವ್ಯಾ ಕರ್ಣಾಹಿಗತ್ಯೇವ ರಚನಾ ಪ್ರಕೃತೋದರೇ ॥೧೨॥

---

೧೦. ಜಲಧಾರಣೆಯಿಂದ ನೀರಾಗಿ, ಅಜಲವಾಗಿದ್ದುದು ಎಲ್ಲವನ್ನೂ ಜಲವಂತೆ ನೋಡಿದೆನು. ಸಮುದ್ರಮಂದಿರಗಳಲ್ಲಿ ಬಹುಕಾಲ, ಗುಲಗುಲ ಎಂದು ಎಲ್ಲವೂ ಜಲಮಯವಾಗಿತ್ತು (ಅದನ್ನು ಕಂಡೆನು).

೧೧. ತೃಣ ವೃಕ್ಷ ಲತಾಗುಲ್ಮವಲ್ಲಿಗಳ ಸ್ತಂಭನಾಡಿಗಳಲ್ಲಿ (ಆ ನೀರು) ನಿನ್ನ ಅಂಗಗಳಲ್ಲಿ ಹೇನು ಹತ್ತುವ ಹಾಗೆ, ಮೃದುವಾಗಿ, ಅಲಕ್ಷಿತವಾಗಿ, ಸೇರಿ ಏರಿತು.

೧೨. ಕರ್ಣಾಹಿ ಎಂಬ ಸೂಕ್ಷ್ಮವಾದ ದಾರದ ಎಳೆಯಂತಿರುವ ಹುಳುವು ಮೃದುವಾದ ಗತಿಯಿಂದ ಕಿವಿಗೆ ಬಂದು ಅಲಕ್ಷಿತವಾಗಿ ಪ್ರವೇಶಿಸುವಂತೆ, ಹಾಗೆ ಸರ್ವೋತ್ಥಾನೋಪಮಾಸ್ತಂಭದಂತಿರುವ ಆ ತೃಣಾದಿಗಳ ಛೇದಗಳಲ್ಲಿಯೂ ಅವುಗಳ ಒಳಗೂ ವಲಯದಂತಿರುವ ರಚನೆಯೊಂದು ಕಾಣಿಸಿತು.

(ಮಯಾ ಕರ್ಣಾಹಿಗತ್ಯಾ ತೃಣಾದೀನಾಂ ಸ್ತಂಭೇ ಪ್ರಕಾಂಡೇ ಸರ್ವೋತ್ಥಾನೋಪಮಾ ಸರ್ವೇಷಾಂ ತೃಣಾದೀನಾ ಮುತ್ಥಾನ ಮೂರ್ಧ್ವಸ್ಥಿತಿ ಸ್ತದುಪಮಾ ತತ್ಸ ದೃಶೀಯಥಾ ಊರ್ಧ್ವಸ್ಥಿತಿಃ ಸ್ಯಾತ್ತಥೇತ್ಯರ್ಥಃ । ತೇಷಾಂ ತೃಣ ದೀನಾಂ ಛೇದೇ ಭೇದೇ ಪರ್ವಭೇದೇ ತದುದರೇ ಛಿದ್ರಭೇದೇ ಚ ವಲಯೋಪಮಾವಲಯಾಕಾರ ಪತೀ ರಚನಾ ಪ್ರಕೃತಾ ಸಂಪಾದಿತೇತ್ಯರ್ಥ ಇತಿ ಯೋಜನಾಕಾರ್ಯಾ। ಪೂರ್ವ ಶ್ಲೋಕೋ ಯೂಕೋಪಮಯಾ ಹ್ಯಾರೋಹಣಮಾತ್ರಂ ಪ್ರತಿಪಾದಿತಂ ಕರ್ಣಾಹೀತ್ಯಾದ್ಯುಪಮಯಾ ತ್ವಾಕಾರ ವಿಶೇಷ ಪ್ರತಿಪಾದನ ಪೂರ್ವಕಂ ತತ್ಪ್ರತಿಪಾದಿತ ಮಿತಿಜ್ಞೇಯಂ)

ವಲ್ಲೀಶವಮಾಲತಾಲಾದಿಪಲ್ಲವೇಷು ಫಲೇಷು ಚ ।
ವಿಶ್ರಮ್ಯ ಪುಷ್ಪಯಾ ಕೃತ್ವಾ ರೇಖಾವಿರಚನಂ ಕೃತಂ　　॥೧೩॥

ಮುಖೇನಾವಿಶ್ಯ ಹೃದಯಮೃತುವೈಧುರ್ಯಧಾರಿಣಾ ।
ಹೃತಾ ವಿಧುರಿತಾ ಭುಕ್ತಾ ಲೂನಾ ದೇಹೇಷು ಧಾತವಃ　　॥೧೪॥

ಸುಪ್ತಂ ಪಲ್ಲವತಲ್ಪೇಷು ಪ್ರಾಲೇಯಕಣರೂಪಿಣಾ ।
ತುಲ್ಯಕಾಲಮಶೇಷೇಷು ದಿಕ್ಷು ಸರ್ವಾಸ್ವಖೇದಿನಾ　　॥೧೫॥

ನಾನಾಹ್ರದನದೀಗೇಹಗ್ರಾಹಿಣಾ ವಿರತಾಧ್ವನಾ ।
ವಿಶ್ರಾಂತಂ ಸೇತುಸುಹೃದಃ ಪ್ರಸಾದೇನ ಕ್ವಚಿತ್ಕ್ವಚಿತ್　　॥೧೬॥

---

೧೩. ವಲ್ಲಿಗಳ ಮತ್ತು ತಾಲ, ತಮಾಲಾದಿಗಳ ಪಲ್ಲವಗಳಲ್ಲಿಯೂ ಫಲಗಳಲ್ಲಿಯೂ ರಸರೂಪವಾಗಿ ವಿಶ್ರಾಂತಿಯನ್ನು ಹೊಂದಿದ್ದ ಆ ಜಲವು ವಸಂತಾದಿ ಕಾಲಗಳಲ್ಲಿ ಪುಷ್ಪವಾಗಿ ಎಲೆಗಳನ್ನು ಬಿಡುವಾಗ ಅಲ್ಲಿ ಪತ್ರಾದಿಗಳಲ್ಲಿ ರೇಖಾವಿನ್ಯಾಸವನ್ನು ಮಾಡಿತು.

೧೪. ಹಾಗೆಯೇ ಜಲವು ಪಾನಕಾಲದಲ್ಲಿ ಪ್ರಾಣಿಗಳ ದೇಹವನ್ನು ಪ್ರವೇಶಿಸಿ ಹೃದಯದಲ್ಲಿದ್ದುಕೊಂಡು ವಸಂತಾದಿ ಋತುಭೇದಗಳಿಂದ ವಾತಪಿತ್ತ ಕಫಧಾತುಗಳಾಗಿ ಪರಿಣಾಮವನ್ನು ಹೊಂದಿತು : ಮತ್ತೊಮ್ಮೆ ಅವುಗಳಲ್ಲಿ ಹೆಚ್ಚುಕಡಿಮೆ ಮಾಡಿತು. ಇನ್ನೊಮ್ಮೆ ತಾನೇ ವೈಶ್ವಾನರನಿಗೆ ಆಹಾರವಾಯಿತು. ಮತ್ತೊಮ್ಮೆ ಆ ಧಾತುಗಳು ಈ ಜಲದಿಂದ ವಿಚ್ಛೇದನವನ್ನು ಪಡೆದುವು.

೧೫. ಪಲ್ಲವಗಳಲ್ಲಿ ಹಿಮಕಣರೂಪವಾಗಿ ಅಷ್ಟುಹೊತ್ತು ಮಲಗಿತ್ತು. ಹಾಗೆಯೇ ಎಲ್ಲ ದಿಕ್ಕುಗಳಲ್ಲಿಯೂ ನಿರಾತಂಕವಾಗಿ ನೆಲಸಿತ್ತು.

೧೬. ಹಾಗೆಯೇ ನಾನಾ ನದಿಗಳ ರೂಪವಾಗಿ ಹರಿಯುತ್ತಾ ಮಡುಗಳಾಗಿ ಅಲ್ಲಲ್ಲಿ ನಿಂತು, ಮತ್ತೊಮ್ಮೆ ಒಂದೇ ಸಮನಾಗಿ ಹರಿಯುತ್ತಾ, ಅಡ್ಡಕಟ್ಟೆಗಳೆಂಬ ಸ್ನೇಹಿತರಲ್ಲಿ ನಿಂತು, ಅಲ್ಲಲ್ಲಿ ಇತರರಿಗೆ ಅನುಗ್ರಹಮಾಡುತ್ತ ಹೋಯಿತು.

ವಿದಾ ವಿದನುಸಂಧಾನಾಜ್ಜಡೇನ ತದನಾಶ್ರಯಾತ್ ।
ಜಡಾಶಯೇಷೂಲ್ಲಸಿತಂ ಜಲೇನಾವರ್ತವರ್ತಿನಾ ॥೧೭॥

ಮಯಾ ದುಷ್ಕೃತಿನೇವೋರ್ಧ್ವಶಿಲಾಸ್ವಸ್ಥೇನ ಭೂಭೃತಾಂ ।
ಸ್ವಾವರ್ತವರ್ತಿನಾ ಶ್ವಭ್ರಪಾತೇಷು ಶತಧಾ ಗತಂ ॥೧೮॥

ಧೂಮರೂಪೇಣ ನಿರ್ಗತ್ಯ ದಾರುಭ್ಯೋ ಗಗನಾರ್ಣವೇ ।
ಕಣರತ್ನೇನ ನೀಲರ್ಕ್ಷಮಣ್ಯಂತರ್ವರ್ತಿನಾ ಸ್ಥಿತಂ ॥೧೯॥

---

೧೭. ಚೈತನ್ಯರೂಪವಾದ ಚಿತ್ತೇ ತಾನಾಗಿದ್ದರೂ ಅಚಿದ್ರೂಪವೆಂದುಕೊಂಡು ಜಲರೂಪವಾಗಿ ಕಾಣಿಸುತ್ತಿದ್ದರೂ ಅದನ್ನು ಆಶ್ರಯಿಸದೆ, ಜಲಾಶಯಗಳಲ್ಲಿ ಆವರ್ತವಾಗಿ ಕುಣಿಯಿತು.

(ವಿದಾ ಚೈತನ್ಯೇನ ಅವಿದಂಶಸ್ಯ ವಿಷಯತಯಾ ಅನುಸಂಧಾನಾತ್ತತ್ರ ವಿಷಯಾಂಶಮಾತ್ರತಯಾ ತಸ್ಯ ಚಿತ್ಸ್ವಭಾವಸ್ಯ ಅನಾಶ್ರಯಾಜ್ಜಡೇನ ಅತಏವ ಲಡಯೋರಾಭೇದಾತ್ ಜಲೇನ ಮಯಾ ಜಡಾಶಯೇಷು ಜಡಾಶಯ ಪ್ರಾಯೇಷು ಭ್ರಾಂತಿ ಸಹಸ್ರೈಃ ಆವರ್ತವದ್ವರ್ತಿನಾ ಉಲ್ಲಸಿತಂ–ತಾ. ಪ್ರ.)

೧೮. ಆ ಜಲಧಾರಣದಲ್ಲಿದ್ದ ನಾನು ಪಾಪಿಗಳಂತೆ ಬೆಟ್ಟಗಳ ಕೋಡುಗಳಿಂದ ಕೆಳಕ್ಕೆ ಉರುಳಿ ಹಳ್ಳದಲ್ಲಿ ನೂರಾರು ಪಾಲಾದೆನು.

೧೯. ಮರಗಳಿಂದ ಧೂಮರೂಪವಾಗಿ ಹೊರಟು ಆಕಾಶ ಸಮುದ್ರದಲ್ಲಿ ಕಣಕಣಗಳಂತಾಗಿ ರತ್ನದಂತೆ ಹೊಳೆಯುತ್ತಾ, ನೀಲವಾಗಿರುವ ನಕ್ಷತ್ರಮಣಿಗಳ ಕಾಂತಿಯನ್ನು ಮೆರೆಯುತ್ತಾ ಇದ್ದೆನು.

(ವಸಿಷ್ಠವಚನ ಪ್ರಾಮಾಣ್ಯಾದ್ಭೂಸ್ಥೈರದೃಶ್ಯಾದಿ ನೀಲವರ್ಣಾನ್ಯಪಿ ನಕ್ಷತ್ರಾಣಿ ದಿವಿ ಸಂತೀತಿ ಗಮ್ಯತೇ–ತಾ. ಪ್ರ.)

(ಧೂಮರೂಪೇಣ ನಿರ್ಗತ್ಯ ದಾರುಭ್ಯಃ–ಎಂಬಲ್ಲಿ ಮರಗಳಿಂದ ಆವಿಯರೂಪವಾಗಿ ಹಗಲೆಲ್ಲ ಬರುವ ನೀರನ್ನು ಕುರಿತು ಹೇಳಿರಬಹುದೋ? ತಾತ್ಪರ್ಯ ಪ್ರಕಾಶವು ಹೇಳಿರುವ ಭೂಸ್ಥೈರದೃಶ್ಯಾನಿ ನೀಲನಕ್ಷತ್ರಾಣಿ ಎಂಬ ಮಾತು ಗಮನಾರ್ಹವಾದುದು.)

ವಿಶ್ರಾಂತಮಭ್ರಪೀಠೇಷು ವಿದ್ಯುದ್ವನಿತಯಾ ಸಹ ।
ಭಿನ್ನೇಂದ್ರನೀಲನೀಲೇನ ಶೇಷಾಂಗೇಷ್ವಿವ ಶೌರಿಣಾ ॥೨೦॥

ಪರಮಾಣುಮಯೇ ಸರ್ಗೇ ಪಿಂಡರೂಪೇಷ್ವಲಕ್ಷಿತಂ ।
ಸ್ಥಿತಮಂತಃಪದಾರ್ಥೇಷು ಬ್ರಹ್ಮಣೇವಾಖಿಲಾತ್ಮನಾ ॥೨೧॥

ಪ್ರಾಪ್ಯ ಜಿಹ್ವಾಣುಭಿಃ ಸಂಗಮನುಭೂತಿಃ ಕೃತೋತ್ತಮಾ ।
ಯಾಮಾತ್ಮನೋ ನ ದೇಹಸ್ಯ ಮನ್ಯೇ ಜ್ಞಾನಸ್ಯ ಕೇವಲಂ ॥೨೨॥

---

೨೦. (ಅಲ್ಲಿ ಮೇಘರೂಪವನ್ನು ಹೊಂದಿ) ಆಕಾಶ ಪೀಠದಲ್ಲಿ, ಶೇಷಶಯ್ಯೆಯಲ್ಲಿ ಮಲಗಿರುವ ಶೌರಿಯಂತೆ ಸುಖವಾಗಿ, ಒಡೆದಿರುವ ಇಂದ್ರನೀಲಮಣಿಯ ನಿಲಕಾಂತಿಯಿಂದ ಶೋಭಿಸುತ್ತಾ ವಿದ್ಯುತ್ತೆಂಬ ವನಿತೆಯೊಡನೆ ಸುಖವಾಗಿದ್ದೆನು.

೨೧. ಪರಮಾಣುಮಯವಾದ ಸೃಷ್ಟಿಯಲ್ಲಿ ಪಿಂಡಗಳ ನಡುವೆ ಅಲಕ್ಷಿತವಾಗಿದ್ದುಕೊಂಡು, ಆಯಾ ಪದಾರ್ಥಗಳ ಒಳಗೆ, ಅಖಿಲಾತ್ಮನಾದ ಬ್ರಹ್ಮನಂತೆ ಇದ್ದೆನು.

(ಪ್ಲುಷಿ, ಪುತ್ತಿಕಾದಿ ಪರಮ ಸೂಕ್ಷ್ಮ ದೇಹಾತ್ಮಕೇ ಅಪಿ ಸರ್ಗೇ ತತ್ತತ್ಪ್ರಾಣಿ ಪಿಂಡರೂಪೇಷು ಅಂತಸ್ಸರ್ಗೇಷು ಪರಮಸೂಕ್ಷ್ಮ ಜಲಾತ್ಮನಾ ಮಯಾ ಸ್ಥಿತಂ—ತಾ. ಪ್ರ.)

೨೨. ಅಲ್ಲಲ್ಲಿ (ಆಯಾ ಪ್ರಾಣಿಗಳಲ್ಲಿ) ಜಿಹ್ವೆಯಾಗಿರುವ ಅಣುಗಳ (ತನ್ಮಾತ್ರಗಳ) ಜೊತೆ ಸೇರಿ, ಉತ್ತಮವಾಗಿರುವ ರಸಗಳ ಅನುಭವವನ್ನು ಪಡೆದೆನು. ಆ ಅನುಭವವು ಆತ್ಮನದೇ ಹೊರತು ದೇಹದ್ದಲ್ಲ. ಅದು ಜ್ಞಾನಾಂಶವೆಂದೇ ನಾನು ತಿಳಿದು ನೋಡಿದೆನು.

(ಕಿಂಚ ಮಧುರಾದಿ ರಸಾತ್ಮನಾ ಮಯಾ ತದೀಯ ಜಿಹ್ವಾಲಕ್ಷಣೈರಣುಭಿಃ ಸಹಸಂಗಂ ಪ್ರಾಪ್ಯ ತೇಷಾಂ ರಸಾಸ್ವಾದ ಲಕ್ಷಣಾ ಉತ್ತಮಾ ಅನುಭೂತಿಃ ಕೃತಾನ ಯಾಮನುಭೂತಿಂ ನದೇಹಸ್ಯ ಮನ್ಯೇ । ಕಿಂತು ಕೇವಲಂ ಜ್ಞಾನಸ್ವರೂಪಸ್ಯ ಆತ್ಮ । ಏವ ವಿಷಯಾನಂದಾಕಾರಾವಿರ್ಭೂತಂ ಸ್ವರೂಪಂ ಮನ್ಯೇ । ಏತಸ್ಯೈವಾನಂದ ಸ್ಯಾನ್ಯಾನಿಭೂತಾನಿ ಮಾತ್ರಾಮುಪಜೀವಂತಿ ಇತಿ ಶ್ರುತೇರಿವಭಾವಃ—ತಾ. ಪ್ರ.)

ನ ಮಯಾ ನಚ ದೇಹೇನ ನಾನ್ಯೇನಾಸ್ವಾದಿತಾತ್ಮ ಯತ್ ।
ತದಂತರ್ವಿವೃತಂ ಚೇತ್ಯಮಜ್ಞಾನಾಯ ತದಪ್ಯಸತ್ ॥೨೩॥

ಸರ್ವರ್ತುರಸರೂಪೇಣ ನಾನಾಮೋದಾನಿ ದಿಕ್ಷ್ವಲಂ ।
ಭುಕ್ತಾನಿ ಪುಷ್ಪಜಾಲಾನಿ ಪ್ರೋಚ್ಛಿಷ್ಟಂ ದದತಾಲಯೇ ॥೨೪॥

---

೨೩. ನಾನು ಎಂಬ ಅಹಂಕಾರದಿಂದಲಾಗಲಿ, ಅಥವಾ ಈ ದೇಹದಿಂದಾಗಲಿ ಅಥವಾ ಇನ್ನಾರಿಂದಲೇ ಆಗಲಿ ಆ ರಸವು ಅನುಭೂತವಾಗಲಿಲ್ಲ. ಆ ರಸವು ಅಂತಃ ತಾನೇ ವಿಕಾಸವನ್ನು ಪಡೆಯಿತು. ಅಜ್ಞಾನಿಗಳು ಹಾಗೆ ತನ್ನ ಸ್ವರೂಪಾನುಭವವಾದುದನ್ನು ಅರಿಯದೆ ಹೊರಗಿನ ಚೈತ್ಯದಿಂದ ಬಂತೆನ್ನುವರು. ಅದು ಸರಿಯಲ್ಲ.

(ತತ್ರ ಪೃಥಗ್ಜನಾ ವಿಷಯಮೇವಾನಂದರೂಪಂ ಆಸ್ವಾದ್ಯಮಾನಂ ಮನ್ಯಂತೇ ತನ್ನ ತಥಾ ವಿದ್ಯಾತ್. ಕಿಂತು ಅಸದ್ದುಃಖರೂಪಂ ಅನಾಸ್ವಾದನೀಯಮೇವೇತಿತಂ ಪೃಥಕ್ಕೃತ್ಯ ದರ್ಶಯತಿ–ನಮಯೇತಿ । ಯಚ್ಚೈತ್ಯಂ ವಿಷಯರೂಪಂ ತನ್ನಮಯಾ ತದಧಿಷ್ಠಾನಚಿತಾ, ನಾಪ್ಯಾಸ್ವಾದಕ ಪುರುಷದೇಹೇನ, ನಾಪ್ಯನ್ಯೇನ ತಜ್ಜೀವೇನ, ಆಸ್ವಾದಿತಾತ್ಮ ಸುಖಲೇಶಸ್ಯಾಪ್ಯಭಾವೇನ ಆಸ್ವಾದನಾಯೋಗ್ಯತ್ವಾತ್ ತಥಾವಿಧಂ ಚೈತ್ಯಂ ಚಿತಾಯದಂತರ್ವಿವೃತಂ ಪ್ರಕಾಶಿತಂ ತತ್ಕೇವಲಂ ಜೀವನಾಮಜ್ಞಾನಾಯ ವ್ಯಾಮೋಹಾಯೈವ ಯತಸ್ತಚ್ಚೈತ್ಯಂ ತದಜ್ಞಾನಮಪ್ಯಸಜ್ಜೀವ । ಅಸತಃ ಅಸದರ್ಥತ್ವಸ್ಯ ಏವ ಔಚಿತ್ಯಾದಿತ್ಯರ್ಥಃ—ತಾ. ಪ್ರ.)

೨೪. ಸರ್ವ ಋತುಗಳಲ್ಲಿಯೂ ಆಯಾ ಋತುಗಳಲ್ಲಿರುವ ಪ್ರಧಾನರಸರೂಪವಾಗಿ ದಿಕ್ಕುದಿಕ್ಕುಗಳಲ್ಲಿಯೂ ನಾನಾ ಸುವಾಸನೆಗಳಿಂದ ಮನೋಹರಗಳಾಗಿರುವ ಪುಷ್ಪಗುಚ್ಛಗಳನ್ನು ಅನುಭವಿಸಿ, ಉಳಿದುದನ್ನು ಭ್ರಮರಗಳಿಗೆ ಕೊಟ್ಟೆನು.

ಚತುರ್ದಶಪ್ರಕಾರಾಣಾಂ ಭೂತಾನಾಮಂಗಸಂಧಿಷು ।
ಉಷಿತಂ ಚೇತನೇನೇವ ಜಡೇನಾಪ್ಯಜಡಾತ್ಮನಾ ॥೩೫॥

ಶೀಕರೋತ್ಕರರೂಪೇಣ ರಥಮಾರುಹ್ಯ ಮಾರುತಂ ।
ಆಮೋದೇನೇವ ವಿಹಿತಂ ವಿಮಲವ್ಯೋಮವೀಥಿಷು ॥೩೬॥

ರಾಮಃ ತಸ್ಯಾಮವಸ್ಥಾಯಾಂ ಪರಮಾಣುಕಣಂ ಪ್ರತಿ ।
ಅನುಭೂತಮಶೇಷೇಣ ಯಥಾಸ್ಥಿತಮಿದಂ ಜಗತ್ ॥೩೭॥

ಅಜಡೇನ ಜಡೇನೇವ ಸಮಯಾ ಜಾಲಯಾ ತಯಾ ।
ಅಂತಃಸರ್ವಪದಾರ್ಥಾನಾಂ ಜ್ಞಾತಾಜ್ಞಾತೇನ ಸಂಸ್ಥಿತಂ ॥೩೮॥

---

೩೫. ಹದಿನಾಲ್ಕು ಪ್ರಕಾರಗಳಾದ ಭೂತಗಣಗಳ ಅಂಗಸಂಧಿಗಳಲ್ಲಿ ಕಲ್ಪನೆಯಿಂದ ಜಡವಾಗಿದ್ದರೂ ಅಜಡಾತ್ಮವಾದ ಚೇತನವೇ ಆದ ನಾನು ಜಡದಂತೆ ಇದ್ದುಕೊಂಡಿದ್ದೆನು.

೩೬. ಸಣ್ಣ ಸಣ್ಣ ಹನಿಯಾಗಿ ಮಾರುತನೆಂಬ ರಥವನ್ನೇರಿ, ಪರಿಮಳದಂತೆ, ಶುಭ್ರವಾದ ಆಕಾಶವೀಧಿಗಳಲ್ಲಿ ಸಂಚರಿಸಿದೆನು.

(ಮಾರುತರೂಪಂ ರಥಮಾರುಹ್ಯ ವಿಹಿತಂ ಕ್ರೀಡನಂ ಜನಾಹ್ಲಾದನಂ ಚೇತಿ ಶೇಷಃ—ತಾ. ಪ್ರ.)

೩೭. ರಾಮ, ಆ ಅವಸ್ಥೆಯಲ್ಲಿ ಪರಮಾಣು ಸ್ವರೂಪವಾದ ಕಣಕಣದಲ್ಲಿಯೂ ಈ ಜಗತ್ತಿನಂತಿರುವ ಜಗತ್ತು ಅಶೇಷವಾಗಿ ಎಂದರೆ ಯಾವ ನ್ಯೂನತೆಯೂ ಯಿಲ್ಲದೆ, ಹೇಗೆ ಇರಬೇಕೋ ಹಾಗೆಯೇ ಇರುವುದನ್ನು ಕಂಡೆನು.

೩೮. ನಾನು ಅಜಡನಾಗಿದ್ದರೂ ಜಡನಂತೆ, ಜಲದಂತಿರುವ ಸ್ಥಿತಿಯಲ್ಲಿ ಸರ್ವಪದಾರ್ಥಗಳ ಒಳಗೆ ಜ್ಞಾತಾಜ್ಞಾತವಾಗಿ ಇದ್ದೆನು.

ಜಗತಾಂ ತತ್ರ ಲಕ್ಷಾಣಿ ನಾಶೋತ್ಪಾತಶತಾನಿ ಚ ।
ಮಯಾ ದೃಷ್ಟಾನಿ ರೂಢಾನಿ ಕದಲೀದಲಪೀಠವತ್ ॥೨೯॥

ಏವಂ ಜಗಚ್ಚಾಜಗದ್ವಾ ಸಾಕಾರಂ ವಾ ನಿರಾಕೃತಿ ।
ಚಿನ್ಮಾತ್ರಗಗನಂ ಸರ್ವಮಾಕಾಶಾಧಿಕ ನಿರ್ಮಲಂ ॥೩೦॥

ನ ಕಿಂಚನ ತ್ವಂ ಚ ನ ಕಿಂಚನೇದಂ ।
ಶುದ್ಧಃ ಪರೋ ಬೋಧ ಇದಂ ವಿಭಾತಿ ॥

---

೨೯. ಅಲ್ಲಿ ಹಾಗೆ ಕುಳಿತಿರುವಂತೆಯೇ, ಭದ್ರವಾಗಿದ್ದ ಲಕ್ಷಲಕ್ಷ ಜಗತ್ತುಗಳು ಏನೇನೋ ಉತ್ಪಾತಗಳಿಗೆ ಸಿಕ್ಕಿ ಬಾಳೆಯ ಬುಡದಂತೆ ನಾಶವಾಗುವುದನ್ನು ನಾನು ಕಂಡೆನು.

(ಕದಲೀದಲ ಪೀಠವತ್ ಅಂತರಂತಃ ಪ್ರರೂಢಾನಿ ಅನಂತಾನಿ ಇತ್ಯರ್ಥಃ— ತಾ. ಪ್ರ.)

೩೦. ಹೀಗೆ ಜಗತ್ತುಗಳು ಅಜಗತ್ತುಗಳೂ ಸಾಕಾರವಾಗಲಿ ನಿರಾಕಾರವಾಗಲಿ, ಎಲ್ಲವೂ ಚಿದಾಕಾಶವೇ ! ಎಲ್ಲವೂ ಆಕಾಶಕ್ಕಿಂತಲೂ ಅಧಿಕವಾದ ನಿರ್ಮಲವಾದ ಚಿತ್ತೇ !

(ಏವಂ ಕಲ್ಪಿತಾನಂತ ಜಗದ್ವ್ಯಾಪ್ತತ್ವೇಽಪಿ ನಾಧಿಷ್ಠಾನ ಚಿತಿ ಕಿಂಚಿನ್ಮಾಲಿನ್ಯಮಸ್ತೀತ್ಯಾಹ— ತಾ. ಪ್ರ.)

೩೧. ನೀನು ಎಂಬುದು ಪ್ರತ್ಯೇಕವಾಗಿ ಯಾವುದೂ ಇಲ್ಲ : ಇದಂ ಎಂಬ ದೃಶ್ಯರೂಪವಾದುದೂ ಯಾವುದೂ ಇಲ್ಲ. ಶುದ್ಧವೂ ಪರವೂ ಆದ ಜ್ಞಾನಸ್ವರೂಪವೇ ದೃಶ್ಯವಾಗಿ ಕಾಣಿಸಿಕೊಳ್ಳುವುದು. ಆದರೂ ಆ ಜ್ಞಾನವೂ ಏನೂ ಅಲ್ಲ : ಶೂನ್ಯವಂತೂ ಅಲ್ಲವೇ ಅಲ್ಲ. ಆದರಿಂದ, ಎಲೈ ರಾಮ, ನೀನು ಆಕಾಶಸ್ವರೂಪನೆ ! ಅದರಿಂಧ, ಯಾವುದೊಂದೂ ಸಂಕೋಚವಿಲ್ಲದ ವ್ಯಾಪ್ತಭಾವದಲ್ಲಿರು.

ಸ ಚಾಪಿ ನೋ ಕಿಂಚನ ನಾಪಿ ಶೂನ್ಯ ।
ಮಾಕಾಶಮೇವಾಸಿ ವಿಕಾಸಮಾತ್ರ ॥೩೧॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಪಾಷಾಣೋ
ಪಾಖ್ಯಾನೇ ಜಲಜಗದ್ವರ್ಣನಂ ನಾಮ ನವತಿತಮಃ ಸರ್ಗಃ

---

(ಉಕ್ತಂ ನ್ಯಾಯಂ ರಾಮದೃಶ್ಯ ಜಗತ್ಯಪಿ ಯೋಜಯನ್ ಸರ್ವಾಧಿಷ್ಠಾನ ರೂಪ ಚಿನ್ಮಾತ್ರೇ ರಾಮಂ ಪ್ರತಿಷ್ಠಾಪಯತಿ–ನಕಿಂಚನೇತಿ । ನ ಕಿಂಚನತ್ವಂ ಇತಿ ಅವಸ್ಥಾತ್ರಯೇಣ ಸಹ ದೇಹೇಂದ್ರಿಯಾದಿ ಪ್ರತಿಷೇಧಃ । ಸ ಚ ಶೋಧಿತ ತತ್ವಂ ಪದಾರ್ಥ ಲಕ್ಷಣೋ ಬೋಧಃ ನೋಕಿಂಚನ ದೃಶ್ಯಸ್ವಭಾವೋ ನಾಪ್ಯದೃಶ್ಯಸ್ವಭಾವೋ ನಾಪ್ಯದೃಶ್ಯರೂಪಸ್ಯ ಸ್ವಭಾವಃ, ಕಿಂತ್ವಖಂಡಾಕಾಶರೂಪಃ ಸವಿವರ್ತ್ವಮಸ್ಯತೋ ವಿಕಾಸಮಖಂಡ ವಾಕ್ಯಾರ್ಥ ಬೋಧ ಧ್ವಸ್ತ ಸರ್ವದ್ವೈತ ಸಂಕೋಚಂ ಯಥಾಸ್ಥಿತ ತ್ವಥಾ ಆಸ್ವೇತ್ಯರ್ಥಃ)

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಜಲಜಗದ್ವರ್ಣನ" ಎಂಬ
ತೊಂಭತ್ತನೆಯ ಸರ್ಗವು



# ಏಕನವತಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ:—

ತತೋಽಹವ ಭವಂ ತೇಜಸ್ತೇಜೋಧಾರಣಯೇದ್ಧಯಾ ।
ಚಂದ್ರಾರ್ಕತಾರಕಾಗ್ನ್ಯಾದಿವಿಚಿತ್ರಾವಯವಾನ್ವಿತಂ ॥೧॥

ನಿತ್ಯಂ ಸತ್ವಪ್ರಧಾನತ್ವಾತ್ಪ್ರಕಾಶಾಕೃತಿರಾಜಗತ್ ।
ಸರ್ವಂ ದೃಶ್ಯವೃತೇ ಸರ್ವಚೌರಧ್ವಾಂತಪ್ರತಾಪಯುಕ್ ॥೨॥

ದೀಪಾದಿಭಿಃ ಶನ್ಯೈಃ ಸ್ನಿಗ್ಧೈರ್ದಶಾಶತವಿಹಾರಿಭಿಃ ।
ಪ್ರತ್ಯಕ್ಷೀಕೃತಸರ್ವಾರ್ಥಂ ಪ್ರತಿಗೇಹಂ ಸುರಾಜವತ್ ॥೩॥

---

# ತೊಂಭತ್ತೊಂದನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು: —

೧. ಆ ಮೇಲೆ ನಾನು ತೇಜೋಧಾರಣೆಯನ್ನು ಮಾಡಿ ತೇಜಸ್ಸಾದೆನು. ಆಗ ನನಗೆ ಚಂದ್ರ, ಸೂರ್ಯ, ತಾರಕೆಗಳು, ಅಗ್ನಿ ಮೊದಲಾದವೆಲ್ಲವೂ ವಿಚಿತ್ರಾವಯವಗಳಾದುವು.

೨. ಆಗ ಯಾವಾಗಲೂ ಸತ್ವ (ಗುಣ) ಪ್ರಧಾನವಾಗಿ ಜಗತ್ತೆಲ್ಲವನ್ನೂ ತುಂಬಿ ದೃಶ್ಯವೆಲ್ಲವೂ ಪ್ರಕಾಶವೇ ಆಕೃತಿಯಾಗಿತ್ತು ಆದರೆ ಕತ್ತಲು ಮಾತ್ರ ಬೇರೆಯಾಗಿತ್ತು. ಆ ಕತ್ತಲನ್ನೂ ಕಳ್ಳರನ್ನೂ ಓಡಿಸಿಕೊಂಡು ಹೋಗುವ ರಾಜನಂತೆ, ಪ್ರತಾಪವಂತನಾಗಿ ಓಡಿಸುತ್ತಿದ್ದನು.

೩. ನೂರಾರು ಬತ್ತಿಗಳಿಂದ ಉರಿಯುವ ದೀಪದಂತೆ ಉರಿಯುತ್ತಾ, ಒಳ್ಳೆಯ ರಾಜನು ಚಾರಮುಖದಿಂದ ಮನೆಮನೆಯಲ್ಲೂ ನಡೆಯುವ ಎಲ್ಲವನ್ನೂ ನೋಡುವಂತೆ, ಎಲ್ಲವನ್ನೂ ಪ್ರತ್ಯಕ್ಷವಾಗಿ ನೋಡುವವನಾದೆನು.

ಲೋಕಾಲೋಕೇ ಚ ಹೃಷಿತೈರ್ಹೃಷ್ಟಂದ್ರಾರ್ಕಾದ್ಯಂಶುರೋಮಭಿಃ ।
ಪರಪ್ರಕಾಶ್ಯೈಕರತೈರ್ದೂರೋತ್ಕ್ಷಿಪ್ತಾಂಬರಾಂಬರಂ ॥೮॥

ಅಂಧಕಾರಸ್ಯ ದೈನ್ಯಸ್ಯ ಸಮಸ್ತಗುಣನಾಶಿನಃ ।
ದೃಶ್ಯಂ ಸದ್ವ್ಯಪನಿಶಂ ಸರ್ಗಸ್ಯ ಗುಣಶಾಲಿನಃ ॥೫॥

---

(ಕಾರ್ತವೀರ್ಯಾರ್ಜುನನ ರಾಜ್ಯದಲ್ಲಿ ಕಳ್ಳತನವಿರಲಿಲ್ಲ. ಎಲ್ಲಿ ಯಾರಾದರೂ ಕಳ್ಳತನ ಮಾಡಿದರೆ, ಅಲ್ಲಿಯೇ ಆ ರಾಜನು ಪ್ರತ್ಯಕ್ಷನಾಗಿ ಅವನನ್ನು ಹಿಡಿದು ದಂಡಿಸುತ್ತಿದ್ದನು ಎಂದು ಹೇಳಿರುವುದನ್ನು ಇಲ್ಲಿ ಅನ್ವಯಿಸಿ ನೋಡಿ. ತೇಜೋಧಾತುವು ರೂಪಗುಣವುಳ್ಳದು.)

೮. ಪರಪ್ರಕಾಶವಷ್ಟೇ ಕೆಲಸವಾಗಿರುವ ಸೂರ್ಯ ಚಂದ್ರಾದಿಗಳ ಕಿರಣಗಳು ಸಂತೋಷಗೊಂಡು ತಾವು ಉಟ್ಟಿದ್ದ ವಸ್ತ್ರವನ್ನು ಕಿತ್ತು ಲೋಕಾಲೋಕ ಪರ್ವತದಲ್ಲಿ ಎಸೆದವೋ ಎಂಬಂತೆ ಆಕಾಶವು ಕಾಣುತ್ತಿತ್ತು.

(ಪರಪ್ರಕಾಶ್ಯೈಕರತೈಃ, ಅತಏವ ಲೋಕಾನಾಂ ಜನಾನಾಂ ಭುವನಾನಾಂ ಚ ಆಲೋಕೇ ಅತಿಸಂತುಷ್ಟೈಃ ಪುಲಕಿತೈಶ್ಚ ಚಂದ್ರಾರ್ಕಾದ್ಯಂಶು ಲಕ್ಷಣೈ ರೋಮಭಿರ್ದೂರೇ ಉತ್‌ಊರ್ಧ್ವಂಕ್ಷಿಪ್ತಮಸ್ತಮಂಬರಂ ಸರ್ವಾವರಕತಮೋ ವಸ್ತ್ರಮಿವ ದೃಶ್ಯಮಾನಮಂಬರಮಾಕಾಶಂಯೇನ ಇತಿ ಉತ್ಪ್ರೇಕ್ಷಾ)

೫. ಜಗತ್ತೆಂಬ ದೃಶ್ಯದ ಸಮಸ್ತ ಗುಣಗಳನ್ನೂ ನಾಶಮಾಡಿ ಏನೂ ಇಲ್ಲದಂತೆ ಮಾಡುವ ಅಂಧಕಾರವೆಂಬ ದೈನ್ಯವನ್ನು ಹೊರದೂಡಿ, ಗುಣಶಾಲಿಯಾದ ಸೃಷ್ಟಿಯನ್ನು ತೋರಿಸುವುದು ನ್ಯಾಯವಷ್ಟೆ!

(ಕಿಮರ್ಥಮಂಧಕಾರಂದೂರೇ ಉತ್ಕ್ಷಿಪತಿ ಇತಿ ಚೇತ್, ತತ್ರಾಹ—ಅಂಧಕಾರಸ್ಯೇತಿ। ಯತಃ ಸತ್‌ವಿದ್ಯಮಾನಂ ಜಗತ್ಸರ್ವಂ ಸಮಸ್ತಾನ್ ಗುಣಾನ್ ರೂಪಾದೀನ್ ನಾಶಯತಿ ಅದರ್ಶನಂ ನಯತಿ ತಥಾವಿಧಸ್ಯ ಅಂಧಕಾರ ಲಕ್ಷಣಸ್ಯ ದೈನ್ಯಸ್ಯ ದೃಶ್ಯಂ ವಿಷಯಃ। ಸರ್ಗಸ್ಯ ಚ ಗುಣಶಾಲಿನಃ ಪರದೈನ್ಯ ನಿವರ್ತನ ಸಮರ್ಥಸ್ಯ ಸತ್ ಉತ್ತಮಮುಪಗತದೈನ್ಯಂ ಜಗದ್ದೃಶ್ಯಂ ದರ್ಶನಾರ್ಹಂ ಅತಸ್ತದಪನಯನಂ ಯುಕ್ತಮೇವೇತ್ಯರ್ಥಃ—ತಾ. ಪ್ರ:)

ತಮಸ್ತಮಾಲಪರಶುಃ ಪರಶುದ್ಧಿಕರಂ ಪದಂ ।
ಸುವರ್ಣಮಣಿಮಾಣಿಕ್ಯ ಮುಕ್ತಾದಿಜನಜೀವಿತಂ ॥೬॥

ಶುಕ್ಲಕೃಷ್ಣಾರುಣಾದೀನಾಂ ನಿತ್ಯಂ ಜ್ಯೋತಿಸ್ತ್ವಗಾಶಯಿನಾಂ ।
ಪುತ್ರಾಣಾಮಿವ ವರ್ಣಾನಾಂ ಸರ್ವೇಷಾಂ ಪೋಷಕಃ ಪಿತಾ ॥೭॥

ಘನಸ್ನೇಹರಸಂ ಪೃಥ್ವ್ಯಾ ರಕ್ಷಿತಾನಲವೇಧಸಂ ।
ಗೃಹಂ ಪ್ರತಿ ಘನಾನಂದೈರ್ವೃತದೀಪಕಪುತ್ರಕಂ ॥೮॥

ದೃಷ್ಟಂ ಪಾತಾಲಕೇಷ್ವೀಷತ್ತಮೋರೂಪೇಷು ಪಾವಕಂ ।
ಅರ್ಧದೃಷ್ಟಂ ರಜೋರೂಪೇ ಭೂತಲೇ ಭೂತಮಾಲಿತೇ ॥೯॥

---

೬. ತಮಸ್ಸೆಂಬ ತಮಾಲ ವೃಕ್ಷಗಳಿಗೆ ಪರಶುವಾಗಿ, ಎಲ್ಲರನ್ನೂ ಶುದ್ಧಿಗೊಳಿಸುವುದಾಗಿ ಸುವರ್ಣಮಣಿ ಮಾಣಿಕ್ಯಾದಿ ರೂಪವಾಗಿ ಜನರಿಗೆ ಜೀವನವನ್ನು ನಡೆಸಿಕೊಡುವುದು (ತೇಜಸ್ಸು).

(ಸುವರ್ಣಾದಿ ಲೋಹಗಳೂ ಮಣಿಮಾಣಿಕ್ಯಗಳೂ ತೈಜಸವೆಂದು ಶಾಸ್ತ್ರ ಪ್ರತೀತಿ.)

೭. ಕಿರಣಗಳ ರೂಪದಲ್ಲಿರುವ ಶುಕ್ಲ ಕೃಷ್ಣ ಅರುಣ ಮೊದಲಾದ ಸರ್ವ ವರ್ಣಗಳಿಗೂ ಮಕ್ಕಳಿಗೆ ತಂದೆಯಂತೆ ಪೋಷವನ್ನು ಕೊಡುವುದು ತೇಜಸ್ಸು.

೮. ಈ ತೇಜಸ್ಸಿಗೂ ಪೃಥಿವಿಗೂ ಘನವಾದ ಸ್ನೇಹವಿರುವುದು. ಅದಕ್ಕೆ ಸಾಕ್ಷಿಯೇನೆಂದರೆ ಎಲ್ಲವನ್ನೂ ಸುಡುವ ಅಗ್ನಿಯು ಮಣ್ಣನ್ನು ಸುಡುವುದಿಲ್ಲ. ಪೃಥಿವಿಯಲ್ಲಿ ಮನೆಮನೆಯಲ್ಲೂ ಅಗ್ನಿಯನ್ನು ಆನಂದವಾಗಿ ಮಗನಂತೆ ದೀಪರೂಪವಾಗಿ ಸಂರಕ್ಷಿಸುವರು.

೯. ತಮೋರೂಪವಾಗಿರುವ ಪಾತಾಲ ಲೋಕದಲ್ಲಿಯೂ ಪಾವಕನಾಗಿ ಈಷದ್ದೃಷ್ಟನಾಗಿ ಇದ್ದೆನು. ಭೂತಗಣಗಳಿಂದ ಕೂಡಿರುವ ರಜೋರೂಪವಾದ ಭೂತಲದಲ್ಲಿ ಅರ್ಧದೃಷ್ಟನಾಗಿದ್ದೆನು.

ಸತ್ತ್ವಾತ್ಮಸುಮಹಾಸತ್ತ್ವಂ ನಿತ್ಯತ್ವಂ ದೇವಸದ್ಮಸು ।
ಜಗಜ್ಜೀರ್ಣಕುಟೀದೀಪಃ ಕೂಪೋಂಧಸ್ತಮಸೋರ್ಮಹಾನ್ ॥೧೦॥

ದಿಗ್ವಧೂಮಣಿಮುಖಾದರ್ಶೋ ನಿಶಾನೀಹಾರ ಮಾರುತಃ ।
ಸತ್ತ್ವಂ ಚಂದ್ರಾರ್ಕವಹ್ನೀನಾಂ ಕುಂಕುಮಾಲೇಪನಂ ದಿವಃ ॥೧೧॥

ಕೇದಾರಂ ದಿನಸಸ್ಯಾನಾಂ ತಮೋಚ್ಛ್ರಾನಾಮನುಗ್ರಹಃ ।
ನಭಃ ಕಾಚಬೃಹತ್ಪಾತ್ರಕ್ಷಾಲನಾಂಬು ಸಮುಲ್ಲಸತ್ ॥೧೨॥

---

(ತಮೋರಜಃ ಸತ್ತ್ವ ಬಹುಲೇಷು ಪಾತಾಲಾದಿಷು ಲೋಕೇಷು ತೇಜಸಃ ಪ್ರಕಾಶ ತಾರತಮ್ಯ ಮಾಹ-ತಾ. ಪ್ರ.)

೧೦. ಸತ್ತ್ವಗುಣದಿಂದ ಕೂಡಿ ಸ್ವಪ್ರಕಾಶವಾಗಿರುವ ಸುಮಹಾಸತ್ತ್ವದ ದೇವ ಗೃಹಗಳಲ್ಲಿ ಜಗತ್ತೆಂಬ ಜೀರ್ಣಕುಟಿಯಲ್ಲಿರುವ ದೀಪವೋ ಎಂಬಂತೆ ನಿತ್ಯಪ್ರಕಾಶ ವಾಗಿದ್ದನು ಮಹಾಕೂಪವು ನೀರಿನ ಕತ್ತಲೆಯನ್ನು ಇಟ್ಟುಕೊಂಡಿರುವಂತೆ, (ದೇವಲೋಕವು ಪ್ರಕಾಶವನ್ನು ಇಟ್ಟುಕೊಂಡಿತ್ತು.)

೧೧. ಹಾಗೆ ಬೆಳಗುವ ದೇವಲೋಕವು ದಿಗ್ವಧೂಮಣಿಯರ ದಿವ್ಯಮುಕು ರವೋ, ನಿಶೆಯೆಂಬ ನೀಹಾರವನ್ನು ಹಾರಿಸುವ ಮಾರುತನೋ, ಚಂದ್ರಸೂರ್ಯಾಗ್ನಿ ಗಳ ಸತ್ತ್ವವೇ ಹೀಗೆ ಒಂದೆಡೆಯಲ್ಲಿಸೇರಿರುವುದೋ,ಅಂತರಿಕ್ಷದ ಕುಂಕುಮ ಗಂಧಾನು ಲೇಪನವೋ ಎಂಬಂತಿತ್ತು.

೧೨. ದಿನಗಳೆಂಬ ಸಸ್ಯಗಳನ್ನು ಬೆಳೆಸುತ್ತಿರುವ ಗದ್ದೆಯೋ, ತಮಸ್ಸು ಕವ ರಿರುವ ರೂಪಗಳನ್ನು ಉಜ್ಜೀವನಗೊಳಿಸುವ ಶಾಲೆಯೋ, ಆಕಾಶವೆಂಬ ಗಾಜಿನ ಪಾತ್ರೆಯನ್ನು ತೊಳೆಯುವುದಕ್ಕೆಂದು ತುಂಬಿಟ್ಟಿರುವ ನೀರೋ ಎಂಬಂತೆ ಪ್ರಕಾ ಶಿಸುತ್ತಿತ್ತು.

ಸತ್ತಾಪ್ರದತಯಾರ್ಥಾನಾಂ ಪ್ರಕಾಶಕತಯಾಪಿ ಚ ।
ಚಿನ್ಮಾತ್ರಪರಮಾರ್ಥಸ್ಯ ಸಹೋದರ ಇವಾನುಜಃ ॥೧೩॥

ಕ್ರಿಯಾಕಮಲಿನೀಭಾನುರ್ಭೂತಲೋದರ ಜೀವಿತಂ ।
ರೂಪಾಲೋಕಮನಸ್ಕಾರ ಚಮತ್ಕಾಕ್ಷಿತೇರ್ಯಥಾ ॥೧೪॥

ನಭಸ್ತಲಗತಾಸಂಖ್ಯನಕ್ಷತ್ರಮಣಿಮಾಲಿತಃ ।
ದಿನರ್ತುವತ್ಸರಾಬ್ಧ್ಯಂಹ್ಯವಾಡವಾಗ್ನ್ಯಾದಿಫೇನಿಲಃ ॥೧೫॥

---

೧೩. ಎಲ್ಲಕ್ಕೂ ಸತ್ತಾಪ್ರದಾನ ಮಾಡುವುದರಿಂದಲೂ, ಎಲ್ಲವನ್ನೂ ಪ್ರಕಾಶಗೊಳಿಸುವುದರಿಂದಲೂ, ಚಿನ್ಮಾತ್ರವೆಂಬ ಪರಮಾರ್ಥದ ತಮ್ಮನೋ ಎಂಬಂತೆಇತ್ತು.

(ಸತ್ತಾಪ್ರದಾನ=ಕತ್ತಲಲ್ಲಿ ವಸ್ತುವು ಇರುವದೋ ಇಲ್ಲವೋ ಅದೇ ತಿಳಿಯುವುದಿಲ್ಲ. ಬೆಳಕು ಬಂದರೆ ಅದು ಇದೆ ಎಂಬುದು ತಿಳಿಯುವುದು. ಪ್ರಕಾಶಕತಾ= ತಾನಿರುವುದನ್ನು ತೋರಿಸಿಕೊಳ್ಳುವುದಕ್ಕೆ ಅವಕಾಶವು ಸಿಕ್ಕುವುದು ತನ್ನಲ್ಲಿರುವ ಪ್ರಕಾಶವು ಹೊರಬಿದ್ದಾಗ. ಸಹೋದರ ಇವಾನುಜಃ=ತೇಜೋಧಾತುವು ಎಷ್ಟೇ ಆಗಲಿ ಪಂಚೀಕೃತ ಪಂಚಭೂತಗಳಲ್ಲಿ ಒಂದು. ಚಿತ್ತು ಪಂಚಮಹಾಭೂತಗಳ ಕಾರಣವಾಗಿರುವುದು. ನ್ಯಾಯವಾಗಿ ಪುತ್ರನೆಂದರೂ ತಪ್ಪಿಲ್ಲ. ಚಿನ್ಮಾತ್ರ ಲಕ್ಷಣಸ್ಯ ಪರಮಾರ್ಥಸ್ಯ ಜಾಡ್ಯಮಾತ್ರೇಣ ಜಘನ್ಯತ್ವಾದನುಜ ಇವ— ತಾ. ಪ್ರ.)

೧೪. ಸತ್ಕ್ರಿಯೆಗಳೆಂಬ ಕಮಲಿನಿಗೆ ಭಾನುರೂಪವಾಗಿ, ಭೂತಲದಲ್ಲಿರುವ ಎಲ್ಲರಿಗೂ ಜೀವನಪ್ರಾಯವಾಗಿ. ರೂಪಾಲೋಕ, ಮನಸ್ಕಾರಗಳೆಂಬ ಚಿತ್ತಿನ ಚಮತ್ಕಾರಕ್ಕೆ ಕಾರಣವಾಗಿರುವುದು ತೇಜಸ್ಸು.

(ರೂಪಾಲೋಕ=ದೃಶ್ಯದರ್ಶನ, ಮನಸ್ಕಾರ= ಅದರಿಂದ ಮನಸ್ಸಿನಲ್ಲಿ ಉಂಟಾಗುವ ಚಾಂಚಲ್ಯ)

೧೫. ಆಕಾಶದಲ್ಲಿರುವ ಅಸಂಖ್ಯಾಕವಾದ ನಕ್ಷತ್ರ ಮಣಿಗಳ ಮಾಲೆಗಳನ್ನು ಧರಿಸಿರುವುದು. ದಿನ, ಋತು, ವತ್ಸರಗಳಿಂದ ವಿಜೃಂಭಿಸುವುದು. ವಿಜೃಂಭಿಸುತ್ತಿರುವ ಬಾಡಬ ಮೊದಲಾದುವುಗಳಿಂದ ವಿಕ್ಷುಬ್ಧವಾಗಿ ನೊರೆಯಿಂದ ಕೂಡಿರುವ ಸಮುದ್ರದಂತೆ ಕಾಣುವುದು.

ಚಂದ್ರಾರ್ಕಾದಿತರಂಗಾಂತರ ಜಡಂ ಪಂಕಿಲೋ ಮಹಾನ್ ।
ಬೃಹದ್ಬ್ರಹ್ಮಾಂಡಖಾತಸ್ಥೋ ನಿತ್ಯಮೇಕಾರ್ಣವೋಕ್ಷಯಃ ॥೧೬॥

ಹೇಮಾದಿಷು ಸುವರ್ಣತ್ವಂ ನರಾದಿಷು ಪರಾಕ್ರಮಃ ।
ಕಾಚಕಚ್ಛಂ ಚ ರತ್ನಾದೌ ವರ್ಷಾದಿಷ್ವವಭಾಸನಂ ॥೧೭॥

ಜ್ಯೋತ್ಸ್ನಾಮಯೇಂದುಬಿಂಬೇಷು ಚಕ್ಷುರ್ಲೇಕ್ಷಣಲಕ್ಷ್ಯಸು ।
ಪ್ರವತ್ಸ್ಯೇಹಾಸ್ಯತಾಸ್ರೋತೋ ಹಾಸಸೌಹಾರ್ದಭಾಸನಂ ॥೧೮॥

ಕಪೋಲಬಾಹುನೇತ್ರಾಕ್ಷಿಭ್ರೂಕರಾಲಕಲಾಸಕಃ ।
ಸಿಜೋಜೇಯತಯಾ ಜಾತೋ ವಿಲಾಸಃ ಕಾಮಿನೀಜನೇ ॥೧೯॥

೧೬. ಚಂದ್ರ ಸೂರ್ಯಾಗ್ನಿಗಳೆಂಬ ತರಂಗಗಳಿಂದ ಕೂಡಿರುವ ಜಡಜಲವಾಗಿ ಬಹುವಾಗಿ ಕೆಸರುಗಟ್ಟಿರುವಂತೆ ಇರುವುದು. ಬೃಹತ್ತಾಗಿರುವ ಬ್ರಹ್ಮಾಂಡವೆಂಬ ಹಳ್ಳದಲ್ಲಿರುವ ಅಕ್ಷಯವಾದ ನಿತ್ಯವಾದ ಏಕಾರ್ಣವವೋ ಎಂಬಂತಿರುವುದು.

೧೭. ಹೇಮಾದಿಗಳ ಸುವರ್ಣತ್ವವಾಗಿ, ನರಾದಿಗಳ ಪರಾಕ್ರಮವಾಗಿ, ರತ್ನಾದಿಗಳ ಥಳಥಳ್ಯವಾಗಿ ವರ್ಷಾದಿಗಳ ಮಿಂಚಾಗಿ ಇರುವುದೆಲ್ಲ ಈ ತೇಜಸ್ಸೇ!

೧೮. ಒತ್ತಾಗಿರುವ ರೆಪ್ಪೆಗಳುಳ್ಳ ಕಣ್ಣುಗಳ ಗುರುತುಳ್ಳ ಮುಖದಂತೆ ಶೋಭಿಸುವ ಜ್ಯೋತ್ಸ್ನಾ ಸಂಪನ್ನವಾದ ಇಂದುಬಿಂಬಗಳಲ್ಲಿ ಪ್ರವಿಸುತ್ತಿರುವ ಸ್ನೇಹವೆಂಬ ಅಮೃತದಿಂದ ತುಂಬಿ, ನಗುವೆಂಬ ಸೌಹಾರ್ದವನ್ನು ಬೀರುವುದೂ ಈ ತೇಜಸ್ಸೇ!

೧೯. ಕಾಮಿನೀಜನದಲ್ಲಿ ಕಪೋಲ, ಬಾಹು, ನೇತ್ರ, ಭ್ರೂ, ಕರ, ಅಲಕ, ಗಳಲ್ಲಿದ್ದು ಆಟವಾಡುವ, ಅಜೇಯವಾಗಿ ಮೆರೆಯುವ ಸಹಜವಾದ ವಿಲಾಸವು ಯಾವುದುಂಟೋ ಅದೂ ತೇಜವೇ!

ತೃಣೀಕೃತತ್ರಿಭುವನಜವೇಟಾಸ್ಫೋಟಿತದ್ವಿಷಾಂ ।
ಶಿರಃಸು ವಜ್ರೀಕರಣಾಂ ವೀರ್ಯಂ ಸಿಂಹಾದಿಕೇಽಪಿ ॥೨೦॥

ಕಟುಕಂಕಟಕುಟ್ಟಾಕ ಖಡ್ಗಸಂಘಟ್ಟಟಾಂಕೃತೈಃ ।
ಪಟುಸ್ಫುಟಾಟೋಪರಟಿಭಟೇಷ್ಟ್ಟನಮುದ್ಭಟಂ ॥೨೧॥

ದೇವೇಷು ದಾನವಾರಿತ್ವಂ ಸುರಾರಿತ್ವಂ ಸುರಾರಿಷು ।
ಸರ್ವಭೂತೇಷು ಸೋಽಜಸ್ತ್ರಮುನ್ನಾಮಃ ಸ್ಥಾವರಾದಿಷು ॥೨೨॥

ಅಥ ತೇ ಮರುವದ್ಭಾಸ್ವಾಂಸ್ತತ್ರಾಹಮನುಭೂತವಾನ್ ।
ಜಗದಾಕಾಶಕೋಶೇಷು ತೇಷು ತಾಮರಸೇಕ್ಷಣ ॥೨೩॥

---

೨೦. ತ್ರಿಭುವನಗಳನ್ನೂ ತೃಣವಾಗಿ ಕಂಡು, ಕಪಾಳಕ್ಕೆ ಹೊಡೆದು ದ್ವೇಷಿಗಳನ್ನು ಮುರಿದ ಮಹಾವೀರರ ಶಿರಸ್ಸುಗಳಲ್ಲಿ ವಜ್ರವಾಗಿ ಬಿದ್ದ ವೀರ್ಯವು ಯಾವುದುಂಟೋ ಸಿಂಹಾದಿ ಮೃಗಗಳಲ್ಲಿ ಕಾಣುವ ಯಾವ ಪರಾಕ್ರಮ ಉಂಟೋ, ಅದೂ ತೇಜಸ್ಸೇ!

೨೧. ಗಟ್ಟಿಯಾದ ಉಕ್ಕಿನ ಕವಚಗಳನ್ನು ಕುಟ್ಟಿ ಪುಡಿಮಾಡುವ ಖಡ್ಗಗಳ ಸಂಘಟ್ಟನದಿಂದ ಟಂ ಟಂ ಎಂದು ಶಬ್ದಮಾಡುತ್ತ ಸ್ಫುಟವಾಗಿ ಆಟೋಪಮಾಡುತ್ತ ಯುದ್ಧರಂಗದಲ್ಲಿ ಪಟುವಾಗಿ ತಿರುಗುವ ಭಟರ ಸಾಹಸವುಂಟಲ್ಲವೇ ಅದೂ ತೇಜವೇ!

೨೨. ದೇವತೆಗಳಲ್ಲಿ ದಾನವವೈರವು, ದಾನವರಲ್ಲಿರುವ ದೇವವೈರವು, ಸ್ಥಾವರಾದಿ ಸರ್ವಭೂತಗಳಲ್ಲಿಯೂ ಇರುವ ಬಿರುಗಾಳಿಗಳಿಗೂ ಬಗ್ಗದಿರುವ ಸಹಜವಾದ ಔನ್ನತ್ಯವು ಯಾವುದುಂಟೋ ಅದೂ ತೇಜವೇ!

೨೩. ಮರುಭೂಮಿಯಲ್ಲಿ ಏನೂ ಇಲ್ಲದಿದ್ದರೂ ಜಲವು ನಾನಾ ರೂಪವಾಗಿ ಕಾಣುವುದು ಎಂಬುದನ್ನು ಬಲ್ಲೆಯಲ್ಲವೆ? ಅದರಂತೆ, ನಾನೂ ತೇಜೋಧಾರಣೆಯಿಂದ ತೇಜಸ್ಸೇ ಆಗಿ, ಜಗತ್ತಿನಲ್ಲಿಯೂ ಆಕಾಶದಲ್ಲಿಯೂ ಬ್ರಹ್ಮಾಂಡ ಕೋಶದಲ್ಲಿಯೂ ಎಲ್ಲೆಲ್ಲಿ ಯಾವಯಾವ ರೂಪದಲ್ಲಿ ತೇಜಸ್ಸು ಇರುವುದೋ ಅದೆಲ್ಲವನ್ನೂ, ಎಲೆ ಕಮಲಪತ್ರಾಕ್ಷನೇ, ಅನುಭವಿಸಿದೆನು.

ದಿಗಂತದಶನಿಸ್ತೀರ್ಣೈಃ ಕರಜಾಲೈರ್ಜಗತ್ಖಗಂ ।
ಗೃಹ್ಣದದ್ರ್ಯಂಗಮರ್ಕತ್ವಂ ಗ್ರಾಮವದ್ದೃಷ್ಟಭೂತಲಂ ॥೨೪॥

ಕಾಮೋತ್ಪಲೇ ಕೋಶಚಕ್ರಂ ವಾಡವಂ ತಿಮಿ ವಾರ್ಣವೇ ।
ಬ್ರಹ್ಮಾಂಡಸದನೇ ದೀಪಂ ವೃಕ್ಷಂ ದಿನಫಲಾವಲೇಃ ॥೨೫॥

ರಸಾಯನಸಪ್ರದಾಕಾರಮಿಂದುತ್ವಂ ವದನಂ ದಿವಃ ।
ಸಿತಾನಿಶಾಚರೀಹಾಸಂ ವಿಕಾಸಂ ರಜನೀದಿಶಾಂ ॥೨೬॥

ಜಗಲ್ಲಾವಣ್ಯಲಕ್ಷ್ಮೀಣಾಂ ಸರ್ವಾಸಾಮುಪಮಾಸ್ಪದಂ ।
ರಜನೀರೋಹಿಣೀನಾರೀಕೈರವಾಣಾಂ ಪರಂ ಪ್ರಿಯಂ ॥೨೭॥

---

(ಅಥತೇಷು ಸ್ವಧಾರಣಾ ಕಲ್ಪಿತೇಷು ಜಗದಾಕಾರ ಕೋಶೇಷು.... ಅಹಮಪಿ ಧಾರಣಾರ್ಕಾದಿ ವಕ್ಷ್ಯಮಾಣಂ ಸರ್ವಂ ಸ್ವಾಂತರನುಭೂತವಾನಿತ್ಯರ್ಥಃ ॥)

೨೪. ಪರದಿಗಂತಗಳಲ್ಲಿ ಸನ್ನ ಕಿರಣಜಾಲಗಳು ಹಬ್ಬಿರಲು ಜಗತ್ತುಗಳೆಂಬ ಪಕ್ಷಿಗಳನ್ನು ಹಿಡಿದು ಸೂರ್ಯನನ್ನೂ, ಅಂಗೈಯಗಲದ ಗ್ರಾಮದಂತೆ ಕಾಣುವ ಅದ್ರಿ ಸಮೇತ ಭೂಮಿತಳಗಳನ್ನೂ ಆಡಿಸಿದನು.
(ಅಹಮರ್ಕತ್ವಮನುಭೂತವಾನ್)

೨೫. ಇಂದುವನ್ನು ಬಯಸುವ ಕನ್ನೈದಿಲೆಯಲ್ಲಿ ಬೀಜಗರ್ಭವಾಗಿರುವ ಕೋಶವಾಗಿ, ಕತ್ತಲಿನಿಂದ ಕೂಡಿದ ಸಮುದ್ರದಲ್ಲಿ ಬಾಡಬವಾಗಿ, ಬ್ರಹ್ಮಾಂಡ ವೆಂಬ ಮನೆಯನ್ನು ಬೆಳಗುವ ದೀಪವಾಗಿ, ದಿನಗಳೆಂಬ ಫಲಗಳನ್ನು ಕಾಯುವ ಮಹಾವೃಕ್ಷವಾಗಿ,

೨೬. ಅಮೃತ ರಸಪೂರ್ಣವಾದ ಮಡುವೋ, ಅಂತರಿಕ್ಷದ ವದನವೋ, ಸಿತ ಎಂಬ ನಿಶಾಚರಿಯ ಹಾಸವೋ, ರಜನೀ ವೇಳೆಯಲ್ಲಿ ವ್ಯಾಪಾರ ಮಾಡುವ ಪರ ವಿಕಾಸವೋ, ಎಂಬಂತಿರುವ ಇಂದುವಾಗಿ ಇಂದುತ್ವವನ್ನು ಅನುಭವಿಸಿದೆನು.

೨೭. ಜಗತ್ತಿನ ಲಾವಣ್ಯ ಲಕ್ಷ್ಮಿಯರೆಲ್ಲರಿಗೂ ಉಪಮಾನವಾಗಿರುವ, ರಜನಿಗೂ ರೋಹಿಣಿಯರಿಗೂ ನಾರಿಯರಿಗೂ ಕೈರವಗಳಿಗೂ ಪರಮಪ್ರಿಯವಾಗಿರುವ,

ನೇತ್ರತ್ವಂ ನವಸ್ಯ ವಕ್ತ್ರಸ್ಯ ವ್ಯೋಮಲತಾಪುಷ್ಪಜಾಲಕಂ ।
ಸ್ವರ್ಗೌಘಮಶಕವ್ಯೂಹಂ ತಾರಕಾಪಟಲಂ ಮೃದು ॥೨೮॥

ವಣಿಗ್ಯಾತ್ರೇ ವಣಿಗ್ಘಸ್ತತುಲಾತೋಲನದೋಲಿತಂ ।
ರತ್ನತ್ವಂ ಜಲಕಲ್ಲೋಲಹಸ್ತಾಂದೋಲನಮಬ್ಧಿಭಿಃ ॥೨೯॥

ಅಬ್ಧಾವಬ್ಧೌ ಶಫರಾವರ್ತಮಬ್ಧೌ ಗೋಮಂಜರೀಗಣಃ ।
ಅಬ್ದಾದೌ ದಾವವಹನಂ ವೈದ್ಯುತಂ ದ್ಯೋತನಂ ತನೌ ॥೩೦॥

ದಾರುದಾರುಣದುರ್ವಾರದೀಪ್ತಂ ಜ್ವಲನಮಾತತಂ ।
ಯಜ್ಞಾಗ್ನಿದಾಹಕಲ್ಯಾಣಂ ವಿಸ್ಫೋಟಕರಿನಾರವಂ ॥೩೧॥

---

೨೮. ನೇತ್ರಗಳಿಗೂ, ಮುಖಕ್ಕೂ ಪ್ರಿಯವಾದ ಇಂದುತ್ವದಂತೆ ಆಕಾಶವಲ್ಲರಿಯ ಪುಷ್ಪಗುಚ್ಛಗಳಿಗೆ ಸಮವಾಗಿ, ಸ್ವರ್ಗಗಳ ಗುಂಪಿನಂತಿರುವ, ಮೃದುವಾದ ತಾರಕೆಗಳಂತಾಗಿ ತಾರಕಾತ್ವವನ್ನು ಅನುಭವಿಸಿದೆನು.

೨೯. ಅಂಗಡಿಯಲ್ಲಿ ವೈಶ್ಯರ ಹಸ್ತತುಲೆಗಳಲ್ಲಿ ತೋಲನವಾಡಿಸಿಕೊಂಡು ದೋಲಿತವಾದ, (ಅಂಗೈಗಳಲ್ಲಿ ತೂಗಿಸಿಕೊಂಡ) ಪೂರ್ವದಲ್ಲಿ ಅಬ್ಧಿಗಳ ಜಲಕಲ್ಲೋಲಗಳೆಂಬ ಹಸ್ತಗಳಿಂದ ಆಂದೋಳಿತವಾಗಿದ್ದ, ರತ್ನತ್ವವನ್ನು ಅನುಭವಿಸಿದೆನು.

೩೦. ಅಬ್ಧಿಯಲ್ಲಿ ಅಬ್ಧ (ವಾಡಬ) ನಾಗಿದ್ದುಕೊಂಡು ಗೋ (ಸೂರ್ಯ) ಕಿರಣಗುಚ್ಛಗಳ ಪರಿಮಾಣವನ್ನೂ, ಶಫರಗಳೆಂಬ ಕ್ಷುದ್ರಮತ್ಸ್ಯಗಳು ಭಯದಿಂದ ಓಡುವುದನ್ನು ಕಂಡೆನು. ಹಾಗೆಯೇ ಮೋಡಗಳಲ್ಲಿ, ಮಿಂಚಾಗಿ ಕಾಳ್ಗಿಚ್ಚಿನ ಬೇಗೆಯನ್ನೂ ಮಿಂಚಿನ ಹೊಳಹನ್ನೂ ಅನುಭವಿಸಿದೆನು.

೩೧. ಕೊಂಟುಗಳನ್ನು ಸುಡುತ್ತ ಸಹಿಸುವುದಕ್ಕಾಗದಷ್ಟು ದೊಡ್ಡದಾದ ಬೆಂಕಿಯು ಕೊಂಡವಾಗಿ, ಹಾಗೆಯೇ ನಾನಾ ಹವಿಗಳನ್ನು ವಿನಿಯೋಗಿಸಿ ಕಲ್ಯಾಣಕಾರಕನಾದ ಯಜ್ಞಾಗ್ನಿಯಾಗಿ, ಅಗ್ನಿತ್ವವನ್ನು ಅನುಭವಿಸಿದೆನು.

ಕಚತ್ಕಾಂಚನಮಾಣಿಕ್ಯ ಮುಕ್ತಾಮಣಿಮಯಂ ಮಹಃ ।
ತಪಸ್ತಾಂ ನೀತಮಾಕ್ಷಿಪ್ಯ ಪಾಂಡಿತ್ಯಮಿವ ಪಾಮರೈಃ ॥೩೨॥

ವಿಶ್ರಾಂತಂ ಸ್ತನಶೃಂಗೇಷು ಮುಕ್ತಾಹಾರತಯಾ ತಯಾ ।
ಅಸುರೋರಗಗಂಧರ್ವನರನಾಯಕಯೋಷಿತಾಂ ॥೩೩॥

ಪಾದಾಹತಂ ಗತಂ ಸ್ವರ್ಗೇ ತಿಲಕತ್ವಂ ವಧೂಮುಖೇ ।
ಖದ್ಯೋತೇನ ಮಯಾ ಲಬ್ಧಂ ಪಶ್ಯಾವಸ್ಥಾಸು ಚಾಪಲಂ ॥೩೪॥

ಕ್ವಚಿದ್ವಿದ್ಯುತ ಯಾ ತೇಷು ಶಫರ್ಯಾ ಚಾರ್ಣವೇಷ್ವಿವ ।
ಖಸ್ಥೇಷು ನಿಕೃತಂ ಚಾರು ವಾರ್ಯಾವರ್ತವಿರಾವಿಷು ॥೩೫॥

೩೨. ಹೊಳೆಯುವ ಕಾಂಚನ ಮಾಣಿಕ್ಯ ಮುಕ್ತಾಮಣಿಗಳ ಕಾಂತಿಯಾಗಿದ್ದು, ಅಗ್ನಿಯ ಪಾಲಾಗಿ, ಆಯಾ ವಸ್ತುಗಳ ಯಜಮಾನರಿಗೆ ತಾಪವನು ಉಂಟುಮಾಡಿದೆನು. ಪಾಮರರು ಪಂಡಿತನನ್ನು ಗೋಳಿಡಿಸುವ ಹಾಗೆ ಆ ಯಜಮಾನರ ಬಾಳು ಆಯಿತು.

(ಯಥಾ ಬಲವದ್ಭಿಃ ಪಾಮರೈರ್ಬಹುಭಿರೇಕಸ್ಯ ಪಂಡಿತಸ್ಯ ಪಾಂಡಿತ್ಯಂ ವಿತಂಡಾವಾದೈ ರಭಿಭೂಯ ಸಂತಾಪವಿನಯತಾಂ ರೇಯತೇ ತದ್ವತ್ । ತಥಾಚ ಅಥ ಆಕಮಾಹುಃ—"ಪಲಾಶಂ ಪಂಡಿತಃ ಪ್ರಾಹ ಮೂರ್ಖಾ ಜಲ್ಪಂತಿ ಪಾಡಲಂ" ಮುಷ್ಟಿಪ್ರಹಾರೈಸ್ಸಂಕ್ಲಿಷ್ಟಃ ಪಂಡಿತೋऽಪ್ಯಾಹ ಪಾಡಲಂ ॥ ಇತಿ—ತಾ. ಪ್ರ.)

೩೩. ನಾನು ಮುಕ್ತಾಮಣಿಯಾಗಿ, ಅಸುರ, ಉರಗ, ಗಂಧರ್ವ, ನರ, ನಾಯಕರ ಪತ್ನಿಮಹಿಷಿಯರ ಸ್ತನ ಶೃಂಗಗಳಲ್ಲಿ ಮುಕ್ತಾಹಾರವಾಗಿ ಮೆರೆದೆನು.

೩೪. ಖದ್ಯೋತವಾಗಿ ವಧೂಮುಖದಲ್ಲಿ ತಿಲಕವಾಗಿದ್ದು ನೆಲದಲ್ಲಿ ಬಿದ್ದು ಪಾದಾಹತಿಯನ್ನು ಅನುಭವಿಸಿದೆನು. ನೋಡು, ಅವಸ್ಥೆಗಳಲ್ಲಿರುವ ಚಾಪಲ್ಯವನ್ನು.

೩೫. ಆಕಾಶದಲ್ಲಿ ನೀರು, ಸುಳಿ, ಮೊದಲಾದುವುಗಳಿಂದ ಕೂಡಿದ ಮೇಘಗಳಲ್ಲಿ ಕೆಲವೆಡೆ ಮಿಂಚಾಗಿ ಮಿಂಚಿ, ಸಮುದ್ರದಲ್ಲಿರುವ ಶಫರಿ (ಪುಟ್ಟಮೀನು)ಗಳಂತೆ ಮೆರೆದೆನು.

ಕ್ವಚಿದ್ದೀಪತಯಾನೀಯ ಕಲಿಕಾಕೋಮಲಾಂಗಯಾ ।
ಅಂತಃಪುರೇಷು ಕಾಂತಾನಾಂ ಸುರತಾಲೋಕನಂ ಕೃತಂ ॥೩೬॥

ಕ್ವಚಿತ್ಕಜ್ಜಲಜಾಲಸ್ಯ ಜ್ವಾಲಾಕನಕದಾಕೃತೇಃ ।
ಛೇದಿನಾ ಘನಕರ್ಮಾರ್ಭಂ ಸಂಗೇಸ್ಸೈವ ಸ್ವಕೋಟರೇ ॥೩೭॥

ಕಲ್ಪಾಂತೇಷು ಕ್ವಚಿತ್ಸರ್ವಜಗದ್ಭ್ರಮಘನಶ್ರಮಾತ್ ।
ಖೇ ಕಜ್ಜಲಾಸಿತೇ ಲೀನಂ ರುದ್ರೇಭ ಇವ ವಿದ್ಯುತಾ ॥೩೮॥

ಕ್ವಚಿದಾಕಲ್ಪಮಾಪೀಯ ವಾಡವಾಗ್ನಿತಯಾ ಜಲಂ ।
ಜಗತ್ಸು ಗಗನೇಷ್ವಂತೇ ನನೃತೇ ಜಲರಾಶಿಷು ॥೩೯॥

---

೩೬. ಇನ್ನು ಕೆಲವೆಡೆ, ಸೂಕ್ಷ್ಮವಾದ ಹೊಗೆಯಿಂದ ಕೂಡಿರುವ, ದೀಪವಾಗಿ ಅಂತಃಪುರಗಳಲ್ಲಿದ್ದು ಕಾಂತೆಯರ ಸುರತಾಲೋಕನವನ್ನೂ ಅನುಭವಿಸಿದೆನು.

೩೭. ಇನ್ನೊಂದೆಡೆ, ಕಾಡಿಗೆಯಂತಿರುವ ಕುಡಿಯಿಂದಲೂ ಚಿನ್ನದ ಬಣ್ಣವಾಗಿರುವ ಜ್ವಾಲೆಯಿಂದಲೂ ಕೂಡಿದ್ದು, ನೋವಾದಾಗ ದೊಡ್ಡ ಆಮೆಯು ತನ್ನ ಚಿಪ್ಪಿನಲ್ಲಿ ಸೇರಿಕೊಳ್ಳುವಂತೆ ಆಗಿ, ಸಣ್ಣವಾಗಿ ಕಾಂತಿಹೀನವಾಗಿದ್ದೆನು.

೩೮. ಕಲ್ಪಾಂತಗಳಲ್ಲಿ ಒಂದೆಡೆ ಸರ್ವ ಜಗತ್ತುಗಳನ್ನೂ ತಿರುಗಿಸಿ ತಿರುಗಿಸಿ ಪಟ್ಟ ಘನಶ್ರಮದಿಂದ, ಕಜ್ಜಲದಂತೆ ಕಪ್ಪಗಿರುವ ಆಕಾಶದಲ್ಲಿ, ಮೇಘದಲ್ಲಿ ವಿದ್ಯುತ್ತು ಲೀನವಾಗುವಂತೆ ಲೀನವಾಗಿ ಹೋದೆನು.

(ಯಥಾ ಮೇಘವಾಹನಸ್ಯ ರುದ್ರಸ್ಯ ಇಭೇ ವಾಹನಭೂತೇ ಮೇಘೇ ವಿದ್ಯುತಾ ಲೀನಂ ತದ್ವತ್—ತಾ. ಪ್ರ.)

೩೯. ಇನ್ನೊಂದೆಡೆ ಬಡಬಾಗ್ನಿಯಾಗಿ ಕಲ್ಪಾಂತದವರೆಗೂ ಕಂಠಪೂರ್ತಿಯಾಗಿ ನೀರು ಕುಡಿದು, ಕೊನೆಯಲ್ಲಿ ಜಗತ್ತುಗಳಲ್ಲಿಯೂ ಆಕಾಶದಲ್ಲಿಯೂ ಕುಣಿದಾಡಿದೆನು.

ಕ್ವಚಿದುಲ್ಮುಕದಂತೇನ ಮಯಾ ಜ್ವಾಲಾಭುಜಾತ್ಮನಾ ।
ವಿಲೋಲಧೂಮಾವರ್ತೋಗ್ರ ಕುಂತಲೇನಾಕುಲಾಂಗನಾ ॥೪೦॥

ಪುರಪಲ್ಲವದಾಹೇಷು ಕವಲೀಕೃತಜಂತುನಾ ।
ಕೃತಾಃ ಕೃತಾಷ್ಟ ಕಾಷ್ಠಾದಿಪದಾರ್ಥಾಃ ಖಾದನೋಚಿತಾಃ ॥೪೧॥

ಪತತಾ ಶಸ್ತ್ರಪಾಷಾಣೈರಯಃಪಿಂಡಾದಿವಾಸಿನಾ ।
ಸಂತ್ಯದಃಪಾರ್ಥಮುದ್ಗೀರ್ಣಾಃ ಕಣಕೋಪಲತಾಃ ಕ್ವಚಿತ್ ॥೪೨॥

ಕ್ವಚಿನ್ಮಹಾಶಿಲಾಕೋಶೇ ಪಾಷಾಣಮಣಿನಾ ಮಯಾ ।
ಸಮಸ್ತಭೂತಾದೃಶ್ಯೇನ ಸ್ಥಿತಂ ಯುಗಶತಾನ್ಯಪಿ ॥೪೩॥

---

೪೦. ಕೊಳ್ಳಿಗಳೇ ದಂತಗಳಾಗಿ, ಜ್ವಾಲೆಗಳೇ ಭುಜಗಳಾಗಿ, ಆಡುತ್ತಿರುವ ಹೊಗೆಯ ಸುರುಳಿಗಳೇ ಕುಂತಲಗಳಾಗಿ, ಉಳ್ಳ ಕ್ರೂರವಾದ ಅಗ್ನಿಯಾಗಿ,

೪೧. ಪುರಗಳೆಂಬ ಪಲ್ಲವಗಳನ್ನು ಸುಡುವುದರಲ್ಲಿ ಜಂತುಗಳನ್ನೆಲ್ಲ ಕಬಳಿಸುತ್ತ ಕಾಷ್ಠಾದಿ ಪದಾರ್ಥಗಳನ್ನೆಲ್ಲಾ ಖಾದನೋಚಿತವಾಗಿ ಮಾಡಿದೆನು.

(ಇಲ್ಲಿ ಮೂಲದಲ್ಲಿ ವಸಿಷ್ಠರು ರಾಮನನ್ನು ಕೃತಾಷ್ಟ. ಎಂದು ಸಂಬೋಧಿಸಿದ್ದಾರೆ. ಆ ಶಬ್ದಕ್ಕೆ "ಕೃತಾಃ ಸ್ಥಿರೀಕೃತಾಃ ದಯಾದ್ಯಸ್ಪೃಹಾಂತಾಃ ಗೌತಮೋಕ್ತಾ ಅಷ್ಟೌ ಗುಣಾಯೇನೇತಿ ವ್ಯುತ್ಪತ್ತೇಃ" ಎಂದು ತಾತ್ಪರ್ಯ-ಪ್ರಕಾಶವು ಹೇಳಿದೆ.)

೪೨. ಕಬ್ಬಿಣದ ಗುಂಡುಗಳಲ್ಲಿದ್ದು ಶಸ್ತ್ರಗಳಿಂದಲೂ ಪಾಷಾಣಗಳಿಂದಲೂ ಏಟುತಿಂದು, ಹೊಡೆಯುವವರನ್ನು ಸುಡುವುದಕ್ಕಾಗಿ ಸಣ್ಣಸಣ್ಣ ಬೆಂಕಿಯ ಕಿಡಿಗಳನ್ನು ಕಾರಿದೆನು.

೪೩. ಇನ್ನೊಂದೆಡೆಯಲ್ಲಿ ಮಹಾಶಿಲ ಕೋಶದಲ್ಲಿ ಪಾಷಾಣಮಣಿಯಾಗಿ ಯಾರಿಗೂ ಕಾಣದೆ, ಅದೃಶ್ಯವಾಗಿ ನೂರಾರು ಯುಗಗಳು ಇದ್ದೆನು.

ಶ್ರೀರಾಮ ಉವಾಚಃ—

ಮುನೇ ತಸ್ಯಾಮವಸ್ಥಾಯಾಮನುಭೂತಂ ತ್ವಯಾ ಸುಖಂ ।
ಉತ ದುಃಖಮಿತಿ ಬ್ರೂಹಿ ಬೋಧಾಯ ಮಮ ಮಾನದ ॥೪೪॥

ಶ್ರೀ ವಸಿಷ್ಠ ಉವಾಚಃ—

ಯಥಾ ಯಾತಿ ನರಃ ಸುಪ್ತೋ ಜಡತಾಂ ಚೇತನೋಽಪಿ ಸನ್ ।
ಚಿದ್ವ್ಯೋಮ ಗಚ್ಛೇದ್ದೃಶ್ಯತ್ವಂ ತಥಾ ಜಾಡ್ಯಂ ಪ್ರಚೇತತಿ ॥೪೫॥

ಆತ್ಮಾನಾಂ ಚೇತತಿ ಬ್ರಹ್ಮ ಪೃಥ್ವ್ಯಾದೀವ ಯದಾ ತದಾ ।
ಸುಪ್ತಂ ಜಡಮಿವಾಸ್ತೇಽಂತಃ ಸ್ಯಾನಸ್ಯ ನ ತದನ್ಯಥಾ ॥೪೬॥

---

ಶ್ರೀರಾಮನು ಕೇಳಿದನು:—

೪೪. ಎಲೈ ಮುನಿಯೆ, ಹಾಗೆ ನೀನು ಪಾಷಾಣಮಣಿಯಾಗಿದ್ದಾಗ, ನೀನು ಸುಖವನ್ನು ಅನುಭವಿಸಿದೆಯಾ ದುಃಖವನ್ನು ಅನುಭವಿಸಿದೆಯಾ ಎಂಬುದನ್ನು ಹೇಳು, ನನಗೆ ಅದರಿಂದ ಬೋಧವು ದೊರೆಯಲಿ.

ಶ್ರೀ ವಸಿಷ್ಠನು ಹೇಳಿದನು:—

೪೫. ಮನುಷ್ಯನು ಚೇತನನಾದರೂ ಸುಷುಪ್ತಿಯಲ್ಲಿ ಜಡತೆಯನ್ನು ಹೊಂದುವಂತೆ, ಚಿದಾಕಾಶವು ದೃಶ್ಯತ್ವವನ್ನು ಹೊಂದಿದಾಗ ಜಾಡ್ಯತೆಯನ್ನು ಹೊಂದುವುದು.

೪೬. ಪೃಥಿವ್ಯಾದಿ ಸರ್ವವನ್ನೂ ನನ್ನನ್ನೂ ಸಹ ಬ್ರಹ್ಮವೇ ಚೇತನಗೊಳಿಸುತ್ತಿರುವುದು ಎಂಬ ಜ್ಞಾನವು ಯಾವಾಗ ಒಳಗಿರುವುದೋ ಆಗ ಸುಪ್ತನಾಗಿದ್ದರೂ ಜಡದಂತೆ ಇದ್ದರೂ, ಆನಂದವಲ್ಲದೆ ಇನ್ನೇನೂ ಇರುವುದಿಲ್ಲ.

ವಸ್ತುತಸ್ತಸ್ಯ ಖೋರ್ವ್ಯಾಪಿ ನಾಸದ್ರೂಪಂ ನ ಸನ್ಮಯಂ ।
ದ್ರಷ್ಟೃದೃಶ್ಯಮಿವಾಭಾತಿ ಬ್ರಹ್ಮ ಚೈತತ್ಸಮಂ ಸ್ಥಿತಂ ॥೪೭॥

ಏತತ್ಸತ್ಯಪರಿಜ್ಞಾನಂ ಪುಸ್ಯೋತ್ಪನ್ನಮಖಂಡಿತಂ ।
ನ ತಸ್ಯ ಪಂಚಭೂತಾನಿ ನ ದೃಶ್ಯದ್ರಷ್ಟೃವಿಭ್ರಮಃ ॥೪೮॥

ತದಾ ಮಯ್ಯೈವಂ ಶುದ್ಧೇನ ತತ್ಕೃತಂ ಬ್ರಹ್ಮರೂಪಿಣಾ ।
ಬ್ರಹ್ಮರೂಪಾದೃತೇ ಕಿಂಚಿನ್ನೇತತ್ಕರ್ತುರ್ನ ಯುಜ್ಯತೇ ॥೪೯॥

ಯದಾ ಸರ್ವಮಿದಂ ದೃಶ್ಯಂ ಜಾತಂ ಬ್ರಹ್ಮ ನಿರಾಮಯಂ ।
ತದಾ ಬ್ರಹ್ಮಪದಸ್ಥೇನ ಮಯಾತ್ಮೈವಮಾಕ್ಷಿತಃ ॥೫೦॥

---

೪೭. ವಾಸ್ತವ್ಯವಾಗಿ ಆ ಬ್ರಹ್ಮಕ್ಕೆ ಆಕಾಶ, ಪೃಥಿವೀ ಮೊದಲಾದ ಅಸದ್ರೂಪವೂ ಇಲ್ಲ: ಸದ್ರೂಪವೂ ಇಲ್ಲ. ಆದರೂ ದೃಕ್, ದೃಶ್ಯವಾಗಿ ಆಭಾಸವಾಗುವುದು. ಅದು ಯಾವ ರೂಪದಿಂದ ಹೇಗೆ ಎಲ್ಲಿದ್ದರೂ ಅದು ಬ್ರಹ್ಮವಾಗಿಯೇ ಇರುವುದು.

೪೮. ಈ ಸತ್ಯವನ್ನು ತಿಳಿದಾಗ, ಇದು ಅಖಂಡಿತವಾಗಿ ನಿಂತಾಗ, ಪಂಚಭೂತಗಳೂ ಇಲ್ಲ: ದೃಶ್ಯ ದ್ರಷ್ಟೃ ಭ್ರಾಂತಿಯೂ ಇಲ್ಲ.

೪೯. ಆಗ, ನಾನು ಹಿಂದೆ ಶುದ್ಧನಾಗಿ. ಬ್ರಹ್ಮರೂಪವಾಗಿದ್ದು ಹಾಗೆ ಆಗಿದ್ದರೂ ಬ್ರಹ್ಮರೂಪವಲ್ಲದೆ ಇನ್ನೇನೂ ಇರಲಿಲ್ಲವಾಗಿ. ಬ್ರಹ್ಮವಲ್ಲದ ಇನ್ನೇನೋ ಬಂದು ನನ್ನನ್ನು ಹಾಗೆ ಮಾಡಿತು ಎಂಬುದೂ ಸಲ್ಲುವುದಿಲ್ಲ.

೫೦. ಈ ಸರ್ವದೃಶ್ಯವೂ ಹುಟ್ಟಿದಾಗ ಬ್ರಹ್ಮವು ನಿರಾಮಯವಾಗಿಯೇ ಇತ್ತು. ನಾನೂ ಬ್ರಹ್ಮಪದದಲ್ಲಿಯೇ ಕುಳಿತು. ಆತ್ಮನನ್ನು ಪ್ರತ್ಯರೂಪವಾಗಿಯೇ ಕಂಡೆನು.

ಯದಾ ಪೃಥ್ವಾದಿಕಂ ಪಂಚಭೂತಾನೀತ್ಯೇವ ಭಾವಯನ್ ।
ಭವಾಮಿ ಜಡ ಏವಾಹಂ ತದಾ ಚೇತಾಮಿ ಕಿಂ ಕಿಲ ॥೫೧॥

ಸುಪ್ತೋಽಸ್ಮೀತಿ ದೃಢಂ ಭಾವಂ ಬದ್ಧವಾಂಶ್ಚೇತನೋಽಪಿ ಸನ್ ।
ಸ್ವಪ್ರಮೋಽಸ್ಮೀತ್ಯಲಂ ಜಾಡ್ಯಂ ಲಸಜ್ಜ್ಯೇತತಿ ಕಿಂಚನ ॥೫೨॥

ಯಸ್ತು ಜ್ಞಾನಪ್ರಬುದ್ಧಾತ್ಮಾ ದೇಹಸ್ತಸ್ಯಾದಿಭೌತಿಕಃ ।
ಶಾಮ್ಯತ್ಯುದೇತಿ ವಿಮಲೋ ಬೋಧಾತ್ಮ್ಯೈವಾತಿವಾಹಿಕಃ ॥೫೩॥

ಆತಿವಾಹಿಕದೇಹೇನ ತೇನ ಬೋಧಾತ್ಮನಾಣುನಾ ।
ಬ್ಯಪತತಾ ವಾ ಯಥಾಕಾಮಂ ನಿರ್ವಾಣಾತ್ಮಾವತಿಷ್ಠತೇ ॥೫೪॥

---

೫೧. ಯಾವಾಗ ನಾನು ಪಂಚಭೂತಗಳ ರೂಪವಾಗಿ, ಕಾಣಿಸುವವನಾದೆನೋ ಆಗಲೇ ಜಡನಾಗಿ ಹೋಗುವೆನು. ಆಗ ನಾನು ಚೇತನವೃತ್ತಿಯನ್ನು ವಹಿಸುವುದೆಂತು ?

೫೨. ನಾನು ಇಷ್ಟು ಹೊತ್ತು ನಿದ್ದೆಯಲ್ಲಿದ್ದೆನು ಎಂದು ದೃಢವಾಗಿ ತಿಳಿದಿರುವವನು ಚೇತನನೇ ಆದರೂ ನಿದ್ರಾಸಂಬಂಧವಾದ ಜಾಡ್ಯಕ್ಕೆ ಗುರಿಯಾಗಿದ್ದುದರಿಂದ ಇನ್ನೇನೂ ತಿಳಿಯೆನು ಎನ್ನುವನು. ಆ ಜಾಡ್ಯವನ್ನು ಪ್ರಕಾಶಗೊಳಿಸುವ ಚೇತನವು ಬಂದಿರುವುದರಿಂದ ತಾನೇ ನಾನು ಏನೂ ತಿಳಿಯೆನು ಎಂಬುದಾದರೂ ತಿಳಿಯುವುದು?

೫೩. ಯಾವನು ಜ್ಞಾನಬಲದಿಂದ ಪ್ರಬುದ್ಧಾತ್ಮನಾಗಿರುವನೋ, ಆದಿಭೌತಿಕ ದೇಹವು ಅವನಿಗೆ ಶಾಂತವಾಗುವುದು (ಎಂದರೆ ಇದ್ದರೂ ಅದರ ತೊಂದರೆ ಇರುವುದಿಲ್ಲ.) ಆತಿವಾಹಿಕವಾದ ವಿಮಲವಾದ ಬೋಧಾತ್ಮವು ಉದಯವಾಗುವುದು.

೫೪. ಆ ಆತಿವಾಹಿಕ ದೇಹವು ಅಣುವಾಗಿ ಬೋಧಾತ್ಮವಾಗಿರುವುದು. ಇದು ಬೇಕಾದರೆ ವ್ಯಪತಿಸ್ತು ಆಗಬಲ್ಲುದು. ಆಗ ಆತನು ನಿರ್ವಾಣಾತ್ಮನಾಗುವನು

ಬೋಧಮಾತ್ರಂ ವಿದುರ್ದೇಹಮಾತಿವಾಹಿಕಮವ್ಯಯಂ ।
ಇದಾನೀಂ ತ್ವಂ ತವೇವೇಹ ಬುಧೋಽನುಭವಸಿ ಸ್ವಯಂ ॥೬೦॥

ಚಿನ್ಮಾತ್ರವ್ಯೋಮರೂಪೋಽಸ್ಮೀತ್ಯರ್ಕಾದಾವಿತಿ ಬೋಧತಃ ।
ಆತ್ಮೈವಾಸ್ತಮುಪಾನೀತಃ ಸನ್ನೇವಾಸನ್ನಿವಾತ್ಮನಾ ॥೬೧॥

ಸ್ಥಿತಂ ಸ್ವಪ್ನಾತಿ ಜಗತಿ ತಮಸೇವಾಸತೇವ ಚ ।
ಆವೃತೇನೇವ ವಾನ್ಯಾಸಾವಮಲಭ್ಯೇನ ಸ ತಾದೃಶಂ ॥೬೨॥

---

೬೦. ಆತಿವಾಹಿಕ ದೇಹವನ್ನು ಬಲ್ಲವರು ಬೋಧಮಾತ್ರವೇ ಎನ್ನುವರು. ಅದು ಅವ್ಯಯವು. ಇಕೋ, ಈಗ ಇದನ್ನು ತಿಳಿದೆಯಾಗಿ ನೀನೂ ಅದನ್ನು ಸ್ವಯಂ ಇಲ್ಲಿಯೇ ಅನುಭವಿಸುವೆ.

(ತವಾಪಿ ತತ್ತ್ವಜ್ಞಾನಿತಯಾ ಆತಿವಾಹಿಕದೇಹತ್ವಂ ಧಾರಣಾಭೇದೈಃ ಜಗದ್ಭಾವ ಕೌತುಕದರ್ಶನಂ ಚ ಸುಲಭಮೇವೇತಿ ಮದುಕ್ತಂ ಪರೀಕ್ಷಸ್ವ–ಇತ್ಯಾಶಯೇನಾಹ । . . . ತವೇವಾತಿವಾಹಿಕದೇಹಂ ಧಾರಣಯಾ ಜಗದ್ಭಾವಂ ಚಾನುಭವಿಸಿ ಯದೀಚ್ಛಸೀತಿ–ಶೇಷಃ ॥—ತಾ. ಪ್ರ.)

೬೧. ಚಿನ್ಮಾತ್ರ ವ್ಯೋಮರೂಪನಾಗಿ ಸೂರ್ಯನೇ ಮೊದಲಾದವರಲ್ಲಿ ಧಾರಣ ಮಾಡುವುದರಿಂದ ಅವರನ್ನು ಜ್ಞಾನಬಲದಿಂದ ಅಸ್ತಂಗತರನ್ನಾಗಿ ಮಾಡಿ ಆತ್ಮನಾಗಿ ಇದ್ದುಬಿಡಬಹುದು. ಆದರೂ ಆ ಉಪಾಧಿಯಲ್ಲಿ ಸೇರಿ ತಾನೇ ಅಸತ್ ಆದಂತೆ ಇರಲೂಬಹುದು.

(ತತ್ವಜ್ಞೈರ್ಯ ರಿಚ್ಛಯೈವ ಅರ್ಕಾದಿಸರ್ವಂ ಜಗದಸ್ತಂ ನೀತ್ವಾ ಆತ್ಮಮಾತ್ರತಯಾ ಸ್ಥಾಪಯಿತುಂ ಶಕ್ಯಮಿತ್ಯಾಹ ॥—ಆತ್ಮನಾ ಆತ್ಮರೂಪೇಣ ಸನ್ನೇವ ಜಗದ್ರೂಪಬಾಧಾದಸನ್ನಿವ ಭವತೀತ್ಯರ್ಥಃ–ತಾ. ಪ್ರ.)

೬೨. ಸ್ವಪ್ನಾದಿ ಜಗತ್ತುಗಳಲ್ಲಿ ತಮಸ್ಸಿನಿಂದಾವೃತನಾಗಿ, ಅಸತ್ತಾದವುಗಳನ್ನೇ ನೋಡುತ್ತ, ತನ್ನಂತೆಯೇ ತಮಸ್ಸಿನಿಂದ ಆವೃತವಾಗಿರುವವರಿಗೆ ಅಗೋಚರನಾಗಿ ಇರುವಂತೆ, ಆತ್ಮನು ಇರಬಲ್ಲನು.

ತರಂಗಲೇಖಯಾಂಗಾರಸರಿತಃ ಸ್ವಾಂಗಲಗ್ನಯಾ ।
ಮನೋರಾಜ್ಯಶ್ರಿಯೇವಾಶುಕ್ ಪ್ರೋತ್ಪನ್ನಸ್ತದ್ವದೇಹಯಾ ॥೬೩॥

ಕಜ್ಜಲಾಲಿಕಯಾ ವಹ್ನಿವಿಪಿನಂ ಪುಷ್ಪಶೋಭಯಾ ।
ಪ್ರಫುಲ್ಲಸ್ಥಲಾಂಬುಜಾಕಾರಂ ಕಿಂಶುಕಾಶೋಕರೂಪಯಾ ॥೬೪॥

ತತತಾರಂಭಯಸಾವ್ಯಜ್ಜೈ ಜ್ವಾಲಾಜ್ವಲತಯೇದ್ಧಯಾ ।
ಉಪೋತ್ಥಾಯಾಂಗಗಲಿತಂ ಖಲಲಕ್ಷ್ಮ್ಯೇವ ಲೋಲಯಾ ॥೬೫॥

---

(ನನು ಅಸ್ಮದಾದಿದೃಶಾ ಸತಾ ಜಗತಾ ಕಥಮಸತೀವ ಸ್ಥಿತಮಿತಿ ಚೇತ್ ಸ್ವಪ್ನಾದಿ ಜಗತಿ ಜಾಗ್ರಜ್ಜಗತೀವ ಇತ್ಯಾಹ—ಯಥಾದೃಶಂ ಜಾಗ್ರತ್ಪುರುಷ ದೃಷ್ಟಿಂ ಪ್ರತಿ ಸತಾ ವಿದ್ಯಮಾನೇನೈವ ಜಗತಾ ಸುಪ್ತಪುರುಷ ಪ್ರಸಿದ್ಧ ಸ್ವಪ್ನಾದಿ ಜಗತಿ ತಮಸಾ ಅಜ್ಞಾನಭಾವೇನೇವ ಅಸತಾ ಶೂನ್ಯಭಾವೇನೈವ ಆವೃತೇನೇವ ವಾ ಅನ್ಯಾಸಾಂ ಸುಪ್ತ ದೃಶಾಮುಲಭ್ಯೇನ ಸ್ಥಿತಂ ತದ್ವದಿತ್ಯರ್ಥಃ—ತಾ ಪ್ರ.)

೬೩. (ಹೀಗೆ), ತನ್ನ ದೇಹವು ತರಂಗ ಸುಂದರವಾದ ಅಗ್ನಿ ನದಿಯನ್ನು ಧರಿಸಿರುವುದು ಎಂದು ಮನಸ್ಸಿನಿಂದ ಕಲ್ಪಿಸಿಕೊಂಡಿರುವ ವೇಳೆಯಲ್ಲಿ ಆ ಅಗ್ನಿಯಿಂದ ದಾಹವಾಗುವುದೇನು ? ಅದರಂತೆ, ಧಾರಣೆಯಲ್ಲಿರುವಾಗ, ಸ್ವೇಚ್ಛೆಯಿಂದ ಧರಿಸುವ ಪಾಷಾಣಮಣ್ಯಾದಿ ರೂಪಗಳಲ್ಲಿ ದುಃಖಪ್ರಸಕ್ತಿಯೇ ಇರುವುದಿಲ್ಲ.

೬೪. ಹೀಗೆ, ವಹ್ನಿಧಾರಣೆ ಮಾಡಿದ ನಾನು ಪುಷ್ಪಶೋಭಾಯುತವಾಗಿ, ಕಾಡಿಗೆಯಂತೆ, ಕಪ್ಪಾಗಿರುವ ದುಂಬಿಗಳಿಂದ ಕೂಡಿ ಮೆರೆಯುತ್ತಿದ್ದ ಕಾಡನ್ನು ಕಿಂಶುಕ, ಅಶೋಕಗಳಿಂದ ಕೂಡಿದಂತೆ ಕೆಂಪಾಗಿ, ಅರಳಿದ ಜ್ವಾಲಾಮಯವಾದ ಸ್ಥಲಪದ್ಮಿನಿಯೋ ಎಂಬಂತೆ ಕಾಣುವ ವಹ್ನಿವಿಪಿನವನ್ನಾಗಿ ಮಾಡಿದೆನು.

೬೫. ದುಷ್ಟರ ಐಶ್ವರ್ಯದಂತೆ, ಜ್ವಾಲಾಮಾಲೆಗಳಿಂದ ಪ್ರವೃದ್ಧವಾಗಿ, ಒಂದೇ ಕ್ಷಣದಲ್ಲಿ ಗಲಿತವೂ ಆಗಿಹೋದ ದಳ್ಳುರಿಯಾಗಿದ್ದೆನು.

ತೇಜಸ್ತ್ವಯಾಪಿ ಪರಮಾಣುಕಣೋದರೇಪಿ ।
ದೃಷ್ಟೇತ್ಥಮೇವಮಿಹ ರಾಮ ಮಯಾ ಜಗಚ್ಛ್ರೀಃ ॥
ಅನ್ಯಾ ಚ ಸಾ ನಚ ಚಿದಂಬರತಃ ಪರಸ್ಮಾತ್ ।
ಸ್ವಪ್ನೇ ಪುರಾಚಲಗಣೋತ್ರ ನಿದರ್ಶನಂ ವಃ ॥೬೬॥

ಇತ್ಯಾರ್ಷೇ ವಾಸಿಷ್ಠಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಪಾಷಾಣೋ
ಪಾಖ್ಯಾನೇ ತೈಜಸಜಗದ್ವರ್ಣನಂ ನಾಮೈಕನವತಿತಮಃ ಸರ್ಗಃ

---

೬೬. ತೇಜಸ್ಸಾಗಿದ್ದುದರಿಂದ, ಪರಮಾಣುಕಣದ ಉದರದಲ್ಲಿಯೂ ಈರೀತಿಯೇ ಜಗಲ್ಲಕ್ಷ್ಮಿಯನ್ನು ಕಂಡೆನು. ರಾಮ, ಆದರೆ ಆ ಜಗತ್ತು ಪರಮವಾದ ಚಿದಾಕಾಶಕ್ಕಿಂತ ಬೇರೆಯಾಗಿರಲಿಲ್ಲ. ಹೇಗೆಂದರೆ, ಕನಸಿನಲ್ಲಿ ಕಾಣುವ ಪುರ, ಗಿರಿ, ಗಣಗಣವೇ ನಿಮಗೆ ಸಾಕ್ಷಿಯು.

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ತೈಜಸಜಗದ್ವರ್ಣನ" ಎಂಬ
ತೊಂಬತ್ತೊಂದನೆಯ ಸರ್ಗವು



# ದ್ವಿನವತಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚಃ—

ಅಥ ವಾತಮಯೀಂ ಕೃತ್ವಾ ಜಗತ್ಪ್ರೇಕ್ಷಣಕೌತುಕಾತ್ ।
ಧಾರಣಾಂ ಧೀರಯಾ ವೃತ್ತ್ಯಾ ವಿತತಾಮಹಮಾಗತಃ ॥೧॥

ಸಂಪನ್ನೋಽಸ್ಮ್ಯನಿಲೋ ವಲ್ಲೀಲಲನಾಲೋಕಲಾಸಕಃ ।
ಕಮಲೋತ್ಪಲಕುಂದಾದಿ ಜಾಲಕಾಮೋದ ಪಾಲಕಃ ॥೨॥

ಸೀಕರೋತ್ಕರನೀಹಾರಹೇಲಾಹರಣತತ್ಪರಃ ।
ಸುರತಶ್ರಾಂತಸರ್ವಾಂಗ ಸಮಾಹ್ಲಾದನ ತತ್ಪರಃ ॥೩॥

---

# ತೊಂಭತ್ತೆರಡನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು: —

೧. ಜಗತ್ತನ್ನು ಇನ್ನೂ ನೋಡಬೇಕೆಂದು ವಾತಮಯಿಯಾದ ಧಾರಣೆಯನ್ನು ಧೀರವಾದ ವೃತ್ತಿಯಿಂದ ಧರಿಸಿ, ಹರಡುವಿಕೆಯನ್ನು ಹೊಂದಿದೆನು.

(ವಿತತಾಂ ವಾಯುಭಾವ ಪ್ರತಿಷ್ಠಾಪರ್ಯಂತಂ ವಿಸ್ತೀರ್ಣಾಂ ತಾಂ ಆಗತಃ— ತಾ. ಪ್ರ.)

೨. ನಾನು ಅನಿಲನಾದೆನು. ಬಳ್ಳಿಗಳೆಂಬ ಹುಡುಗಿಯರ ಗುಂಪನ್ನು ಕುಣಿಸುವವನಾದೆನು. ಕಮಲ, ಉತ್ಪಲ, ಕುಂದ, ಮೊದಲಾದ ಹೂವುಗಳ ಆಮೋದವನ್ನು ತೆಗೆದಿಟ್ಟುಕೊಂಡು ಪಾಲಿಸುವವನಾದೆನು.

೩. ನದಿಗಳ ತುಂತುರು ಹನಿಗಳೆಂಬ ಮಂಜನ್ನು ಹಾರಿಸುವ ಆಟದಲ್ಲಿ ಮಗ್ನನಾದೆನು. ಸುರತದಲ್ಲಿ ಆಯಾಸಪಟ್ಟವರ ಸರ್ವಾಂಗಗಳನ್ನೂ ಸಮಾಹ್ಲಾದನ ಮಾಡಬಲ್ಲ ವಿಟನಾದೆನು.

ತೃಣಗುಲ್ಮಲತಾವಲ್ಲೀದಲತಾಂಡವ ಪಂಡಿತಃ ।
ಲತೌಷಧಿಫಲೋಲ್ಲಾಸ ಕುಸುಮಾಮೋದಮಂಡಿತಃ ॥೪॥

ಮೃದುರ್ಮಂಗಲಕಾಲೇಷು ಲಲನಾಲೋಕಲಾಲಕಃ ।
ಭೀಮ ಉತ್ಪಾತಕಾಲೇಷು ಪರ್ಣವತ್ಪ್ರೌಢಪರ್ವತಃ ॥೫॥

ನಂದನೇ ಕುಂದಮಂದಾರಮಕರಂದರಜೋರುಣಃ ।
ನರಕೇಂಗಾರಸಂಭಾರಭೂರಿನೀಹಾರಭಾಸುರಃ ॥೬॥

ಸಾಗರೇ ಸರಲಾವರ್ತಲೇಖಾನುಮಿತಸರ್ಪಣಃ ।
ದಿವಿ ವಾರಿದಸಂಚಾರಮುಷ್ಟಾವೃಷ್ಟೇಂದುದರ್ಪಣಃ ॥೭॥

---

೪. ತೃಣ ಗುಲ್ಮಲತಾ ವಲ್ಲೀದಲಗಳನ್ನು ಕುಣಿಸಬಲ್ಲ ಪಂಡಿತನಾದೆನು. ಲತಾ ಔಷಧಿ ಫಲಗಳ ಅರಳಿದ ಹೂಗಳ ವಾಸನೆಯಿಂದ ಕೂಡಿದವನಾದೆನು.

೫. ಮಂಗಲಕಾಲಗಳಲ್ಲಿ ಮೃದುವಾದ ಮಂದಮಾರುತನಾಗಿ, ಲಲನೆಯರ ಗಣದಿಂದ ಲಾಲಿಸಲ್ಪಡತಕ್ಕವನಾಗಿ, ಉತ್ಪಾತ ಕಾಲಗಳಲ್ಲಿ ಭೀಮನಾಗಿ ದೊಡ್ಡ ಬೆಟ್ಟಗಳನ್ನೂ ಎಲೆಗಳಂತೆ ಹಾರಿಸಬಲ್ಲವನಾದೆನು.

೬. ನಂದನದಲ್ಲಿ ಕುಂದಮಂದಾರಗಳ ಮಕರಂದದಿಂದಲೂ ರಜಸ್ಸಿನಿಂದಲೂ ಕೂಡಿ ಕೆಂಪಾಗಿ, ನರಕದಲ್ಲಿ ಬೆಂಕಿಯ ಸಂಭಾರವನ್ನು ವಹಿಸಿ ಹೆಚ್ಚಾದ ನೀಹಾರದಿಂದ ಭಾಸುರನಾದೆನು.

೭. ಸಾಗರದಲ್ಲಿ ಸರಲವಾಗಿ ಸುಳಿಗಳ ಮತ್ತು ತರಂಗಗಳಿಂದ ಅನುಮಿತವಾದ ಗತಿಯುಳ್ಳವನಾದೆನು. ಆಕಾಶದಲ್ಲಿ ಮೋಡಗಳ ಸಂಚಾರದಿಂದ, ಇಂದುವೆಂಬ ದರ್ಪಣವನ್ನು ಮುಚ್ಚುತ್ತ ತೆರೆಯುತ್ತ ಆಡುವವನಾದೆನು.

ನಕ್ಷತ್ರಕ್ಷತ್ರಸೈನ್ಯಸ್ಯ ರಥೋ ರಂಹೋಽಭಿಬೃಂಹಿತಃ ।
ತ್ರೈಲೋಕ್ಯಸಿದ್ಧಸಂಚಾರವಿಮಾನಧರಣೇ ಹಿತಃ　　॥೮॥

ಸಹೋದರ ಇವ ಕ್ಷಿಪ್ರಗಾಮಿತ್ವಾದಸ್ಯ ಚೇತಸಃ ।
ಅನಂಗೋಽಪಿ ಸಮಸ್ತಾಂಗಃ ಸ್ಪಂದಾನಂದನಚಂದನಃ　　॥೯॥

ತುಷಾರಸೀಕರಾಸಾರಜರಾರೋಮವಿಜರ್ಜರಃ ।
ಆಮೋದಯೌವನೋನ್ಮಾದೋ ಮೌನಮಾರ್ದವಶೈಶವಃ　　॥೧೦॥

ನಂದನಾಮೋದಮಧುರಾ ಮಧುರೋದಾರಸಂಸೃತಿಃ ।
ಚಾರುಚೈತ್ರರಥೋನ್ಮುಕ್ತೋ ಹೃತಕಾಂತಾರತಶ್ರಮಃ　　॥೧೧॥

---

೮. ನಕ್ಷತ್ರವೆಂಬ ಕ್ಷತ್ರಸೈನ್ಯದ ವೇಗದಿಂದ ವಿವೃದ್ಧವಾದ ರಥವುಳ್ಳವನಾಗಿ, ಮೂರುಲೋಕಗಳಲ್ಲಿಯೂ ಇರುವ ಸಿದ್ಧರ ಸಂಚಾರವಿಮಾನಗಳನ್ನು ಧರಿಸುವುದರಲ್ಲಿ ಆಸಕ್ತನಾದೆನು.

(ಪ್ರವಾಹಾಖ್ಯೋ ಮರುದ್ಭೇದಃ, ನಕ್ಷತ್ರ ಚಕ್ರಂ ಭ್ರಮಯತೀತಿ ಜ್ಯೋತಿಶ್ಶಾಸ್ತ್ರ ಪ್ರಸಿದ್ಧೇಃ-ತಾ. ಪ್ರ.)

೯. ಈ ಸಿದ್ಧಸಂಚಾರ ರೂಪವಾದ ಚೇತನಕ್ಕೆ ನಾನೂ ಬೇಗ ಹೋಗುವುದರಿಂದ ಸಹೋದರನೋ ಎಂಬಂತೆ, ನಾನು ಅಸಂಗನಾದರೂ ಸಮಸ್ತಾಂಗನಾಗಿ, ಸ್ಪಂದದಿಂದ ಆನಂದವನ್ನುಂಟುಮಾಡುವ ಚಂದನವಂತೆ ಇದ್ದೆನು.

೧೦. ತುಷಾರಗಳೆಂಬ ತುಂತುರುವನಿಗಳು ನರೆತ ರೋಮಗಳಂತಿರಲು ವೃದ್ಧನಂತೆಯೂ, ಆಮೋದವೆಂಬ ಯೌವ್ವನದಿಂದ ಉನ್ಮತ್ತನಂತೆಯೂ ಮೌನವನ್ನು ವಹಿಸಿ ಮೃದುವಾಗಿ ಶಿಶುವಿನಂತೆಯೂ ಇದ್ದೆನು.

೧೧. ನಂದನವನದಲ್ಲಿ ಇರುವ ಆಮೋದಗಳನ್ನು ವಹಿಸಿ ಮಧುರನಾಗಿ ಮಧುರವಾಗಿಯೂ ಉದಾರವಾಗಿಯೂ ಸಂಚಾರ ಮಾಡುವವನಾಗಿ, ಮನೋಹರವಾದ ಚೈತ್ರರಥವೆಂಬ ಕುಬೇರನ ಉದ್ಯಾನವನದಿಂದ ಹೊರಟವನಾಗಿ, ಕಾಂತೆಯರ ರತಿಶ್ರಮವನ್ನು ಪರಿಹರಿಸುವವನಾದೆನು.

ಚಿರಂ ಗಂಗಾತರಂಗಾಂಗದೋಲಾನ್ದೋಲನಸಶ್ರಮಃ ।
ಶ್ರಮಸ್ವರೂಪಾಜ್ಞತಯಾ ನಿವಾರಿತತತಶ್ರಮಃ ॥೧೨॥

ಪುಷ್ಪಭಾರಾನತಾಃ ಸ್ಪರ್ಶೈರ್ವಸಂತವನಿತಾಲತಾಃ ।
ಚಿರಂ ಚಪಲಯಲ್ಲೋಲದಲಹಸ್ತಾಲಿ ಲೋಚನಾಃ ॥೧೩॥

ಚಿರಂ ಭುಕ್ತ್ವೇಂದುಬಿಂಬಾಗ್ರಂ ಸುಪ್ತ್ವಾ ಪೂರ್ಣಾಭ್ರತಲ್ಪಕೇ ।
ವಿಧೂಯ ಕಮಲಾನೀಕಮಪನೀತರತಶ್ರಮಃ ॥೧೪॥

ಸಮಸ್ತರಜಸಾಮೇಕೋ ವ್ಯೋಮಗಾಮೀ ತುರಂಗಮಃ ।
ಆಮೋದಮದಮಾತಂಗಸಮುಲ್ಲಾಸಮಹಾಸುಹೃತ್ ॥೧೫॥

---

೧೨. ಗಂಗಾತರಂಗಗಳಲ್ಲಿ ದೇಹವನ್ನು ಬಲುಹೊತ್ತು ಆಂದೋಲನಮಾಡಿ ಸಶ್ರಮನಾದರೂ, ಶ್ರಮವೆಂಬುವೇನು ಎಂಬುದನ್ನೇ ತಿಳಿಯದನಾದ್ದರಿಂದ ಇತರರ ನಾನಾ ವಿಧವಾದ ಶ್ರಮವನ್ನು ನಿವಾರಿಸಿದವನಾದೆನು.

೧೩. ಪುಷ್ಪಗಳನ್ನು ಮುಡಿದು ಅವುಗಳ ಭಾರದಿಂದ ಬಗ್ಗಿರುವ ಲೋಲವಾಗಿರುವ ದಲಗಳೆಂಬ ಹಸ್ತಗಳಲ್ಲಿರುವ ಅಳಿಗಳೇ ಲೋಚನಗಳೆಂಬಂತಿರುವ ಲತೆಗಳೆಂಬ ವಸಂತವನಿತೆಯರನ್ನು ಸುಖಸ್ಪರ್ಶಗಳಿಂದ ಚಪಲರನ್ನಾಗಿ ಮಾಡಿದೆನು.

೧೪. ಚಂದ್ರಮಂಡಲಕ್ಕೆ ಹೋಗಿ ಅಲ್ಲಿರುವ ಅಮೃತವನ್ನು ಯಥೇಚ್ಛವಾಗಿ ಭುಂಜಿಸಿ, ಪೂರ್ಣವಾಗಿರುವ ಮೋಡಗಳೆಂಬ ಮಂಚದಲ್ಲಿ ದೀರ್ಘವಾಗಿ ಪವಡಿಸಿದ್ದು, ಕಮಲಾನೀಕಗಳನ್ನು ಆಟವಾಡಿಸಿ, ರತಿಶ್ರಮವನ್ನು ಪರಿಹಾರಮಾಡುವವನಾದೆನು.

೧೫. ಸಮಸ್ತವಿಧವಾದ ರಜಸ್ಸುಗಳಿಗೂ ಆಕಾಶಗಾಮಿಯಾದ ಒಂದೇ ಒಂದು ತುರಂಗಮವಾಗಿ, ಆಮೋದವೆಂಬ ಮದಮಾತಂಗಕ್ಕೆ ಸಂತೋಷವನ್ನುಂಟುಮಾಡುವ ಮಹಾಸುಹೃತ್ತಾಗಿ, ಮೆರೆದೆನು.

ಫೀರೀಕಾಧ್ಮಾತತಡಿಚ್ಛೃಂಗಂ ಪಯೋದಪಶುಪಾಲಕಃ ।
ತಂತುಃ ಸೀಕರಮುಕ್ತಾನಾಮರಿಧರ್ಮಾ ರಜೋರುಜಾಂ ॥೧೬॥

ಆಕಾಶಕುಸುಮಾಮೋದಃ ಸರ್ವಶಬ್ದಸಹೋದರಃ ।
ನಾಡೀಪ್ರಣಾಲೀಸಲಿಲಂ ಭೂತಾಂಗೋಪಾಂಗವರ್ತಕಃ ॥೧೭॥

ಮರ್ಮಕರ್ಮಕರ್ತ್ರೈಕಾತ್ಮಾ ಹೃದ್ಗುಹಾಗೇಹಕೇಸರೀ ।
ನಿತ್ಯಮೇಕಾಂತಪಥಿಕಃ ಸಾರವಿಜ್ಞಾತವೇದಸಃ ॥೧೮॥

---

೧೬. ತಟಿತ್ತೆಂಬ ಕೊಂಬಿನ ವಾದ್ಯವನ್ನೂದಿ, ಗಂಭೀರ ಆನಾದದಿಂದ ಪಯೋದಗಳೆಂಬ ಪಶುಗಳನ್ನು ಕಾಯುವ ಗೋಪಾಲಕನಾದೆನು. ರಜಸ್ಸೆಂಬ ರೋಗವನ್ನು ನಿವಾರಣಮಾಡುವ ಶತ್ರುಧರ್ಮವನ್ನುವಹಿಸಿ ಸೀಕರಗಳೆಂಬ ಮುಕ್ತಾಮಣಿಗಳ ತಂತುವಾದೆನು.

೧೭. ಆಕಾಶವೆಂಬ ಕುಸುಮದ ಆಮೋದವಾಗಿ, ಆಕಾಶಗುಣವಾದ ಶಬ್ದಗಳಿಗೆಲ್ಲ ಸಹೋದರನಾಗಿ, ಭೂತಭೂತಗಳ ಅಂಗೋಪಾಂಗಗಳಲ್ಲಿ ಸಂಚರಿಸುತ್ತ ನಾಡಿಗಳಲ್ಲಿ ತುಂಬಿರುವ ಜಲರಸವನ್ನು ಪ್ರವರ್ತಿಸುವವನಾದೆನು.

೧೮. ಹೀಗೆ ಪ್ರಾಣಿಪ್ರಾಣಿಗಳ ಅಂಗಾಂಗಗಳಲ್ಲಿ ಚಲಿಸುತ್ತ ಅವುಗಳ ಮರ್ಮವನ್ನು ಅರಿತ ಕರ್ಮಕಾರಿಯಾದ ಏಕಾತ್ಮನಾಗಿ, ಹೃದಯವೆಂಬ ಗುಹೆಯಲ್ಲಿರುವ ಕೇಸರಿಯಾಗಿ, ನಿತ್ಯವೂ ಹಾದಿನಡೆಯುವ ಜೊತೆಯಿಲ್ಲದ ಹಾದಿಗನಾಗಿ, ಅಗ್ನಿಯ ಬಲಾಬಲಗಳನ್ನು ಅರಿತವನಾಗಿದ್ದೆನು.

(ಏಕಾಂತಂ ನಿಯತಂ ಪಥಿಕಃ ಸಂಚರಣಶೀಲಃ ಜಾತವೇದಸಃ ಸಾರಂಬಲಂ ವೇತ್ತೀತಿಸಾರವಿತ್ । ಯತೋ ದುರ್ಬಲಂ ದೀಪಾದಿಭಾವೇ ವಾತಃ ನಾಶಯತಿ, ಪ್ರಬಲಂ ಚ ಮಿತ್ರಭಾವೇನ ವರ್ಧಯತಿ—ತಾ. ಪ್ರ.)

ಆಮೋದರತ್ನಲುಂಟಾಕೋ ವಿಮಾನನಗರಾವನಿಃ ।
ದಾಹಾಂಧಕಾರಶೀತಾಂಶುಃ ಶೈತ್ಯೇಂದುಕ್ಷೀರಸಾಗರಃ ॥೧೯॥

ಪ್ರಾಣಾಪಾನಕಲಾರಜ್ಜ್ವಾ ಪ್ರಾಣಿನಾಂ ಯಂತ್ರವಾಹಕಃ ।
ಅರಿರ್ಮಿತ್ರಂ ಚ ದ್ವೀಪಾನಾಂ ದ್ವೀಪಸಂಚಾರಣೇ ರತಃ ॥೨೦॥

ಪುರೋಗತೋಽಪ್ಯದೃಶ್ಯಾತ್ಮಾ ಮನೋರಾಜ್ಯಪುರೋಪಮಃ ।
ತಾಲವೃಂತತಿಲೇತೈಲಮಾಲಾನಂ ಸ್ಪಂದದಂತಿನಃ ॥೨೧॥

ಏಕಕ್ಷಣಲವೇನೈವ ಚಾಲಿತಾಖಿಲಭೂಧರಃ ।
ವರ್ಣಾವಲಿತರಂಗಾಣಾಂ ಗಂಗಾವಾಹ ಇವೈಕಕೃತ್ ॥೨೨॥

---

೧೯. ಆಮೋದವೆಂಬ ರತ್ನವನ್ನು ಲೂಟಿಮಾಡುವವನಾಗಿ, ವಿಮಾನಗಳೆಂಬ ನಗರಗಳನ್ನು ಧರಿಸಿರುವ ಭೂಮಿಯಾಗಿ, ದಾಹವೆಂಬ ಕತ್ತಲೆಗೆ ಚಂದ್ರನಾಗಿ, ಶೈತ್ಯವೆಂಬ ಚಂದ್ರನಿಗೆ ಜನ್ಮಭೂಮಿಯಾದ ಕ್ಷೀರಸಾಗರದಂತಿದ್ದೆನು.

೨೦ ಪ್ರಾಣಾಪಾನಗಳೆಂಬ ಸುಂದರ ರಜ್ಜುವಿನಿಂದ ಪ್ರಾಣಿಗಳೆಂಬ ಯಂತ್ರಗಳನ್ನು ನಡೆಸುವವನಾಗಿ, ಮಿತ್ರಶತ್ರುವೆಂಬ ಭೇದವಿಲ್ಲದೆ ಎಲ್ಲರನ್ನೂ ದ್ವೀಪದಿಂದ ದ್ವೀಪಾಂತರಕ್ಕೆ ಕೊಂಡೊಯ್ಯುವುದರಲ್ಲಿ ನಿರತನಾಗಿದ್ದೆನು.

೨೧. ಎದುರಿಗೇ ಹೋಗುತ್ತಿದ್ದರೂ ಮನೋರಾಜ್ಯದಲ್ಲಿರುವ ಪುರದಂತೆ ಅದೃಶ್ಯನಾಗಿ, ತಾಳೆಯ ಬೀಸಣಿಗೆಯಿಂದ ಬೀಸಿಕೊಳ್ಳುವಾಗ, ತಿಲದಲ್ಲಿರುವ ತೈಲದಂತೆ ಪ್ರಕಟನಾಗುವವನಾಗಿ, ಸ್ಪಂದವೆಂಬ ಆನೆಯನ್ನು ಕಟ್ಟುವ ಗೂಟವಾಗಿದ್ದೆನು.

೨೨. ಒಂದೇ ಒಂದು ಕ್ಷಣಮಾತ್ರದಲ್ಲಿ ಪರ್ವತಗಳನ್ನೆಲ್ಲ ಚಲಿಸಬಲ್ಲವನಾಗಿ ನಾನಾ ವರ್ಣಗಳಿಂದ ಕೂಡಿದ ತರಂಗಗಳನ್ನು ಗಂಗಾಪ್ರವಾಹದಂತೆ, ಹೊರಡಿಸಬಲ್ಲವನಾಗಿ,

ಧೂಮನಾಂಬುವಾಹರಜಸಾಂ ಮಹಾವರ್ತಕೃದಂಭಸಾಂ।
ವ್ಯನದೀವಾಹವಾಯೋರ್ಘನಭೋನೀಲೋತ್ಪಲಾಲಿಕಃ ॥೨೩॥

ಶರೀರಾವೇಷ್ಟಿತೋಸ್ಮ್ಯುಕ್ತಪುರಾಣತೃಣಚೋಪನಃ।
ಸ್ಪಂದಪದ್ಮವನಾದಿತ್ಯಃ ಶಬ್ದವರ್ಷೈಕವಾರಿದಃ ॥೨೪॥

ವ್ಯೋಮಕಾನನಮಾತಂಗಃ ಶರೀರಗೃಹಗರ್ಗಟಿಃ।
ಧೂಲೀಕದಂಬವಿಪಿನ ಮಾಲಾಲಿಂಗನನಾಯಕಃ ॥೨೫॥

ಸ್ತ್ಯಾನೀಕರಣಸಂಶೋಷಧೃತಿಸ್ಪಂದನಸೌರಭೈಃ।
ಸಶೈತ್ಯೈಃ ಕರ್ಮಭಿಃ ಷಡ್ಭಿರಲಬ್ಧಕ್ಷಣ ಆಕ್ಷಯಂ ॥೨೬॥

೨೩. ಧೂಮ, ಮೇಘ, ರಜಸ್ಸುಗಳ ಮತ್ತು ನೀರುಗಳ ಮಹಾವರ್ತಗಳನ್ನು ಮಾಡುವವನಾಗಿ, ಆಕಾಶಗಂಗಾನದಿಯ ಪ್ರವಾಹದಲ್ಲಿ ನಭದಂತೆ ನೀಲವಾಗಿರುವ ಉತ್ಪಲಗಳೆಂಬ ಆಳಿಗಳನ್ನು ಆಡಿಸುವವನಾದೆನು.

೨೪. ಹೊತ್ತುಕೊಂಡು ಹೋಗಿ ಎಸೆದಿರುವ ಜೀರ್ಣವಾಗಿರುವ ಹುಲ್ಲಿನ ಮಂದಗತಿಗೆ ಕಾರಣನಾಗಿ, ಸ್ಪಂದವೆಂಬ ಪದ್ಮವನಕ್ಕೆ ಆದಿತ್ಯನಾಗಿ ಶಬ್ದವನ್ನು ವರ್ಷಿಸುವ ಮೋಡವಾಗಿ,

೨೫. ವ್ಯೋಮವೆಂಬ ಕಾನನದ ಮಾತಂಗನಾಗಿ, ಶರೀರವೆಂಬ ಗೃಹದ ಗರ್ಗಟಿಯಂತ್ರವಾಗಿ ಸದಾ ಶಬ್ದಮಾಡುವವನಾಗಿ, ಧೂಲೀಕದಂಬವೆಂಬ ವಿಪಿನ ಮಾಲೆಗಳನ್ನು ಧರಿಸಿದವನಾದೆನು.

೨೬. ಹಿಮ, ಘೃತ, ಮೊದಲಾದುವುಗಳನ್ನು ಗಟ್ಟಿಮಾಡುವುದೊಂದೆಡೆ, ಕೆಸರು ಮೊದಲಾದುವುಗಳನ್ನು ಶೋಷಿಸುವುದೊಂದೆಡೆ, ಮೇಘಾದಿಗಳನ್ನು ಧರಿಸುವುದೊಂದೆಡೆ, ಗಿಡಮರಗಳನ್ನು ಅಲ್ಲಾಡಿಸುವುದೊಂದೆಡೆ, ಸೌರಭಗಳನ್ನು ಹಂಚುವುದು ಒಂದೆಡೆ, ಹೀಗೆ, ಶೈತ್ಯಯುಕ್ತವಾದ ಷಟ್ಕರ್ಮಗಳನ್ನು ಮಾಡುತ್ತ, ಒಂದು ಕ್ಷಣವೂ ವಿರಾಮವಿಲ್ಲದೆ ಪ್ರಲಯದವರೆಗೂ ಅಲೆಯುತ್ತಿದ್ದೆನು.

ರಸಾಕರ್ಷಣಸವ್ಯಗ್ರೋ ನಿತ್ಯಂ ಭ್ರಾತೇವ ತೇಜಸಃ ।
ಹರಣಾದಾನಕರ್ತೃಣಾಮಂಗಾನಾಂ ವಿನಿಯೋಗಕೃತ್ ॥೨೭॥

ಶರೀರನಗರೇ ನಾಡೀಮಾರ್ಗೈರ್ಗತಿನಿರರ್ಗಲಃ ।
ರಸಭಾಂಡೇ ಪರಾವರ್ತಾಪಾಯುರ್ಮಣಿಮಹಾಪಣಿಕ್ ॥೨೮॥

ಶರೀರನಗರೀನಾಶನಿರ್ವಾಣೈಕಪರಾಯಣಃ ।
ರಸಕಿಟ್ಟಕಲಾಧಾತುಪೃಥಕ್ಕರಣಕೋವಿದಃ ॥೨೯॥

ಪ್ರತಿಸೂಕ್ಷ್ಮಾಣುಕಂ ದೇಹೇ ತತೋ ದೃಷ್ಟಂ ಮಯಾ ಜಗತ್ ।
ತತ್ರೇತ್ಥಂ ರೂಪವಾನಸ್ಮಿ ಸ್ಫುಟಮಾಭೋಗಿ ಸುಸ್ಥಿರಂ ॥೩೦॥

---

೨೭. ತೇಜಸ್ಸಿನ ಸಹೋದರನ ಹಾಗೆ ರಸವನ್ನು ಆಕರ್ಷಿಸುವುದರಲ್ಲಿಯೇ ಮಗ್ನನಾಗಿ, ಹರಣ, ಆ ದಾನ, ಕರ್ತೃಗಳಾದ ಅಂಗಗಳ ವಿನಿಯೋಗಕ್ಕೆ ಕಾರಣ ನಾಗಿದ್ದೆನು.

೨೮. ಶರೀರ ನಗರದಲ್ಲಿ ನಾಡೀಮಾರ್ಗಗಳಲ್ಲಿ ಅಡ್ಡಿಯಿಲ್ಲದೆ ಸಂಚಾರ ಮಾಡುವವನಾಗಿ, ಅನ್ನರಸಮಯವಾದ ದೇಹಭಾಂಡದಲ್ಲಿ ಪ್ರಾಣಾಪಾನಾದಿ ಭಾವ ದಿಂದ ಹೋಗಿಬರುತ್ತಾ ಆಯುಸ್ಸೆಂಬ ಮಹಾಮಣಿಯನ್ನು ಕಾಯ್ದುಕೊಂಡಿರುವ ಮಹಾವಣಿಜನಾಗಿದ್ದೆನು.

೨೯. ಶರೀರವೆಂಬ ನಗರಿಯನ್ನು ನಾಶಮಾಡಿ ನಿರ್ವಾಣಮಾಡುವ ಕರ್ತವ್ಯವೊಂದನ್ನೇ ಮಾಡುವವನಾಗಿ, ಅನ್ನರಸದ ಕಿಟ್ಟವನ್ನೂ ಸೂಕ್ಷ್ಮವಾದ ರಸಭಾಗ ಗಳನ್ನೂ ಧಾತುಗಳನ್ನೂ ಬೇರ್ಪಡಿಸುವುದರಲ್ಲಿ ಕೋವಿದನಾಗಿದ್ದೆನು.

(ಅನ್ನರಸಾನಾಂ ಕಿಟ್ಟಸ್ಯ ಮಲಸ್ಯ, ಕಲಾನಾಂ ಸೂಕ್ಷ್ಮತರ ರಸಭಾಗಾನಾಂ ಷಣ್ಣಾಂ ತ್ವಗಸೃಙ್ಮಾಂಸ ಮೇದೋಽಸ್ಥಿ ಮಜ್ಜಾ ಶುಕ್ರಾಖ್ಯಾನಾಂ ವಾತಪಿತ್ತ ಕಫಾಖ್ಯಾನಾಂ ವಾಧಾತೂನಾಂ ಚ ಪೃಥಕ್ಕಂಣೇ ಕೋವಿದಃ ಕುಶಲಃ —ತಾ. ಪ್ರ.)

೩೦. ದೇಹದೇಹದಲ್ಲಿರುವ ಪ್ರತಿ ಸೂಕ್ಷ್ಮಾಣುಗಳಲ್ಲಿಯೂ ಜಗತ್ತುಗಳನ್ನು ಕಂಡೆನು. ಆ ಜಗತ್ತುಗಳಲ್ಲಿಯೂ ಹೀಗೆ ಪೃಥಿವ್ಯಾದಿ ಜಗದ್ರೂಪವನ್ನು ಧರಿಸಿ ವಿಸ್ತಾರವಾಗಿ ಸ್ಥಿರನಾಗಿದ್ದವನೂ ನಾನೇ ಎಂಬುದನ್ನೂ ಕಂಡೆನು.

ಪರಮಾಣುಪ್ರತಿ ತ್ವತ್ರ ಪ್ರೋಹ್ಯಂತ ಇವ ಸರ್ಗಕಾಃ ।
ನ ಚ ಕಿಂಚಿತ್ಕಿಲೋಹ್ಯಂತೇ ವ್ಯಾಕ್ಯತೇ ಕಿಮಿಪ್ರೋಹ್ಯತೇ ॥೩೧॥

ಸಚಂದ್ರಾರ್ಕಾನಿಲಾಗ್ನೀಂದ್ರಪದ್ಮವೈಶ್ರವಣೇಶ್ವರಾಃ ।
ಸಬ್ರಹ್ಮಹರಿಗಂಧರ್ವಾ ವಿದ್ಯಾಧರಮಹೋರಗಾಃ ॥೩೨॥

ಸಸಾಗರಗಿರಿದ್ವೀಪ ದಿಗಂತರ ಮಹಾರ್ಣವಾಃ ।
ಸಲೋಕಾಂತರಲೋಕೇಶಕ್ರಿಯಾಕಾಲಕಲಾಕ್ರಮಾಃ ॥೩೩॥

ಸಸ್ವರ್ಗಭೂಮಿಪಾತಾಲಶತಲೋಕಾಂತರಾಂತರಾಃ ।
ಸಭಾವಾಭಾವಸ್ಥೈರ್ಯಜರಾಮರಣ ಸಂಭ್ರಮಾಃ ॥೩೪॥

---

೩೧. ಪರಮಾಣು ಪರಮಾಣುವಿನಲ್ಲಿಯೂ ಸರ್ಗಗಳು ಸೇರಿಕೊಂಡಿರುವಂತೆ ಕಂಡುಬಂದರೂ ಕಿಂಚಿತ್ತು ಯಾವುದೂ ಅದರಲ್ಲಿ ಇಲ್ಲ. ಆಕಾಶದಲ್ಲಿ ಏನು ಇದ್ದೀತು ?

೩೨. ಚಂದ್ರ, ಅರ್ಕ, ಅನಿಲ, ಅಗ್ನಿ, ಇಂದ್ರ, ಪದ್ಮ, ಕುಬೇರ, ಈಶ್ವರ, ಬ್ರಹ್ಮ, ಹರಿ, ಗಂಧರ್ವ, ವಿದ್ಯಾಧರ ಮಹೋರಗರು.

೩೩. ಸಾಗರ, ಗಿರಿ, ದ್ವೀಪ, ದಿಗಂತರಗಳು, ಮಹಾರ್ಣವಗಳು, ಲೋಕಾಂತರಗಳು, ಲೋಕೇಶ್ವರರು, ಕ್ರಿಯಾಕಲಾಪಗಳು, ಕಾಲ ಭಾಗ ವಿಭಾಗಗಳು, ಕ್ರಮಗಳು,

೩೪. ಸ್ವರ್ಗಭೂಮಿ ಪಾತಾಲ, ಇವುಗಳೊಡನೆ ಸೇರಿರುವ ಲೋಕಾಂತರಗಳು, ಉಳಿದ ಲೋಕಗಳು, ಭಾವಗಳು (ಇದ್ದವು) ಅಭಾವಗಳ (ಇದ್ದುಹೋದವು) ಕಳಲುತ್ತಾ ಇರುವವು, ಜರಾಮರಣ ಸಂಭ್ರಮಗಳುಳ್ಳವು,

ಏವಂ ನಾಮ ತದಾ ರಾಮ ಭೂತಪಂಚಕರೂಪಿಣಾ
ಮಯಾ ಪ್ರವಿಹೃತಂ ತತ್ರ ತ್ರೈಲೋಕ್ಯನಲಿನೋದರೇ ||೩೫.

ರಸಃ ಪೀತೋಽಶುಭೂಶ್ಚ ಕ್ಷ್ಮಾಜಲಾನಿಲತೇಜಸಾಂ ।
ಮೂಲಜಾಲೇನ ವೃಕ್ಷಾಣಾಂ ಪ್ರಾಣಿನಾಂ ವಸತಾ ಮಯಾ ||೩೬||

ರಸಾಯನಘನಾಂಗೇಷು ಚಂದನದ್ರವಶೋಭಿಷು ।
ಲುಠಿತಂ ಚಂದ್ರಬಿಂಬೇಷು ತುಷಾರಶಯನೇಷ್ವಿವ ||೩೭||

ಸರ್ವರ್ತುವನಜಾಲೇಷು ನಾನಾಮೋದಾನಿ ದಿಕ್ಷ್ವಲಂ ।
ಭುಕ್ತಾನಿ ಪುಷ್ಪಜಾಲಾನಿ ಪ್ರೋಚ್ಛಿಷ್ಟಂ ದದತಾಲಯೇ ||೩೮||

---

೩೫. ಇವುಗಳೆಲ್ಲಾ ಆಗಿ, ರಾಮ. ಭೂತಪಂಚಕ ರೂಪಿನಿಂದ ನಾನು ತ್ರಿಲೋಕಗಳೆಂಬ ನಳಿನದ ಉದರದಲ್ಲಿ ನಾನು ಬೇಕಾದ ಹಾಗೆ ಕ್ರೀಡಿಸಿದೆನು.

(ಏವಮಾಕಾಶಧಾರಣಯಾ ಆಕಾಶಭಾವೇ ತದ್ವಿಲಾಸ ಭೇದಾನುಭವಾ ಅಪ್ಯೂಹ್ಯಾ ಇತ್ಯಾಶಯೇನ ಉಪಸಂಹರತಿ—ತಾ. ಪ್ರ )

೩೬. ಪ್ರಾಣಿಗಳಲ್ಲಿಯೂ ವೃಕ್ಷಗಳಲ್ಲಿಯೂ ವಾಸಮಾಡುತ್ತಿದ್ದ ನಾನು ಮೂಲಜಾಲದಿಂದ ಭೂಮಿ, ಜಲ, ಅಗ್ನಿ, ವಾಯುಗಳ ರಸವನ್ನು ಪಾನಮಾಡಿ ಅನುಭವ ಮಾಡಿದೆನು.

೩೭. ರಸಾಯನವು ತುಂಬಿರುವ ಅಂಗಗಳುಳ್ಳ ಚಂದ್ರಬಿಂಬಗಳಲ್ಲಿಯೂ, ಚಂದ್ರನ ದ್ರವದಂತೆ ಸುಖವಾಗಿರುವ ತುಷಾರಶಯನಗಳಲ್ಲಿಯೂ ಬಿದ್ದು ಒದ್ದಾಡಿದೆನು.

೩೮. ಸರ್ವರ್ತುಗಳಲ್ಲಿಯೂ ಮನೋಹರವಾಗಿರುವ ವನಜಾಲಗಳಲ್ಲಿಯೂ ದಿಕ್ಕುದಿಕ್ಕುಗಳಲ್ಲಿಯೂ, ನಾನಾ ವಿಧವಾದ ಆಮೋದಗಳುಳ್ಳ ಪುಷ್ಪಜಾಲಗಳನ್ನು ಭೋಗಿಸಿದೆನು. ಉಳಿದುದನ್ನು ದುಂಬಿಗಳಿಗೆ ಕೊಟ್ಟೆನು.

ತತೋನ್ನತಾಸು ಮೃದ್ವೀಷು ಸ್ವಾಸ್ತೀರ್ಣಾಸ್ವಂಬರಾಜಿರೇ ।
ಸುಪ್ತಃ ಶುಭ್ರಾಭ್ರಮಾಲಾಸು ನವನೀತಸ್ಥಲೀಷ್ವಿವ ॥೩೯॥

ಸುಮನಃಪತ್ರಮೃದುಷು ನೀಲಲಕ್ಷ್ಮೀವಿಲಾಸಿಷು ।
ಸುರಸಿದ್ಧಾಂಗನಾಂಗೇಷು ಪೂರಾಸ್ತಸ್ಮರವಾಸನಂ ॥೪೦॥

ಕೃತಃ ಕುಮುದಕಹ್ಲಾರಕಮಲೇ ನಲಿನೀವನೇ ।
ಕೋಮಲಃ ಕಲಹಂಸೀಭಿರ್ಲೀಲಾಕಲಕಲಾರವಃ ॥೪೧॥

ಸರತ್ಸರಿಚ್ಛಿರಾಸಾರಾ ಮೂಲಭೂಮಂಡಲಾನ್ವಿತಾಃ ।
ಶೃಂಗೈರೂಢಾಃ ಸ್ಫುರದ್ವ್ಯಕ್ತಾ ಲೋಕಮಾಲಯ ಇವಾದ್ರಯಃ ॥೪೨॥

---

೩೯. ಅನಂತರ ಉನ್ನತಗಳಾಗಿ ಮೃದುಗಳಾಗಿ, ಆಕಾಶವೆಂಬ ಮಂಚದಲ್ಲಿ ವಿಸ್ತಾರವಾಗಿ ಹರಡಿರುವ ಶುಭ್ರವಾದ ಮೇಘಪಂಕ್ತಿಗಳಲ್ಲಿ, ಬೆಣ್ಣೆಯ ಉಂಡೆಗಳ ಮೇಲೆ ಮಲಗಿದಂತೆ, ಮಲಗಿದ್ದೆನು.

೪೦. ಹೂವಿನ ದಳಗಳಷ್ಟು ಮೃದುವಾದ, ನೀಲಲಕ್ಷ್ಮಿಯ ವಿಲಾಸಸ್ಥಾನವೆಂಬಂತಿರುವ, ಸುರಸಿದ್ಧಾಂಗನೆಯರ ಅಂಗಗಳಲ್ಲಿ ಸ್ಮರವಾಸನೆಯೂ ಇಲ್ಲದೆ ಸುಖವಾಗಿ ಪವಡಿಸಿದ್ದೆನು.

೪೧. ಕುಮುದ ಕಹ್ಲಾರ ಕಮಲಗಳುಳ್ಳ ನಲಿನೀವನದಲ್ಲಿ ಕಲಹಂಸಿಗಳೊಡನೆ ಲೀಲೆಯಿಂದ ಕಲಕಲಾರವವನ್ನು ಮಾಡುತ್ತಿದ್ದೆನು.

೪೨. ಹರಿಯುತ್ತಿರುವ ಆದಿ ಭೂಮಂಡಲದಿಂದ ಕೂಡಿರುವ, ಪ್ರಕಟವಾಗಿ ಕಾಣಿಸುತ್ತಿರುವ ಭೂಮಂಡಲಗಳಿಂದಲೂ ಪರ್ವತ ಪಂಕ್ತಿಗಳಿಂದಲೂ ಕೂಡಿ,

ಸ್ವಾದ್ರಯಃ ಪ್ರಥಿತಾ ದೀರ್ಘಸರಿತ್ಸೂತ್ರೈಃ ಸಮುದ್ರಕೈಃ ।
ಆದರ್ಶೈರಿವ ವಿಶ್ರಾಂತಮಂಗೇಷು ಪ್ರತಿಬಿಂಬಿಭಿಃ ॥೪೩॥

ಭೂತಸರ್ಗೇಣ ವಿಶ್ರಾಂತಂ ಸಿದ್ಧವಿದ್ಯಾಧರಾದಿನಾ ।
ಮದ್ದೇಹೇ ಚೇತಿತೇನೇವ ಮಕ್ಷಿಕಾಯೌಕರೂಪಿಣಾ ॥೪೪॥

ಮತ್ಪ್ರಸಾದೇನ ಮುದಿತೈರ್ಲಬ್ಧಮರ್ಕಾದಿಭಿರ್ವಪುಃ ।
ಕೃಷ್ಣರಕ್ತಸಿತಾಪೀತಹರಿತೈರ್ಹರಿತೈರಿವ ॥೪೫॥

ಸಮುದ್ರಮುದ್ರಯಾ ಸಪ್ತದ್ವೀಪ ಸಪ್ತಾತ್ಮರೂಪಯಾ ।
ಸಂಸ್ಥಯಾ ಸ್ಥಾಪಿತಾ ಭೂಮಿಃ ಪ್ರಕೋಷ್ಠೇ ವಲಯೋಪಮಾ ॥೪೬॥

---

೪೩. ಆಕಾಶರೂಪವಾಗಿರುವ ಪರ್ವತಗಳಿಂದಲೂ, ದೀರ್ಘವಾದ ನದಿಗಳೆಂಬ ಸೂತ್ರಗಳುಳ್ಳ ಸಮುದ್ರಗಳಿಂದಲೂ, ಕೂಡಿ, ಅವೆಲ್ಲವೂ ಬ್ರಹ್ಮಾಂಡವಾಗಿರುವ ನನ್ನ ಅಂಗಗಳಲ್ಲಿ ಕನ್ನಡಿಯಲ್ಲಿ ಪ್ರತಿಬಿಂಬಿಸುವಂತೆ ಪ್ರತಿಬಿಂಬಿಸುತ್ತಿರಲು ವಿಶ್ರಾಂತಿಯನ್ನು ಹೊಂದಿದೆನು.

೪೪. ನನ್ನ ದೇಹದಲ್ಲಿ ವ್ಯಾಪಾರ ಮಾಡುತ್ತಿರುವ ಸೊಣಹೇನುದಂತಿರುವ, ಸಿದ್ಧವಿದ್ಯಾಧರ ಸಮೇತವಾದ ಭೂತಸರ್ಗವೆಲ್ಲವೂ, ವಿಶ್ರಾಂತಿಯನ್ನು ಪಡೆದುದನ್ನು ಕಂಡೆನು.

೪೫. ಹಸುರಾದ ಮರಗಳಂತೆ ಸ್ಥಿರವಾಗಿ ನಿಂತು ನನ್ನ ಪ್ರಸಾದವನ್ನು ಯಾಚಿಸಿ, ಪಡೆದು, ಸಂತುಷ್ಟರಾದ ಅರ್ಕಾದಿಗಳು ಕೃಷ್ಣ, ರಕ್ತ, ಶ್ವೇತ, ಪೀತ, ಹರಿತ, ವರ್ಣವಿಶಿಷ್ಟಗಳಾದ ತಮ್ಮ ತಮ್ಮ ದೇಹಗಳನ್ನು ಪಡೆದರು.

೪೬. ಸಮುದ್ರವೇ ಕೊನೆಯಾಗಿ ಸಪ್ತದ್ವೀಪಗಳೆಂಬ ಸಪ್ತರೂಪವಾಗಿರುವ ಭೂಮಿಯನ್ನು ಭೂಷಣಮಾಡಿ ಕೈಗೆ ಕಡಿಯವನ್ನಾಗಿ ಮಾಡಿಕೊಂಡೆನು.

ವಿದ್ಯಾಧರಪುರಂಧ್ರೀಣಾಂ ವರಾವೃಷ್ಟಾಂಗಯಷ್ಟಿನಾ ।
ಅದೃಷ್ಟೈರ್ನೈವ ವಿಹಿತಃ ಪುಲಕೋಲ್ಲಾಸ ಆತ್ಮನಾ ॥೪೭॥

ಸರಿಚ್ಛಿರಾಮಲಸ್ಫಾರರಸಾಣಿ ಸುಷಿರಾಣಿ ಚ ।
ಜಗಂತ್ಯೇವಾಸ್ಥಿಜಾಲಾನಿ ಮಾಂಸಮಾಂಸಸ್ಸಂಸ್ಥಿತಾನಿ ಚ ॥೪೮॥

ಅಸಂಖ್ಯೈರ್ವ್ಯೋಮಮಾತಂಗೈಶ್ಚಂದ್ರಾರ್ಕಚಲಚಾಮರೈಃ ।
ಉದುಂಬರಾಂತರತರ್ಮಶಕೈರಿವ ಮದ್ಧೃದಯೇ ಸ್ಥಿತಂ ॥೪೯॥

ಸರ್ವಪಾತಾಲಪಾದೇನ ಭೂತಲೋದರಧಾರಿಣಾ ।
ಖಮೂರ್ಧ್ನಾಪಿ ತದಾ ರಾಮ ನ ತ್ಯಕ್ತಾಥ ಪರಾಣುತಾ ॥೫೦॥

ದಿಕ್ಷು ಸರ್ವಾಸು ಸರ್ವತ್ರ ಸರ್ವದಾ ಸರ್ವಕಾರಿಣಾ ।
ಸರ್ವಾತ್ಮನಾಪ್ಯಸರ್ವೇಣ ಶೂನ್ಯರೂಪೇಣ ಸಂಸ್ಥಿತಂ ॥೫೧॥

---

೪೭. ವಿದ್ಯಾಧರ ಸುಂದರಿಯರ ನಿರ್ಮಲವಾದ ದೇಹಗಳು ಬ್ರಹ್ಮಾಂಡಾತ್ಮನಾದ ನನ್ನ ದೇಹದಲ್ಲಿ ಮೂಡಿದ ಪುಲಕೋಸಗಳಂತಿದ್ದುವು.

೪೮. ನದಿಗಳೆಂಬ ಸಿರೆಗಳೂ, ಪರ್ವತಗಳೆಂಬ ನಿರ್ಮಲವಾದ ರಸಪ್ರವಾಹಗಳುಳ್ಳ ಸುಷಿರಗಳೂ ಉಳ್ಳ ಜಗತ್ತುಗಳು ನನ್ನ ದೇಹದಲ್ಲಿ ಅಸ್ಥಿಜಾಲಗಳೂ ಮಾಂಸಖಂಡಗಳೂ ಆಗಿದ್ದುವು.

೪೯. ಅಸಂಖ್ಯಗಳಾದ ಆಕಾಶ ಮಾತಂಗಗಳೂ ಚಂದ್ರ ಸೂರ್ಯರೆಂಬ ಚಲಚ್ಚಾಮರಗಳೂ, ಅತ್ತಿಯ ಹಣ್ಣಿನಲ್ಲಿರುವ ಸೊಳ್ಳೆಗಳಂತೆ ನನ್ನ ಹೃದಯದಲ್ಲಿ ಇದ್ದುವು.

೫೦. ಪಾತಾಲವೆಲ್ಲವೂ ಪಾದಗಳಾಗಿ, ಭೂತಲಗಳೆಲ್ಲವೂ ಉದರವಾಗಿ ಆಕಾಶವೆಲ್ಲವೂ ತಲೆಯಾಗಿದ್ದಾಗಲೂ, ರಾಮ, ಪರಾಣುತ್ವವನ್ನು ಬಿಡಲಿಲ್ಲ.

೫೧. ದಿಕ್ಕುದಿಕ್ಕುಗಳಲ್ಲೆಲ್ಲ ಎಲ್ಲೆಲ್ಲಿಯೂ ಯಾವಾಗಲೂ ಎಲ್ಲವನ್ನೂ ಮಾಡುತ್ತಿದ್ದರೂ, ಸರ್ವಾತ್ಮವೂ ನಾನೇ ಆಗಿದ್ದರೂ, ನಾನೂ ಅಸರ್ವನಾಗಿ, ಶೂನ್ಯರೂಪನಾಗಿಯೇ ಇದ್ದೆನು.

ಕಿಂಚಿತ್ತ್ವಂ ಸದಕಿಂಚಿತ್ತ್ವಂ ಸಾಕೃತಿತ್ವಂ ನಿರಾಕೃತಿ ।
ಅನುಭೂತಂ ಸಜಾಡ್ಯಂ ಚ ಚೇತನತ್ವಮಲಂ ಮಯಾ ॥೫೨॥

ಮೈನಾಕಮುಗ್ಧಪೀನಸ್ಯ ಸಾಗರಸ್ಯಾವನಿಂ ಪ್ರತಿ ।
ಸಂತಿ ಸರ್ಗಸಹಸ್ರಾಣಿ ಸ್ಥಾಣುಭೂತಾನ್ಯಥೋ ಮಯಾ ॥೫೩॥

ಜಗಂತ್ಯಂಗೇ ಮಯೋಢಾನಿ ಗೂಢಾನಿ ಪ್ರಕಟಾನ್ಯಪಿ ।
ಪ್ರತಿಬಿಂಬ ಪುರಾಣೀವ ಮುಕುರೇಣಾಜಡಾತ್ಮನಾ ॥೫೪॥

ಏವಂ ಜಲಾನಿಲಾಗ್ನಿತ್ವಂ ಭೂಮಿತ್ವಂ ಖಾತ್ಮನಾ ಮಯಾ ।
ಕೃತಂ ಚಿತೇವ ಸ್ವಪ್ನೇಷು ಬತ ಮಾಯಾವಿಜೃಂಭಿತಂ ॥೫೫॥

---

೫೨. ಕಿಂಚಿತ್ವವೂ ಅಕಿಂಚಿತ್ವವೂ ಉಳ್ಳವನಾಗಿ ಆಕೃತಿಯಿದ್ದರೂ ನಿರಾಕೃತಿಯಾಗಿ, ಜಡಚೇತನ ಭಾವಗಳೆರಡನ್ನೂ ನಾನು ಅನುಭವಿಸಿದೆನು.

(ಪರಿಚ್ಛೇದಾಪರಿಚ್ಛೇದಾದಿ ಸರ್ವವಿರುದ್ಧ ಧರ್ಮಾಣಾಂ ಸ್ವಾತ್ಮನಿ ಸಮುಚ್ಚಯೋಽನುಭೂತಃ—ತಾ. ಪ್ರ.)

೫೩. ಮೈನಾಕದಂತೆ ಮುಳುಗಿಹೋಗಿರುವ ಪರ್ವತಗಳ ಶಿಲೆಗಳಿಂದ ಮುಗ್ಧಗಳೂ ಪೀನಗಳೂ ಆದ ಸಾಗರತಲ ಭೂಮಿಯಲ್ಲಿ ಸರ್ಗಸಹಸ್ರಗಳು ಸ್ಥಾಣುಗಳಂತೆ ಇರುವುದನ್ನೂ ಅನುಭವಿಸಿದೆನು.

೫೪ ಅಜಡವಾದ ಮುಕುರದಲ್ಲಿ ಪ್ರತಿಬಿಂಬಿಸಿದ ಪುರಗಳೋ ಎಂಬಂತೆ, ಜಗತ್ತುಗಳು ನನ್ನಲ್ಲಿ ಸೇರಿಕೊಂಡು ಗೂಢವಾಗಿ, ಪ್ರಕಟವಾಗಿ ಇರುವುದನ್ನು ಅನುಭವಿಸಿದೆನು.

೫೫. ಹೀಗೆ, ಆಕಾಶಾತ್ಮನಾಗಿ ಭೂಮಿಜಲ ಅಗ್ನಿವಾಯುತ್ವಗಳನ್ನು, ಕನಸಿನಲ್ಲಿ ಮಾಯಾ ವಿಜೃಂಭಿತವಾದ ಅನೇಕ ದೃಶ್ಯಗಳನ್ನು ಅನುಭವಿಸುವ ಚಿತ್ತಿನಂತೆ ನಾನೂ ಅನುಭವಿಸಿದೆನು.

ಅಪಿ ತಸ್ಯಾಮವಸ್ಥಾಯಾಂ ಜಗಂತ್ಯಾಕಾಶಕೋಶಕೇ ।
ಮಯಾ ದೃಷ್ಟಾನ್ಯಸಂಖ್ಯಾನಿ ಪರಮಾಣುಕಣಂ ಪ್ರತಿ ॥೩೬॥

ಪರಮಾಣು ಪ್ರತಿವ್ಯೋಮ ಪರಮಾಣುಪ್ರತಿಷ್ಠಿತಂ ।
ಸರ್ಗವೃಂದಂ ಯಥಾ ಸ್ವಪ್ನೇ ಸ್ವಪ್ನಾಂತರಯುತಂ ಪುರಂ ॥೩೭॥

ಸ್ವಮೇವಾಹಮಭೂವಂ ಭೂಮಂಡಲಂ ದ್ವೀಪಕುಂಡಲಂ ।
ಸರ್ವಾತ್ಮನಾಪಿ ನ ವ್ಯಾಪ್ತಂ ಕಿಂಚನಾಪಿ ಮಯಾ ಕ್ವಚಿತ್ ॥೩೮॥

ಸಮುತ್ಪಾದಯತಾಶೇಷಂ ಲತಾತರುತೃಣಾಂಕುರಂ ।
ಭೂತಲೇನ ರಸಾಃ ಕೃಷ್ಟಾ ಮಯಾರ್ಥೇನೈವ ಪುಂಭೃತಾಂ ॥೩೯॥

---

೩೬. ಅಷ್ಟೇ ಅಲ್ಲ ಆ ಅವಸ್ಥೆಯಲ್ಲಿ ಆಕಾಶಕೋಶವೊಂದರಲ್ಲಿ ಅಸಂಖ್ಯಾತವಾದ ಜಗತ್ತುಗಳು ಪರಮಾಣು ಕಣಗಳಂತೆ ಅಡಕವಾಗಿರುವುವನ್ನು ಕಂಡೆನು.

೩೭. ಪರಮಾಣು ಪರಮಾಣುವಿನಲ್ಲಿಯೂ ವಿಸ್ತಾರವಾದ ಆಕಾಶವಿತ್ತು. ಪರಮಾಣು ಪರಮಾಣುವಿನಲ್ಲಿಯೂ, ಸ್ವಪ್ನದಲ್ಲಿ ಕಂಡ ಸ್ವಪ್ನದಂತೆ ಸರ್ಗಗಳು ತುಂಬಿದ್ದುವು.

೩೮. ನಾನೇ ಇದಿಷ್ಟೂ ಆಗಿದ್ದೆನು ದ್ವೀಪಗಳೆಂಬ ಕುಂಡಲಗಳನ್ನು ಧರಿಸಿರುವ ಭೂಮಂಡಲವೂ ನಾನೇ ಆಗಿದ್ದೆನು. ಹೀಗೆ ಸರ್ವಾತ್ಮನಾಗಿದ್ದರೂ ನಾನು ಯಾವುದರಲ್ಲೂ ಹೇಗೆ ಹೇಗೂ ಎಳ್ಳಷ್ಟೂ ಅಂಟಿರಲಿಲ್ಲ.

೩೯. ಪುರುಷಾದಿ ಶರೀರಗಳನ್ನು ಧರಿಸಿರುವವರಿಗೆಂದು, ಲತಾ ತರು ತೃಣ ಮೊದಲಾದುವುಗಳನ್ನು ಬೆಳೆಸುವ ಭೂತಲದಿಂದ ರಸಗಳನ್ನು ನಾನು ಆಕರ್ಷಿಸಿದೆನು.

ಅಪವಾತತಮೋ ಶುದ್ಧಬೋಧಕಾಲಮುಪೇಯುಷಿ ।
ಜಗಲ್ಲಕ್ಷಾಣಿ ತಿಷ್ಠಂತಿ ನ ತಿಷ್ಠಂತಿ ಚ ಕಾನಿಚಿತ್ ॥೬೦॥

ಚಿತಿ ಯಾಸ್ತು ಚಮತ್ಕಾರಂ ಚಮತ್ಕುರ್ವಂತಿ ಯತ್ಸ್ವತಃ ।
ಸ್ವಚಮತ್ಕೃತಯೋಂತಸ್ಥಾಸ್ತದೇತಾಃ ಸೃಷ್ಟಿದೃಷ್ಟಯಃ ॥೬೧॥

ಅನುಭೂತಂ ಕೃತಂ ಕಷ್ಟಂ ಯಾವತ್ಕ್ವಚನ ಕಿಂಚನ ।
ಪರಮಾರ್ಥಚಮತ್ಕಾರಾದ್ಯತೇ ನೆಹೋಪಲಭ್ಯತೇ ॥೬೨॥

---

೬೦. ನಿರ್ಮಲವಾಗಿರುವ ಶುಷ್ಕ ಬೋಧವು ಜಾಗ್ರತವಾಗುವ ಕಾಲದಲ್ಲಿ ಈ ಲಕ್ಷಲಕ್ಷ ಜಗತ್ತುಗಳು ಇದ್ದಂತೆಯೂ ಇದ್ದು ಏನೂ ಇಲ್ಲವಾಗುವುವು.

೬೧. ಚಿತ್ತಿನಲ್ಲಿ ಯಾವವು ಚಮತ್ಕಾರಗಳನ್ನು ಮಾಡುವುವೋ ಯಾವವು ತಾವಾಗಿ ಆಗುವುವೋ ಆ ಸೃಷ್ಟಿದೃಷ್ಟಿಗಳು ಆ ಚಿತ್ತಿನೊಳಗೇ ಇರುವುವು.

(ತಾನಿ ಜಗಂತಿ ಕೇನರೂಪೇಣ ತಿಷ್ಠಂತಿ, ಕೇನ ಚ ನ ತಿಷ್ಠಂತೀತಿ ಚೇತ್, ಚಿಚ್ಚಮತ್ಕಾರ ಮಾತ್ರರೂಪೇಣ ತಿಷ್ಠಂತಿ, ತದನ್ಯರೂಪೇಣ ನ ತಿಷ್ಠಂತಿ, ಇತ್ಯಾಹ ... ಚಿತಿ ಯಾ ಅಂತಸ್ಥಾಃ ಸ್ವಚಮತ್ಕೃತಯಃ ಸ್ವಸತ್ತಾಸ್ಫೂರ್ತಿಲಕ್ಷಣಂ ಚಮತ್ಕಾರಂ ಯತ್ಸ್ವತಶ್ಚಮತ್ಕುರ್ವಂತಿ ಜಗತ್ಯಾರೋಪ್ಯ ಪ್ರಕಟಯಂತ್ತಿ ತತ್ತೇನ ರೂಪೇಣ ಏತಾಃ ಸರ್ಗದೃಷ್ಟಯಃ ಸಂತೀತ್ಯರ್ಥಃ-ತಾ. ಪ್ರ.)

೬೨. ಆದರಿಂದ ಎಲ್ಲಾದರೂ ಯಾವುದಾದರೂ ಅನುಭೂತವಾದದ್ದು, ಮಾಡಿದ್ದು ಯಾವುದಾದರೂ ಉಂಟಾದರೆ, ಅದೆಲ್ಲವೂ ಪರಮಾರ್ಥದ ಚಮತ್ಕಾರವೇ! ಅದನ್ನು ಬಿಟ್ಟು ಇನ್ನೇನೂ ಇಲ್ಲವೇ ಇಲ್ಲ.

ಪ್ರತ್ಯೇಕಂ ವಿಶ್ವರೂಪಾತ್ಮಾ ಸರ್ವಕರ್ತಾ ನಿರಾಮಯಃ ।
ಪ್ರಬುದ್ಧಃ ಶುದ್ಧಬೋಧಾತ್ಮಾ ಸರ್ವಂ ಬ್ರಹ್ಮಾತ್ಮಕಂ ಯತಃ ।೬೩॥

ಸರ್ವಃ ಸರ್ವತ್ರ ಸರ್ವಾತ್ಮಾ ಸರ್ವಗಃ ಸರ್ವಸಂಶ್ರಯಃ ।
ಏತತ್ಪ್ರಬುದ್ಧವಿಷಯಮಪ್ರಬುದ್ಧಂ ನ ವೇದ್ಮ್ಯಹಂ ॥೬೪॥

ಆಕಾಶಕೋಶವಿಶದಾತ್ಮನಿ ಚಿತ್ಸ್ವರೂಪೇ ।
ಯೋಽಯಂ ಸದಾ ಕಚತಿ ಸರ್ಗಪರಂಪರೇತಿ ॥

---

೬೩. ಸರ್ವವೂ ಬ್ರಹ್ಮಾತ್ಮಕವೇ ಆದುದರಿಂದ ಪ್ರತ್ಯೇಕ ಪ್ರತ್ಯೇಕವಾಗಿ ನೋಡಿದಾಗ ವಿಶ್ವರೂಪಾತ್ಮನಾಗಿ ಕಾಣುವ ಬ್ರಹ್ಮವೇ ಪ್ರಬುದ್ಧನಾಗಿ ನೋಡಿದಾಗ ಶುದ್ಧ ಬೋಧಾತ್ಮವಾಗಿ, ಸರ್ವಕರ್ತೃವಾಗಿದ್ದರೂ ನಿರಾಮಯವಾಗಿ ಏಕೈಕವಾಗಿ ಕಾಣುವುದು.

(ಅತ ಏವ ಅಧ್ಯಾರೋಪೇ ಪ್ರತ್ಯೇಕಂ ಸ್ವ ಸತ್ತಾರ್ಪಣಾತ್ ವಿಶ್ವರೂಪಾತ್ಮಾ ಅಪವಾದೇನ ಪ್ರಬುದ್ಧಸ್ತು ಶುದ್ಧ ಬೋಧಾತ್ಮೈವ ಇತ್ಯರ್ಥಃ—ತಾ. ಪ್ರ.)

೬೪. ಸರ್ವವೂ ಬ್ರಹ್ಮವೇ! ಸರ್ವತ್ರ ಇರುವುದೆಲ್ಲಾ ಬ್ರಹ್ಮವೇ! ಸರ್ವವಾಗಿ ಗಮಾಗಮಗಳನ್ನು ಮಾಡುತ್ತಿರುವುದೂ ಬ್ರಹ್ಮವೇ! ಸರ್ವಕ್ಕೂ ಆಶ್ರಯನಾಗಿರುವುದೂ ಬ್ರಹ್ಮವೇ! ಇದೆಂದು ಪ್ರಬುದ್ಧರಾದವರ ವಿಷಯ, ಅಪ್ರಬುದ್ಧ ವಿಷಯವನ್ನು ನಾನು ಕಾಣೆನು.

(ಅತ ಏವ ಏಕೈಕ ವಸ್ತುನ್ಯಂತರೇ ಬ್ರಹ್ಮಣಿ ಸರ್ವಜಗದಧ್ಯಾಸಾತ್ ಸರ್ವಃ ಸರ್ವತ್ರ ಸರ್ವಾತ್ಮಾ ಚ ಸರ್ವಗಃ ಸರ್ವಸಂಶ್ರಯ ಇತ್ಯೇತತ್ಪ್ರಬುದ್ಧ ವಿಷಯಂ ಜಗದ್ರೂಪಂ ಪರ್ಯವಸತಿ। ಅಪ್ರಬುದ್ಧಗಮ್ಯಂತು ರೂಪಂ ನ ಪ್ರಬುದ್ಧೈರ್ದ್ರಷ್ಟುಂ ಶಕ್ಯಮಿತ್ಯಾಹ—ತಾ. ಪ್ರ.)

೬೫. ಆಕಾಶಕೋಶದಂತೆ ನಿರ್ಮಲವಾಗಿರುವ ಚಿತ್ಸ್ವರೂಪದಲ್ಲಿ ಈ ಸರ್ಗ ಪರಂಪರೆಯು ಕಚನವಾಗುವುದು ಯಾವುದುಂಟೋ ಅದು ಚಿತ್ತಿನೊಳಗೇ, ಒಳಗೆ ಸೆಕೆಯನ್ನುಳ್ಳ ತಾಪದಂತೆ ಇರುವುದು ಅಷ್ಟೇ! ಆದ್ದರಿಂದ ಭೇದವು ಉಂಟು ಎಂಬುದೇ ಇಲ್ಲ. ಸತ್ ಎಂಬುದು ಅನಂತವಾಗಿ ಇರುವುದು.

ಸಾಂತಸ್ತದೇವ ಕಿಲ ತಾಪ ಇವಾಂತರೂಷ್ಮಾ ।
ಭೇದೋಪಲಂಭ ಇತಿ ನಾಸ್ತಿ ಸದಸ್ತ್ಯನಂತಂ ।೬೫।

ಇತ್ಯಾರ್ಷೇ ವಾಸಿಷ್ಠಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಪಾಷಾಣೋಪಾಖ್ಯಾನೇ ಪರಮಾರ್ಥಸರ್ಗಯೋರೈಕ್ಯಪ್ರತಿಪಾದನಂ ನಾಮ ದ್ವಿನವತಿತಮಃ ಸರ್ಗಃ

---

(ಯಥಾ ತಾಪಸ್ಯ ಅಂತರೂಷ್ಮೇತಿ ಪ್ರಯೋಗೇ ತಾಪಪದಸ್ಯ, ತದಂತ ಪದಸ್ಯ, ಊಷ್ಮಪದಸ್ಯ ಚ ನ ಪೃಥಗರ್ಥೋಽಸ್ತಿ, ಕಿಂತು ಷಷ್ಠ್ಯಾದಿವಿಕಲ್ಪಮಾತ್ರಂ ತದ್ವದ್ಭೇದೋಪಲಂಭೋಽಪಿ ಇತಿ, ನಜಗದಸ್ತಿ ಕಿಂತ್ವನಂತಂ ಸದಸ್ತಿ ಇತ್ಯರ್ಥಃ— ತಾ ಪ್ರ)

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ "ಪರಮಾರ್ಥಸರ್ಗಯೋರೈಕ್ಯ ಪ್ರತಿಪಾದನ" ಎಂಬ ತೊಂಭತ್ತೆರಡನೆಯ ಸರ್ಗವು



# ತ್ರಿನವತಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ:—

ಅಥೈವಂರೂಪಸಂವಿತ್ತೇಃ ಪರಾವೃತ್ತ್ಯ ಪ್ರಯತ್ನತಃ ।
ತಮಂಬರಕುಟೀಕೋಶದೇಶಮಾಗತವಾನಹಂ ॥೧

ಯಾವತ್ತತ್ರ ನ ಪಶ್ಯಾಮಿ ಸ್ವದೇಹಂ ಕ್ವಚನ ಸ್ಥಿತಂ ।
ಪಶ್ಯಾಮಿ ಕೇವಲಂ ಸಿದ್ಧಂ ಕಮಪ್ಯಸ್ಮತ್ಪುರಃ ಸ್ಥಿತಂ ॥೨।

ಉಪವಿಷ್ಟಂ ಸಮಾಧಾನನಿಷ್ಠಮಿಷ್ಟಂ ಪದಂ ಗತಂ ।
ಸೌಮ್ಯೋದಯಮಿವಾದಿತ್ಯಂ ದಗ್ಧೇಂಧನಮಿವಾನಲಂ ।೩

---

# ತೊಂಭತ್ತಮೂರನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧. ಹೀಗೆ ರೂಪಸಂವಿತ್ತಿಯನ್ನು ಬಿಟ್ಟು ಪ್ರಯತ್ನಪೂರ್ವಕವಾಗಿ ಹಿಂದಿರುಗಿ, ನಾನು ಇದ್ದ ಆಕಾಶಕುಟಿಯನ್ನು ಕುರಿತು ಬಂದೆನು.

(ಅಥ ಧಾರಣಾಸಿದ್ಧ ಜಗದ್ದೇಹ ದರ್ಶನಾನಂತರ ಮೇವಂರೂಪಾಯಾ ಉಕ್ತರೂಪಾಯಾಃ ಕೌತುಕದರ್ಶನ ಸಂವಿತ್ತೇಃ ಸಕಾಶಾತ್, ಪರಾವೃತ್ಯಾಹಂ ತತ್ಪ್ರಾಕ್ತನಂ ಸ್ವ ಸಮಾಧಿಸ್ಥಾನಂ ಅಂಬರಕುಟೀ ಕೋಶದೇಶಮಾಗತವಾನ್—ತಾ. ಪ್ರ.)

೨. ಅಲ್ಲಿಗೆ ಬಂದರೆ ನನ್ನ ದೇಹವು ಅಲ್ಲಿ ಎಲ್ಲಿಯೂ ಇದ್ದಂತೆ ಇರಲಿಲ್ಲ ನಾನು ಕುಳಿತಿದ್ದೆಡೆಯಲ್ಲಿ ಇನ್ನು ಯಾವನೋ ಒಬ್ಬ ಸಿದ್ಧನು ಕುಳಿತಿರುವುದು ಕಂಡ ಬಂತು.

೩. ಆ ಸಿದ್ಧನು ಸಮಾಧಿಯಲ್ಲಿದ್ದನು: ಇಷ್ಟವಾದ ಬ್ರಹ್ಮಪದವನ್ನು ಹೊಂದಿದ್ದನು: ಸೌಮ್ಯವಾಗಿ ಉದಯಿಸಿದ ಆದಿತ್ಯನಂತಿದ್ದನು. ಸೌದೆಗಳನ್ನೆಲ್ಲಾ ಸುಟ್ಟು ರುಹಿ ಶಾಂತನಾದ ವೈಶ್ವಾನರನಂತಿದ್ದನು.

ಬದ್ಧಪದ್ಮಾಸನಂ ಶಾಂತಂ ಸಮಾಧಾನನಿರಿಂಗನಂ
ಗುಲ್ಫದ್ವಿತಯಮಧ್ಯಸ್ಥವೃಷಣಂ ವಿಷಯಾತಿಗಂ ||೪||

ವೃಷ್ಟಸೌಮ್ಯಸಮಾಭೋಗಸ್ಕಂಧಬಂಧುರ ಕಂಧರಂ।
ಸುಸ್ಥಿರೋಧಾರವಿಶ್ರಾಂತಸ್ಫಾರಕಸ್ಥಿತಿ ಸುಂದರಂ ||೫||

ನಾಭೀನಿಕಟಗೋತ್ತಾನ ಪಾಣಿದ್ವಿತಯ ದೀಪ್ತಿಭಿಃ|
ಹೃದಯಾಂಭೋಜತೇಜೋಭಿರ್ಬಹಿಷ್ಕೈರಿವ ಭಾಸಿತಂ ||೬||

ಶಿಷ್ಟಪಕ್ಷ್ಮೇಕ್ಷಣಂ ಕ್ಷೀಣಸರ್ವೇಕ್ಷಂ ಸ್ವಚ್ಛತಾಂ ಗತಂ।
ಸರೋ ನಿಮಿಾಲಿತಾಂಭೋಜಮಿವ ಸುಪ್ತಂ ದಿನಾತ್ಯಯೇ ||೭||

---

೪. ಬದ್ಧಪದ್ಮಾಸನನಾಗಿ, ಶಾಂತನಾಗಿ, ಸಮಾಧಿಸ್ಥನಾಗಿ, ನಿಶ್ಚಲನಾಗಿ, ಗುಲ್ಫ ದ್ವಿತಯ ಮಧ್ಯಸ್ಥ ವೃಷಣನಾಗಿ, ವಿಷಯಗಳನ್ನು ದಾಟಿದವನಾಗಿ ಕುಳಿತಿದ್ದನು.

೫. ಭಸ್ಮ ತ್ರಿಪುಂಡ್ರವನ್ನು ಧರಿಸಿರುವ, ಸೌಮ್ಯವಾಗಿ ಸಮಾಭೋಗವಾಗಿರುವ, ಸ್ಕಂಧದಿಂದ ಸುಂದರವಾದ ಕಂಧರವುಳ್ಳವನಾಗಿ, ಸ್ಥಿರವಾಗಿರುವ ಬ್ರಹ್ಮದಲ್ಲಿ ವಿಶ್ರಾಂತಿಯನ್ನು ಪಡೆದು ಪ್ರಸನ್ನವಾಗಿರುವ ಮುಖದಿಂದ ವಿರಾಜಿಸುತ್ತಿದ್ದನು.

೬. ನಾಭಿಯ ಮಗ್ಗುಲಲ್ಲಿ ಇಟ್ಟುಕೊಂಡಿರುವ, ಅಂಗೈ ಮೇಲಾಗಿರುವ ಕೈಗಳೆರಡೂ ಕಾಂತಿಯನ್ನು ಉಗುಳುತ್ತಿರಲು, ಹೃದಯ ಕಮಲದ ತೇಜಸ್ಸೇ ಏನಾದರೂ ಹೊರಚೆಲ್ಲುತ್ತಿರುವುದೋ ಎಂಬಂತಿತ್ತು.

೭. ರೆಪ್ಪೆಗಳೆರಡೂ ಮುಚ್ಚಿದ್ದುವು : ಎಲ್ಲಾ ಇಂದ್ರಿಯಗಳೂ ಕ್ಷೀಣವಾಗಿದ್ದುವು. ಆತನೂ ಬ್ರಹ್ಮಸಂಪನ್ನನಾಗಿದ್ದನು. ದಿನವು ಕಳೆದುಹೋದಾಗ ಕಮಲಗಳೆಲ್ಲವೂ ಮುಚ್ಚಿಕೊಂಡಿರುವಾಗ ಇರುವ ಸರಸ್ಸಿನಂತಿದ್ದನು.

ಅವಿಕ್ಷುಭಿತವಾಶಾಂತಮಂತಃ ಕರಣಕೋಟರಂ ।
ಪಥಾಸಂ ಧೀರಯಾ ವೃತ್ತ್ಯಾ ಶಾಂತೋತ್ಪಾತಮಿವಾಂಬರಂ ॥೮॥

ಅಪಶ್ಯತಾ ನಿಜಂ ದೇಹಂ ತಂ ಮುನಿಂ ಪಶ್ಯತಾ ಪುರಃ ।
ಇದಂ ಮಯಾ ತದಾ ತತ್ರ ಚಿಂತಿತಂ ಚಾರುಚೇತಸಾ ॥೯॥

ಅಯಂ ಕಶ್ಚಿನ್ಮಹಾಸಿದ್ಧಃ ಸಂಪ್ರಾಪ್ತೋಽಸ್ಮಿನ್ದಿಗಂತರೇ ।
ವಿಚಾರ್ಯಾಹಮಿವೈಕಾಂತಂ ವಿಶ್ರಾಮಾರ್ಥೀ ಮಹಾಂಬರಂ ॥೧೦॥

ಸಮಾಧಿಯೋಗ್ಯಮೇಕಾಂತಂ ಲಭೇಯೇತೀಹ ಚಿಂತಯಾ ।
ಕುಟೀ ದೃಷ್ಟೇಯಮೇತೇನ ಸತ್ಯಸಂಕಲ್ಪಶಾಲಿನಾ ॥೧೧॥

---

೮. ಉತ್ಪಾತಗಳೆಲ್ಲವೂ ಶಾಂತವಾಗಲು ತಾನೂ ಶಾಂತವೇ ಆಗಿರುವ ಆಕಾಶದಂತೆ, ಧೀರವಾಗಿರುವ ವೃತ್ತಿಯಿಂದ, ಆಶೆಯ (ಕಾಮದ) ಕೊನೆಯವರೆಗೂ ಹೋಗಿ ಅವಿಕ್ಷೋಭವನ್ನು ಪಡೆದ ಅಂತಃಕರಣವುಳ್ಳವನಾಗಿ, ಇದ್ದನು.

(ಇಲ್ಲಿ ಆ ಶಾಂತಂ ಎಂಬುದನ್ನು ಆಶಾ+ಅಂತಂ, ಆ+ಶಾಂತಂ, ಎಂದು ಎರಡು ವಿಧವಾಗಿಯೂ ಮಾಡಬಹುದು. ಹಾಗೆಯೇ ಆಶಾ ಎಂದರೆ ಆಶೆ, ದಿಕ್ಕು, ಎಂದು ಎರಡು ವಿಧವಾಗಿ ಅರ್ಥ ಮಾಡಬಹುದು.)

೯. ನಾನು ನನ್ನ ದೇಹವನ್ನು ಎಲ್ಲಿಯೂ ಕಾಣದೆ, ಎದುರಿಗೆ ಆ ಮುನೀಂದ್ರನನ್ನು ನೋಡುತ್ತ, ದೇಹವನ್ನು ಕಾಣದಿದ್ದರೂ ಪ್ರಕ್ಷುಬ್ಧವಾಗದ ಶಾಂತಮನಸ್ಸಿನಿಂದ, ಹೀಗೆ ಯೋಚಿಸಿದೆನು.

೧೦. ಈತನು ಯಾರೋ ಒಬ್ಬ ಮಹಾಸಿದ್ಧನು ಇಲ್ಲಿ ದೊರಕಿದನು. ನನ್ನಂತೆಯೇ ಈತನೂ ಆಕಾಶದಲ್ಲೆಲ್ಲಾ ಅಲೆದು ವಿಶ್ರಾಂತಿಗಾಗಿ ಇಲ್ಲಿ ಕುಳಿತಿರುವನು.

೧೧. ಸಮಾಧಿಯೋಗ್ಯವಾದ ಏಕಾಂತವಾದ ಸ್ಥಾನವೊಂದನ್ನು ಪಡೆದೇನೇ ಎಂದು ಬಂದು ಈ ಗುಡಿಸಿಲನ್ನು ಕಂಡು ಈ ಸತ್ಯಸಂಕಲ್ಪನು ಧ್ಯಾನಮಗ್ನನಾಗಿರುವನು.

ಮದಾಗಮನಮಪೇತೇನ ತತೋಽಚಿಂತಯತಾ ಚಿರಂ ।
ತಂ ಸ್ವದೇಹಂ ಶವೀಭೂತಮುಪಾಸ್ಯೇಹ ಕೃತಾ ಸ್ಥಿತಿಃ ॥೧೨॥

ತದಿಹಾಸ್ತಮಹಂ ಯಾಮಿ ಸ್ವಂ ಲೋಕಮಿತಿ ನಿಶ್ಚಯಂ ।
ಯಾವದ್ಗಂತುಂ ಪ್ರವೃತ್ತೋಽಸ್ಮಿ ತಾವತ್ಸಂಕಲ್ಪನ ಕ್ಷಯಾತ್ ॥೧೩॥

ಸಾ ನಿವೃತ್ತಾ ಕುಟೀ ತತ್ರ ಸಂಪನ್ನಂ ವ್ಯೋಮ ಕೇವಲಂ ।
ಸ ಸಿದ್ಧೋಽಪಿ ನಿರಾಧಾರಃ ಪತಿತೋಽಧಃ ಸಮಾಧಿಮಾನ್ ॥೧೪॥

ಸ್ವಪ್ನಸಂಕಲ್ಪಸಂಶಾಂತೌ ಸ್ವಪ್ನಸಂಕಲ್ಪಪತ್ತನಂ ।
ಯದಾ ಸಾ ಸುಕುಟೀ ನಷ್ಟಾ ಮತ್ಸಂಕಲ್ಪೋಪಶಾಂತಿತಃ ॥೧೫॥

---

೧೨. ಇಲ್ಲಿಯೇ ಕುಳಿತಿದ್ದ ಇನ್ನೊಬ್ಬನು ಬಂದಾನು ಎಂಬ ಚಿಂತೆಯೂ ಇಲ್ಲದೆ, ಶವದಂತಾಗಿ ಇಲ್ಲಿದ್ದ ದೇಹವನ್ನು ಅತ್ತನೂಕಿ, ಈತನು ಕುಳಿತಿರುವನು.

(ಮದಪೇಕ್ಷಣಾಚ್ಛವೀಭೂತಂ ತತ್ರಸ್ಥಿತಂ ಸ್ವದೇಹಂ ವಸಿಷ್ಠದೇಹಂ ದೃಷ್ಟ್ವಾ ತತ್ರ ಪುನರ್ಮದಾಗಮನಮಚಿಂತಯತಾ ಅಜನತಾ ತಂ ದೇಹಮುಪಾಸ್ಯ—ತಾ.ಪ್ರ.)

೧೩. ಇಲ್ಲಿದ್ದ ನನ್ನ ದೇಹವು ನಷ್ಟವಾಗಿ ಹೋಯಿತು. ಇನ್ನು ನಾನು ನನ್ನ (ಆತಿವಾಹಿಕ ದೇಹದಿಂದಲೇ ನನ್ನ ಲೋಕವಾದ) ಸಪ್ತರ್ಷಿ ಲೋಕವನ್ನು ಕುರಿತು ಹೋಗುವೆನು ಎಂದು ನಿಶ್ಚಯಿಸಿಕೊಂಡು ಹೊರಡುವುದರೊಳಗಾಗಿ ಅಷ್ಟ ರಲ್ಲಿ ಆ ಸಿದ್ಧನ ಸಮಾಧಿ ಸಂಕಲ್ಪವು ಕ್ಷಯವಾಯಿತು.

೧೪. ಸಮಾಧಿಯಲ್ಲಿದ್ದ ಸಿದ್ಧನು ಕೆಳಕ್ಕೆ ಬಿದ್ದನು. ಆ ಗುಡಿಸಲು ಇಲ್ಲ ವಾಯಿತು : ಅಲ್ಲೆಲ್ಲಾ ಆಕಾಶವೇ ಆಕಾಶವಾಯಿತು. ಆ ಸಿದ್ಧನೂ ನಿರಾಧಾರ ನಾದನು.

೧೫ ಸ್ವಪ್ನವು ಇಲ್ಲವಾಗಲು, ಆಗ ಕಾಣುತ್ತಿದ್ದ- ಪಟ್ಟಣವೂ ಇಲ್ಲವಾಗು ವಂತೆ, ನನ್ನ ಸಂಕಲ್ಪವು ಶಾಂತವಾಗಲು, ನನ್ನ ಸಂಕಲ್ಪದಿಂದ ಆಗಿದ್ದ ಆ ಗುಡಿ ಸಲೂ ಇಲ್ಲವಾಯಿತು.

ಸ ಪಪಾತ ತತೋ ಧ್ಯಾನೀ ಜಲೋತ್ಪೀಡ ಇವಾಂಬುದಾತ್ ।
ಪಾದಿವಾನಿಲಸಂಸ್ಫೋಟ್ಟ ಇಂದುಬಿಂಬಮಿವ ಕ್ಷಯೇ ॥೧೬॥

ವೈಮಾನಿಕ ಇವಾಪುಣ್ಯಾಚ್ಛಿನ್ನಮೂಲ ಇವ ದ್ರುಮಃ ।
ಖಾತ್ತ್ಯಕ್ತ ಇವ ಪಾಷಾಣಃ ಸ ಪಪಾತ ತತೋಽವನೌ ॥೧೭॥

ಅಹಂ ಯಾವದಿಯಂ ತಾವತ್ಕುಟಿಕಾಸ್ತ್ವಿತಿ ಕಲ್ಪನೇ ।
ಕ್ಷೀಣೇ ಕುಟೀಕ್ಷಯೇ ಜಾತೇ ಸ ಸಿದ್ಧಃ ಪತಿತಃ ಕ್ಷಣಾತ್ ॥೧೮॥

ಪತತಾ ತೇನ ಸಿದ್ಧೇನ ತತಃ ಸೌಜನ್ಯಕೌತುಕಃ ।
ಮನಸೈವಾಹಮಾಗಮಂ ನಭಸೋ ವಸುಧಾತಲಂ ॥೧೯॥

---

೧೬. ಆ ಧ್ಯಾನಿಯು, ಪ್ರಲಯಕಾಲದಲ್ಲಿ ಚಂದ್ರನು ಉರುಳುವ ಹಾಗೆ, ಮೋಡದಿಂದ ಬೀಳುವ ಮಳೆಯು ಹಾಗೆ, ಗಾಳಿಯು ತಳ್ಳಿದ ಮೋಡವು ಆಕಾಶದಿಂದ ಬೀಳುವಂತೆ, ಬಿದ್ದುಹೋದನು.

೧೭. ಪುಣ್ಯವು ಕ್ಷಯವಾಗಲು ಉರುಳುವ ವೈಮಾನಿಕನಂತೆ, ಬುಡವನ್ನು ಕಡಿದ ದ್ರುಮವು ಉರುಳುವಂತೆ, ಆಕಾಶದಿಂದ ಬೀಳುವ ಕಲ್ಲಿನಂತೆ, ಆತನು ಭೂಮಿಯಲ್ಲಿ ಬಿದ್ದನು.

೧೮. ನಾನು ಈ ಕುಟಿಯು ಯಿರಲಿ ಎಂದು ಮಾಡಿದ್ದ ಸಂಕಲ್ಪವು. ಕ್ಷೀಣವಾಗಿ ಆ ಕುಟಿಯು. ಕ್ಷಯವಾಗಲು, ಆ ಕ್ಷಣದಲ್ಲಿಯೇ ಆ ಸಿದ್ಧನು ಬಿದ್ದುಹೋದನು.

೧೯. ಆ ಬೀಳುತ್ತಿರುವ ಸಿದ್ಧನೊಡನೆ ಈ ಸತ್ಪುರುಷನಿಗೆ ಏನಾಗುವುದೋ ನೋಡಬೇಕೆಂಬ ಕುತೂಹಲದಿಂದ, ಮನೋಗತಿಯಿಂದ ನಾನೂ ಆಕಾಶದಿಂದ ಭೂಮಿಗಿಳಿದೆನು.

ಸೋಽಪತತ್ಪವನಸ್ಕಂಧವಲನಾವರ್ತವೃತ್ತಿಭಿಃ ।
ಸಪ್ತದ್ವೀಪಸಮುದ್ರಾಂತೇ ಗೀರ್ವಾಣರಮಣಾವನೌ ॥೨೦॥

ಪ್ರಾಣಾಪಾನೋರ್ಧ್ವಗಾಮಿತ್ವಾತ್ಪ್ರಾಧ್ಯಥಾಸ್ಥಿತಮೇವ ಸಃ ।
ಸ್ಪೃಷ್ಟಪೂರ್ವೋರ್ಧ್ವಮೂರ್ಧೋರ್ವ್ಯಾಂ ಬದ್ಧಪದ್ಮಾಸನೋಽಪತತ್ ॥೨೧॥

ನ ಪ್ರಬುದ್ಧೋ ಬಭೂವಾಸೌ ವಿಚರಂತಮಚೇತನಃ ।
ಪಾಷಾಣದೇಹ ಇವ ವಾ ತೂಲಾತ್ಮೇವೈವ ವಾ ಲಘುಃ ॥೨೨॥

ಮಯಾ ತದವಬೋಧಾರ್ಥಮಥ ಯತ್ನವತಾ ತದಾ ।
ಕೃತ್ವಾ ಜಲದತಾಂ ವ್ಯೋಮ್ನಿ ವೃಷ್ಟಂ ಗರ್ಜಿತಮೂರ್ಜಿತಂ ॥೨೩॥

ಕರಕಾಶನಿವಾತೇನ ತೇನ ತಸ್ಮಿನ್ದಿಗಂತರೇ ।
ಮಯೂರಂ ಪ್ರಾವೃಷೇವಾಮುಂ ಬುದ್ಧ್ಯಾ ಬೋಧಿತವಾನಸೌ ॥೨೪॥

---

೨೦. ಆತನು ಪವನಸ್ಕಂಧಗಳಲ್ಲಿ ಒಂದರಿಂದ ಒಂದಕ್ಕೆ ಬಿದ್ದು ಸುಳಿಯಲ್ಲಿ ನೀರು ಕೆಳಕ್ಕಿಳಿಯುವಂತೆ ಸಪ್ತದ್ವೀಪ ಸಮುದ್ರಾಂತವಾದ ಗೀರ್ವಾಣ ಭೋಗ ಭೂಮಿಯಲ್ಲಿ ಬಿದ್ದನು.

೨೧. ಪ್ರಾಣಾಪಾನಗಳು ಊರ್ಧ್ವಗತಿಯಲ್ಲಿದ್ದುದರಿಂದ, ಆತನು ಆಕಾಶ ದಿಂದ ಬೀಳುವಾಗ, ಕಾಲುಕೆಳಗಾಗಿ, ಬದ್ಧಪದ್ಮಾಸನನಾಗಿಯೇ ಭೂಮಿಗೆ ಬಿದ್ದನು.

೨೨. ಹಾಗೆ ಬಿದ್ದುದನ್ನು ಅರಿಯದೆ, ಸಮಾಧಿಯಿಂದ ಏಳದೆ, ಕಲ್ಲಿನ ಬೊಂಬೆಯ ಹಾಗೆ. ಅಥವಾ ಅರಳೆಯ ಬೊಂಬೆಯ ಹಾಗೆ, ಬಹುಕಾಲವಿದ್ದನು.

೨೩. ಆತನಿಗೆ ಎಚ್ಚರವಾಗಲೆಂದು ನಾನು ಯತ್ನಮಾಡಿದೆನು. ಆ ಉದ್ದೇಶ ದಿಂದಲೇ ನಾನು ಮೇಘವಾಗಿ ಗರ್ಜನೆಮಾಡುತ್ತ ಚೆನ್ನಾಗಿ ಮಳೆಗರೆದೆನು.

೨೪. ಆಲಿಕಲ್ಲು ಮಳೆಯು ಆ ಭಾಗದಲ್ಲಿ ಕರೆಯಲು, ಮಳೆಗಾಲದಲ್ಲಿ ಮಯೂರವನ್ನು ಎಚ್ಚರಿಸುವಂತೆ, ಆ ಮಳೆಯು ಆತನನ್ನೂ ಬುದ್ಧಿಯನ್ನು ಬಹಿ ರ್ಮುಖಗೊಳಿಸಿ ಎಚ್ಚರಗೊಳಿಸಿತು.

ಬಭೂವಾಭಾಸಿತಾಂಗಶ್ರೀರ್ವಿಕಾಸಿತವಿಲೋಚನಃ ।
ಧಾರಾನಿಕರಫುಲ್ಲಾತ್ಮಾ ಪ್ರಾವೃಷೀವಾಂಬುಜಾಕರಃ ॥೩೫॥

ಪ್ರಬುದ್ಧಂ ಸಂಪ್ರಶಾಂತಾಯಾಂ ದೃಷ್ಟ್ವಾ ತಮಹಮಗ್ರತಃ ।
ಅಪೃಚ್ಛಂ ಸ್ವಚ್ಛಯಾ ವೃತ್ತ್ಯಾ ನಿವೃತ್ತಂ ಪರಮಾರ್ಥತಃ ॥೩೬॥

ಕ್ವ ಸ್ಥಿತೋಽಸಿ ಕರೋಷೀದಂ ಕಿಂಚ ಭೋ ಮುನಿನಾಯಕ ।
ಕಸ್ತ್ವಂ ಕಸ್ಮಾದಲಂ ದೂರಾನ್ನ ಭ್ರಂಶಮಪಿ ಚೇತಸಿ ॥೩೭॥

ಇತ್ಯುಕ್ತೋ ಮಾಮಸೌ ಪ್ರೇಕ್ಷ್ಯ ಸಂಸ್ಮೃತ್ಯ ಪ್ರಾಕ್ತನೀಂ ಗತಿಂ ।
ಉವಾಚ ವಚನಂ ಚಾರು ಚಾತಕೋ ಜಲದಂ ಯಥಾ ॥೩೮॥

---

೩೫. ಆತನ ಅಂಗಾಂಗಗಳೆಲ್ಲವೂ ಪ್ರಕಾಶವಂತವಾದುವು. ಕಣ್ಣುಗಳು ತೆರೆದುಕೊಂಡುವು. ಆ ಮಳೆಯಿಂದ ಸಂತುಷ್ಟನಾದಾತನು ಮಳೆಗಾಲದಲ್ಲಿ ಸರೋವರವು ತುಂಬುವಂತ ವ್ಯಾಪಾರದಿಂದ ಕೂಡಿದನು.

೩೬. ಹಾಗೆ ಸಮಾಧಿಯು ಶಾಂತವಾಗಲು, ನಾನು ಆತನ ಎದುರಿಗೆ ಕುಳಿತು ಸಂಪೂರ್ಣವಾಗಿ ಬಹಿರ್ಮುಖನಾಗಿರುವ ಆತನನ್ನು, ನಿರ್ಮಲ ಮನಸ್ಸಿನಿಂದ ಪ್ರಶ್ನೆ ಮಾಡಿದೆನು.

೩೭. ಎಲೈ ಮುನೀಂದ್ರನೇ, ಎಲ್ಲಿದ್ದೀಯೆ ? ಏನು ಮಾಡುತ್ತಿದ್ದೀಯೆ ? ನೀನು ಯಾರು ? ಮೇಲಿನಿಂದ ಬಿದ್ದರೂ ಕೂಡ ನೀನು ಇದನ್ನು ತಿಳಿಯದಿರುವುದಕ್ಕೆ ಕಾರಣವೇನು ?

೩೮. ನಾನು ಹೀಗೆ ಹೇಳಲು, ಹಿಂದೆ ಏನಾಯಿತು ಎಂಬುದನ್ನು ನೆನೆಸಿಕೊಂಡು ಚಾತಕವು ಜಲದವನ್ನು ಕುರಿತು ಹೇಳುವಂತೆ ಮನೋಹರವಾದ ಮಾತನ್ನಾಡಿದನು

ಸಿದ್ಧ ಉವಾಚ—

ಪ್ರತಿಪಾಲಯ ಮೇ ಯಾವತ್ಸ್ವವೃತ್ತಾಂತಂ ಸ್ಮರಾಮ್ಯಹಂ ।
ಕಥಯಿಷ್ಯಾಮಿ ತೇ ಪಶ್ಚಾತ್ಪಾಶ್ಚಾತ್ಯಂ ವೃತ್ತಮಾತ್ಮನಃ ।೨೯॥

ಇತ್ಯುಕ್ತ್ವಾ ಚಿಂತಯಿತ್ವಾ ಕು ಸ ಯಥಾವೃತ್ತಮುಕ್ಷತಂ ।
ಸ್ಮೃತವಾನ್ಸಾಯಮಹ್ನೀವ ಸಮಾಚರಿತಮಾತ್ಮನಃ ।೩೦॥

ಮಾಮಥೋವಾಚ ವಚನಂ ಚಾರುಚಂದ್ರಾಂಶುಶೀತಲಂ ।
ಆಹ್ಲಾದನಮನಿಂದ್ಯಂ ಚ ನಿರವದ್ಯಂ ಸುಖೋದಯಂ ।೩೧॥

ಸಿದ್ಧ ಉವಾಚ—

ಅಧುನಾ ತ್ವಂ ಮಯಾ ಬ್ರಹ್ಮನ್ಪರಿಜ್ಞಾತೋಽಭಿವಾದಯೇ ।
ಅತಿಕ್ರಮೋಽಯಂ ಕ್ಷಂತವ್ಯಃ ಸ್ವಭಾವೋ ಹಿ ಸತಾಂ ಕ್ಷಮಾ ।೩೨॥

---

ಸಿದ್ಧನು ಹೇಳಿದನು:—

೨೯. ಒಂದು ಗಳಿಗೆ ತಡೆ. ನನ್ನ ವೃತ್ತಾಂತವೆಲ್ಲವನ್ನೂ ನೆನೆದುಕೊಳ್ಳುವೆನು. ಎಲ್ಲವನ್ನೂ ಹೇಳುವೆನು. ನಾನೇನೇನು ಮಾಡಿದೆ ಎಂಬುದನ್ನು ಮೊದಲು ಜ್ಞಾಪಿಸಿಕೊಳ್ಳುವೆನು

೩೦. ಹೀಗೆ ಹೇಳಿ, ಸಂಜೆಯಾದಾಗ ಹಗಲಿನಲ್ಲಿ ತಾನು ಮಾಡಿದುದನ್ನೆಲ್ಲ ಸ್ಮರಿಸಿಕೊಳ್ಳುವವನಂತೆ, ಯೋಚನೆಮಾಡಿ, ತನ್ನ ವೃತ್ತವನ್ನೆಲ್ಲಾ ಸಂಪೂರ್ಣವಾಗಿ ಸ್ಮರಿಸಿಕೊಂಡನು.

೩೧. ಅನಂತರದಲ್ಲಿ ನನ್ನನ್ನು ಕುರಿತು ಚಾರುಚಂದ್ರಾಂಶುಶೀತಲವಾಗಿರುವ ಆಹ್ಲಾದಕಾರಿಯಾದ, ಅನಿಂದ್ಯವಾದ, ನಿರವದ್ಯವಾದ, ಶುಭೋದಯವಾದ ಮಾತನ್ನು ಹೇಳಿದನು.

ಸಿದ್ಧನು ಹೇಳಿದನು—

೩೨. ಎಲೈ ಬ್ರಹ್ಮನೆ, ನೀನು ಯಾರು ಎಂಬುದು ಈಗ ನನಗೆ ತಿಳಿಯಿತು. ನಿನಗೆ ಅಭಿವಾದನ ಮಾಡುವೆನು. ಮೊದಲೇ ಮಾಡಬೇಕಾಗಿತ್ತು. ಇದು ಅತಿಕ್ರಮವಾಯಿತು. ಇದನ್ನು ಕ್ಷಮಿಸು. ಸತ್ಪುರುಷರಿಗೆ ಕ್ಷಮೆಯೇ ಸ್ವಭಾವವು.

ಮುನೇ ಚಿರಮಹಂ ಭ್ರಾಂತೋ ದೇವೋದ್ಯಾನವನಭೂಮಿಷು ।
ಭೋಗಾಮೋದವಿಮೋದೇಷು ಷಟ್ಪದಃ ಪದ್ಮಿನೀಷ್ವಿವ ॥೩೩॥

ದೃಶ್ಯನದ್ಯಾಮಥೋ ಚಿತ್ತಜಲಕಲ್ಲೋಲಲೋಲಯಾ ।
ಚಕ್ರಾವರ್ತೇಷ್ಯಮಾನೇನ ಮಯೋದ್ವಿಗ್ನೇನ ಚಿಂತಿತಂ ॥೩೪॥

ಸಂಸಾರಸಾಗರೇ ದೃಶ್ಯಕಲ್ಲೋಲೈರಹಮಾಕುಲಃ ।
ಕಾಲೇನೋದ್ವೇಗಮಾಯಾತಶ್ಚಾತಕೋವಗ್ರಹೇ ಯಥಾ ॥೩೫॥

ಸಂವಿನ್ಮಾತ್ರೈಕಸಾರೇಷು ರಮ್ಯಂ ಭೋಗೇಷು ನಾಮ ಕಿಂ ।
ಅವತಿಷ್ಠೇ ಗತೋದ್ವೇಗಸಂವಿದ್ವ್ಯೋಮ್ನ್ಯೇವ ಕೇವಲಂ ॥೩೬॥

---

೩೩. ಮುನೀಂದ್ರನೇ, ನಾನು ದೇವೋದ್ಯಾನ ಭೂಮಿಗಳಲ್ಲಿ ಬಹುಕಾಲ ಸಂಚಾರ ಮಾಡಿದೆನು. ಆ ಭೂಮಿಗಳು ಭೋಗಗಳಿಂದಲೂ ಆಮೋದಗಳಿಂದ ವಿಮೋದಗೊಳಿಸತಕ್ಕವು. ದುಂಬಿಯು ಕಮಲಗಳಲ್ಲಿ ಅಲೆವಂತೆ ನಾನು ಅಲ್ಲಿಲ್ಲಿ ಅಲೆದೆನು.

೩೪. ಹೀಗೆ ಚಿತ್ತವೆಂಬ ಜಲಕಲ್ಲೋಲದಿಂದ ಕೂಡಿರುವ ದೃಶ್ಯವೆಂಬ ನದಿಯಲ್ಲಿ ಚಕ್ರಾವರ್ತಗಳಲ್ಲಿ ಕೊಚ್ಚಿಕೊಂಡು ಹೋಗುತ್ತ ಉದ್ವಿಗ್ನನಾಗಿ ಹೀಗೆ ಚಿಂತಿಸಿದೆನು.

೩೫. ಸಂಸಾರ ಸಾಗರದಲ್ಲಿ ದೃಶ್ಯಗಳೆಂಬ ತರಂಗಗಳು ಏಳುತ್ತ ನನ್ನನ್ನು ಗೋಳುಗುಡಿಸುತ್ತಿರುವುವು. ಚಾತಕವು ವೃಷ್ಟಿ ಪ್ರತಿಬಂಧ ಸಮಯದಲ್ಲಿ ಹೇಗೋ ಹಾಗೇ ಕಾಲದಿಂದ ನನಗೆ ಈಗ ಉದ್ವೇಗವು ಹುಟ್ಟಿರುವುದು.

೩೬. ಸಂವಿನ್ಮಾತ್ರಸಾರಗಳಾದ ಈ ಭೋಗಗಳಲ್ಲಿ ರಮ್ಯವಾದುದಾದರೂ ಏನು ? ಆ ಭೋಗಗಳನ್ನು ಅನುಭವಿಸಬೇಕೆಂಬ ಉದ್ವೇಗವು ಇಲ್ಲವಾಗಲು, ಕೇವಲ ಸಂವಿದಾಕಾಶ ಸ್ವರೂಪನಾಗಿ ಉಳಿಯುವೆನು.

ಶಬ್ದರೂಪರಸಸ್ಪರ್ಶಗಂಧಮಾತ್ರಾದೃತೇ ಪರಂ।
ನೇಹ ಕಿಂಚನ ನಾಮಾಸ್ತಿ ಕಿಮೇತಾವತ್ಯಹಂ ರಮೇ ॥೩೭॥

ಚಿನ್ಮಾತ್ರಾಕಾಶಮೇವೈತತ್ಸರ್ವಂ ಚಿನ್ಮಾತ್ರಮೇವ ವಾ।
ತತ್ಕಿಮತ್ರಾಸದಾಕಾರೇ ರಮೇ ನಷ್ಟಮತಿರ್ಯಥಾ ॥೩೮॥

ವಿಷಯಾ ವಿಷವೈಷಮ್ಯಾ ವಾಮಾಃ ಕಾಮವಿಮೋಹದಾಃ।
ರಸಾಃ ಸರಸವೈರಸ್ಯಾ ಲುಠನ್ನೇಷು ನ ಕೋ ಹತಃ ॥೩೯॥

ಜೀರ್ಣಾ ಜೀವಿತಜಂಬಾಲಜರಚ್ಛಫರಿಕಾಮತಿಃ।
ಕಾಯಂ ದ್ರುತಗತಾ ದಾತುಂ ಜರೇಚ್ಛತಿ ಬೃಹದ್ಬಕೇ ॥೪೦॥

---

(ಯದಿತರ್ಹಿ ಸಂವಿದಾತ್ಮನಾ ಪ್ರಥಮಾನಂ ಸುಖಮೇವ ರಮ್ಯಂ ತದತಿರಿಕ್ತಾನಾಂ ತತ್ಸಾಧನಾನಾಂ ದುಃಖಸ್ವರೂಪತ್ವೇನ ತನ್ಮಾತ್ರ ಸಾರತ್ವಾತ್। ತರ್ಹಿ ದುಃಖಾಂಶಂ ಸರ್ವಂ ವಿಹಾಯ ಸಾರಭೂತೇ ಸಂವಿದ್ಯೇವ್ಯವ್ಯೇವ ಕೇವಲಮುವತಿಷ್ಠೇ ಕಿಮನ್ಯೇನಾಸಾರೇಣ ಇತ್ಯರ್ಥಃ—ತಾ. ಪ್ರ.)

೩೭. ಶಬ್ದರೂಪ ರಸಸ್ಪರ್ಶ ಗಂಧಗಳನ್ನು ಉಳಿಯಲಾಗಿ ಆದಕ್ಕಿಂತ ಬೇರೆಯಾದ ಭೋಗಸುಖವು ಯಾವುದೂ ಇಲ್ಲ. ಹೀಗಿರಲು, ಇವುಗಳಲ್ಲಿ ನಾನು ರಮಿಸುವುದಾದರೂ ಏನು ?

೩೮. ಏನೇನು ಇದೆಯೋ ಅದೆಲ್ಲವೂ ಚಿನ್ಮಾತ್ರವೇ ಆಗಿರಲು, ಅಸತ್ತಾಗಿರುವ ಈ ಭೋಗವಸ್ತುಗಳಲ್ಲಿ ನಷ್ಟಮತಿಯಂತೆ ಏನನ್ನು ತಾನೇ ಅನುಭವಿಸಲಿ ?

೩೯. ವಿಷಯಗಳು ವಿಷದಂತೆ ವಿಷಮವಾದವು. ನಾರಿಯರು ಕಾಮಮೋಹಗಳನ್ನು ಹುಟ್ಟಿಸುವರು. ರಸಗಳೆಲ್ಲವೂ ಸರಸಗಳಾಗಿರುವಂತೆ ತೋರಿದರೂ ವಿರಸಗಳೇ ! ಇವುಗಳಲ್ಲಿ ಬಿದ್ದು ಒದ್ದಾಡುವ ಯಾರುತಾನೇ ಹತವಾಗುವುದಿಲ್ಲ !

೪೦. ಬೇಗಬೇಗ ನಡೆಯುವ ಜರೆಯೆಂಬ ಹಳೆಯ ದೊಡ್ಡ ಬಕಪಕ್ಷಿಯು, ಜೀವಿತವೆಂಬ ಕೊಳದಲ್ಲಿ ದೊಡ್ಡ ಮತ್ಸ್ಯವು ಸಿಕ್ಕಿತೆಂದು ದೇಹವನ್ನು ಹಿಡಿದು ನುಂಗಲು ಸಿದ್ಧವಾಗಿರುವುದು.

ಕಾಯೋಯಮಚಿರಾಪಾಯೋ ಬುದ್ಬುದೋಂಬುನಿಧಾವಿವ ।
ಸ್ಫುರನ್ನೇವ ಪುರೋಂತರ್ಧಿಂ ಯಾತಿ ದೀಪಶಿಖಾ ಯಥಾ ॥೪೧॥

ವಿವಿಧಾಕುಲಕಲ್ಲೋಲಾ ಚಕ್ರಾವರ್ತವಿಧಾಯಿನೀ ।
ಮೃತಿಜನ್ಮಬೃಹತ್ಕೂಲಾ ಸುಖದುಃಖತರಂಗಿಣೀ ॥೪೨॥

ಯೌವನೋಲ್ಲಾಸಕಲಿಲಾ ಜರಾಧವಲಫೇನಿಲಾ ।
ಕಾಕತಾಲೀಯಯೋಗೇನ ಸಂಪನ್ನಸುಖಬುದ್ಬುದಾ ॥೪೩॥

ವ್ಯವಹಾರಮಹಾವಾಹರೇಖಾಜಡರವಾಕುಲಾ ।
ರಾಗದ್ವೇಷ ಘನೋಲ್ಲಾಸಾ ಭೂತಲಾಲೋಲದೇಹಿಕಾ ॥೪೪॥

---

೪೧. ಈ ದೇಹವು ಕ್ಷಣಕ್ಷಣದಲ್ಲಿಯೂ ಅಪಾಯಕ್ಕೆ ಒಳಗಾಗುತ್ತಿರುವುದು. ಸಮುದ್ರದಲ್ಲಿ ಏಳುವ ಗುಳ್ಳೆಗಳಂತಿರುವುದು. ಎದುರಿಗೆ ದೀಪಶಿಖೆಯಂತೆ ಬೆಳಗುತ್ತಿದ್ದರೂ ಇದ್ದಕ್ಕಿದ್ದಂತೆಯೇ ಅಂತರ್ಧಾನವಾಗುವುದು.

೪೨. ನಾನಾ ವಿಧವಾಗಿ ಹರಿಯುತ್ತಾ, ಚಕ್ರಾವರ್ತಗಳನ್ನು ಮಾಡುತ್ತಾ, ಜನ್ಮ ಮರಣಗಳೆಂಬ ಎತ್ತರವಾದ ದಡಗಳುಳ್ಳದಾಗಿ, ಸುಖದುಃಖಗಳೆಂಬ ತರಂಗಗಳುಳ್ಳ ಈ ಜೀವಿತವೆಂಬ ನದಿಯು ಹರಿಯುತ್ತಿರುವುದು.

೪೩. ಯೌವನದ ಉಲ್ಲಾಸವೆಂಬ ಕೆಸರೂ, ಜರೆಯೆಂಬ ಬೆಳ್ಳಗಿರುವ ನೊರೆಯೂ, ಕಾಕತಾಲೀಯ ಯೋಗದಿಂದ ಲಭಿಸುವ ಸುಖವೆಂಬ ಬುದ್ಬುದಗಳೂ ಉಳ್ಳದು ಈ ನದಿ.

೪೪. ವ್ಯವಹಾರವೆಂಬ ದೊಡ್ಡ ಪ್ರವಾಹದಿಂದಲೂ, ನೀರಿನ ಮೊರೆತದಿಂದಲೂ ತಿಳಿಯದಿರುವವರ ಪ್ರಲಾಪಗಳಿಂದಲೂ ತುಂಬಿ ರಾಗದ್ವೇಷಗಳೆಂಬ ಘನೋಲ್ಲಾಸಗಳಿಂದ ಕೂಡಿ, ಭೂತಲದಲ್ಲೆಲ್ಲಾ ಓಡ್ಯಾಡುವ ದೇಹವುಳ್ಳದಾಗಿರುವುದೀ ನದಿ.

ಲೋಭಮೋಹಮಹಾವರ್ತಾ ಪಾತೋತ್ಪಾತವಿವರ್ತನೀ ।
ಹಾ ತಪ್ತಾ ಜೀವಿತಾಖ್ಯೇಯಂ ನದೀ ನದನಶೀತಲಾ ॥೪೫॥

ಅಪೂರ್ವಾಣ್ಯುಪಗಚ್ಛಂತಿ ತಥಾ ಪೂರ್ವಾಣಿ ಯಾಂತ್ಯಲಂ ।
ಸಂಸಾರಸರಿದಂಬೂನಿ ಸಂಗತಾನಿ ಧನಾನಿ ಚ ॥೪೬॥

ಪ್ರವೃತ್ತಾ ಯೇ ನಿವರ್ತಂತೇ ತೈರಲಂ ಹತಭಾವಕೈಃ ।
ಅಪೂರ್ವಾ ಯೇ ಪ್ರವರ್ತಂತೇ ತೇಷ್ವಥಾಸ್ಥೇಹ ಕೀದೃಶೀ ॥೪೭॥

ಸರ್ವಸ್ಯಾಃ ಸರಿತೋ ವಾರಿ ಪ್ರಯಾತ್ಯಾಯಾತಿ ಚಾಕರಾತ್ ।
ದೇಹನದ್ಯಾಃ ಪಯಸ್ತ್ವಾಯುರ್ಯಾತ್ಯೇವಾಯಾತಿ ನೋ ಪುನಃ ॥೪೮॥

---

೪೫. ಲೋಭ ಮೋಹಗಳೆಂಬ ಮಹಾವರ್ತಗಳುಳ್ಳದು : ಪಾತ, ಉತ್ಪಾತ, ವಿವರ್ತನಗಳುಳ್ಳದು. ಅಯ್ಯೋ, ಜೀವಿತವೆಂಬ ಈ ನದಿಯು ಕೇವಲ ಹೆಸರಿಗೆ ತಣ್ಣಗಿರುವುದೆಂದಾದರೂ ನಿಜವಾಗಿ ಕಾದು ಕುದಿಯುತ್ತಿರುವುದು.

೪೬. ಧನಗಳು ಹೇಗೋ ಹಾಗೆ, ಇಲ್ಲದ್ದು ಬರುವುದು: ಇದ್ದುದು ಹೋಗುವುದು : ಇದೇ ಈ ಸಂಸಾರ ನದಿಯಲ್ಲಿರುವ ವಿಚಿತ್ರವು.

೪೭. ಯಾವ ಸುಖದುಃಖಗಳೆಂಬ ನೀರುಗಳು ಹರಿಯುತ್ತಿವೆಯೋ ಅವೇ ಆಯಾ ಭಾವಗಳು ಅಭಾವವಾಗಲು ಇಲ್ಲವಾಗುವುವು. ಇಲ್ಲದವು ಬರುವುವು. ಹಾಗೆ ಇಲ್ಲದಿದ್ದು ಬಂದವುಗಳಲ್ಲಿ ಯಾವ ರೀತಿಯಾದ ಆಸ್ಥೆಯನ್ನಿಡುವುದು ?

೪೮. ಲೋಕದಲ್ಲಿರುವ ನದಿಗಳ ನೀರುಗಳು ಯಾವುದೋ ಒಂದು ಆಕಾರದಿಂದ ಬರುವುವು ಹೋಗುವುವು. ಆದರೆ ದೇಹನದಿಯ ನೀರಾದ ಆಯುಸ್ಸು ಮಾತ್ರ ಹೋಗುವುದು ಅಷ್ಟೆ! ಮತ್ತೆ ಬರುವುದಿಲ್ಲ.

ಶತಶಃ ಪರಿವರ್ತಂತೇ ಪ್ರತಿಪಿಂಡಂ ಕ್ಷಣಂ ಪ್ರತಿ ।
ಕುಲಾಲಚಕ್ರಕಾಭಾವಾ ಇವ ಭಾವಾ ಭವಾಂಬುಧೌ　　　　　　॥೪೯॥

ಚರಂತಿ ಚತುರಾಶ್ಚೌರಾ ವಿಷಮಾ ವಿಷಯಾರಯಃ ।
ಹರಂತಿ ಭಾವಸರ್ವಸ್ವಂ ಜಾಗರ್ಮಿ ಸ್ವಪಿಮೀಹ ಕಿಂ　　　　　　॥೫೦॥

ಆಯುಷಃ ಖಂಡಖಂಡಾಶ್ಚ ನಿಪತಂತಃ ಪುನಃಪುನಃ ।
ನ ಕಶ್ಚಿಚ್ಚೇತ್ತಿ ಕಾಲೇನ ಕ್ಷತಾನಿ ದಿವಸಾನ್ಯಹೋ　　　　　　॥೫೧॥

ಇದಮದ್ಯ ತಥೇದಂ ಚ ತಥೇದಮಿದಮಸ್ಯ ಮೇ ।
ಏವಂ ಕಲನಯಾ ಲೋಕೋ ಗತಂ ಪ್ರಾಪ್ತಂ ನ ವೇತ್ತ್ಯಹೋ　　　　　　॥೫೨॥

---

೪೯. ಪ್ರತಿಯೊಂದು ದೇಹಕ್ಕೂ ಪ್ರತಿಯೊಂದು ಕ್ಷಣದಲ್ಲಿಯೂ ಕುಂಬಾರನ ಚಕ್ರದಮೇಲೆ ಕುಡಿಕೆ ಮಡಿಕೆಗಳು ಬರುವಂತೆ. ಭವಾಂಬುಧಿಯಲ್ಲಿ ಭಾವಗಳು ಬರುತ್ತಲೇ ಇರುವುವು.

(ಭಾವೋ ವಿವೇಕಸ್ತಲ್ಲಕ್ಷಣಂ ಸರ್ವಸ್ವಂ)

೫೦. ಚತುರರೂ ವಿಷಮರೂ ಆದ ವಿಷಯಗಳೆಂಬ ಶತ್ರುಗಳೂ ಚೋರರೂ ಚರಿಸುತ್ತಲೇ ಇರುವರು. ಇದ್ದುದನ್ನೆಲ್ಲಾ ಕದ್ದುಬಿಡುವರು. ಹೀಗಿರಲು ಎಚ್ಚರವಾಗಿರಲೇ? ಮಲಗಿರಲೇ? ಏನುಮಾಡಲಿ?

೫೧. ಆಯುಸ್ಸು ಖಂಡಖಂಡವಾಗಿ ಮತ್ತೆ ಮತ್ತೆ ಬಿದ್ದುಹೋಗುತ್ತಿರುವುದು. ಕಾಲನು ಕದ್ದ ದಿನಗಳೆಷ್ಟು ಎಂಬುದನ್ನು ಯಾರೂ ಅರಿಯರು.

**೫೨.** ಈಗ ಅದು, ಅದರಂತೆಯೇ ಇದು, ಅದರಂತೆಯೇ ಇರುವ ಇದು ನನಗೆ ಈಗ ಸಿಕ್ಕಿತು, ಎಂಬ ಯೋಚನೆಯನ್ನು ಮಾಡುತ್ತ ಗತವಾದ ಆಯುವನ್ನೂ ಪ್ರಾಪ್ತವಾದ ಮೃತ್ಯುವನ್ನೂ ಯಾರೂ ನೋಡುವುದೇ ಇಲ್ಲವಲ್ಲ!

ಭುಕ್ತಂ ಪೀತಮಸಂತಾಸು ಭ್ರಾಂತಂ ಚ ವನಭೂಮಿಷು ।
ದೃಷ್ಟಾನಿ ಸುಖದುಃಖಾನಿ ಕಿಮನ್ಯದಿಹ ಸಾಧ್ಯತೇ ॥೫೩॥

ಸುಖದುಃಖಾನುಭವನಾದ್ಭೂಯೋಭೂಯೋ ವಿವರ್ತನಾತ್ ।
ಅನಿತ್ಯತ್ವಾಚ್ಚ ಭಾವಾನಾಂ ಸ್ಥಿತಾ ನಿಷ್ಕೌತುಕಾ ವಯಂ ॥೫೪॥

ಭುಕ್ತಾನಿ ಭೋಗವೃಂದಾನಿ ದೃಷ್ಟ್ವಾ ಚಾನಿತ್ಯತಾ ಭೃಶಂ ।
ನೋಪಲಭ್ಯತ ಏವಾಃತಿ ವಿಶ್ರಾಂತಿರಿಹ ಕುತ್ರಚಿತ್ ॥೫೫॥

ಭ್ರಾಂತಮುತ್ತುಂಗಶೃಂಗಾಸು ಮೇರೂಪವನಭೂಮಿಷು ।
ಲೋಕಪಾಲಪುರೀಷೂಚ್ಚೈಃ ಸಂಪ್ರಾಪ್ತಂ ಕಿಮಕೃತ್ರಿಮಂ ॥೫೬॥

---

೫೩. ಬೇಕಾದ ಹಾಗೆ ಭೋಗಿಸಿದ್ದಾಯಿತು : ಕುಡಿದದ್ದಾಯಿತು, ಅನಂತಗಳಾದ ವನಭೂಮಿಗಳಲ್ಲಿ ಅಲೆದದ್ದಾಯಿತು. ಸುಖದುಃಖಗಳನ್ನು ಕಂಡದ್ದಾಯಿತು. ಇಲ್ಲಿ ಇನ್ನೇನು ಸಾಧಿಸಬೇಕು ?

೫೪. ಸುಖದುಃಖಗಳನ್ನು ಅನುಭವಿಸುತ್ತಾ ಮತ್ತೆ ಮತ್ತೆ ಅವುಗಳನ್ನೇ ಪಡೆಯುತ್ತಾ, ಆ ಭಾವಗಳೆಲ್ಲವೂ ಅನಿತ್ಯಗಳೆಂಬುದನ್ನು ತಿಳಿದು ಅವುಗಳಲ್ಲಿದ್ದ ಆಸಕ್ತಿಯನ್ನು ಬಿಟ್ಟು ಕುಳಿತೆವು.

೫೫. ಭೋಗವೃಂದಗಳನ್ನು ಭೋಗಿಸಿ, ಅವುಗಳು ಶಾಶ್ವತವಲ್ಲವೆಂಬುದನ್ನು ತಿಳಿದುಕೊಂಡು, ಇವುಗಳಲ್ಲಿ ಯಾವಾಗಲೂ ವಿಶ್ರಾಂತಿಯು ಸಿಕ್ಕುವುದಿಲ್ಲ ಎಂದು ಖಚಿತವಾಗಿ ತಿಳಿದೆವು.

೫೬. ಎತ್ತರವಾದ ಪರ್ವತ ಶಿಖರಗಳಲ್ಲಿ ಮೇರುಪರ್ವತದ ಉಪವನಭೂಮಿಗಳಲ್ಲಿ, ಲೋಕಪಾಲಕ ಪುರಿಗಳಲ್ಲಿ, ಭೋಗಗಳನ್ನು ಹುಡುಕಿಕೊಂಡು ಅಲೆದೆವು. ಆದರೆ ಶಾಶ್ವತವಾದ ಸುಖವನ್ನೇನಾದರೂ ಪಡೆದೆವೇನು ?

ಸರ್ವತ್ರ ದಾರುಭಿರ್ವೃಕ್ಷಾ ಮಾಂಸೈರ್ಭೂತಾನಿ ಭೂಸ್ತೃಣಾ ।
ದುಃಖಾನ್ಯನಿತ್ಯತಾ ಚೇತಿ ಕಥಮಾಶ್ವಾಸ್ಯತೇ ವದ ॥೫೭॥

ನ ಧನಾನಿ ನ ಮಿತ್ರಾಣಿ ನ ಸುಖಾನಿ ನ ಬಾಂಧವಾಃ ।
ಶಕ್ನುವಂತಿ ಪರಿತ್ರಾತುಂ ಕಾಲೇನಾಕಲಿತಂ ಜನಂ ॥೫೮॥

ಜನ್ಮೋ ಜೀಮೂತಜಠರಜಲವದ್ಗಿರಿಕುಕ್ಷಿಷು ।
ಯಾತ್ಯಂತಃಶೂನ್ಯ ಏವಾಸ್ತಂ ಪಾಂಸೂಪಚಯಪೇಲವ. ॥೫೯॥

ನ ಮೇ ಮನೋರಮಾಃ ಕಾಮಾ ನ ಚ ರಮ್ಯಾ ವಿಭೂತಯಃ ।
ಇದಂ ಮತ್ತಾಂಗನಾಪಾಂಗಭಂಗಲೋಲಂ ಚ ಜೀವಿತಂ ॥೬೦॥

---

೫೭. ಎಲ್ಲೆಲ್ಲಿ ಹೋದರೂ ಮರಗಳೆಲ್ಲವೂ ಕಟ್ಟಿಗೆಗಳೂ ಪ್ರಾಣಿಗಳೆಲ್ಲವೂ ಮಾಂಸಗಳೂ ಭೂಮಿಯೆಲ್ಲಾ ಮಣ್ಣೂ ಆಗಿ, ದುಃಖಪಾತ್ರಗಳಾಗಿರುವುವು. ಅಷ್ಟೇ ಅಲ್ಲ, ಅವುಗಳೆಲ್ಲಾ ಅನಿತ್ಯಗಳೂ ಆಗಿರುವುವು. ಹೀಗಿರಲು, ಯಾವುದನ್ನು ಹೇಗೆ ನಂಬುವುದು ಹೇಳು.

೫೮. ಧನಗಳಾಗಲಿ, ಮಿತ್ರರಾಗಲಿ, ಸುಖಗಳಾಗಲಿ ಬಾಂಧವರಾಗಲಿ, ಕಾಲನು ಹಿಡಿದುಕೊಂಡಿರುವ ಜನವನ್ನು ಕಾಪಾಡಲಾರರು.

೫೯. ಮೇಘದ ಉದರದೊಳಗಿರುವ ಜಲವು, ಬೆಟ್ಟಗಳ ಮೇಲೆ ಬಿದ್ದಾಗ ಅಂತರ್ಧಾನವಾಗುವಂತೆ, ಧೂಳಿನ ರಾಶಿಗಳಂತೆ ಅಸ್ಥಿರರಾಗಿ, ಅಂತಶ್ಶೂನ್ಯರಾಗಿ ಅಸ್ತವನ್ನು ಹೊಂದುವರು.

೬೦. ನನಗೆ ಮನೋಹರಗಳಾದ ಕಾಮಗಳಿಲ್ಲ: ರಮ್ಯವಾದ ವಿಭೂತಿಗಳಿಲ್ಲ. ಈ ಜೀವಿತವು ಮದೋನ್ಮತ್ತೆಯರಾದ ಅಂಗನೆಯರ ಅಪಾಂಗದಿಂದ ಭಂಗವಾಗುವಷ್ಟು ಚಂಚಲವು.

ಕ್ವೇವ ಕಸ್ಯ ಕಥಂ ನಾಮ ಕುತ ಆಶ್ವಾಸನಾ ಮುನೇ ।
ಅದ್ಯ ಶ್ವೋ ವಾ ಪದಂ ಪಾಪೋ ಮೃತ್ಯುರ್ಮೂರ್ಧ್ನಿ ನಿಯಚ್ಛತಿ ॥೬೧॥

ಶರೀರಂ ವರ್ಣವದ್ಭ್ರಂಶಿ ಜೀವಿತಂ ಜೀರ್ಣಸಂಸ್ಥಿತಿ ।
ಧೀರಧೀರತಯಾ ಗ್ರಸ್ತಾ ರಸಾ ನೀರಸತಾಂ ಗತಾಃ ॥೬೨॥

ನೀತಂ ಮನೋರಥೈರೇವ ನೀರಸೈರ್ವಾಯುರಾತತಂ ।
ನ ಮಮ ಸ್ವಂ ಚಮತ್ಕಾರಕಾರಿ ಕಿಂಚಿದಪೀಹಿತಂ ॥೬೩॥

ಮೋಹೋದ್ಯ ಮಾಂದ್ಯಮಾಯಾತೋ ದೇಹೋ ನೇಹೋಪಯುಜ್ಯತೇ ।
ಅನಾಸ್ಥೈವೋತ್ತಮಾವಸ್ಥಾ ಸ್ಥಾನಾಸ್ಥೈವಾಧಮಾ ಸ್ಥಿತಿಃ ॥೬೪॥

---

೬೧. ಕ್ರೂರನಾದ ಕಾಲನು ಇಂದೋ ನಾಳೆಯೋ ತಲೆಯ ಮೇಲೆ ಕಾಲಿಡುವನು ಎಂಬುದು ಖಚಿತವಾಗಿ ಗೊತ್ತಿರಲು, ಎಲ್ಲಿ, ಯಾರಿಗೆ, ಹೇಗೆ, ಎಲ್ಲಿಂದ, ಆಶ್ವಾಸನೆಯುಂಟು ?

೬೨. ಶರೀರವು ಎಲೆಯಂತೆ ಭ್ರಂಶವಾಗುವುದು. ಜೀವಿತವು ಜೀರ್ಣವಾಗಿ ಹೋಗಿರುವ ಸಂಸ್ಥಿತಿಯುಳ್ಳದು. ಭೋಗಗಳೆಲ್ಲವೂ ಮೆಲ್ಲಮೆಲ್ಲಗೆ ಬರುಬರುತ್ತ ನೀರಸಗಳಾಗುವುವು.

೬೩. ನೀರಸಗಳಾದ ಮನೋರಥಗಳಿಂದ (ಪ್ರಾಣ) ವಾಯುವು ಶಿಥಿಲವಾಗಿ ಹೋಯಿತು. ನನ್ನದೆನ್ನಿಸಿಕೊಂಡುದು ಯಾವುದೂ ಇಲ್ಲವಾಯಿತು. ಯಾವ ಪುರುಷಾರ್ಥವೂ ಸಂಪಾದಿತವಾಗಲಿಲ್ಲ.

(ನೀರಸೈರ್ಭೋಗೈಃ ತನ್ಮನೋರಥೈರೇವ ವಾ ಆತ ತಮಾಯುರ್ನೀತಂ—

೬೪. ಮೋಹವು ಮಂದವಾಯಿತು ದೇಹವು ಉಪಯೋಗವಿಲ್ಲವಾಯಿತು. ಅನಾಸ್ಥೆಯೇ ಉತ್ತಮಾವಸ್ಥೆಯಾಯಿತು. ಜೀವನದ ಆಸ್ಥೆಯೇ ಅಧಮಸ್ಥಿತಿಯಾಯಿತು.

ದೋಲಾಯಂತ್ಯೋವನೌ ದೇಹಂ ನಾಗರಾನ್ನಾಗರಾಂಗನಾ ।
ಯಥಾ ಧಾವಂತಿ ಧಾವಂತಿ ಜನತಾ ವಿಷಯಾಂಸ್ತಥಾ ॥೬೯॥

ಧಾವಂತಿ ವಿಷಯಾನ್ ಲಕ್ಷ್ಯಮುನ್ಮುಕ್ತಾ ಶ್ಚಿತ್ತನಾಯಕಾಃ ।
ಸ್ಪೃಶಂತಿ ನ ಗುಣಾನ್ಭೂಯಃ ಕೃತಘ್ನಾಃ ಸೌಹೃದಂ ಯಥಾ ॥೭೦॥

ಉತ್ಪಾತವಾಯುರೇವಾಯುರ್ವಿರ್ನತ್ರಾಣ್ಯೇವಾತಿ ಶತ್ರವಃ ।
ಬಂಧವೋ ಬಂಧನಾನ್ಯೇವ ಧನಾನ್ಯೇವಾತಿನೈಧನಂ ॥೭೧॥

ಸುಖಾನ್ಯೇವಾತಿದುಃಖಾನಿ ಸಂಪದಃ ಪರಮಾಪದಃ ।
ಭೋಗಾ ಭವಮಹಾರೋಗಾ ರತಿರೇವ ಪರಾರತಿಃ ॥೭೨॥

---

೬೯. ಎರಡು ತಟಗಳ ನಡುವೆ ತೊಟ್ಟಿಲಿಸಲ್ಲಿ ತೂಗಿದಂತೆ ತೂಗುತ್ತಾ ನದಿಗಳು ನಾಗರವನ್ನು ಕುರಿತು ಧಾವಿಸುವಂತೆ, ಜನತೆಯೂ ವಿಷಯಗಳ ಕಡೆಗೆ ಧಾವಿಸುವುದು.

೭೦. ಚಿತ್ತನಾಯಕಗಳು ತಮ್ಮ ಸ್ಥಾನವನ್ನು ಬಿಟ್ಟು ವಿಷಯಗಳನ್ನೇ ಲಕ್ಷೀಕರಿಸಿಕೊಂಡು ಓಡುವುವು. ಕೃತಘ್ನರು ಸೌಹೃದವನ್ನು ಹೇಗೆ ಕಾಣರೋ ಹಾಗೆಯೇ ಈ ಚಿತ್ತನಾಯಕಗಳು ಗುಣಗಳನ್ನು ಮುಟ್ಟುವುದೂ ಇಲ್ಲ.

(ಗುಣಾನ್ ವಿವೇಕ ವೈರಾಗ್ಯಾದೀನ್ ಮೌರ್ವೀಶ್ಚ- ತಾ ಪ್ರ.)

೭೧. ಉತ್ಪಾತವಾಯುವಿಗೆ ಸಮವಾದುದು ಆಯುಸ್ಸು. ಮಿತ್ರರೆನ್ನಿಸಿಕೊಳ್ಳುವವರೇ ಶತ್ರುಗಳು. ಬಂಧುಗಳೇ ಬಂಧನಗಳು. ಧನಗಳೇ ಮೃತಿಸಾಧನವು.

೭೨. ಸುಖಗಳು (ಆಸಕ್ತಿ ಜನಕಗಳಾದ್ದರಿಂದ) ಅತಿದುಃಖಗಳು. ಸಂಪತ್ತುಗಳೇ ಪರಮಾಪದಗಳು. ಭೋಗಗಳೇ ಭವಮಹಾರೋಗಗಳು. ರತಿಯೆಂಬುದು ಅತಿ ಬಲವಾದ ಉದ್ವೇಗವು.

ಆಪದಃ ಸಂಪದಃ ಸರ್ವಾಃ ಸುಖಂ ದುಃಖಾಯ ಕೇವಲಂ ।
ಜೀವಿತಂ ಮರಣಾಯೈವ ಬತ ಮಾಯಾವಿಜೃಂಭಿತಂ ॥೭೩॥

ಬಹೂನ್ಯಾಬಲಪಾತೇಽನಿಷ್ಟಾನಿಷ್ಟಾನ್ಯಹಿಂ ಮನಾಕ್ ।
ಪಶ್ಯನ್ಪ್ರಿಯವಿಯೋಗಾಂಶ್ಚ ಯಾತಿ ಜರ್ಜರತಾಂ ಜನಃ ॥೭೪॥

ಭೋಗಾ ವಿಷಯಸಂಭೋಗಾ ಭೋಗಾ ಏವ ಫಣಾವತಾಂ ।
ದರಂತ್ಯೇವ ಮನಾಕ್ ಸ್ಪೃಷ್ಟಾ ದೃಷ್ಟಾ ನಷ್ಟಾಃ ಪ್ರತಿಕ್ಷಣಂ ॥೭೫॥

ಆಯುರ್ಯಾತಿ ನಿರಾಯಾಸಪದಪ್ರಾಪ್ತಿವಿವರ್ಜಿತೈಃ ।
ಉದರ್ಕಭಂಗುರಾಕಾರೈಃ ಕರಾಳೈಃ ಕಷ್ಟಚೇಷ್ಟಿತೈಃ ॥೭೬॥

---

೭೩. ಸರ್ವ ಸಂಪತ್ತುಗಳೂ ಆಪತ್ತುಗಳೆ. ಸುಖವು ಕೇವಲ ದುಃಖಕ್ಕೆ ಕಾರಣವು. ಜೀವಿತವು ಮರಣವೇ ಕೊನೆಯಾಗುಳ್ಳದು. ಆಹಾ! ಇದೆಂತಹ ಮಾಯಾ ವಿಜೃಂಭಣವು.

೭೪. ಜನರು ಕಾಲ ಪರಿಣಾಮದಿಂದ ಆಗುವ ಇಷ್ಟಾನಿಷ್ಟಗಳನ್ನು ಅನೇಕವಾಗಿ ನೋಡುವರು. ಪ್ರಿಯವಿಯೋಗಗಳನ್ನು ಕಾಣುವರು. ಜರ್ಜರಿತರಾಗುವರು. ಆದರೂ ಸುಖವನ್ನು ಮಾತ್ರ ಎಂದಿಗೂ ಕಾಣರು.

೭೫. ವಿಷಯ ಸಂಭೋಗಗಳೆಂಬ ಭೋಗಗಳು ಸರ್ಪಗಳ ಭೋಗ (ಹೆಡೆ) ಗಳೇ ಸರಿ. ಮುಟ್ಟಿದರೆ ಕಚ್ಚುವುವು. ನೋಡುತ್ತಿದ್ದ ಹಾಗೆಯೇ ಪ್ರತಿ ಕ್ಷಣವೂ ನಷ್ಟವಾಗುತ್ತಿರುವುವು.

೭೬. ನಿರಾಯಾಸ ಸ್ಥಾನವಾದ ಬ್ರಹ್ಮಪದವನ್ನು ಪಡೆಯದೆಯೇ ಆಯುಸ್ಸು ಉದಯಿಸುತ್ತಿರುವ ಸೂರ್ಯನ ಆಕಾರಗಳಂತೆ, ಭಂಗುರವಾಗಿ ಭಯಂಕರವಾದ ಕಷ್ಟ ವ್ಯಾಪಾರಗಳಿಂದ ನಶಿಸಿಹೋಗುತ್ತಿರುವುದು.

ಭೋಗಾಶಾಬದ್ಧತೃಷ್ಣಾನಾಮಪಮಾನಃ ಪದೇಪದೇ ।
ಆಲಾನಮವಲೀನಾನಾಂ ವನ್ಯಾನಾಮಿವ ದಂತಿನಾಂ ॥೭೭॥

ಸಂಪದಃ ಪ್ರಮದಾಶ್ಚೈವ ತರಂಗೋತ್ಸಂಗಭಂಗುರಾಃ ।
ಕಸ್ತಾಸ್ವಹಿಫಣಾಚ್ಛತ್ರಚ್ಛಾಯಾಸು ರಮತೇ ಬುಧಃ ॥೭೮॥

ಸತ್ಯಂ ಮನೋರಮಾಃ ಕಾಮಾಃ ಸತ್ಯಂ ರಮ್ಯಾ ವಿಭೂತಯಃ ।
ಕಿಂತು ಮತ್ತಾಂಗನಾಪಾಂಗಭಂಗಲೋಲಂ ಹಿ ಜೀವಿತಂ ॥೭೯॥

ಆಪಾತರಮಣೀಯೇಷು ರಮಂತೇ ವಿಷಯೇಷು ಯೇ ।
ಅತ್ಯಂತವಿರಸಾಂತೇಷು ಪತಂತಿ ನಿರಯೇಷು ತೇ ॥೮೦॥

---

೭೭. ಭೋಗಾಶೆಯಲ್ಲಿ ಸಿಕ್ಕಿಕೊಂಡಿರುವ ತೃಷ್ಣೆಯುಳ್ಳವರಿಗೆ ಪದೇಪದೇ ಅಪಮಾನವಾಗುವುದು. ಕಾಡಿನ ಆನೆಗಳು ಗೂಟಕ್ಕೆ ಕಟ್ಟಿಸಿಕೊಂಡು ಅನ್ನಪಾನಗಗಳಿಲ್ಲದೆ ಸಂಕಟಪಡುವಂತೆ ಆಗುವುದು.

೭೮. ಸಂಪತ್ತುಗಳೂ ಕಾಂತೆಯರೂ ತರಂಗಗಳಂತೆ ಭಂಗುರರು. ವಿದ್ವಾಂಸನಾದವನು ಯಾವನು ತಾನೇ ಸರ್ಪದ ಹೆಡೆಯ ನೆರಳಿನಂತಿರುವ ಅವರಲ್ಲಿ ವಿಶ್ವಾಸವಿಡುವನು.

೭೯. ಕಾಮಗಳು ಮನಸ್ಸಿಗೆ ರಮ್ಯಗಳಾದವು ನಿಜ. ಸಿದ್ಧಿಗಳೂ ರಮ್ಯವಾದವೇ ನಿಜ. ಆದರೆ ಮತ್ತ ಸ್ತ್ರೀಯರ ಅಪಾಂಗ ಭಂಗವಾಗುವಷ್ಟು ಲೋಲವೇ ಜೀವಿತವು.

೮೦. ಆಪಾತ ರಮಣೀಯಗಳಾದ ವಿಷಯಗಳಲ್ಲಿ ಯಾರು ರಮಿಸುವರೋ ಅವರು ಕೊನೆಗೆ ಅತ್ಯಂತ ವಿರಸಗಳಾದ ನರಕಗಳಲ್ಲಿ ತಪ್ಪದೇ ಬೀಳುವರು.

ದ್ವಂದ್ವದೋಷೋಪರುದ್ಧಾನಿ ದುಃಸಾಧ್ಯಾನ್ಯಸ್ಥಿರಾಣಿ ಚ ।
ಧನಾನ್ಯಧನ್ಯಸೇವ್ಯಾನಿ ಮಮ ಜಾತು ನ ತುಷ್ಟಯೇ ॥೭೧॥

ಆಪಾತಮಾತ್ರಮಧುರಾ ದುಃಖಪರ್ಯವಸಾಯಿನೀ ।
ಮೋಹನಾಯೈವ ಲೋಕಸ್ಯ ಲಕ್ಷ್ಮೀಃ ಕ್ಷಣವಿಲಾಸಿನೀ ॥೭೨॥

ಆಪಾತರಮಣೀಯಾನಿ ವಿಮರ್ದನೀರಸಾಣ್ಯತಿ ।
ದುಃಖಾನ್ಯಾಪತ್ಪ್ರದಾತೄಣಿ ಸಂಗತಾನಿ ಖಲೈರಿವ ॥೭೩॥

ಶರದಂಬುಧರಚ್ಛಾಯಾಗತ್ವರ್ಯೋ ಯೌವನಶ್ರಿಯಃ ।
ಆಪಾತರಮ್ಯಾ ವಿಷಯಾಃ ಪರ್ಯಂತಪರಿತಾಪಿನಃ ॥೭೪॥

---

೭೧. ಸುಖದುಃಖಗಳೆಂಬ ದೋಷಗಳಿಂದ ಕೂಡಿರುವ, ದುಸ್ಸಾಧ್ಯಗಳಾದ, ಸಾಧಿಸಿದರೂ ನಿಲ್ಲದೆ ಅಸ್ಥಿರಗಳಾಗಿರುವ, ಧನಗಳನ್ನು ಅಧನ್ಯರು ಸೇವಿಸುತ್ತಾರೆ. ಅಂತಹ ಧನಗಳಿಂದ ನನಗೇನೂ ತುಷ್ಟಿಯಿಲ್ಲ.

೭೨. ಆಪಾತಮಾತ್ರ ಮಧುರಗಳಾಗಿ, ದುಃಖವೇ ಪರ್ಯವಸಾನವುಳ್ಳವಾಗಿ, ಕ್ಷಣವಿಲಾಸಿನಿಯರಾದ ಲಕ್ಷ್ಮಿಯರೆಲ್ಲರೂ ಲೋಕವನ್ನು ಮೋಹಗೊಳಿಸುವುದಕ್ಕೇ ಹುಟ್ಟಿದವು.

೭೩. ದುಃಖಗಳೂ ಕೂಡ ಆಪಾತ ರಮಣೀಯಗಳು. ಕ್ಲೇಶದ ಅಂಗಡಿಗಳು. ಆಪತ್ತನ್ನೇ ಕೊಡುವುವು. ಅವು ಖಲರಿಂದ ಕೂಡಿದಂತೆಯೇ ಸರಿ.

೭೪. ಯೌವನ ಶ್ರೀಗಳೂ ಕೂಡ, ಶರದೃತುವಿನ ಮೋಡದ ಛಾಯೆಯಂತೆ ಸಾಗುವುವು. ಕೊನೆಗೆ ಗೋಳುಗುಟ್ಟಿಸುವ ವಿಷಯಗಳು ಆಪಾತ ರಮ್ಯಗಳು.

(ಅಯಂ ಶ್ಲೋಕಃ ಕಿರಾತಾರ್ಜುನೀಯೇ ಉಕ್ತತ್ವ ಏವ ಪಠಿತೋ ಬೋಧ್ಯಃ)

ಅಂತಕಃ ಪರ್ಯವಸ್ಥಾತಾ ಜೀವಿತೇ ಮಹತಾಮಪಿ ।
ಚಲಂತ್ಯಾಯೂಂಷಿ ಶಾಖಾಗ್ರಲಂಬಾಂಬೂನೀವ ದೇಹಿನಾಂ ॥೫೫॥

ಜೀರ್ಯಂತೇ ಜೀರ್ಯತಃ ಕೇಶಾ ದಂತಾಜೀರ್ಯಂತಿ ಜೀರ್ಯತಃ ।
ಕ್ಷೀಯತೇ ಜೀರ್ಯತೇ ಸರ್ವಂ ತೃಷ್ಣೈವೈಕಾ ನ ಜೀರ್ಯತೇ ॥೫೬॥

ಭೋಗಾಭೋಗಾತಿಗಹನೇ ಸರ್ವಸ್ಮಿನ್ಕಾಯಕಾನನೇ ।
ಪರಮುಲ್ಲಾಸಮಾಯಾತಿ ತೃಷ್ಣೈಕಾ ವಿಷಮಂಜರೀ ॥೫೭॥

ಬಾಲ್ಯಂ ಯೌವನವದ್ಯಾತಿ ಯೌವನಂ ಯಾತಿ ಬಾಲ್ಯವತ್ ।
ಉಪಮಾನೋಪಮೇಯತ್ವಂ ಭಂಗುರತ್ವಂ ಮಿಥೋನಯೋಃ ॥೫೮॥

---

೫೫. ಮಹಾಪುರುಷರ ಜೀವಿತದಲ್ಲಿಯೇ ಅಂತಕನೇ ಕೊನೆಮಾಡುವನು. ದೇಹಿಗಳ ಆಯುಸ್ಸುಗಳೆಲ್ಲವೂ ಕೊಂಬೆಯ ಕೊನೆಯಲ್ಲಿರುವ ನೀರಿನಂತೆ ಜಾರುತ್ತಿರುವುದು.

೫೬. ಜೀರ್ಣವಾಗುತ್ತಿರುವವನ ಕೇಶಗಳು ಜೀರ್ಣವಾಗುವುವು. ದಂತಗಳು ಜೀರ್ಣವಾಗುವುವು. ಎಲ್ಲವೂ ಕ್ಷೀಣವಾಗುವುದು ಜೀರ್ಣವಾಗುವುದು. ತೃಷ್ಣೆಯೊಂದು ಮಾತ್ರ ಜೀರ್ಣವಾಗುವುದಿಲ್ಲ.

೫೭. ಭೋಗಾಭೋಗಗಳಿಂದ ಅತಿ ಗಹನವಾಗಿರುವ ಕಾಯಕಾನನಗಳಲ್ಲೆಲ್ಲ ತೃಷ್ಣಾ ಎಂಬ ವಿಷವಲ್ಲರಿಯೊಂದು ಅತ್ಯಂತ ಉಲ್ಲಾಸದಿಂದ ಬೆಳೆಯುವುದು

(ಇದಾನೀಂ ಭೋಗಾನ್ಭುಕ್ತ್ವಾ ಜನ್ಮಾಂತರೇ ವಿವೇಕ ವೈರಾಗ್ಯಾದಿ ಪ್ರಾಪ್ಸ್ಯಾಮಿತಿ ಪ್ರತ್ಯಾಶಾತು ನ ಕಾರ್ಯಾ–ಇತ್ಯಾಹ–ಸರ್ವಸ್ಮಿನ್ ಭಾವಿದೇಹ ಪರಂಪರಾರೂಪೇಪಿ ಕಾಯಕಾನನೇ– ತಾ. ಪ್ರ.)

೫೮. ಬಾಲ್ಯವು ಯೌವನದಂತೆ, ಯೌವನವು ಬಾಲ್ಯದಂತೆ, ಕಳೆದುಹೋಗುವುದು. ಆದರಿಂದ ಈ ಬಾಲ್ಯ ಯೌವನಗಳಿಗೆ ಪರಸ್ಪರ ಉಪಮಾನ–ಉಪಮೇಯತ್ವವೂ ಉಂಟು : ಭಂಗುರತ್ವವೂ ಉಂಟು.

ಜೀವಿತಂ ಗಲತಿ ಕ್ಷಿಪ್ರಂ ಜಲಮಂಜಲಿನಾ ಯಥಾ ।
ಪ್ರವಾಹ ಇವ ವಾಹಿನ್ಯಾ ಗತಂ ನ ವಿನಿವರ್ತತೇ ॥೮೯॥

ಝಟಿತ್ಯೇವಾಗತೋ ದೇಹಃ ಕುತೋಽಪ್ಯಜ್ಞಾನವಾತತಃ ।
ಯಾತಿ ಪಶ್ಯತ ಏವಾಸ್ತಂ ತರಂಗಾ ಬುದಬೋದವತ್ ॥೯೦॥

ರಮ್ಯೇಷ್ವರಮ್ಯತಾ ದೃಷ್ಟಾ ಸ್ಥಿರೇಷ್ವಸ್ಥಿರತಾಪಿ ಚ ।
ಸತ್ಯೇಷ್ವಸತ್ಯತಾರ್ಥೇಷು ತೇನೇದ ವಿರಸಾ ವಯಂ ॥೯೧॥

ಸುಖಂ ಯದಾತ್ಮವಿಶ್ರಾಂತೌ ಗತೇ ಮನಸಿ ಸತ್ತ್ವತಾಂ ।
ಪಾತಾಲೇ ಭೂತಲೇ ಸ್ವರ್ಗೇ ತನ್ನ ಭೋಗೇಷು ಕೇಷುಚಿತ್ ॥೯೨॥

---

೮೯. ಜೀವಿತವು ಬೊಗಸೆಯಲ್ಲಿ ಹಿಡಿದಿರುವ ನೀರಿನ ಹಾಗೆ ಬೇಗ ಸೋರಿ ಹೋಗುವುದು. ನದಿಯ ಪ್ರವಾಹದಂತೆ, ಹೋದ ಆಯುಸ್ಸು ಮತ್ತೆ ಹಿಂತಿರುಗಿ ಬರುವುದಿಲ್ಲ.

೯೦. ಅಜ್ಞಾನವಾತದಿಂದ ಹಠಾತ್ತಾಗಿ ಎಲ್ಲಿಂದಲೋ ಬಂದ ದೇಹವು, ನೋಡುತ್ತಿದ್ದ ಹಾಗೆಯೇ ತರಂಗ, ಬುದ್ಬುದ, ದೀಪಗಳಂತೆ ಅಸ್ತವಾಗಿಹೋಗುವುದು.

೯೧. ರಮ್ಯವಸ್ತುಗಳಲ್ಲಿ ಅರಮ್ಯತೆಯನ್ನು ಕಂಡದ್ದಾಯಿತು. ಸ್ಥಿರವೆಂದು ಕೊಂಡಿದ್ದವುಗಳೆಲ್ಲಾ ಅಸ್ಥಿರವೆಂಬುದು ತಿಳಿಯಿತು. ಸತ್ಯವಾದ ಅರ್ಥಗಳಲ್ಲಿರುವ ಅಸತ್ಯತೆಯು ಕಂಡಿತು. ಇದರಿಂದ ನಾವು ವಿರಸರಾದೆವು.

೯೨. ಆತ್ಮವಿಶ್ರಾಂತಿಯಲ್ಲಿ ನಿಂತು ಸತ್ತ್ವತಾ ಎಂಬ ನಿರ್ವಾಸನತೆಯನ್ನು ಹೊಂದಿದ ಮನಸ್ಸು ಯಾವ ಸುಖವನ್ನು ಪಡೆಯುವುದೋ ಆ ಸುಖವನ್ನು ಪಾತಾಲದಲ್ಲಿಯಾಗಲಿ ಭೂತಲದಲ್ಲಿಯಾಗಲಿ ಸ್ವರ್ಗದಲ್ಲೇ ಆಗಲಿ ಪಡೆಯುವ ಯಾವ ಭೋಗಗಳಲ್ಲಿಯೂ ಪಡೆಯಲಾಗುವುದಿಲ್ಲ.

ಅಪಿ ಸಂಪೂರ್ಣಹೃದ್ಯಾರ್ಥಾಃ ಪಂಚಾಪೀಂದ್ರಿಯವೃತ್ತಯಃ ।
ತಾವಜ್ಜಯಂತಿ ಮಾಮೇತಾ ಭೃಂಗಂ ಚಿತ್ರಲತಾ ಇವ ॥೯೩॥

ಅಪ್ಯ ದೀರ್ಘೇಣ ಕಾಲೇನ ಕಾಲೇನ ನಿರಹಂಕೃತಿನಾ ಮಯಾ ।
ಸ್ವರ್ಗಾಪವರ್ಗವೈತೃಷ್ಣ್ಯಮಿದಮಾಸಾದಿತಂ ಧಿಯಾ ॥೯೪॥

ಚಿರಮೇಕಾಂತವಿಶ್ರಾಂತ್ಯೈ ತೇನೈತನ್ನಭಸಃ ಪದಂ ।
ತ್ವಮಿವಾಗತವಾನತ್ರ ದೃಷ್ಟವಾನಸ್ಮಿ ತಾಂ ಕುಟೀಂ ॥೯೫॥

ಅದ್ಯೈತತ್ಸಂಪರಿಜ್ಞಾತಂ ಯದೇಷಾ ಭವತಃ ಕುಟೀ ।
ಆಗಂತಾ ತ್ವಂ ಪುನಶ್ಚೇತಿ ಮಯಾ ತನ್ನ ವಿಚಾರಿತಂ ॥೯೬॥

ತದಾ ತ್ವತ್ರ ಮಯಾ ಜ್ಞಾತಂ ಕಶ್ಚಿತ್ಸಿದ್ಧೋಽಯಮಾತ್ಮನಾ ।
ದೇಹಂ ತ್ಯಕ್ತ್ವೇಹ ನಿರ್ವಾಣಂ ಗತ ಇತ್ಯನುಮಾನತಃ ॥೯೭॥

---

೯೩. ಹೀಗೆ ದೃಢವೈರಾಗ್ಯವನ್ನು ಪಡೆದಿದ್ದರೂ ನನ್ನನ್ನು ಹೃದ್ಯವಾದ ಅರ್ಥಗಳಿಂದ ಕೂಡಿರುವ ಇಂದ್ರಿಯ ವೃತ್ತಿಗಳು ಐದೂ ಕೂಡ, ಭೃಂಗವನ್ನು ಚಿತ್ರಗತವಾದ ಲತೆಯು ಹೇಗ ಆಕರ್ಷಿಸಲಾರದೋ ಹಾಗೆಯೇ ಜಯಿಸಲಾರವು.

೯೪. ಹೀಗೆ ಅಹಂಕಾರವನ್ನು ನೀಗಿಕೊಂಡಿರುವ ನಾನು ಬಹು ದೀರ್ಘಕಾಲದಿಂದ ಸ್ವರ್ಗ ಅಪವರ್ಗಗಳಲ್ಲೂ ತೃಷ್ಣೆಯಿಲ್ಲದಿರುವಿಕೆಯನ್ನು ಈಗ ಬುದ್ಧಿಯಿಂದ ಸಂಪಾದಿಸಿರುವೆನು.

೯೫ ಏಕಾಂತದಲ್ಲಿ ವಿಶ್ರಾಂತಿಯನ್ನು ಹೊಂದಬೇಕೆಂದು, ವೈರಾಗ್ಯದಿಂದ ಈ ಆಕಾಶ ಪದವನ್ನು ಕುರಿತು ನಿನ್ನಂತೆಯೇ ಬಂದು, ಆ ಗುಡಿಸಿಲನ್ನು ಕಂಡೆನು

೯೬. ಅದು ನಿಮ್ಮ ಗುಡಿಸಲು ಎಂಬುದು ಈಗ ತಿಳಿಯಿತು. ನೀನು ಮತ್ತೆ ಬರುವೆಯೋ ಇಲ್ಲವೋ ಎಂಬುದನ್ನು ನಾನು ಆಗ ವಿಚಾರಿಸಲಿಲ್ಲ.

೯೭. ಆಗ ನಾನು ಯಾವನೋ ಒಬ್ಬ ಸಿದ್ಧಿಪುರುಷನು ಮನಃಪೂರ್ವಕವಾಗಿ ದೇಹವನ್ನು ಬಿಟ್ಟು ನಿರ್ವಾಣವನ್ನು ಹೊಂದಿರಬೇಕು ಎಂದು ಅನುಮಾನಪಟ್ಟೆನು.

ಏತಸ್ಮೈ ಭಗವನ್ವೃತ್ತಮೇಷೋಽಸ್ಮೀತಿ ಯಥಾಸ್ಥಿತಂ ।
ಮಯಾ ತೇ ಕಥಿತಂ ಸರ್ವಂ ಯಥಾ ಜಾನಾಸಿ ತತ್ಕುರು ॥೯೮॥

ಸಿದ್ಧೈರ್ನ ಯಾವದವಧಾನಪರೈರ್ವಿಚಾರ್ಯ ।
ನಿರ್ಣೀತಮುತ್ತಮಧಿಯಾಂತರಶೇಷವಸ್ತು ॥
ತಾವತ್ತ್ರಿಕಾಲಕಲನಂ ನ ವಿದಂತಿ ಕಿಂಚಿ ।
ದಿತ್ಯಬ್ಜಜಾದಿಮನಸೋಽಪಿ ಮುನೇ ಸ್ವಭಾವಃ ॥೯೯॥

ಇತ್ಯಾರ್ಷೇ ವಾಸಿಷ್ಠಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಪಾಷಾಣೋ
ಪಾಖ್ಯಾನೇ "ಆಕಾಶಮಂಟಪಸಿದ್ಧಸಮಾಗಮ ಗಾಥಾವರ್ಣನಂ"
ನಾಮ ತ್ರಿನವತಿತಮಃ ಸರ್ಗಃ

---

೯೮. ಎಲೈ ಭಗವಂತನೇ, ಇದು ನನ್ನ ವೃತ್ತವು. ಇಗೋ ನಾನು ಯಥಾ ಸ್ಥಿತನಾಗಿರುವೆನು. ನಾನು ನಿನಗೆ ಎಲ್ಲವನ್ನೂ ಹೇಳಿದೆನು. ಇದೆಲ್ಲವನ್ನೂ ತಿಳಿದು ಏನು ಮಾಡಬೇಕೋ ಮಾಡು.

೯೯. ಸಿದ್ಧರೇ ಆದರೂ ಚಿತ್ತಕಡೆಗೆ ಮನಸ್ಸುಗೊಟ್ಟು ಉತ್ತಮಬುದ್ಧಿಯಿಂದ ವಿಚಾರಮಾಡದೆ ಹೋದರೆ, ಅಂತಃಪೂರ್ಣವಾದ ವಸ್ತುವನ್ನು ನಿರ್ಣಯಿಸದೆ ಹೋದರೆ, ತ್ರಿಕಾಲಗಳಲ್ಲಿ ನಡೆದುದನ್ನು ಎಳ್ಳಷ್ಟೂ ತಿಳಿಯಲಾಗುವುದಿಲ್ಲ. ಬ್ರಹ್ಮಾದಿಗಳ ಮನಸ್ಸಿಗೂ, ಎಲೈ ಮುನೀಂದ್ರನೇ, ಇದೇ ಸ್ವಭಾವವು.

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಆಕಾಶಮಂಟಪ ಸಿದ್ಧಸಮಾಗಮಗಾಥಾವರ್ಣನ" ಎಂಬ
ತೊಂಭತ್ತಮೂರನೆಯ ಸರ್ಗವು

# ಚತುರ್ನವತಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ—

ಅಥ ಹೇಮಮಯಾಕಾಶವಿಸ್ತೀರ್ಣಾಯಾಂ ಮಹಾಭುವಿ ।
ಸೌಹಾರ್ದಾದೇವ ಸಿದ್ಧಸ್ಯ ತಸ್ಯೇದಮಹಮುಕ್ತವಾನ್ ॥೧॥

ತ್ವಯಾ ನ ಕೇವಲಂ ತಾವನ್ಮಯಾಪಿ ನ ವಿಚಾರಿತಂ ।
ಆವ್ಯಾಪ್ತಿರಹಿತಾ ನಾಮ ನ ಸಂಭವತಿ ದೇಹಿನಾಂ ॥೨॥

ಕಸ್ಮಾನ್ಮಯಾ ತವೋದಂತಂ ವಿಚಾರ್ಯಾಸೌ ಸ್ಥಿರೀಕೃತಾ ।
ನ ಕುಟೀ ವ್ಯೋಮ್ನಿ ತೇನ ತ್ವಮಭವಿಷ್ಯಃ ಸ್ಥಿರಸ್ಥಿತಿಃ ॥೩॥

---

# ತೊಂಭತ್ತ ನಾಲ್ಕನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು: —

೧. ಅಲ್ಲಿ ಹೇಮಮಯವಾದ ಆಕಾಶವೋ ಎಂಬಂತೆ ವಿಸ್ತಾರವಾದ ಆ ಮಹಾಭೂಮಿಯಲ್ಲಿ, ಸೌಹಾರ್ದ್ರದಿಂದ, ಆ ಸಿದ್ಧನನ್ನು ಕುರಿತು ನಾನು ಹೀಗೆ ಹೇಳಿದೆನು :—

೨. ನೀನೂ ವಿಚಾರಿಸಲಿಲ್ಲ: ನಿನ್ನಂತೆಯೇ ನಾನೂ ವಿಚಾರಿಸಲಿಲ್ಲ. ದೇಹಧಾರಿಗಳಾಗಿರುವ ಸಿದ್ಧರಿಗೆ ಆ ವ್ಯಾಪ್ತಿಯು (ಪ್ರಣಿಧಾನೇನ ಸರ್ವವಿಷಯೇ ಮನೋವ್ಯಾಪ್ತಿಸ್ತದ್ರಹಿತಾ ಅತೀತಾನಾಗತಾರ್ಥ ಸಂವಿತ್ತಿಃ) ಸಂಭವಿಸುವುದಿಲ್ಲ.

೩. ಹಾಗೆ ವಿಚಾರವಿಲ್ಲದೆಯೇ ಆ ವ್ಯಾಪ್ತಿಯಿರುವುದಾಗಿದ್ದರೆ, ನಿನ್ನನ್ನು ವಿಚಾರಿಸಿದುದೇಕೆ ? ಹಾಗೆ ವಿಚಾರಿಸದೆಯೇ ಆ ಆಕಾಶಕುಟಿಯು ಸ್ಥಿರವಾಗಿರಲೆಂದು ಸಂಕಲ್ಪ ಮಾಡುತ್ತಿದ್ದೆ. ನೀನೂ ಕೂಡ ಅಲ್ಲಿಯೇ ಸ್ಥಿರವಾಗಿರುತ್ತಿದ್ದೆ.

ಉತ್ತಿಷ್ಠ ಸಿದ್ಧಲೋಕೇಷು ನಿವಸಾವೋ ಯಥಾಸ್ಥಿತಂ ।
ಸ್ವಾಸ್ಪದಸ್ಥಿತಯಃ ಸೌಮ್ಯಾಃ ಸ್ವಾತ್ಮಸಿದ್ಧ್ಯೈ ಸುಸಾಧನಂ ॥೪॥

ಇತಿ ನಿರ್ಣೀಯ ತಾವಚ್ಚೈರುತ್ಸೃತೌ ತಾರಕೋಪಮೌ ।
ಸಮಮೇಕಪುರೋಡ್ಡೀನೌ ವ್ಯೋಮಯಂತ್ರೋಪಲಾವಿವ ॥೫॥

ಪ್ರಣಾಮಪೂರ್ವಮನ್ಯೋನ್ಯಮಥ ಕೃತ್ವಾ ವಿಸರ್ಜನಂ ।
ಗತಃ ಸೋಭಿಮತಂ ದೇಶಮಹಂ ಚಾಭಿಮತಂ ಗತಃ ॥೬॥

ಇತಿ ವೃತ್ತಾಂತಮಖಿಲಮುಕ್ತವಾನಸ್ಮಿ ರಾಘವ ।
ತವಾಶ್ಚರ್ಯಮಯೀಂ ಪಶ್ಯ ಸಂಸೃತೀನಾಂ ವಿಚಿತ್ರತಾಂ ॥೭॥

---

೪. ಏಳು, ಸಿದ್ಧಲೋಕದಲ್ಲಿ ಯಥಾಸ್ಥಿತವಾಗಿ ವಾಸಮಾಡೋಣ. ಸ್ವಭಾವ–ಸ್ಥಿತಿಯಲ್ಲಿ ಸೌಮ್ಯವಾಗಿರುವಿಕೆಯೇ ಆತ್ಮಸಿದ್ಧಿಗೆ ಸುಸಾಧನವು.

೫. ಹೀಗೆಂದು ನಿರ್ಣಯಿಸಿಕೊಂಡು ನಾವಿಬ್ಬರೂ ಆಕಾಶದಲ್ಲಿ ತಾರಕೆಗಳಂತೆ ಎತ್ತರವಾಗಿ ಹಾರಿ, ಕವಣೆಯ ಕಲ್ಲುಗಳಂತೆ ಒಂದೇ ಸ್ಥಾನವನ್ನು ಕುರಿತು ಹಾರಿಹೋದೆವು.

೫. ಹೀಗಂದು ನಿರ್ಣಯಿಸಿಕೊಂಡು, ಎರಡು ನಕ್ಷತ್ರಗಳಂತೆ, ವ್ಯೋಮಯಂತ್ರದಿಂದ ಎಸೆಯಲ್ಪಟ್ಟ ಒಂದೇ ಊರಿನ ಕಡೆಗೆ ಹೊರಟ ಕವಣೆ ಕಲ್ಲುಗಳಂತೆ, ಹೊರಟೆವು.

೬. ಅನಂತರ ಪ್ರಣಾಮಪೂರ್ವಕವಾಗಿ ಒಬ್ಬರನ್ನೊಬ್ಬರು ಬೀಳ್ಕೊಟ್ಟೆವು. ಆತನು ತನಗೆ ಬೇಕಾದೆಡೆಗೆ ಹೋದನು. ನಾನು ನನಗೆ ಬೇಕಾದೆಡೆಗೆ ಬಂದೆನು.

೭. ಈ ವೃತ್ತಾಂತವನ್ನೆಲ್ಲಾ ನಾನೂ, ರಾಘವ, ನಿನಗೆ ಹೇಳಿದೆನು. ನೋಡು, ಸಂಸೃತಿಯು ಎಷ್ಟು ವಿಚಿತ್ರವಾದುದು, ಎಷ್ಟು ಆಶ್ಚರ್ಯಮಯವಾದುದು ನೋಡು.

ಶ್ರೀರಾಮ ಉವಾಚ—

ಭಗವಂಸ್ತವ ದೇಹೋಽಸೌ ಪೃಥಿವ್ಯಾಮಣುತಾಂ ಗತಃ ।
ಭ್ರಾಂತಃ ಕೇನ ಶರೀರೇಣ ಸಿದ್ಧಲೋಕಾಂಸ್ತತೋ ಭವಾನ್ ॥೮॥

ಶ್ರೀ ವಸಿಷ್ಠ ಉವಾಚಃ—

ಆ ಸ್ಮೃತಂ ಶೃಣು ವೃತ್ತಾಂತಂ ತತೋ ಮಮ ಜಗತ್ಸ್ಮೃಹೇ ।
ಭ್ರಮತಃ ಸಿದ್ಧಸೇನಾಸು ಲೋಕಪಾಲಪುರೀಷು ಚ ॥೯॥

---

ಶ್ರೀರಾಮನು ಹೇಳಿದನು:—

೮. ಎಲೈ ಭಗವಂತನೆ, ನಿನ್ನ ದೇಹವು ಪೃಥಿವಿಯಲ್ಲಿ ಒಂದು ಅಣುವಷ್ಟು ಆಗಿತ್ತಲ್ಲ. ಆಗ ನೀನು ಸಿದ್ಧಲೋಕಗಳನ್ನು ಯಾವ ದೇಹದಿಂದ ಸುತ್ತಿಕೊಂಡು ಬಂದೆ ?

(ಕುಟೀಸಂಸ್ಥಃ ತ್ವದೀಯ ಸ್ಥೂಲದೇಹಃ ಸಿದ್ಧೇನ ಅಪಾಸ್ತಃ, ಇತಿತ್ವಯೈವ ಸ್ವಯಮೂಹಿತ ಮಿತ್ಯುಕ್ತಂ, ನಿರಸ್ತಶ್ಚಪಾರ್ಥಿವೋ ದೇಹಃ ಪೃಥಿವ್ಯಾಂ ಕಾಲೇನ ಪಾಂಸುಭಾವಮಾಪದ್ಯತ ಇತಿ ಪರಿಶೇಷಾದೇವಜ್ಞಾತಂ । ಏವಂಸತಿ ಮನೋಮಾತ್ರ ದೇಹೇನ ಸಿದ್ಧಲೋಕಾಂಗತೋ ಭವಾನ್ ಕಥಂ ತತ್ರತ್ರಜನ್ಯೈಃ ವ್ಯವಹೃತವಾನ್। ನಹಿಮನೋಮಾತ್ರಾತ್ಮಾ ಅನ್ಯೈಸ್ಸಹ ವ್ಯವಹರ್ತುಂ ಶಕ್ನೋತಿ ಅನ್ಯೋವಾತೇನ ಸಹ ವ್ಯವಹರ್ತುಂ ಇತ್ಯಾಶಯೇನರಾಮಃ ಪೃಚ್ಛತಿ ॥—ತಾ. ಪ್ರ.)

ಶ್ರೀ ವಸಿಷ್ಠನು ಹೇಳಿದನು—

೯. ಆಹಾ ! ನೆನೆಪಾಯಿತು. ಅನಂತರದಲ್ಲಿ ನನಗೆ ಏನಾಯಿತು ಎಂಬು ದನ್ನು ಹೇಳುವೆನು ಕೇಳು. ನಾನು ಸಿದ್ಧರ ಗುಂಪುಗಳಲ್ಲಿಯೂ ಲೋಕಪಾಲಪುರಿ ಗಳಲ್ಲಿಯೂ ತಿರುಗುತ್ತಿದ್ದೆನಲ್ಲವೆ ?

ಅಹಮಿಂದ್ರಪುರಂ ಪ್ರಾಪ್ತೋ ನ ಕಶ್ಚಿತ್ತತ್ರ ದೃಷ್ಟವಾನ್ ।
ಮಾಮಿಮಂ ದೇಹರಹಿತಮಾತಿವಾಹಿಕದೇಹಿನಂ ॥೧೦॥

ಅಹಂ ಕಿಲ ತದಾ ರಾಮ ಸಂಪನ್ನೋ ಗಗನಾಕೃತಿಃ ।
ನ ಚಾಧಾರೋ ನಚಾಧೇಯಶ್ಚಿದಾಕಾಶಮಯಾತ್ಮಕಃ ॥೧೧॥

ನ ಗ್ರಹೀತಾ ನ ಚ ಗ್ರಾಹ್ಯಸ್ತ್ವದ್ದೃಶಾರ್ಥಾವಬೋಧಿನಾಂ ।
ನಚೈವ ದೇಶಕಾಲಾನಾಂ ಕ್ವಚಿದಾವೃತ್ತಿಕಾರಕಃ ॥೧೨॥

ಮನೋಮನನಮಾತ್ರಾತ್ಮಾ ಪೃಥ್ವ್ಯಾದಿಪರಿವರ್ಜಿತಃ ।
ಸಂಕಲ್ಪಪುರುಷಾಕಾರಃ ಪದಾರ್ಥಾನಾಮರೋಧಕಃ ॥೧೩॥

---

೧೦. ನಾನು ಇಂದ್ರಪುರಿಗೆ ಹೋದೆನು. ಅಲ್ಲಿ ಆತಿವಾಹಿಕ ದೇಹಮಾತ್ರವಾಗಿರುವ ನನ್ನನ್ನು ಯಾರೂ ನೋಡಲೇ ಇಲ್ಲ.

೧೧ ಆಗ ನಾನು ಗಗನಾಕಾರವನ್ನು ಧರಿಸಿದ್ದೆನು. ಆಗ ನನಗೆ ಆಧಾರವೂ ಆಧೇಯವೂ ಇಲ್ಲದೆ ಕೇವಲ ಚಿದಾಕಾಶಮಯನಾಗಿದ್ದೆನು.

೧೨. ಆಗ ಗ್ರಹೀತಾ ಇಲ್ಲ ಗ್ರಾಹ್ಯವಿಲ್ಲ. ನಿನ್ನ ಹಾಗೆ ಸ್ಥೂಲವಾದ ಅರ್ಥವನ್ನು ಮಾತ್ರ ತಿಳಿಯುವವರಿಗಂತೂ ಕಾಣಿಸುವ ಹಾಗೆಯೇ ಇರಲಿಲ್ಲ. ಯಾವ ವ್ಯವಹಾರವೂ (ಆವೃತ್ತಿ) ಯೂ ಇರಲಿಲ್ಲವಾಗಿ ಅಲ್ಲಿ ದೇಶಕಾಲಗಳ ಪ್ರಸಕ್ತಿಯೂ ಬರಲಿಲ್ಲ.

೧೩. ಆಗ ನಾನು ಮನೋಮನನ ಮಾತ್ರನಾಗಿದ್ದೆನು. ಪೃಥಿವ್ಯಾಧಿಗಳೊಂದೂ ಆ ದೇಹದಲ್ಲಿ ಇರಲಿಲ್ಲ. ಸಂಕಲ್ಪ ಪುರುಷನಂತೆ ಸೂಕ್ಷ್ಮನಾಗಿದ್ದೆನು. ಆಗ ಪದಾರ್ಥಗಳು ನನ್ನನ್ನು ಯಾವ ಅಡ್ಡಿಯೂ ಇಲ್ಲದೆ ತೂರಿಕೊಂಡು ಹೋಗಬಹುದಾಗಿತ್ತು.

ಅರುದ್ಧಶ್ಚ ಪದಾರ್ಥೌಘೈಃ ಸ್ವಯಂ ಸ್ವಾನುಭವೋನ್ಮುಖಃ ।
ವ್ಯವಹರ್ತಾ ತಥಾಭೂತೈರೇವಂ ಪುಂಭಿರ್ಮನೋಮಯೈಃ ॥೧೪॥

ಸ್ವಪ್ನಾನುಭೂತಯೋ ರಾಮ ದೃಷ್ಟಾಂತೋತ್ರಾವಿಖಂಡಿತಃ ।
ಅನುಭೂತ್ಯಪಲಾಪಂ ತು ಯಃ ಕುರ್ಯಾತ್ತೇನ ತೇಸ್ತ್ವಲಂ ॥೧೫॥

---

೧೪. ನಾನೂ ಯಾವ ಪದಾರ್ಥಗಳಲ್ಲಿಯೂ ಅನಿರುದ್ಧಗತಿಯಾಗಿ ಹೋಗಿ ಬರುತ್ತಿದ್ದೆನು. ನಾನೂ ಸ್ವಪ್ನ ಮನೋರಾಜ್ಯಗಳಲ್ಲಿ ಹೇಗೋ ಹಾಗೆ ಮನೋಮಯಗಳಾದ ಭೂತಗಳಲ್ಲಿಯೂ ಮನೋಮಯರಾದ ಪುರುಷರಲ್ಲಿಯೂ ವ್ಯವಹಾರ ಮಾಡುತ್ತಲಿದ್ದೆನು.

೧೫ ನನ್ನ ವ್ಯವಹಾರವು ಸ್ವಪ್ನವ್ಯವಹಾರದಂತೆಯೇ ಇತ್ತು. ಸ್ವಪ್ನವೇ ಸರಿಯಾದ ದೃಷ್ಟಾಂತವು. ರಾಮ, ತಾನು ಅನುಭವಿಸಿರುವುದನ್ನು ಯಾರು ಅಪಲಾಪ (ಇಲ್ಲವೆನ್ನುವುದು) ಮಾಡುವರೋ ಅವನ ವಿಚಾರವು ಬೇಕಿಲ್ಲ.

(ಸ್ವಪ್ನಾನುಭೂತಯಃ ಸ್ವಪ್ನಾನುಭವಾಃ ಅತ್ರ ಈ ದೃಶಾರ್ಥ ಸಂಭಾವನೇ ಅವಿ ಖಂಡಿತಃ ಸಮಸ್ತೋ ದೃಷ್ಟಾಂತಃ ಅನುಸಂಧೇಯ ಇತ್ಯರ್ಥಃ। ಯಾಸ್ತು ನೈಯಾಯಿತೋ ಜ್ಞಾನಮಾತ್ರೇ ಅವಚ್ಛೇದಕಡಾಸಂಬಂಧೇನ ದೇಹಸ್ಯ ಕಾರಣತಾ, ತ್ವಜ್ಮನೋಯೋಗಸ್ಯಾಪಿ ಕಾರಣತಾ, ಸುಷುಪ್ತೌ ತದಭಾವೇ ಜ್ಞಾನಾಭಾವೋಪಪತ್ತಿರಿತ್ಯಾದಿ ಪ್ರಲಪತಿ ಸಮೂರ್ಖಸ್ತ್ವಯಾ ನ ಸಂಭಾಷ್ಯ ಏವೇತ್ಯಾಹ - ಅನುಭೂತೀತಿ । .... ಸುಷುಪ್ತಾವಪಿ ಸುಖಮಹಮಸ್ವಾಪ್ಸ ಮಿತ್ಯಾದಿ ಸ್ಮೃತಿದರ್ಶನೇನ ಸುಖಸ್ವಾಪಾದಿ ಜ್ಞಾನಸತ್ತ್ವಾತ್ "ಸ್ವಪ್ನೇನ ಶಾರೀರ ಮಭಿ ಪ್ರಹತ್ಯ ಅಸುಪ್ತಃ ಸುಪ್ತಾನಭಿಚಾಕಶೀತಿ । ಶುಕ್ರಮಾದಾಯ ಪುನರೇತಿಸ್ಥಾನಂ ಹಿರಣ್ಮಯ ಪೂರುಷ ಏಕಹಂಸಃ" ಇತ್ಯಾದಿ ಶ್ರುತಿವಿರೋಧಾಚ್ಚ, ನಿಮಿಷಾಪಾತ್ ತ್ಯಕ್ತಶರೀರೇಣ ಮಯಾ ದುಃಖಾನುಭವಾತ್ ತನ್ನಿವಾರಣಾಯ ಬ್ರಹ್ಮಾಜ್ಞಯಾ ಮಿತ್ರಾವರುಣೋದ್ಭವ ಶರೀರಪರಿಗ್ರಹಾಚ್ಚ, ಇತಿಭಾವಃ ॥ — ತಾ. ಪ್ರ.)

ಯಥಾ ಸ್ವಪ್ನಚರೋ ಗೇಹೇ ವ್ಯವಹರ್ತಾ ನ ದೃಶ್ಯತೇ ।
ತಥಾ ತದಾ ನ ದೃಷ್ಟೋಽಸ್ಮಿ ಪುರಸ್ಥೋಽಪಿ ನಭೋಗತೈಃ ॥೧೬॥

ಅಹಮನ್ಯಾನ್ಪ್ರಪಶ್ಯಾಮಿ ಪಾರ್ಥಿವಾಕಾರಭಾಸುರಾನ್ ।
ಮಾಮಾತಿವಾಹಿಕಾತ್ಮಾನಂ ನ ಕಶ್ಚಿದಪಿ ಪಶ್ಯತಿ ॥೧೭॥

ಶ್ರೀರಾಮ ಉವಾಚ:—

ನ ದೃಶ್ಯತೇ ವಿದೇಹತ್ವಾದ್ಭವಾನ್ಯೋಽಮವಪುರ್ಯದಿ ।
ತತ್ಕಥಂ ತೇನ ಸಿದ್ಧೇನ ದೃಷ್ಟೋಽಸಿ ಕನಕಾವನೌ ॥೧೮॥

ಶ್ರೀ ವಸಿಷ್ಠ ಉವಾಚ:—

ಅಸ್ಮದಾದಿರ್ಜನೋ ನಾಮ ಯಥಾ ಸಂಕಲ್ಪಪಾಲಿತಾನ್ ।
ನಾಸಂಕಲ್ಪಿತಮಾಪ್ನೋತಿ ಸತ್ಯಕಾಮವಪುರ್ಯತಃ ॥೧೯॥

---

೧೬. ಸ್ವಪ್ನವನ್ನು ಅನುಭವಿಸುತ್ತಿರುವನು ಮನೆಯಲ್ಲಿ ವ್ಯವಹಾರ ಮಾಡು ತ್ತಿದ್ದರೂ ಇತರರಿಗೆ ಗೋಚರವಾಗದಂತೆ, ನಾನು ಎದುರಿಗೇ ಇದ್ದರೂ ಯಾರ ಕಣ್ಣಿಗೂ ಕಾಣಿಸಲಿಲ್ಲ.

೧೭. ನಾನು ಪೃಥಿವ್ಯಂಶ ಸಮೇತವಾದ ದೇಹವುಳ್ಳ ಎದುರಿಗೆ ಇರುವವರ ನ್ನೆಲ್ಲ ಚೆನ್ನಾಗಿ ನೋಡುತ್ತಿದ್ದೆನಾದರೂ ಆತಿವಾಹಿಕ ದೇಹದಿಂದ ಸಂಚರಿಸುತ್ತಿದ್ದ ನನ್ನನ್ನೂ ಯಾರೂ ನೋಡಲಾಗಲಿಲ್ಲ.

ಶ್ರೀರಾಮನು ಕೇಳಿದನು:—

೧೮. ಆಕಾಶದೇಹಿಯಾದ ನೀನು ಇತರ ಭೂತಸಂಸರ್ಗವಿಲ್ಲದವನಾದ ಕಾರಣ ದೃಷ್ಟಿ ಗೋಚರನಾಗಲಿಲ್ಲವೆನ್ನುವುದಾದರೆ ಕನಕ ಭೂಮಿಯಲ್ಲಿ ಸಿದ್ಧನಿಗೆ ಗೋಚರನಾದುದು ಹೇಗೆ ?

ಶ್ರೀ ವಸಿಷ್ಠನು ಹೇಳಿದನು:—

೧೯. ನಮ್ಮಂತಹವರು ಸತ್ಯಕಾಮ ದೇಹಿಗಳು. ಆದರಿಂದ ನಮ್ಮ ವ್ಯವ ಹಾರಗಳು ಏನು ನಡೆದರೂ ಸಂಕಲ್ಪಪೂರ್ವಕವಾಗಿಯೇ ನಡೆಯಬೇಕಲ್ಲದೆ ಅಸಂ ಕಲ್ಪಿತವಾಗಿ ಯಾವುದೂ ನಡೆಯುವುದೇ ಇಲ್ಲ.

ವ್ಯವಹಾರೇಷು ಮಗ್ನೇನ ಲೌಕೀಕೇಷ್ವಮಲಾತ್ಮನಾ ।
ಕ್ಷಣಾದ್ವಿಸ್ಮರ್ಯತೇ ಪುಂಸಾ ಆತಿವಾಹಿಕವಾತ್ಮನಃ ॥೨೦॥

ಮಯಾ ಪಶ್ಯತು ಮಾಮೇಷ ಇತಿ ಸಂಕಲ್ಪಿತಂ ತದಾ ।
ತೇನ ಮಾಂ ದೃಷ್ಟವಾನೇಷ ಸ್ವಸಂಕಲ್ಪಾರ್ಥಭಾಜನಂ ॥೨೧॥

ಜನೋ ಜರಠಭೇದತ್ವಾನ್ನ ಸಂಕಲ್ಪಾರ್ಥಭಾಜನಂ ।
ಸ ಏಷ ಜೀರ್ಣಭೇದತ್ವಾತ್ಸತ್ಯಕಾಮತ್ವಭಾಜನಂ ॥೨೨॥

---

(ಸತ್ಯಸಂಕಲ್ಪಾನುಸಾರಿ ದರ್ಶನ ವ್ಯವಸ್ಥಯಾ ಉಭಯಂ ವಸಿಷ್ಠಃ ಪರಿಹ ರತಿ । . ಅಸ್ಮದಾದಿ ಜ್ಞಾನಯೋಗ ಸಿದ್ಧೋ ಜನಃ —ತಾ. ಪ್ರ.)

೨೦. ಲೋಕಸಂಬಂಧವಾದ ವ್ಯವಹಾರಗಳಲ್ಲಿ ಮುಳುಗಿರುವಾಗ ನಿರ್ಮಲಾತ್ಮರಿಗೆ ಸಹ ತಮ್ಮ ಆತಿವಾಹಿಕತ್ವವು ಒಂದು ಗಳಿಗೆ ಮರೆತುಹೋಗುವುದುಂಟು.

(ನನು ಜ್ಞಾನ ಸಿದ್ಧಾನಾಂ ಸದೈವ ಆತಿವಾಹಿಕದೇಹ ಏವ ಅಸ್ತಿ ನ ಸ್ಥೂಲ ಇತಿ ತ್ವಯೈವ ಅಸಕೃದುಕ್ತಂ ತತ್ಕಥಂ ತೇಷಾಂ ಸ್ಥೂಲದೇಹ ಬುದ್ಧ್ಯಾ ಪರದರ್ಶನ ಸಂವಾದಾದಿ ಸತ್ಯಸಂಕಲ್ಪನಂ ಘಟತೇ-ತತ್ರಾಹ—ವ್ಯವಹಾರೇಷ್ವಿತಿ। ಸತ್ಯಂ। ಸಮಾಧಿ ವಿವೇಕಕಾಲಯೋಸ್ತಥೈವ ವ್ಯುತ್ಥಾನ ವ್ಯವಹಾರಕಾಲೇ ಆತಿವಾಹಿಕಭಾವ ವಿಸ್ಮರಣ ಮಪ್ಯಸ್ತೀತಿ ತತ್ಸಂಕಲ್ಪನ ಸಂಭವ ಇತ್ಯರ್ಥಃ — ತಾ. ಪ್ರ.)

೨೧. ಆ ಸಿದ್ಧನನ್ನು ಕಂಡಾಗ ಈತನು ನನ್ನನ್ನು ನೋಡಲಿ ಎಂದು ನಾನು ಸಂಕಲ್ಪಿಸಿದೆನು. ಆಗ ಆತನು ನನ್ನನ್ನು ಕಂಡನು. ಆದರಿಂದ ಆತನು ನನ್ನನ್ನು ಕಂಡುದು ನನ್ನ ಸಂಕಲ್ಪದಿಂದಲೇ !

೨೨. ಜನರು ಬಹು ದೀರ್ಘಕಾಲದಿಂದ ಬೆಳೆದು ಬಂದ ಅಬ್ರಹ್ಮವಾಸನಾ ಸಂಪನ್ನರಾಗಿರುವರು. ಆದರಿಂದ ಅವರು ಸಂಕಲ್ಪಮಾಡಿದ ಕೂಡಲೇ ಅರ್ಥವನ್ನು ಪಡೆಯಲಾರರು. ಆದೇ ಜನವು ಅಭ್ಯಾಸದಿಂದ ಆ ಅಬ್ರಹ್ಮವಾಸನೆಯನ್ನು ಶಿಥಿಲ ಪಡಿಸಿ ಇಲ್ಲದಂತೆ ಮಾಡಿದರೆ, ಸತ್ಯಕಾಮರಾಗುವರು.

ದ್ವಯೋಸ್ತು ಸಿದ್ಧಯೋಃ ಸಿದ್ಧವಿರುದ್ಧೇಪ್ಸಿತಯೋರ್ಮಿಥಃ ।
ಅಧಿಕೈಕಾವದಾತಾತ್ಮಾ ಜಯೀ ಪುರುಷಯತ್ನವಾನ್ ॥೨೩॥

ಭ್ರಮತಃ ಸಿದ್ಧಸೇನಾಸು ಲೋಕಪಾಲಪುರೀಷು ಮೇ ।
ವಿಸ್ಮೃತಾ ವ್ಯವಹಾರೌಘೈಃ ಸಾತಿವಾಹಿಕತಾತ್ಮನಃ ॥೨೪॥

ಯದಾ ತದಾಹಮುಪರ್ಯೈರ್ವ್ಯವಹರ್ತುಂ ಮಹಾಂಬರೇ ।
ಪ್ರವೃತ್ತೋ ನ ಚ ಮಾಂ ಕಶ್ಚಿತ್ತತ್ರ ಪಶ್ಯತಿ ಚಂಚಲಂ ॥೨೫॥

ಅತ್ಯಂತಮಪ್ಯಾರಟತಃ ಶಬ್ದೋ ನ ಶ್ರೂಯತೇ ಮಮ ।
ಕೇನಚಿತ್ಸುರಲೋಕೇಷು ಸ್ವಪ್ನಪುಂಸ ಇವಾನಘ ॥೨೬॥

---

೨೩. ಪರಸ್ಪರ ವಿರೋಧವಾಗಿ ಸಂಕಲ್ಪವನ್ನಾಡುವ ಇಬ್ಬರು ಸಿದ್ಧರಲ್ಲಿ ಯಾವನಿಗೆ ಆತ್ಮಜ್ಞಾನವು ಅಧಿಕವಾಗಿರುವುದೋ, ಅಂತಹ ಯತ್ನಶಾಲೀ ಪುರುಷನೇ ಗೆಲ್ಲುವನು.

೨೪. ಸಿದ್ಧರ ಗುಂಪುಗಳಲ್ಲಿಯೂ ಲೋಕಪಾಲಕರ ಪಟ್ಟಣಗಳಲ್ಲಿಯೂ ಸಂಚರಿಸುತ್ತಿದ್ದಾಗ, ವ್ಯವಹಾರಗಳಲ್ಲಿ ನಾನು ಆತಿವಾಹಿಕದೇಹಿ ಎಂಬುದನ್ನು ನಾನು ಮರೆತುಹೋದೆನು.

೨೫. ನಾನು ಇತರರೊಡನೆ ವ್ಯವಹಾರ ಮಾಡಬೇಕೆಂದು ಹೊರಟರೂ, ನಾನು ಚಂಚಲನಾಗಿದ್ದೆನಾಗಿ ನನ್ನನ್ನು ಯಾರೂ ನೋಡಲಿಲ್ಲ

೨೬. ನಾನು ಆ ದೇವಲೋಕದಲ್ಲಿ ಬೇಕಾದ ಹಾಗೆ ಕೂಗುತ್ತಿದ್ದರೂ ನನ್ನ ಶಬ್ದವೇ ಯಾರಿಗೂ ಕೇಳಿಸಲಿಲ್ಲ. ಸ್ವಪ್ನಪುರುಷನಂತೆ, ಎಲೈ ಅನಘನೇ, ನನ್ನ ಗತಿಯೂ ಆಯಿತು.

ಅನಷ್ಟಬ್ಧಂ ಪ್ರವೃತ್ತಸ್ಯ ನಾನ್ಯಾವಷ್ಟಬ್ಧಯೇ ಮಮ ।
ಸಂಪದ್ಯತೇ ಕಿಂಚಿದಪಿ ಮನೋಮನನದೇಹಿನಃ ॥೨೭॥

ಏವಂ ವ್ಯೋಮಪಿಶಾಚೋಽಹಂ ಸಂಪನ್ನೋ ರಘುನಂದನ ।
ಮಯಾನುಭೂತಾ ಕಾಪ್ಯೇಷಾ ದೇವಾಗಾರಪಿಶಾಚತಾ ॥೨೮॥

ಶ್ರೀರಾಮ ಉವಾಚ—

ಪಿಶಾಚಾಃ ಸಂತಿ ಲೋಕೇಽಸ್ಮಿನ್ನಿಮಾಕಾರಾಃ ಕಿಮಾಸ್ಪದಾಃ ।
ಕಿಂಜಾತೀಯಾಃ ಕಿಮಾಚಾರಾಃ ಕೀದೃಶಾಃ ಕೀದೃಶಾಶಯಾಃ ॥೨೯॥

ಶ್ರೀ ವಸಿಷ್ಠ ಉವಾಚಃ—

ಪಿಶಾಚಾಃ ಸಂತಿ ಲೋಕೇಽಸ್ಮಿನ್ಯಾದೃಶಾಸ್ತಾದೃಶಾನ್ ಶೃಣು ।
ನ ಸಭ್ಯೋಽಸೌ ನ ಯೋ ವಕ್ತಿ ಪ್ರಸಂಗಾಪತಿತಂ ವಚಃ ॥೩೦॥

---

೨೭. ನಾನು ಇನ್ನೊಬ್ಬರಿಗೆ ಸಹಾಯ ಮಾಡಬೇಕೆಂದು ಕೈನೀಡಿದರೂ, ಕೇವಲ ಮನೋಮನನ ದೇಹಿಯಾದುದರಿಂದ ನಾನು ಏನೂ ಮಾಡಲಾಗಲಿಲ್ಲ. ಅವರಿಗೆ ನನ್ನಿಂದ ಯಾವ ಪ್ರಯೋಜನವೂ ಇಲ್ಲವಾಯಿತು.

೨೮. ಎಲೈ ರಘುನಂದನನೇ, ಹೀಗೆ ನಾನು ವ್ಯೋಮ ಪಿಶಾಚಿಯಂತಾದೆನು. ದೇವಲೋಕದಲ್ಲಿ ಹೀಗೆ ನಾನು ಪಿಶಾಚತೆಯನ್ನು ಅನುಭವಿಸಿದೆನು.

ಶ್ರೀರಾಮನು ಕೇಳಿದನು:—

೨೯. ಪಿಶಾಚಗಳು ಲೋಕದಲ್ಲಿ ಉಂಟೆ ? ಇದ್ದರೆ ಅವುಗಳ ಆಕಾರವೇನು ? ಅವುಗಳಿಗೆ ಆಶ್ರಯವು ಯಾವುದು ? ಅವು ಯಾವ ಜಾತಿಗೆ ಸೇರಿದವು ? ಅವುಗಳ ಆಚಾರವೇನು ? ಅವು ಹೇಗೆ ಇರುವುವು? ಅವುಗಳ ಜೀವನಾಶಯುವಾದರೂ ಏನು ?

ಶ್ರೀ ವಸಿಷ್ಠನು ಹೇಳಿದನು: —

೩೦. ಪಿಶಾಚಗಳು ಈ ಲೋಕದಲ್ಲಿ ಉಂಟು. ಅವು ಯಾವವು ಎಂಬುದನ್ನು ಕೇಳು. ಪ್ರಸಂಗವಶವಾಗಿ ಬಂದ ಮಾತನ್ನು ಹೇಳದಿದ್ದರೆ ಅವನು ಸಭ್ಯನಲ್ಲ.

ಪಿಶಾಚಾಃ ಕೇಚಿದಾಕಾಶಸದೃಶಾಃ ಸೂಕ್ಷ್ಮದೇಹಕಾಃ ।
ಹಸ್ತಪಾದಾದಿಸಂಯುಕ್ತಾಃ ಪಶ್ಯಂತಿ ತ್ವಮಿವಾಕೃತಿಂ ॥೩೧॥

ಛಾಯವಾ ಭಯದಾಯಿನ್ಯಾ ತ್ವನ್ಯತ್ರ ಭ್ರಮರೂಪಯಾ ।
ತೇ ಚಿತ್ತಾಕ್ರಮಣಂ ಕೃತ್ವಾ ಬೋಧಯಂತಿ ನರಾಶಯಂ ॥೩೨॥

---

(ಶ್ರೋತುಃ ಪ್ರಮಯಾ ಹಿ ಅರ್ಥಸ್ಯ ಯಾಥಾರ್ಥ್ಯಗ್ರಹಃ । ನಚಶ್ರೋತುಃ ಪ್ರಾಸಂಗಿಕಾರ್ಥ ಜಿಜ್ಞಾಸಾಯಾಮಜಿಜ್ಞಾಸಿತೇಽರ್ಥಾಂತರೇ ವಾಕ್ಯಾತ್ಪ್ರಮೋದ್ಭವತೇ, ಇತಿ ಅನವಧೇಯ ವಚನೋಽಸೌ ಉನ್ಮತ್ತವದುಪೇಕ್ಷ್ಯೇತ ಇತಿ । ತಥಾಚ ಆಹು ರ್ವಾಚಸ್ಪತಿಮಿಶ್ರಾಃ—"ಪ್ರತಿಪಿತ್ಸಿತಮರ್ಥಂ ಪ್ರತಿಪಾದಯನ್ ಪ್ರತಿಪಾದಯಿತಾ ಅವಧೇಯ ವಚನೋ ಭವತಿ। ಅಪ್ರತಿಪಿತ್ಸಿತಂತು ಪ್ರತಿಪಾದಯನ್ ನಾಸೌ ನ ಲೌಕಿಕೋ ನಪರೀಕ್ಷಕ ಇತ್ಯುನ್ಮತ್ತವದುಪೇಕ್ಷ್ಯೇತ" ಇತಿ—ತಾ. ಪ್ರ.)

೩೧. ಕೆಲವು ಪಿಶಾಚಗಳು ಆಕಾಶದಂತೆ ಸೂಕ್ಷ್ಮದೇಹಿಗಳಾಗಿರುವುವು. ಹಸ್ತಪಾದಾದಿಗಳನ್ನುಳ್ಳವಾಗಿ ನೀನು ಹೇಗೆ ಆಕೃತಿಯನ್ನು ನೋಡಬಲ್ಲೆಯೋ ಹಾಗೆಯೇ ನೋಡಬಲ್ಲವವಾಗಿರುವುವು.

೩೨. ತಮ್ಮ ನೆರಳು ಬೀಳುತ್ತಿದ್ದ ಹಾಗೆಯೇ ಭಯೋತ್ಪಾದನ ಮಾಡುತ್ತ, ಇನ್ನು ಕೆಲವು ಕಡೆ ಭ್ರಾಂತಿಯನ್ನುಂಟುಮಾಡುತ್ತ, ಚಿತ್ತವನ್ನುಆಕ್ರಮಿಸಿ ಮನುಷ್ಯರ ಹೃದಯುವನ್ನು ಹಿಡಿಯುವುವು.

(ಯದಿತೇ ಮನೋಮಾತ್ರಮಯಾ ದೇಹಾಸ್ತರ್ಹಿ ಅನ್ಯೇಷಾಮಾಕ್ರಮಣಂ ಕಥಂ ಕುರ್ವಂತಿ । ಮನಸೋ ಬಹಿರಾಕ್ರಮಣಾದ್ಯ ಸಾಮರ್ಥ್ಯಾದಿತ್ಯತ ಆಹ ಛಾಯ ಯೇತಿ। ತೇಪಿಶಾಚಾ ಅನ್ಯತ್ರ ನರಾಂತರೇ ತದೀಯಚಿತ್ತ ಭ್ರಮರೂಪಯಾ ಅತ ಏವ ನಾನಾಭಯದಾಯಿನ್ಯಾ ಸ್ವಚ್ಛಾಯಯಾ ಪ್ರತಿಬಿಂಬೇನಾನು ಪ್ರವಿಶ್ಯ ತದೀಯ ಚಿತ್ತೇ ತಾದಾತ್ಮ್ಯಮಿವಾಪದ್ಯ ತಸ್ಯ ನರಸ್ಯ ಆಶಯಂ ದುಃಖ ಭೋಗಪ್ರದಂ ಕರ್ಮ ಕಾಮವಾಸನಾದಿಕಂ ನಾನಾಭ್ರಾಂತಿ ಚೇಷ್ಟಾದ್ಯನು ರೂಪತಯಾ ಉದ್ಬೋದಯಂ ತೀತ್ಯರ್ಥಃ—ತಾ. ಪ್ರ.)

ಘ್ನಂತ್ಯದಂತಿ ಪಿಬಂತ್ಯಾಶು ಲಘುಸತ್ತ್ವಬಲಂ ಜನಂ ।
ಬಲಂ ಸತ್ತ್ವಮಥೋ ಜೀವಾನ್ಹಿಂಸಂತ್ಯಾಕ್ರಮ್ಯ ಚಿತ್ತಕಂ ॥೩೩॥

---

(ಈ ಲೇಖಕನು ಹಿಂದೊಮ್ಮೆ ಪಿಶಾಚಗಳ ವಿಚಾರವಾಗಿ ಕೆಲವು ಅನುಭವಗಳನ್ನು ಪಡೆದಿರುತ್ತಾನೆ. ಒಂದು ಪಿಶಾಚದೊಡನೆ ಮಾತನಾಡಿ ಸಂಗ್ರಹಿಸಿದ ವಿಷಯವಿದು:—"ಪಿಶಾಚಗಳ ದೇಹವು ಗಾಳಿಗಿಂತ ಹಗುರವಾಗಿರುತ್ತದೆ. ಅವಕ್ಕೆ ಕರಚರಣಾದಿಗಳುಂಟಾದರೂ ಗ್ರಹಣಾದಿಗಳನ್ನು ಮಾಡಲಾರವು. ಅವಕ್ಕೆ ಸ್ಪರ್ಶಾದಿ ಸುಖಗಳನ್ನು ಅನುಭವಿಸಬೇಕೆಂದು ತೋರಿದಾಗ ಅವು ಮನುಷ್ಯ ದೇಹದ ಸಹಾಯವನ್ನು ಅಪೇಕ್ಷಿಸುವುವು. ಆಗ ಬಲಭುಜದ ಮೇಲಿರುವ ಸಂದಿನಿಂದ ದೇಹಸೊಳಕ್ಕೆ ಪ್ರವೇಶಿಸುವುವು. (ನಾವು ಇತರರಲ್ಲಿ ದೇವತೆಗಳನ್ನು ಆವಾಹನ ಮಾಡುವಾಗ, ಅವರು ಪ್ರವೇಶಿಸುವುದೂ ಹೀಗೆಯೇ!) ಹೃದಯವನ್ನು ಮೊದಲು ಹಿಡಿಯುವುವು : ಅನಂತರ ದೇಹವೆಲ್ಲಾ ಅವುಗಳ ಸ್ವಾಧೀನವಾಗುವುದು. ಅಲ್ಲಿದ್ದ ದೇಹವಾಸನಾಪೂರ್ವವಾದ ಅಹಂಕಾರವು ಮೂರ್ಛಿತವಾಗಿ, ಮತ್ತೊಂದು ಅಹಂಕಾರವು ಆರೋಪಿತವಾಗುವುದು. ಆಗ ಸರ್ವವೂ ಅದರ ವಶವಾಗಿ, ಅದು ದೇಹದಲ್ಲಿ ವ್ಯಾಪಾರ ಮಾಡುವುದು. ಆಗ ಪ್ರಾಣವು ಒಂದಕ್ಕೆರಡಾಗಿ ದುಡಿಯುವುದು. ಅದರಿಂದ ಪಿಶಾಚವು ಬಿಟ್ಟಾಗ ದೇಹವು ನಿಶ್ಶಕ್ತವಾಗುವುದು. ದೇಹವು ಹಿಂಡಿದಂತಾಗಿ ಮೊಕವು ಬಿಳುಪಾಗುವುದು : ಸೊರಗುವುದು. ಪಿಶಾಚ ಬಂದವರು ಕಾದು ಮರಳುತ್ತಿರುವ ಎಣ್ಣೆಯಲ್ಲಿ ಕೈಯದ್ದಿದರೂ ಕೈಸುಡದಿರುವುದೂ ದೂರಶ್ರವಣ, ದೂರದರ್ಶನ, ಭವಿಷ್ಯತ್ಕಥನ, ಮೊದಲಾದ ಸಿದ್ಧಿಗಳನ್ನು ಪಡೆದಿರುವುದು ಈತನು ಪ್ರತ್ಯಕ್ಷವಾಗಿ ಅನುಭವಿಸಿದ್ದಾನೆ.)

೩೩. ಹಾಗೆ ಪರದೇಹವನ್ನು ಪ್ರವೇಶಿಸಿದಾಗ ಆ ದೇಹಕ್ಕೆ ಮರಣಕಾಲವು ಬಂದಿದ್ದರೆ, ಸಾಯಿಸುವುವು. ಆ ದೇಹದಲ್ಲಿರುವ ಮಾಂಸಾದಿಗಳನ್ನು ತಿನ್ನುವುವು. ರುಧಿರಾದಿಗಳನ್ನು ಕುಡಿಯುವುವು. ಧಾತು ದೇಹಬಲವನ್ನೂ ಮನಸ್ಥೈರ್ಯವನ್ನೂ ಅಪಹರಿಸುವುವು. ಚಿತ್ತವನ್ನು ಆಕ್ರಮಿಸಿ ಜೀವರನ್ನು ಹಿಂಸಿಸುವುವು.

ಆಕಾಶಾಸದೃಶಾಃ ಕೇಚಿತ್ಕೇಚಿನ್ನೀಹಾರಸಂನಿಭಾಃ ।
ಕೇಚಿತ್ಸ್ವಪ್ನನರಾಕಾರಾಃ ಸಾಕಾರಾ ಅಪಿ ಖಾತ್ಮಕಾಃ ॥೩೪॥

ಕೇಚಿದಭ್ರದಲಪ್ರಖ್ಯಾಃ ಕೇಚಿತ್ಪವನದೇಹಿಕಾಃ ।
ಕೇಚಿದ್ಭ್ರಮಾತ್ಮಕಾ ಏವ ಸರ್ವೇ ಬುದ್ಧಿಮನೋಮಯಾಃ ॥೩೫॥

ಗ್ರಹೀತುಂ ನೈವ ಯುಜ್ಯಂತೇ ಗ್ರಹೀತುಂ ಶಕ್ನುವಂತಿ ನೋ ।
ಆಕಾಶಶೂನ್ಯವಪುಷಃ ಪಶ್ಯಂತ್ಯಾಕೃತಿಮಾತ್ಮನಃ ॥೩೬॥

---

೩೪. ಆ ಪಿಶಾಚಗಳಲ್ಲಿ ಕೆಲವು ಆಕಾಶ ಸದೃಶವು. ಇನ್ನುಕೆಲವು ಆವಿಯಂತಿರುವುವು. ಇನ್ನುಕೆಲವು ಸ್ವಪ್ನಮನುಷ್ಯರಂತಿರುವುವು. ಅವು ಸಾಕಾರವಾದರೂ ಆಕಾಶಾತ್ಮಗಳಾಗಿರುವುವು.

(ವಿಚಿತ್ರ ಕರ್ಮಾನುಸಾರೇಣ ತೇಷಾಂ ಸೌಕ್ಷ್ಮ್ಯತಾರತಮ್ಯೇನ ದೇಹಾರಂಭಾತ್ ಅಂತರ್ಧಾನಾದಿ ಶಕ್ತಿತಾರತಮ್ಯೇನ ನಾನಾ ವಾಸನಾನುಸಾರಿ ರೂಪಭೇದೇನಚ ಅವಸ್ಥಾನಂ ಇತಿಭಾವಃ-ತಾ. ಪ್ರ.)

೩೫. ಕೆಲವು ಮೇಘದ ತುಂಡುಗಳಂತೆ ಇರುವುವು. ಕೆಲವು ಗಾಳಿಯಂತೆ ದೇಹವುಳ್ಳವು. ಕೆಲವು ಭ್ರಾಂತ್ಯಾತ್ಮಕವಾದವು (ನಿಜವಲ್ಲದವು) ಇವೆಲ್ಲವೂ ಬುದ್ಧಿ ಮನೋಮಯಗಳು.

(ಭ್ರಮಾತ್ಮಕಾಃ ಆಕ್ರಮಣೀಯ ಪುರುಷ ಭ್ರಾಂತ್ಯನುಸಾರಿ ದೇಹಾ ಇತಿಯಾವತ್.—ತಾ. ಪ್ರ)

(ಬುದ್ಧಿ ಮನೋಮಯಗಳು ಎಂದರೆ, ಅಹಂಕಾರಸ್ಥಾನವು ಬುದ್ಧಿ. ಸಂಕಲ್ಪ ಸ್ಥಾನವು ಮನಸ್ಸು. ಚಿತ್ತವು ಮನಸ್ಸಿನಲ್ಲಿಯೇ ಇರುವುದು )

೩೬. ಅವು ಗ್ರಾಹ್ಯಗಳೂ ಅಲ್ಲ : ಗ್ರಹಿಸುವುದಕ್ಕೆ ಆಗುವುದೂ ಇಲ್ಲ. ಏಕೆಂದರೆ ಅವು ಆಕಾಶದಂತೆ ಬಯಲಾದ ಶೂನ್ಯದೇಹಿಗಳು. ಆದರೂ ಅವು ಪರಸ್ಪರ ನೋಡಿಕೊಳ್ಳಬಲ್ಲುವು.

(ಪಶ್ಯಂತಿ ಸ್ವಯಮನುಭವಂತಿ । ಪರಸ್ಪರಂಚ ಪಶ್ಯಂತಿ—ತಾ. ಪ್ರ.)

ಶೀತಾತಪಾದಿವಿಹಿತಂ ಸುಖಂ ದುಃಖಂ ವಿದಂತಿ ಚ ।
ಪಾತುಮತ್ತುಮವಷ್ಟಬ್ಧುಮಾಹಿತಂ ಶಕ್ನುವಂತಿ ನೋ ॥೩೭॥

ಇಚ್ಛಾದ್ವೇಷಭಯಕ್ರೋಧಲೋಭಮೋಹಸಮನ್ವಿತಾಃ ।
ಮಂತ್ರೌಷಧತಪೋದಾನಧೈರ್ಯಧರ್ಮವಶೀಕೃತಾಃ ॥೩೮॥

ಸತ್ವಾವಷ್ಟಂಭಯಂತ್ರೇಣ ಮಂತ್ರೇಣಾರಾಧಿತೇನ ವಾ ।
ದೃಶ್ಯಂತೇಪಿ ಚ ಗೃಹ್ಯಂತೇ ಕದಾಚಿತ್ಕೇನಚಿತ್ಕ್ವಚಿತ್ ॥೩೯॥

ದೇವಯೋನಿರ್ಹಿ ಸಾ ತೇನ ಕೇಚಿದ್ದೇವೋಪಮಾದಯಃ ।
ಕೇಚಿನ್ನರಸಮಶ್ರೀಕಾಃ ಕೇಚಿನ್ನಾಗಸಮನ್ವಯಾಃ ॥೪೦॥

---

೩೭. ಅವುಗಳಿಗೂ ಶೀತ, ಉಷ್ಣ ಮೊದಲಾದುವುಗಳಿಂದ ಆಗುವ ಸುಖ ದುಃಖಗಳು ತಿಳಿಯುವುದುಂಟು, ಆದರೂ (ಸ್ವತಂತ್ರವಾಗಿ) ಕುಡಿಯುವುದು, ತಿನ್ನುವುದು, ಸ್ವತಂತ್ರವಾಗಿ ನಿಲ್ಲುವುದು, ಕೊಟ್ಟು ತೆಗೆದುಕೊಳ್ಳುವುದು ಇವನ್ನು ಮಾಡಲಾರವು.

೩೮. ಇಚ್ಛಾ ದ್ವೇಷ ಭಯ ಕ್ರೋಧ ಲೋಭ ಮೋಹಗಳು ಅವುಗಳಿಗುಂಟು ಮಂತ್ರ, ಔಷಧ, ತಪಸ್ಸು, ದಾನ, ಧೈರ್ಯ, ಧರ್ಮಗಳಿಗೆ ವಶವಾಗುವುವು.

೩೯. ಸತ್ವಾವಷ್ಟಂಭದಿಂದಲಾಗಲಿ, ಯಂತ್ರದಿಂದಲಾಗಲೀ ಮಂತ್ರದಿಂದ ಆರಾಧಿಸಿದರಾಗಲೀ, ಒಂದೊಂದು ವೇಳೆ, ಕೆಲವರಿಗೆ, ಅಲ್ಲಲ್ಲಿ ಕಾಣುವುದೂ ವಶವಾಗುವುದೂ ಉಂಟು.

(ಸತ್ವಾವಷ್ಟಂಭೋ ಯೋಗಧಾರಣಾಭೇದಃ । ಯಂತ್ರ ಭೂತದರ್ಶನಾನುಕೂಲ ಬೀಜಾಕ್ಷರ ಘಟಿತಂ ರಜತಾದಿ ಪತ್ರ ಲಿಖಿತಂ ಕಂಠಾದೌ ಧಾರ್ಯಮಾಣಂ ತೇನ । ಗೃಹ್ಯಂತೇವಶೀಕೃತ್ಯ ಸೇವಾದೌ ನಿಯುಜ್ಯಂತೇ । ಕೇನಚಿದ್ಭೂತವಿದ್ಯಾವತಾ ಪುರುಷೇಣ-ತಾ. ಪ್ರ)

೪೦. ಆಪಿಶಾಚವೆಂಬುದು ದೇವಜಾತಿಯು. ಆದರಿಂದ ಕೆಲವು ದೇವತೆಗಳಂತಿರುವುವು. ಕೆಲವು ಮಾನುಷ್ಯ ಪ್ರಭಾವವುಳ್ಳವು. ಕೆಲವು ನಾಗಗಳಂತಿರುವುವು.

ಶ್ವಶೃಗಾಲೋಪಮಾಃ ಕೇಚಿದ್ಗ್ರಾಮಜಂಗಲವಾಸಿನಃ ।
ಕುಲ್ಯಾವಕರರಥ್ಯಾಸು ವಸಂತಿ ನಿರಯೇಷು ಚ ॥೪೧॥

ಏತದಾಸ್ಪದಮೇತೇಷಾಮಿತ್ಯಾಕಾರಾಃ ಪ್ರಕೀರ್ತಿತಾಃ ।
ಪಿಶಾಚಾ ಏವಮಾಚಾರಾ ಜನ್ಮೈಷಾಂ ಶೃಣು ಯತ್ತಾವಿದಂ ॥೪೨॥

ಅಚೇತ್ಯಚಿನ್ಮಯಂ ಬ್ರಹ್ಮ ಸರ್ವಶಕ್ತಿಸ್ವಭಾವತಃ ।
ಯತ್ಸ್ಥಿತಂ ಬುದ್ಧಮೇವಾಂತಶ್ಚೇತ್ಯಂ ಸಂಕಲ್ಪಯನ್ನಿವ ॥೪೩॥

---

(ಏಕಾದಶ ದೇವಯೋನಿ ಭೇದಾಂತರ್ಗತತ್ವಾದಣಿಮಾದ್ಯೈಶ್ವರ್ಯ ತಾರತಮ್ಯೇನ ಸುಖಭೋಗೋಪಿ ತೇಷ್ವಸ್ತೀತಿ ಸೂಚಯತಿ— ತಾ. ಪ್ರ.)

೪೧. ಕೆಲವು ಗ್ರಾಮ, ಅರಣ್ಯಗಳಲ್ಲಿ ವಾಸಮಾಡುತ್ತ ನಾಯಿನರಿಗಳಂತಿರುವುವು. ಕಾಲುವೆ, ಹಳ್ಳ, ಚೌಕಗಳಲ್ಲಿ, ನರಕ ಸಮವಾದ ಪ್ರದೇಶಗಳಲ್ಲಿ ಇರುವುವು.

೪೨. ಹೀಗೆ ಅವು ಇರುವ ಸ್ಥಳಗಳು, ಅವುಗಳ ಆಕಾರಾದಿಗಳು, ಇವುಗಳನ್ನೆಲ್ಲ ಹೇಳಿದೆನು. ಪಿಶಾಚಗಳ ಆಚಾರವು ಹೀಗೆ. ಇನ್ನು ಅವುಗಳ ಜನ್ಮವನ್ನು ಕುರಿತು ಹೇಳುವೆನು. ಕೇಳು.

೪೩. ಚೇತ್ಯವಲ್ಲದ ಚಿತ್ತೇ ಬ್ರಹ್ಮವು ಅದರ ಸ್ವಭಾವವೇ ಸರ್ವಶಕ್ತಿಸಂಪನ್ನತೆಯು. ಇದು (ಚೇತ್ಯವಾಗಿ) ಸಂಕಲ್ಪವನ್ನು ಮಾಡುತ್ತಿರುವಂತೆ, ಒಳಗೆ ಬುದ್ಧವಾಗಿ ಕುಳಿತಿರುವುದು. ಅದೇ ಜೀವವು.

(ತತ್ರ ಪ್ರಥಮಂ ಮಾಯಾಶಬಲಸ್ಯ ಬ್ರಹ್ಮಣೋ ಜೀವಭಾವಪ್ರಾಪ್ತಿಂ ಮನಆದ್ಯುಪಾದ್ಯುದ್ಭವಂ ಕ್ರಮೇಣ ದರ್ಶಯತಿ-ಚೇತ್ಯಚಿನ್ಮಯಂ। ಚೇತ್ಯಂಸಂಕಲ್ಪಯನ್ ಮನಃ ಪುರುಷ ಇವ ಬುದ್ಧಂ ಸತ್, ತದ್ರೂಪೇಣ ಯತ್ ಸ್ಥಿತಂ ತದೇವ ಜೀವಂ ಪ್ರಥಮಾಂಕುರಂ ವಿದ್ಧಿ- ತಾ. ಪ್ರ.)

ತಂ ಜೀವಂ ವಿದ್ಧಿ ಸ ಪ್ರೌಢಸ್ತ್ವಹಂಕಾರ ಇತಿ ಸ್ಮೃತಃ ।
ಸೋಽಹಂಕಾರಃ ಸ್ಮೃತಃ ಪುಷ್ಟೋ ಮನ ಇತ್ಯುದಿತಾತ್ಮಭಿಃ ॥೪೪॥

ಸ ಏವ ಕಥ್ಯತೇ ಬ್ರಹ್ಮಾ ಸಂಕಲ್ಪಾಕಾಶರೂಪವಾನ್ ।
ಅಸದೇವಾಸತೋ ಬೀಜಂ ಜಗತೋ ವಿಗತಾಕೃತಿಃ ॥೪೫॥

ಏವಂ ಮನಃಸ್ಥಿತೋ ಬ್ರಹ್ಮಾ ಸದೇಹೋಽಪ್ಯಮಲಂ ನಭಃ ।
ತತ್ಸ್ವಪ್ನಪುರುಷಾಕಾರಃ ನನ್ನೇವಾಸದ್ವಪುಃ ಸದಾ ॥೪೬॥

---

೪೪. ಆ ಜೀವವೆನ್ನುವುದು ಪ್ರೌಢವಾದ ಅಹಂಕಾರವು ಮನಸ್ಸು ಪುಷ್ಟ ವಾದರೆ ಅದೇ ಅಹಂಕಾರವು ಎಂದು ಆತ್ಮಜ್ಞಾನ ಸಂಪನ್ನರು ಹೇಳುವರು.

(ಪ್ರೌಢಃ, ಅಭಿಮಾನೋರ್ಜಿತಃ । ಅಜ್ಞಾನ ತಿಮಿರ ನಾಶಾಯ ತತ್ತ್ವ ಸಾಕ್ಷಾತ್ಕಾರ ಧೃತ್ಯಾರೂಢತಯಾ ।ಉದಿತ ಆವಿರ್ಭೂತ ಆತ್ಮಾ ಯೇಷಾಂ ತೈಃ— ತಾ. ಪ್ರ.)

೪೫. ಆ ಜೀವನೇ ಸಮಷ್ಟಿರೂಪದಲ್ಲಿ ಸಂಕಲ್ಪವೆಂಬ ಆಕಾಶದ ರೂಪದಲ್ಲಿ ರುವ ಚತುರ್ಮುಖ ಬ್ರಹ್ಮನು. ತಾನು ವಾಸ್ತವವಾಗಿ ಇಲ್ಲದೆಯೇ ಇದ್ದುಕೊಂಡು ಆಕೃತಿರಹಿತನೇ ಆಗಿದ್ದರೂ, ಅಸತ್ಯವಾದ ಜಗತ್ತಿನ ಬೀಜವಾಗುವನು.

(ನಮನೋರೂಪ ಜೀವಏವ ಸಮಷ್ಟ್ಯಾತ್ಮನಾ ಬ್ರಹ್ಮಾ ಕಥ್ಯತೇ । ಅಸತೋ ಜಗತಃ ಅಸನ್ಮನ ಏವ ಬೀಜಂ—ತಾ. ಪ್ರ.)

೪೬. ಹೀಗೆ ಮನಸ್ಸಾಗಿರುವ ಬ್ರಹ್ಮನು ದೇಹಿಯಾಗಿದ್ದರೂ ಇನ್ನೂ ಶುದ್ಧ ವಾದ ಆಕಾಶವೇ! ಸ್ವಪ್ನಪುರುಷನಂತೆ ಆಕಾರವುಳ್ಳವನಾಗಿರುವುದರಿಂದ ಯಾವಾ ಗಲೂ ಆತನು ನಿರ್ದೇಹಿಯೇ !

ಪೃಥ್ವ್ಯಾದಿಮೂರ್ತಿರಹಿತಸ್ತ್ವಾತಿವಾಹಿಕದೇಹವಾನ್ ।
ಪೃಥ್ವ್ಯಾದಯಃ ಕಿಲ ಕುತಃ ಸಂಕಲ್ಪಪುರುಷಸ್ಯ ಖೇ ॥೪೭॥

ಭವನ್ಮನೋ ಯಥಾಕಾಶಪುರಂ ಪಶ್ಯತಿ ಕಲ್ಪಿತಂ ।
ತಥಾ ಮನೋವಿರಂಚಿತ್ವಂ ಪಶ್ಯತ್ಯಾತ್ಮನಿ ಕಲ್ಪಿತಂ ॥೪೮॥

ಯದ್ವೇತ್ತಿ ಕಲ್ಪಿತಂ ತತ್ಸತ್ಪಶ್ಯತ್ಯನುಭವತ್ಯಪಿ ।
ಯೋ ಯಾವನ್ಮಾತ್ರಕಸ್ತತ್ಸ ಕಸ್ಮಾತ್ಕಿಲ ನ ಪಶ್ಯತಿ ॥೪೯॥

---

೪೭. ಪೃಥಿವ್ಯಾದಿ ಪಂಚಭೂತಗಳಿಂದ ಆದ ಮೂರ್ತಿಯು ಅವನಿಗಿಲ್ಲ. ಕೇವಲ ಅತಿವಾಹಿಕ ದೇಹದಿಂದ ಮಾತ್ರ ಕೂಡಿರುವನು. ಸಂಕಲ್ಪಪುರುಷನಾಗಿ ಆಕಾಶದಲ್ಲಿರುವವನಿಗೆ ಪೃಥಿವ್ಯಾದಿಗಳ ಸಂಯೋಗವು ಎಲ್ಲಿಂದ ಬಂದೀತು ?

೪೮. ನಿನ್ನ ಮನಸ್ಸು ಸ್ವಯಂಕಲ್ಪಿತವಾದ ಆಕಾಶಪುರವನ್ನು ನೋಡು ವಂತೆ, ಆತ್ಮನಲ್ಲಿಯೇ ಕಲ್ಪಿತವಾದ ಮನೋವಿರಂಚಿತ್ವವನ್ನೂ ನೋಡುವುದು.

೪೯. ಯಾವುದು ಕಲ್ಪಿತವನ್ನು ಅರಿಯಬಲ್ಲುದೋ ಅದು ಅದನ್ನು ಸತ್ಯ ವೆಂದೇ ನೋಡುವುದು. ಅನುಭವಿಸುವುದು. ಯಾವನು ತಾನು ಎಷ್ಟು ಅಂದು ಕೊಳ್ಳುವನೋ ಅಷ್ಟೇ ಆದರೂ ಚಿನ್ಮಾತ್ರನಾದುದರಿಂದ ಸ್ವಸಂಕಲ್ಪವನ್ನು ಅರ್ಥಾ ಕಾರವಾಗಿ ಕಂಡೇಕಾಣುವನು.

(ಅತಏವ ಸ ವಿರಿಂಚಃ ಯದ್ಯತ್ ಸ್ವಸಂಕಲ್ಪನಂ ವೇತ್ತಿ ತತ್ತದರ್ಥಾಕಾರೇಣ ಪಶ್ಯತ್ಯನುಭವತಿ । ಯೋ ಯಾವನ್ಮಾತ್ರಕೋ ಜೀವಃ ಪ್ರಸಿದ್ಧಃ ಸ ಸರ್ವೋಽಪಿ ಚಿಚ್ಚಿ ದ್ರೂಪಂ ಸದೇವ ಅತೋಽಜ್ಞಾನಶಕ್ತಿಮತ್ ತತ್ ಕಸ್ಮಾದ್ಧೇತೋಃ ನ ಪಶ್ಯತಿ (ಪಶ್ಯ ತ್ಯೇವೇತ್ಯರ್ಥಃ) —ತಾ. ಪ್ರ.)

ಸ ಯತ್ಪಶ್ಯತಿ ತತ್ರಾದೃಕ್ ಶೂನ್ಯಾತ್ಮಾ ಶೂನ್ಯಮಂಬರೇ ।
ಬ್ರಹ್ಮ ಬ್ರಹ್ಮಣಿ ವಾ ಬ್ರಹ್ಮಾ ತದಿದಂ ಜಗದುಚ್ಯತೇ ॥೫೦॥

ತಥಾ ಸಂಪ್ರತಿ ಭಾಸೋಽಸ್ಯ ಚಿರಕಾಲೈಕಭಾವನಾತ್ ।
ಘನೀಭೂತಃ ಸ್ಥಿತಃ ಪುಷ್ಟಃ ಸುದೀರ್ಘಸ್ವಪ್ನಸುಂದರಃ ॥೫೧॥

ಆತಿವಾಹಿಕದೇಹಸ್ಯ ತಸ್ಯ ತಚ್ಚಿರಭಾವನಾತ್ ।
ಸರ್ಗಾನುಭವನಂ ಭೂರಿ ಬ್ರಹ್ಮಣೋ ಬ್ರಹ್ಮರೂಪ್ಯಪಿ ॥೫೨॥

ಗತಂ ಪ್ರಕಟತೋತ್ಕರ್ಷಾದಾಧಿಭೌತಿಕದೇಹತಾಂ ।
ತೇನೈವ ಸರ್ಗ ಇತ್ಯುಕ್ತೋ ಭೇದಸಂತತಿಭಾಸುರಃ ॥೫೩॥

---

೫೦. ಆ ಬ್ರಹ್ಮನು ಯಾವದನ್ನು ನೋಡುವನೋ ಅದು ಆ ರೂಪವಾಗಿಯೇ ಕಾಣುವುದು. ಹಾಗೆ ಕಂಡರೂ, ಕಂಡವನು ಶೂನ್ಯಾತ್ಮ, ಕಂಡುದು ಶೂನ್ಯವಾದ ಅಂಬರದಲ್ಲಿ. ಬ್ರಹ್ಮವೇ ಬ್ರಹ್ಮದಲ್ಲಿಯೇ ಬ್ರಹ್ಮನಾಗಿ ಕಂಡಿತು. ಹಾಗೆ ಕಾಣಿಸಿಕೊಂಡುದೇ ಜಗತ್ತು.

೫೧. ಈ ಜಗತ್ತು ಇದೆಯೆಂದು ಬಹುಕಾಲದಿಂದಲೂ ಭಾವನೆಮಾಡಿ ಮಾಡಿ, ಅದು ಇದೆಯೆಂದೇ ಎಣ್ಣಿಸುತ್ತಿರುವುದು. ಆ ಭಾವನೆಯು ಘನೀಭೂತವಾಗಿ ಪುಷ್ಟವಾಗಿ ಬಹು ದೀರ್ಘಕಾಲ ಕಾಣಿಸಿದ ಸ್ವಪ್ನದಂತೆ ಸುಂದರವಾಗಿ ಇದ್ದುಬಿಟ್ಟಿರುವುದು.

೫೨. ಆತಿವಾಹಿಕದೇಹಿಯಾದ ಚತುರ್ಮುಖನಿಗೆ ಚಿರಭಾವನೆಯಿಂದ ಸರ್ಗದ ಅನುಭವವು ಇದ್ದೇಇರುವುದು. ಆತನು ಬ್ರಹ್ಮರೂಪಿಯಾದರೂ ಆತನಿಗೆ ಇದು ತಪ್ಪಿದ್ದಲ್ಲ.

೫೩. ಹಾಗೆ ಸಂಕಲ್ಪರೂಪವಾಗಿದ್ದುದೇ ಬಹುವಾಗಿ ಭಾವಿತವಾಗಿ ಸ್ಥೂಲವೂ ವಿಶಾಲವೂ ಆಗಿ (ಪ್ರಕಟತಾ–ಉತ್ಕರ್ಷತಾ) ಆದಿಭೌತಿಕ ದೇಹವನ್ನು ಪಡೆಯಿತು. ಅದರಿಂದಲೇ ಅದಕ್ಕೆ ಸರ್ಗ ಎಂದು ಹೆಸರಾಯಿತು. ಅದು ಭೇದ, ಸಂತತಿಗಳಿಂದ ಭಾಸುರವಾಗಿರುವುದು.

ಸ ಬ್ರಹ್ಮಾ ಬ್ರಹ್ಮಮಾತ್ರಾತ್ಮಾ ಬ್ರಹ್ಮಮಾತ್ರಾತ್ಮನೋಽಸ್ತ್ವಯೋಃ ।
ಅಜಾತಯೋರೇವ ಸದಾ ತದಾತ್ಮಜಗತೋರ್ದ್ವಯೋಃ ॥೫೪॥

ಅಭಿನ್ನಯೋರೇವ ಭೃಶಂ ಶೂನ್ಯತ್ವಾಂಬರಯೋರಿವ ।
ಐಕಾತ್ಮ್ಯೇನೈವ ವಸತೋಃ ಪವನಸ್ಪಂದಯೋರಿವ ॥೫೫॥

ವೇತ್ತಿ ಭೂತಮಯತ್ವಂ ತಸ್ಮಿನ್ಮಿಥ್ಯೈವ ನ ತು ವಾಸ್ತವಂ ।
ತಥಾ ಯಥಾ ತ್ವಂ ಸಂಕಲ್ಪಪುರುಷಸ್ಯ ಸತೋಽಸತಃ ॥೫೬॥

ತತಃ ಶರೀರಧಾತೂನಾಂ ತೇನ ಪೃಥ್ವ್ಯಾದಿಕಾಃ ಕೃತಾಃ ।
ಅಭಿಧಾಃ ಪಂಚ ಚಿತ್ಸ್ಪಷ್ಟಾ ಜಗದಿತ್ಯೇವ ತಾಃ ಸ್ಥಿತಾಃ ॥೫೭॥

---

೫೪ ಆದರೂ ಆ ಚತುರ್ಮುಖಬ್ರಹ್ಮನೂ ಬ್ರಹ್ಮವೇ! ಅವನು ಕಂಡ ಸರ್ಗವೂ ಬ್ರಹ್ಮವೇ! ಆ ಇಬ್ಬರೂ ಯಾವಾಗಲೂ ಅಜಾತರೇ! ಆ ಜೀವಜಗತ್ತುಗಳೆರಡೂ ಬೇರೆಬೇರೆಯಲ್ಲ; ಬ್ರಹ್ಮವೇ!

(ತದಾತ್ಮಾ ಜೀವಃ —ತಾ. ಪ್ರ.)

೫೫. ಜೀವ-ಜಗತ್ತುಗಳೆರಡೂ ಶೂನ್ಯತ್ವ ಅಂಬರಗಳಂತೆ ಅಭಿನ್ನಗಳು. ಅವು ಪವನಸ್ಪಂದಗಳಂತೆ ಏಕಾತ್ಮನಾ ಇರುವವು.

೫೬. ಜಗತ್ತಿನಲ್ಲಿ ಪೃಥಿವ್ಯಾದಿ ಭೂತಗಳು ಉಂಟಲ್ಲವೆ ಎಂದರೆ ಅದು ಮಿಥ್ಯಾ; ವಾಸ್ತವವಲ್ಲ. ನೀನು ಅಸತ್ತಾದ ಸಂಕಲ್ಪಪುರುಷನನ್ನು ಅನುಭವಕಾಲದಲ್ಲಿ ಮಾತ್ರ ನೋಡುತ್ತ ಸತ್ ಎಂಬಂತೆ ಅದು.

೫೭. ಬ್ರಹ್ಮನು ತನ್ನ ಶರೀರದಲ್ಲಿರುವ ಧಾತುಗಳನ್ನೇ ಪೃಥಿವ್ಯಾದಿ ಸಂಜ್ಞೆಗಳಿಂದ ಪೃಥಕ್ಕರಿಸಿ ಅದಕ್ಕೆ ಒಂದೊಂದು ಹೆಸರನ್ನು ಇಟ್ಟನು. ಅವು ಚಿತ್ತಿನಿಂದಲೇ ಪುಷ್ಟವಾದವು. ಆ ಪುಷ್ಟಸ್ವರೂಪವೇ ಜಗತ್ತು.

ಯಥಾ ತ್ವಸತ್ಯ ಏವಾಯಂ ಸಂಕಲ್ಪಃ ಸತ್ಯ ಏವ ತೇ ।
ತಥಾಸಾವಾತ್ಮಸಂಕಲ್ಪಂ ಸತ್ಯಮೇವಾನುಭೂತವಾನ್ ॥೫೮॥

ಸ ಸ್ವಯಂ ಚಿನ್ಮಯಾಕಾಶಃ ಸಸಂಕಲ್ಪಶ್ಚಿದಂಬರಂ ।
ಅತಃ ಸ್ವಪ್ನೋ ಜಗತ್ಸರ್ವಂ ಕೃತೌ ನಾಶೋದ್ಭವೌ ಸ್ಥಿತೌ ॥೫೯॥

ಯಥೈವೈತನ್ಮನಃ ಸತ್ಯಂ ತದಂಶಾಃ ಸತ್ಯಮೇವ ತೇ ।
ತಥೈವ ತತ್ಕೃತಾಶ್ಚಂದ್ರರುದ್ರಾರ್ಕೇಂದುಮರೀಚಯಃ ॥೬೦॥

ಏವಂಸ್ಥಿತೇ ಜಗಜ್ಜಾಲಂ ತನ್ಮನೋರಾಜ್ಯಮುಚ್ಯತೇ ।
ತಚ್ಚ ಶೂನ್ಯಂ ನಿರಾಲಂಬಮಾಕಾಶಕಚನಂ ಚಿತಿ ॥೬೧॥

---

೫೮. ಹೇಗೆ ಅಸತ್ಯವಾದ ಸಂಕಲ್ಪವೇ ನಿನಗೆ ಸತ್ಯವಾಗುವುದೋ ಹಾಗೆಯೇ ಆತ್ಮಸಂಕಲ್ಪವನ್ನೇ ಬ್ರಹ್ಮನೂ ಸತ್ಯಮಾಡಿಕೊಂಡು ಅನುಭವಿಸುವನು.

(ಯಥಾ ಅಸತ್ಯೋಽಪಿ ತೇ ಸಂಕಲ್ಪೋ ಮನೋರಾಜ್ಯ ಕೌತುಕಾದ್ಯರ್ಥ ಕ್ರಿಯಾಕಾರಿತ್ವಾತ್ ಸತ್ಯಏವಾನುಭೂಯತೇ ತ್ವಯಾ ತಥಾ ಅಸೌ ಬ್ರಹ್ಮಾಪಿ ಆತ್ಮನಃ ಸಂಕಲ್ಪಂ ಸತ್ಯಮಿತ್ಯೇವಾನುಭೂತವಾ್ । ತಸ್ಯ ಸಮಷ್ಟ್ಯಾತ್ಮತ್ವಾತ್ತು ತತ್ಸಂಕಲ್ಪಜಸ್ಯ ಸರ್ವಜನಸಾಧಾರಣಾರ್ಥ ಕ್ರಿಯೇತಿ ವಿಶೇಷ ಇತಿ ಭಾವಃ ॥
—ತಾ. ಪ್ರ.)

೫೯ ಆ ಚತುರ್ಮುಖಬ್ರಹ್ಮನು ತಾನೂ ಚಿನ್ಮಯನು. ಅದರಿಂದ ಅವನ ಸಂಕಲ್ಪವೂ ಚಿದಾಕಾಶವು. ಅದರಿಂದ ಸರ್ವ ಜಗತ್ತೂ ಸ್ವಪ್ನದಂತೆಯೇ ಚಿದಾಕಾಶರೂಪವು. ಸ್ಥಿತಿಯಲ್ಲಿಯೇ ನಾಶ-ಉದ್ಭವ ಎರಡೂ ಆಗುತ್ತಲೇ ಇರುವುವು.

೬೦. ಹೇಗೆ ಈತನ ಮನಸ್ಸು ಎಷ್ಟು ಸತ್ಯವೋ, ಆ ಮನಸ್ಸಿನಿಂದ ಹುಟ್ಟಿದ ಅಥವಾ ಹುಟ್ಟಿಬಂದ ತದಂಶಗಳೂ ಅಷ್ಟೇ ಸತ್ಯಗಳು. ಹಾಗೆಯೇ ಆ ಮನಸ್ಸಿನಿಂದ ಆದ ಚಂದ್ರ, ರುದ್ರ, ಅರ್ಕ, ಇಂದುಕಿರಣಗಳು ಎಲ್ಲವೂ ಅಷ್ಟೇ ಸತ್ಯಗಳು.

೬೧. ಹೀಗಿರುವುದರಿಂದ, ಈ ಜಗಜ್ಜಾಲವೆಲ್ಲವೂ ಆ ಬ್ರಹ್ಮನ ಮನೋರಾಜ್ಯವೆನ್ನಿಸಿಕೊಳ್ಳುವುದು. ಅದರಿಂದ ಅದು ಶೂನ್ಯವು. ನಿರಾಲಂಬವು. ಚಿತ್ತಿನಲ್ಲಿ ಆದ ಆಕಾಶಕಚನವು.

ಯಥಾ ಸ್ವಪ್ನಪುರಂ ವ್ಯೋಮ ಸಂಕಲ್ಪಾದ್ರಿರ್ಯಥಾ ನಭಃ ।
ತಥಾ ಬ್ರಹ್ಮಜಗಚ್ಚೈವ ಖಮೇವಾಚ್ಛಮನಾಕೃತಿ ॥೬೨॥

ಏವಮಾಭಾಸಮಾತ್ರಸ್ಯ ಕಚತೋಽನಿಶಮವ್ಯಯಂ ।
ಸರ್ಗಾದಿಮಧ್ಯಾಂತದೃಶೋ ಮುಧೈವಾತ್ರೋದಿತಾಃ ಸ್ಥಿತಾಃ ॥೬೩॥

ಕಿಂಚಿದಾಕಾಶಕೋಶಸ್ಯ ತವ ವಾ ಮಮ ವಾನಘ ।
ಜಗತೋ ವಾಪಿ ಜಾಯೇತ ಕಿಂವಾ ನಶ್ಯತಿ ಮೇ ವದ ॥೬೪॥

---

೬೨. ಸ್ವಪ್ನನಗರವು ಹೇಗೆ ವ್ಯೋಮವಲ್ಲದೆ ಇನ್ನೇನೂ ಅಲ್ಲವೋ, ಸಂಕಲ್ಪ ಪರ್ವತವು ಆಕಾಶವಲ್ಲದೆ ಹೇಗೆ ಇನ್ನೇನೂ ಅಲ್ಲವೋ, ಹಾಗೆಯೇ ಬ್ರಹ್ಮವೂ ಜಗತ್ತೂ ಕೂಡ ಆಕಾರರಹಿತವಾದ ಆಕಾಶವಲ್ಲದೆ ಇನ್ನೇನೂ ಅಲ್ಲ.

೬೩. ಹೀಗೆ, ಆ-ಭಾಸಮಾತ್ರವಾಗಿ, ಅನಿಶವೂ ಕಚನಮಾಡುತ್ತಿದ್ದರೂ ಸರ್ಗ, ಆದಿ, ಮಧ್ಯ, ಅಂತ ಎಂಬ ದೃಷ್ಟಿಗಳು ವ್ಯರ್ಥವಾಗಿಯೇ ಅಂಗೀಕೃತ ವಾಗಿರುವುವು.

(ಅನಂತವಾಗಿ ಹಬ್ಬಿರುವ ಆಕಾಶದ ಫೋಟೋ ನೋಡಿ. ಅಲ್ಲಿ ಆಕಾಶವು ಸಾಂತವಾಗಿ ಕಂಡರೂ ಆಕಾಶವು ಹೇಗೆ ಅನಂತವೋ, ಹಾಗೇ ಉಪಾಧಿ ಪ್ರತಿ ಬಿಂಬಿತವಾದಂತೆ ತೋರುವ ಬ್ರಹ್ಮಕ್ಕೆ ಎಲ್ಲಾ ದೃಷ್ಟಿಗಳೂ ಅನ್ವಯಿಸಿದರೂ ನಿರು ಪಾಧಿಗೆ ಯಾವ ದೃಷ್ಟಿಯೂ ಅನ್ವಯಿಸುವುದಿಲ್ಲ )

೬೪. ನೀನಾಗಲಿ, ನಾನಾಗಲಿ, ಕಿಂಚಿದಾಕಾಶದ ಕೋಶವು. ಹೀಗಿರಲು ಎಲೈ ಅನಘನೆ, ಆಕಾಶನೇ ಆಗಿರುವ ಜಗತ್ತಿನಿಂದ ಆಗಬೇಕಾದುದೇನು ಹೋಗುವು ದಾದರೂ ಏನು, ಹೇಳು.

(ಅತಏವ ಆತ್ಮನಃ ಚಿದಾಕಾಶರೂಪತಾನುಸಂಧಾನೇ ತವ ವಾ ಮಮವಾ ಅನ್ಯಸ್ಯವಾನಕಸ್ಯಚಿತ್ಸರ್ಗಾದಯಃ ಸಂತೀತ್ಯಾಹ-ಕಿಮಿತಿ । ಜಗತೋ ಜಡತ್ವಾದೇವ ಸುತರಾಂ ನ ಜನ್ಮಾದಿ ಪ್ರತ್ಯಯ ಪ್ರಸಕ್ತಿರಿತಿ ದ್ಯೋತನಾಯ ಗ್ರಹಣಂ ಪುರುಷಾಂತ ರಾಭಿಪ್ರಾಯೇಣ ವಾ —ತಾ. ಪ್ರ.)

ತತ್ಕಿಮರ್ಥಮನರ್ಥಾಯ ನಿರರ್ಥಕಮಪಾರ್ಥಕಾಃ ।
ಕಸ್ಮಾದಭ್ಯುದಿತಾ ಬ್ರೂಹಿ ರಾಗದ್ವೇಷಭಯಾದಯಃ ॥೬೫॥

ವಸ್ತುತೋಽಂಗ ನ ಸರ್ಗಾದಿರ್ನ ಸರ್ಗೋ ನಾಪ್ಯಸರ್ಗತಾ ।
ವಿದ್ಯತೇ ಸಕೃದಾಭಾತಮಿದಮಿತ್ಥಂ ಸದೈವ ತತ್ ॥೬೬॥

ಅಶೂನ್ಯೇ ವಿಪುಲಾಭೋಗೇ ಸ್ವಚ್ಛಚಿಜ್ಜಲಪೂರಿತೇ ।
ಕಲನಾಪಂಕಕಲಿಲೇ ಭವಿಷ್ಯತಿ ಚಿದಂಬರೇ ॥೬೭॥

ಅಂತರಿಕ್ಷಾಕ್ಷಯಕ್ಷೇತ್ರೇ ಖಾತ್ಮನೋ ಗಗನಾತ್ಮಿಕಾ ।
ತಸ್ಮಾದ್ಬೀಜಾದಿಯಂ ಜಾತಾ ಭೂರಿಭೂತಶಿಲಾವಲಿಃ ॥೬೮॥

ನಾಸ್ತಿ ಕಿಂಚಿದಿಹ ಕ್ಷೇತ್ರಂ ವ್ಯುಪ್ತಂ ನಾಮ ನ ಕಿಂಚನ ।
ನ ಬೀಜಮಸ್ತಿ ನೋ ಜಾತಂ ಕಿಂಚಿತ್ಸರ್ವಂ ಚ ಸಂಸ್ಥಿತಂ ॥೬೯॥

---

೬೫. ಅದರಿಂದ, ಯಾವದು ಲಾಭ? ಯಾವದು ನಷ್ಟ? ಎಲ್ಲವೂ ನಿರರ್ಥಕಗಳೂ ಅಪಾರ್ಥಕಗಳೂ ಆಗಿರಲು ರಾಗ ದ್ವೇಷ ಭಯಾದಿಗಳು ಏಕೆ ಹುಟ್ಟಬೇಕು ಹೇಳು.

೬೬. ವಾಸ್ತವವಾಗಿ ಹೇಳಬೇಕೆಂದರೆ ಸರ್ಗಾದಿಯಿಲ್ಲ, ಸರ್ಗವಿಲ್ಲ, ಅಸರ್ಗವೂ ಇಲ್ಲ. ಯಾವಾಗಲೋ ಒಂದು ಸಲ ಆಭಾತವಾದುನು ಹೀಗೆ ಇರುವುದು. ಅದೂ ಬ್ರಹ್ಮವೇ! ಆದುದರಿಂದ ಅದೂ ಸತ್ತೇ!

೬೭. ಅಶೂನ್ಯವಾಗಿ, ವಿಪುಲವಾಗಿ,ಹಬ್ಬಿರುವ, ಸ್ವಚ್ಛವಾದ ಚಿಜ್ಜಲಪೂರ್ಣವಾಗಿ, ಕಲನಾ (ಸಂಕಲ್ಪ) ಎಂಬ ಕೆಸರಿನಿಂದ ತುಂಬಿ, ಮುಂದೆ ಚಿದಾಕಾಶವಾಗುವ,

೬೮. ಅಂತರಿಕ್ಷವೆಂಬ ಅಕ್ಷಯಕ್ಷೇತ್ರದಲ್ಲಿ, ಆಕಾಶಾತ್ಮನೆಂಬ ಬೀಜದಿಂದ ಆಕಾಶಾತ್ಮಕವೇ ಆಗಿ ಭೂತಗಳೆಂಬ ನಾನಾಶಿಲೆಗಳಿಂದ ಕೂಡಿರುವ ಈ ಜಗತ್ತು ಹುಟ್ಟಿತು.

೬೯. ಕ್ಷೇತ್ರವೆಂಬುದಿಲ್ಲ. ಅಲ್ಲಿ ಬಿತ್ತಿದವರು ಮೊದಲೇ ಇಲ್ಲ. ಬೀಜವಂತೂ ಇಲ್ಲವೇ ಇಲ್ಲ. ಯಾವುದೂ ಹುಟ್ಟಲಿಲ್ಲ. ಇಷ್ಟಾದರೂ ಎಲ್ಲವೂ ಇದ್ದೇ ಇರುವುದು.

ಯಾಃ ಶಿಲಾವಲಯಸ್ತತ್ರ ಪುಷ್ಟಾಸ್ತಾ ವಿಬುಧಾದಯಃ ।
ಯಾಸ್ತು ವರ್ಣೋಜ್ಜ್ವಲಾ ಏತಾಃ ಸ್ವಾಸ್ಥಿತಾ ಬುದ್ಧಬುದ್ಧಯಃ ॥೭೦॥

ಯಾಸ್ತ್ವರ್ಧಪಕ್ವಾಸ್ತಾ ಏತಾ ನರನಾಗಾದಿಜಾತಯಃ ।
ಯಾಸ್ತಾಸ್ತ್ವಶ್ಯಾನಾ ರಜೋನಷ್ಟಾಸ್ತಾಃ ಕೃಮಿಸ್ಥಾವರಾದಯಃ ॥೭೧॥

ಯಾಸ್ತು ಗುರ್ವ್ಯಃ ಫಲೈರ್ಹೀನಾಃ ಶೂನ್ಯಾಕಾರಾಃ ಕ್ಷಯಕ್ಷತಾಃ ।
ಅಶರೀರಾಃ ಶರೀರಿಣ್ಯಸ್ತಾಃ ಪಿಶಾಚಾದಿಕಾಃ ಸ್ಮೃತಾಃ ॥೭೨॥

ನಹಿ ಸಂಕಲ್ಪಿತುಃ ಸ್ವೇಚ್ಛಾ ಕ್ವಚಿತ್ಪರ್ಯನುಯುಜ್ಯತೇ ।
ತಾಸ್ತಥೇಚ್ಛಾ ವಿರಿಂಚಸ್ಯ ತಥಾ ನಾಮ ತಥೋದಿತಾಃ ॥೭೩॥

---

೭೦. ಯಾವುದು ಶಿಲಾವಲಯಗಳಾ ಇವೆಯೋ ಅಲ್ಲಿ ವಿಬುಧಾದಿಗಳು ಪುಷ್ಟರಾಗಿ ಬೆಳೆದರು. ಯಾವುದು ಉಜ್ಜ್ವಲಕಾಂತಿವಿಶಿಷ್ಟವಾಗಿತ್ತೋ ಅದೆಲ್ಲ ಪ್ರಬುದ್ಧಮತಿಗಳಾದ ದೇವರ್ಷಿ ಮೊದಲಾದವರು.

೭೧. ಯಾರು ಅರ್ಧ ಪಕ್ವವಾದವರೋ ಅವರೇ ನರ ನಾಗ ಮೊದಲಾದ ಜಾತಿಗಳು. ಯಾರು ಕಾಂತಿಹೀನರಾಗಿದ್ದರೋ, ಯಾರು ರಜೋನಷ್ಟರೋ, ಅವರು ಕೃಮಿಗಳು ಸ್ಥಾವರಗಳು ಮೊದಲಾದವರು.

೭೨. ಯಾರು ದೊಡ್ಡದಾಗಿ ಬೆಳೆದರೂ ಫಲವಿಲ್ಲದೆ, ಶೂನ್ಯಾಕಾರರಾಗಿ, ನಾಶಸ್ವಭಾವವುಳ್ಳವರಾಗಿ, ಶರೀರವಿದ್ದರೂ ಶರೀರವಿಲ್ಲದವರಂತೆ ತಿರುಗುವರೋ ಅವರೇ ಪಿಶಾಚಗಳು.

೭೩. ಇವೆಲ್ಲವೂ ಆ ಬ್ರಹ್ಮನ ಸಂಕಲ್ಪದಿಂದ ಆದವು ಎನ್ನಬಾರದು. ಆಯಾ ಜೀವರ ಕರ್ಮವಾಸನೆಯಿಂದ ಅವರವರಿಗೆ ಆಯಾ ಸಂಕಲ್ಪಗಳು ಬಂದು ಅವರವರು ಹಾಗೆಹಾಗೆ ಆಗುವರು.

(ನನು ಹಿರಣ್ಯಗರ್ಭಸ್ಯ ಉತ್ತಮ ದೇವಾದಿ ರತ್ನಾನ್ಯೇವ ತತ್ರ ಕ್ಷೇತ್ರೇ ಉತ್ಪದ್ಯಂತಾಮಿತ್ಯೇವ ಸಂಕಲ್ಪಃ ಕುತೋ ನಾಭೂತ್ಕಿಮರ್ಥಂ ವೃಥಾ ಪಾಷಾಣರೂಪ ಪಿಶಾಚಜಾತಿ ಉತ್ಪಾದನಸಂಕಲ್ಪೋಽಭೂತ್ತತ್ರಾಹ—ಸಂಕಲ್ಪಿತುಃ ಸಂಕಲ್ಪಯಿತು ರ್ಧಾತುರಿಚ್ಛಾನಹಿ ಪರ್ಯನುಯುಜ್ಯತೇ ಆಕ್ಷಿಪ್ಯತೇ। ತತ್ತತ್ ಸೃಜ್ಯ ಜೀವ ಪ್ರಾಕ್ತನ

ಸರ್ವಾ ಏವ ಚಿದಾಕಾಶರೂಪಿಣ್ಯೋ ಭೂತಜಾತಯಃ ।
ಆತಿವಾಹಿಕದೇಹಿನ್ಯಃ ಪೃಥ್ವ್ಯಾದಿರಹಿತಾತ್ಮಿಕಾಃ ॥೭೪॥

ತಾಶ್ಚಿರಾಭ್ಯಾಸವಶತಸ್ತ್ವಾಧಿಭೌತಿಕಸಂವಿದಂ ।
ಪ್ರಾಪ್ತಾ ದೀರ್ಘಾನುಭವನಾತ್ಸ್ವಪ್ನ ಜಾಗ್ರದ್ದಶಾಮಿವ ॥೭೫॥

---

ಕರ್ಮಾದ್ಯನುಸಾರಿತ್ವಾದಿತಿ ಭಾವಃ । ವಿರಿಂಚಸ್ಯ ತಾ ಇಚ್ಛಾಸ್ತಥಾ ಜಾತಾಸ್ತಥೈವ ಪಿಶಾಚಜಾತಯ ಉದಿತಾಃ ॥ —ತಾ ಪ್ರ.)

(' ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ' ಎಂಬ ಗೀತಾ ವಾಕ್ಯವನ್ನು ಇಲ್ಲಿ ಅನುಸಂಧಾನಮಾಡಿ. ಕರ್ತೃತ್ವ ಕರ್ಮ ಭೋಕ್ತೃತ್ವಗಳು ಮೂರೂ ಸಾಪೇಕ್ಷಕಗಳು. ಒಂದು ಬರುತ್ತಿದ್ದಹಾಗೆಯೇ ಇನ್ನೆರಡೂ ಬಂದೇ ತೀರಬೇಕು. ಒಂದು ವಿಶ್ವವು ಸೃಷ್ಟಿಗೆ ಬರುವುದು ಕಚನದಿಂದ. ಆ ಕಚನದಲ್ಲಿ ಮಾಯೆ, ಮಾಯೆಯ ಗುಣಗಳು, ಗುಣಗಳಿಂದ ಆದ ಸೃಷ್ಟಿ ಇವಿಷ್ಟೂ ಇರುವುವು. ಗುಣಾಗುಣೇಷು ವರ್ತಂತೆ ಎಂಬ ವಾಕ್ಯವನ್ನು ಅನುಸಂಧಾನಮಾಡಿ. ಬೀಜರೂಪ ವಾಗಿ ಗರ್ಭವನ್ನು ಪ್ರವೇಶಿಸುವ ರೇತೋಭಾಗದಲ್ಲಿ ತಲೆಯಾಗುವುದು ಯಾವಭಾಗ? ಕಾಲಾಗುವುದು ಯಾವ ಭಾಗ ? ಸಕ್ಕರೆಗೊಂಬೆಯ ಕಾಲಾದ ಸಕ್ಕರೆಗೂ ತಲೆಯಾದ ಸಕ್ಕರೆಗೂ ಏನು ವ್ಯತ್ಯಾಸ ? ಎರಡೂ ಒಂದೇ ಸಕ್ಕರೆಯಿಂದ ಬಂದು, ರೂಪವಾದಾಗ ಆದ ಅರ್ಥವಿಲ್ಲದ ವ್ಯತ್ಯಾಸ ಎನ್ನುವುದೇ ಸರಿ. ಅದರಂತೆಯೇ ಕಾಲ ದೇಶ ಕರ್ಮ ಕರ್ತೃ ಭೋಕ್ತೃ ವಿಶಿಷ್ಟವಾದ ಜಗತ್ತು ಬಂದಾಗ ಎಲ್ಲವೂ ಬಂತು. ವಿಕಾರವು ಕಾಲ ದೇಶ ಕರ್ಮವಶವಾಗಿ ಕಾಣಿಸಿಕೊಳ್ಳುವುದು ಎಂಬುದೇ ಸರಿ. ಇದಕ್ಕೆ ಉದಾ ಹರಣೆ ಕಲಬೆರಕೆಯಾದ ಕನಸು.)

೭೪. ಹುಟ್ಟಿಬಂದ ಭೂತಜಾತಿಗಳೆಲ್ಲ ಚಿದಾಕಾಶರೂಪಗಳೇ! ಆತಿವಾಹಿಕ ದೇಹಿಗಳೇ! ಪೃಥಿವ್ಯಾದಿರಹಿತವಾದವೇ!

೭೫. ಆದರೂ ಅವು ಚಿರಕಾಲದಿಂದ ಅಭ್ಯಾಸವಾಗಿಹೋಗಿರುವ ಆಧಿಭೌತಿಕ ಸಂವಿತ್ತನ್ನು ಪಡೆದಿರುವುವು. ದೀರ್ಘಕಾಲ ನೋಡಿದ ಕನಸಿನ ಅನುಭವವು ಜಾಗ್ರತ್ತನ್ನೂ ಆಕ್ರಮಿಸುವಂತೆ, ಇಲ್ಲಿ ಈ ಆದಿಭೌತಿಕಸಂವಿತ್ತು.

ಪಿಶಾಚಾದ್ಯಾಸ್ತಥಾ ಏತೇ ತಥಾ ಭೂತಾಧಿಭೌತಿಕಾಃ ।
ತಿಷ್ಠಂತಿ ತುಷ್ಟಮನಸಃ ಸ್ವಸಂಸಾರವಿಹಾರಿಣಃ ॥೭೬॥

ಪಶ್ಯಂತಿ ಕಾಶ್ಚಿದನ್ಯೋನ್ಯಂ ಗ್ರಾಮ್ಯಾ ಗ್ರಾಮೇಯಕಾನಿವ ।
ಸ್ವಪ್ನೈಕಲೋಕವಾಸ್ತವ್ಯಾ ಇವೈತಾ ಭೂತಜಾತಯಃ ॥೭೭॥

ಕಾಶ್ಚಿದ್ಬಹುನರಪ್ರಾಪ್ತಸ್ವಪ್ನನಿರ್ವಾಣ ಲೋಕವತ್ ।
ನಾನ್ಯೋನ್ಯಮಪಿ ಪಶ್ಯಂತಿ ನಾನಾಸಂಸ್ಥಾನಸಂಸ್ಥಿತಾಃ ॥೭೮॥

ಸ್ಥಿತಾ ಯಥೈತಾ ಜಗತಿ ಪಿಶಾಚಾದ್ಯಾಃ ಕುಜಾತಯಃ ।
ಪ್ರಾಯಸ್ತಥೈತಾಃ ಕುಂಭಾಂಡಯಕ್ಷಪ್ರೇತಾದಯಃ ಸ್ಥಿತಾಃ ॥೭೯॥

ಯಥಾ ಯತ್ರೇಹ ವೈ ನಿಮ್ನೇ ಜಲಂ ತತ್ರಾವತಿಷ್ಠತೇ ।
ತಥಾ ಯತ್ರ ಪಿಶಾಚಾದ್ಯಾಸ್ತಮಸ್ತತ್ರಾವತಿಷ್ಠತೇ ॥೮೦॥

---

೭೬. ಅಧಿಭೌತಿಕ ಭೂತಗಳಂತೆಯೇ ಈ ಪಿಶಾಚಾದಿಗಳೂ ಸಹ ಹೇಗೋ ಸಂತುಷ್ಟರಾಗಿ ತಮ್ಮ ತಮ್ಮ ಸಂಸಾರದಲ್ಲಿ ವಿಹರಿಸಿಕೊಂಡು ಇರುವರು.

೭೭. ಗ್ರಾಮ್ಯರು ಗ್ರಾಮ್ಯರನ್ನು ಕಾಣುವಂತೆ, ಒಬ್ಬರನ್ನೊಬ್ಬರು ನೋಡುವುದುಂಟು. ಆದರೂ ಇವರೆಲ್ಲ ಸ್ವಪ್ನದಲ್ಲಿ ಕಾಣಬರುವ ಲೋಕದ ನಿವಾಸಿಗಳಂತೆಯೇ ಸರಿ.

೭೮. ಹಲವರು ಒಂದೇಕಡೆ ಮಲಗಿರುವಾಗ ಒಬ್ಬರ ಕನಸು ಇನ್ನೊಬ್ಬರಿಗೆ ಕಾಣದಂತೆ, ಬೇರೆ ಬೇರೆ ಮಟ್ಟಗಳಲ್ಲಿರುವ ಕೆಲವರು ಒಬ್ಬರಿಗೊಬ್ಬರು ಕಾಣಿಸುವುದೂ ಇಲ್ಲ.

೭೯. ಪಿಶಾಚಾದಿ ದುಷ್ಟಜಾತಿಗಳು ಈ ಭೂಮಿಯಲ್ಲಿ ಇರುವಂತೆಯೇ ಕುಂಭಾಂಡ, ಯಕ್ಷ, ಪ್ರೇತ, ಮೊದಲಾದವರೂ ಉಂಟು.

೮೦. ಹಳ್ಳದಲ್ಲಿ ನೀರಿರುವಂತೆ, ಪಿಶಾಚಾದಿಗಳು ಇದ್ದ ಎಡೆಯಲ್ಲಿ ತಮಸ್ಸು ಅಧಿಕವಾಗಿರುವುದು.

ಮಧ್ಯಾಹ್ನೇಽಪಿ ಪಿಶಾಚಶ್ಚೇದಜಿರೇ ತಿಷ್ಠತಿ ಸ್ವಯಂ ।
ತತ್ತಸ್ಯಾಂಧಂ ತಮಸ್ತತ್ರ ಸಂನಿಧಾನಂ ಕರೋತ್ಯಲಂ ॥೮೧॥

ನ ನಿಹಂತಿ ಚ ತದ್ಭಾನುರ್ನ ಚಾನ್ಯಸ್ತತ್ರಪಶ್ಯತಿ ।
ಸ ಏವ ಚಾನುಭವತಿ ಪಶ್ಯ ಮಾಯಾವಿಜೃಂಭಿತಂ ॥೮೨॥

ಅಗ್ನೇರಾದಿತ್ಯಚಂದ್ರಾದೇಸ್ತೈಜಸಂ ಮಂಡಲಂ ಯಥಾ ।
ಪಿಶಾಚಾದೇರಜನ್ಯಾತ್ಮ ತಾಮಸಂ ಮಂಡಲಂ ತಥಾ ॥೮೩॥

ಯಾತಿ ತೇಜಸ್ಯನೋಜಸ್ತ್ವಂ ತಮಸ್ಯೋಜಃ ಪ್ರಧಾನತಾಂ ।
ಉಲೂಕವತ್ಪಿಶಾಚಾದ್ಯಾ ಆಶ್ಚರ್ಯಂ ತತ್ಸ್ವಭಾವತಃ ॥೮೪॥

---

೮೧. ಮಧ್ಯಾಹ್ನದಲ್ಲಿ ಬಿಸಿಲು ಉರಿಯುತ್ತಿರುವಾಗ ನಾಲ್ಕು ಬೀದಿಗಳು ಸೇರಿರುವ ಚೌಕದಲ್ಲಿ ಪಿಶಾಚವು ನಿಂತುಕೊಂಡರೆ, ಅದರ ಕತ್ತಲು ಕಣ್ಣಿಗೆ ಕಾಣುವಷ್ಟು ದಪ್ಪವಾಗಿರುವುದು.

೮೨. ಆ ಕತ್ತಲನ್ನು ಸೂರ್ಯನೂ ನಿವಾರಣ ಮಾಡಲಾರನು ಇತರರು ಅದನ್ನು ನೋಡಲಾರರು. ಅದು ಇತರರನ್ನು ನೋಡುವುದು. ನೋಡು, ಮಾಯೆಯೆನ್ನುವುದು ಹೇಗಿದೆ ?

೮೩. ಅಗ್ನಿ, ಆದಿತ್ಯ, ಚಂದ್ರ, ಇವರುಗಳಿಗೆ ತೇಜೋಮಂಡಲವಿರುವಂತೆ, ಪಿಶಾಚಿಗಳಿಗೆ ಸಹಜವಾದ ತಮೋಮಂಡಲವಿರುವುದು.

೮೪. ಇನ್ನೊಂದು ಆಶ್ಚರ್ಯವನ್ನೇನು ಹೇಳಲಿ ? ತೇಜಸ್ಸಿನಲ್ಲಿ ಅದು ನಿರ್ಬಲವಾಗುವುದು. ತಮಸ್ಸಿನಲ್ಲಿ ಸಬಲವಾಗುವುದು. ಪಿಶಾಚಗಳೂ ಉಲೂಕಗಳಂತೆಯೇ ಎಂದುಕೊ.

ಏಷಾ ಪಿಶಾಚಾ ಜನಿತಸ್ಯ ಜಾತಿಃ। ಪ್ರೋಕ್ತಾ ಮಯಾ ತೇ ಸಮಯಾನಪೇಕ್ಷಾ ॥
ಪಿಶಾಚತುಲ್ಯಃ ಸುರಲೋಕ ಪಾಲ ಲೋಕೇಷು ಜಾತೋಽಹಮಿತಿ ಪ್ರಸಂಗಾತ್ ॥೮೫॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಪಾಷಾಣೋಪಾಖ್ಯಾನೇ ಪಿಶಾಚವರ್ಣನಪ್ರಸಂಗೇನ ಜಗದ್ದ್ರಷ್ಟ್ರೋರೈಕ್ಯಪ್ರತಿಪಾದನಂ ನಾಮ ಚತುರ್ನವತಿತಮಃ ಸರ್ಗಃ

---

೮೫ ಪಿಶಾಚವಾಗಿ ಹುಟ್ಟಿದವನ ಜಾತಿಯನ್ನು ಕುರಿತು ನಾನು ನಿನಗೆ, ಪ್ರಾಸಂಗಿಕವಾಗಿ ಬಂತೆಂದು, ಹೇಳಿದೆನು ದೇವಲೋಕವಲ್ಲಿ ನಾನೂ ಒಮ್ಮೆ ಪಿಶಾಚತುಲ್ಯನಾಗಿ ಇದ್ದೆನು ಎಂಬ ಪ್ರಸಂಗದಲ್ಲಿ ಈ ಕಥೆಯೂ ಬಂತು

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ "ಪಿಶಾಚವರ್ಣನ ಪ್ರಸಂಗೇನ ಜಗದ್ದ್ರಷ್ಟ್ರೋರೈಕ್ಯ ಪ್ರತಿಪಾದನಾ" ಎಂಬ ತೊಂಭತ್ತನಾಲ್ಕನೆಯ ಸರ್ಗವು

# ಪಂಚನವತಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ—

ತತಶ್ಚಿದಾಕಾಶವಪುರ್ಭೂತಪಂಚಕವರ್ಜಿತಃ ।
ವಿಹರನ್ನಹಮಾಕಾಶೇ ಪಿಶಾಚ ಇವ ಸಂಸ್ಥಿತಃ ॥೧॥

ನ ಮಾಂ ಪಶ್ಯಂತಿ ಚಂದ್ರಾರ್ಕಶಕ್ರಾ ಹರಿಹರಾದಯಃ ।
ನ ದೇವಸಿದ್ಧಗಂಧರ್ವಕಿಂನರಾ ನಾಪ್ಸರೋಗಣಾಃ ॥೨॥

ನಾಕ್ರಾಮಂತಿ ಮಯಾಕ್ರಾಂತಾ ನ ಚ ಶೃಣ್ವಂತಿ ಮದ್ವಚಃ ।
ಇತ್ಯಹಂ ಮೋಹಮಾಪನ್ನೋ ವಿಕ್ರೀತ ಇವ ಸಜ್ಜನಃ ॥೩॥

---

# ತೊಂಭತ್ತೈದನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧. ಅನಂತರ ನಾನು ಭೂತಪಂಚಕಗಳು ಯಾವುದೂ ಇಲ್ಲದೆ ಚಿದಾಕಾಶವೇ ದೇಹವಾದವನಾಗಿ ಆಕಾಶದಲ್ಲಿ ಪಿಶಾಚದಂತೆ ವಿಹರಿಸುತ್ತಿದ್ದೆನು.

೨. ಚಂದ್ರ ಸೂರ್ಯ ಇಂದ್ರ ಹರಿಹರ ಮೊದಲಾದವರೂ, ದೇವಸಿದ್ಧ ಗಂಧರ್ವ ಕಿಂನರಾದಿಗಳೂ, ಅಪ್ಸರೋಗಣಗಳೂ, ಯಾರೂ ನನ್ನನ್ನು ನೋಡಲಿಲ್ಲ.

೩. ನಾನು ಅವರಮೇಲೆ ಬಿದ್ದರೂ ಅವರಿಗೆ ತಿಳಿಯುತ್ತಿರಲಿಲ್ಲ. ನಾನು ಮಾತನಾಡಿಸಿದರೂ ಅವರಿಗೆ ಕೇಳಿಸುತ್ತಿರಲಿಲ್ಲ. ಹೀಗಾಯಿತಲ್ಲ ಎಂದು, ವಿಕ್ರೀತನಾದ ಸಜ್ಜನನಂತೆ, ಏನು ಮಾಡಬೇಕೋ ತಿಳಿಯದಾದೆನು.

ಅಥ ಚಿಂತಿತವಾನಸ್ಮಿ ಸತ್ಯಕಾಮಾ ಇಮೇ ವಯಂ ।
ಪಶ್ಯಂತು ಮಾಂ ಸುರಗಣಾಸ್ತೇನ ತಸ್ಮಿನ್ಸುರಾಲಯೇ ॥೪॥

ಪ್ರಸ್ಪಷ್ಟಂ ಪ್ರವೃತ್ತಾ ಮಾಮಗ್ರೇ ವಾಸ್ತವ್ಯಾಃ ಸರ್ವ ಏವ ತೇ ।
ಝಟಿತ್ಯೇವ ಪುರಃ ಪ್ರಾಪ್ತಮಿಂದ್ರಜಾಲದ್ರುಮಂ ಯಥಾ ॥೫॥

ಅಥ ಗೀರ್ವಾಣಗೇಹೇಷು ಸಂಪನ್ನೋ ವ್ಯವಹಾರ್ಯಹಂ ।
ಯಥಾಸ್ಥಿತಸಮಾಚಾರಃ ಸ್ಥಿತೋ ನಿಃಶಂಕಚೇಷ್ಟಿತಃ ॥೬॥

ಸ್ವೈರವಿಜ್ಞಾತವೃತ್ತಾಂತೈರ್ದೃಷ್ಟೋಹಮಜಿರೋಕ್ಷಿತಃ ।
ವಸಿಷ್ಠಃ ಪಾರ್ಥಿವ ಇತಿ ಲೋಕೇಷು ಪ್ರಥಿತೋಸ್ಮಿ ತೈಃ ॥೭॥

ವ್ಯೋಮನ್ಯಾದಿತ್ಯರಶ್ಮಿಭ್ಯೋ ದೃಷ್ಟೋಹಂ ಯೈರ್ನಭೋಗತೈಃ ।
ವಸಿಷ್ಠಸ್ತೈಜಸ ಇತಿ ಲೋಕೇಷು ಪ್ರಥಿತೋಸ್ಮಿ ತೈಃ ॥೮॥

---

೪. ಆಗ ಯೋಚನೆಮಾಡಿ, ಇವರೂ ನಾವೂ ಇಬ್ಬರೂ ಸತ್ಯಕಾಮರು, ಆದರಿಂದ ಇವರು ನನ್ನನ್ನು ನೋಡಲಿ, ಎಂದು ಆ ಸ್ವರ್ಗದಲ್ಲಿ ಚಿಂತಿಸಿದೆನು.

೫. ಆಗ ಇದ್ದವರೆಲ್ಲಾ ನನ್ನನ್ನು ಕಂಡರು. ಹಠಾತ್ತಾಗಿ ಕಣ್ಣೆದುರಿಗೆ ಇಂದ್ರಜಾಲ ವೃಕ್ಷವು ಬಂದಂತಾಯಿತು.

೬. ಆ ದೇವಲೋಕದಲ್ಲಿ ನಾನು ವ್ಯವಹಾರ ಮಾಡುವವನಾದೆನು ಅಲ್ಲಿಗೆ ತಕ್ಕಂತೆ ಆಚರಿಸುವವನಾದೆನು. ಶಂಕಾರಹಿತನಾಗಿ ವ್ಯಾಪಾರ ಮಾಡುವವನಾದೆನು.

೭. ನಾನು ಯಾರು ಏನು ಎಂಬುದನ್ನು ತಿಳಿಯದೆ ಚೌಕದಲ್ಲಿ ನನ್ನನ್ನು ಕಂಡವರು, ವಿಚಾರಿಸಿಕೊಂಡು, ಇವನು ಭೂಮಿಯಿಂದ ಬಂದವನು, ವಸಿಷ್ಠ ಎಂದು ಗೊತ್ತುಮಾಡಿಕೊಂಡರು.

೮ ಆಕಾಶದಲ್ಲಿ ಆದಿತ್ಯ ಕಿರಣಗಳಿಂದ ನನ್ನನ್ನು ಕಂಡು ಆಕಾಶ ಸಂಚಾರಿಗಳು ಈತನು ವಸಿಷ್ಠ, ತೇಜೋಲೋಕದಿಂದ ಬಂದವನು ಎಂದುಕೊಂಡರು

ವಾತಾತ್ಸಮುದಿತೋ ವೃಷ್ಟೋ ಯೈರಹಂ ಗಗನಾಸ್ಪದೈಃ ।
ಸಿದ್ಧೈರ್ವಾತವಸಿಷ್ಠಾಖ್ಯಸ್ತೈರಹಂ ಸಮುದಾಹೃತಃ ॥೯॥

ಯೈರಹಂ ಸಲಿಲಾದ್ದೃಷ್ಟಃ ಪ್ರೋತ್ಥಿತಸ್ತೈರ್ಮುನೀಶ್ವರೈಃ ।
ಉಕ್ತೋ ವಾರಿವಸಿಷ್ಠೋಽಹಮಿತಿ ಮೇ ಜನ್ಮಸಂತತಿಃ ॥೧೦॥

ತತಃಪ್ರಭೃತಿ ಲೋಕೇಽಹಂ ಪಾರ್ಥಿವಃ ಪ್ರಥಿತಃ ಕ್ವಚಿತ್ ।
ಅಪ್ಮಯಃ ಕ್ವಚಿದನ್ಯೇಷಾಂ ತೈಜಸೋ ಮಾರುತಃ ಕ್ವಚಿತ್ ॥೧೧॥

ಅಥ ಕಾಲೇನ ಮೇ ತತ್ರ ತಸ್ಮಿನ್ನೇವಾತಿವಾಹಿಕೇ ।
ಆಧಿಭೌತಿಕತಾ ದೇಹೇ ರೂಢಾರೂಢಾಂತರೇರಿತಾ ॥೧೨॥

---

೯. ಆಕಾಶದಲ್ಲಿ ವಿಹರಿಸುತ್ತಿದ್ದ ಕೆಲವರು ಸಿದ್ಧರು ನನ್ನನ್ನು ಗಾಳಿಯಿಂದ ಗುರುತಿಸಿ, ಈತನು ವಸಿಷ್ಠ, ವಾಯುಲೋಕದಿಂದ ಬಂದವನು ಎಂದುಕೊಂಡರು.

೧೦. ಇನ್ನು ಕೆಲವರು ಮುನೀಶ್ವರರು ನಾನು ನೀರಿನಿಂದ ಎದ್ದುಬಂದಂತೆ ಕಂಡು ಈತನು ವಸಿಷ್ಠ, ಜಲಲೋಕದಿಂದ ಬಂದವನು ಎಂದುಕೊಂಡರು. ಹೀಗೆ ನನ್ನ ಜನ್ಮ, ಸಂತತಿ, ಗಳನ್ನು ಕುರಿತು ಅವರವರು ಅವರವರಿಗೆ ತೋರಿದಂತೆ ಹೇಳಿ ಕೊಳ್ಳುತ್ತಿದ್ದರು.

೧೧. ಅಂದಿನಿಂದಲೂ ಪಾರ್ಥಿವನೆಂದು, ಅಪ್ಮಯನೆಂದು, ತೈಜಸನೆಂದು, ಮಾರುತನೆಂದು, ನನ್ನನ್ನು ಕುರಿತು ಒಬ್ಬೊಬ್ಬರು ಒಂದೊಂದು ವಿಧವಾಗಿ ಹೇಳಿ ಕೊಳ್ಳುವರು.

೧೨. ಹೀಗೆ ಇರುತ್ತಿರಲು ಕೆಲವು ಕಾಲವಾದಮೇಲೆ ಅಲ್ಲಿ ನನಗೆ ಅದೇ ಆತಿ ವಾಹಿಕ ದೇಹದಲ್ಲಿಯೇ ಆಧಿಭೌತಿಕತೆಯೂ ಬಂತು. ಅದು ಬಂತೆಂದು ಇತರರೂ ಹೇಳಿದರು.

ಯದೇತದಾತಿವಾಹಿತ್ವಮಾಧಿಭೌತಿಕತಾ ಚ ಖಂ ।
ದ್ವಯಮಪ್ಯೇಕ ದೇಹಾತ್ಮ ತತಃ ಕಚತಿ ಮೇ ಚಿತಿಃ ॥೧೩॥

ಏವಮಾತ್ಮ ಕ್ವಚಿದ್ವ್ಯೋಮ ಕಚನಾತ್ಮಾಕ್ಯಹಂ ನಭಃ ।
ಪರಮೇವ ನಿರಾಕಾರಂ ಯುಷ್ಮಾಸ್ವಾಕಾರವಾನಪಿ ॥೧೪॥

ಜೀವನ್ಮುಕ್ತೋ ವ್ಯವಹರಂಸ್ತಥಾಸ್ತೇ ಬ್ರಹ್ಮಖಾತ್ಮಕಃ ।
ತಥೈವಾದೇಹಮುಕ್ತೋಽಪಿ ತಿಷ್ಠತಿ ಬ್ರಹ್ಮಮಾತ್ರಕಃ ॥೧೫॥

ಮಮ ಸ ಬ್ರಹ್ಮತಾಪೇತಾ ತಾಪೃಗ್ವ್ಯವಹೃತೇಽಪಿ ।
ಅಸಂಭವಾದನ್ಯದೃಶೋ ಯುಷ್ಮದಾದಿಷ್ವಹಂ ತ್ವಹಂ ॥೧೬॥

---

೧೩. ಆದರೂ ಆತಿವಾಹಿಕವಾಗಿರಲಿ, ಆಧಿಭೌತಿಕವಾಗಿರಲಿ, ಎರಡೂ ಆಕಾಶಗಳೇ! ಎರಡೂ ಒಂದೇ ದೇಹವೆಂದು ನನಗೆ ಗೊತ್ತಿತ್ತು. ಈ ದೇಹವು ನಾನಲ್ಲ ನಾನು ಆತ್ಮನು ಎಂದೂ ಗೊತ್ತಿತ್ತು.

೧೪. "ಹೀಗೆ ಕಚನವಾಗುತ್ತಿಪ್ಪ ಆತ್ಮನು ಆಕಾಶದಂತೆ ವಿಶದವಾಗಿದೆ. ಕಚನವಾಗುತ್ತಿದ್ದ ನಾನೂ ಎಂಬುದೂ ಆಕಾಶದಂತೆಯೇ ಇದ್ದೇನೆ. ಎರಡೂ ನಿರಾಕಾರಗಳು, ಹೊರಗಿನವರಿಗೆ ಆಕಾರವಿರುವಂತೆ ಕಾಣುತ್ತವೆ." ಎಂದು ನನಗೆ ಗೊತ್ತಿತ್ತು.

೧೫ ಜೀವನ್ಮುಕ್ತನು ವ್ಯವಹಾರದಲ್ಲಿದ್ದರೂ ಬ್ರಹ್ಮಾಕಾಶದಲ್ಲಿ ಹೀಗೇಇರುವನು. ಅದೇಹಮುಕ್ತನೂ ಹಾಗೆಯೇ ಬ್ರಹ್ಮಮಾತ್ರನಾಗಿ ಇರುವನು.

(ವಸ್ತುತಸ್ತು ಸದೇಹ ವಿದೇಹ ಮುಕ್ತಯೋಃ ಏಕರೂಪ್ಯಮೇವ—ತಾ.ಪ್ರ.)

೧೬. ಹಾಗೆ ವ್ಯವಹಾರ ಮಾಡುತ್ತಿದ್ದರೂ ನನಗೆ ಬ್ರಹ್ಮತೆಯು ಇದ್ದೇಇತ್ತು. ಏಕೆಂದರೆ ನನಗೆ ನಾನು ಬ್ರಹ್ಮವೇ ಎಂಬ ಒಂದು ದೃಷ್ಟಿಯಲ್ಲದೆ ಬೇರೆ ಯಾವ ದೃಷ್ಟಿಯೂ ಇರಲಿಲ್ಲ. ಮಿಕ್ಕ ನಿಮಗೆಲ್ಲ ನಾನು ನೀನು ಎಂಬ ವ್ಯವಹಾರವೂ ಇರುತ್ತದೆ.

ಯಥಾಜ್ಞಸ್ಯ ಸ್ವಪ್ನನರೋ ನಿರ್ಜನ್ಮನಿ ನಿರಾಕೃತೌ ।
ಆಧಿಭೌತಿಕತಾ ಬುದ್ಧಿಸ್ತಥಾ ಮೇ ಜಗತೋಽಪಿ ಚ ॥೧೭॥

ಏವಮೇವಾವಭಾಸಂತೇ ಸರ್ವ ಏವ ಸ್ವಯಂಭುವಃ ।
ಸರ್ಗಾಂಶ್ಚ ನತು ಜಾಯಂತೇ ಪ್ರಯಾತಾ ಇವ ಚೋದಿತಾಃ ॥೧೮॥

ಏಷ ಸೋಽಹಮಿಹಾಕಾಶವಸಿಷ್ಠಃ ಪುಷ್ಪತಾಮಿವ ।
ಗತೋಽದ್ಯ ಸ್ವಾತ್ಮನಾಭ್ಯಾಸಾದ್ಭವತಾಂ ವಾ ಭವತ್ಸ್ಥಿತಿಃ ॥೧೯॥

ಆಕಾಶಾತ್ಮಾನ ಏವೈತೇ ಸರ್ವ ಏವ ಸ್ವಯಂಭುವಃ ।
ಯಥಾತ್ರೇ ತನ್ಮನೋಮಾತ್ರಮಿಮೇ ಸರ್ಗಾಸ್ತಥೈವ ಹಿ ॥೨೦॥

---

೧೭. ತಿಳಿಯದವನು ಸ್ವಪ್ನದಲ್ಲಿ ತಾನು ಕಂಡ ಮನುಷ್ಯನು ಅಜಾತನೂ ನಿರಾಕೃತಿಯೂ ಆಗಿದ್ದರೂ ಅವನು ಆಧಿಭೌತಿಕದೇಹಸಂಪನ್ನನೆಂದು ನಂಬಿರುವ ನಲ್ಲವೆ? ಅದರಂತೆ ನಾನೂ (ಜ್ಞದೃಷ್ಟಿಯಿಂದ) ಈ ಜಗತ್ತು ಅಜಾತವು ನಿರಾಕೃತಕಾರಿಯು. ಆದರೂ ಅರ್ಥಕ್ರಿಯಾಕಾರಿತ್ವವಿರುವುದರಿಂದ ಆದಿಭೌತಿಕಾದಿ ಸಂಪನ್ನವಾದಂತಿರುವುದು ಎಂದು ತಿಳಿದಿದ್ದೇನು.

೧೮ ಸ್ವಯಂಭೂ ಆದ ಬ್ರಹ್ಮನಿಗೆ ಎಲ್ಲವೂ ಹೀಗೆ ಅವಭಾಸವಾಗುವುದು. ವಾಸ್ತವ್ಯವಾಗಿ ಸರ್ಗಗಳು ಹುಟ್ಟುವುದಿಲ್ಲ : ಅವುಗಳನ್ನು ಯಾರೋ ಅಟ್ಟಿಕೊಂಡು ಬಂದಂತೆ ಕಂಡರೂ, ಎಲ್ಲವೂ ಆಕಾಶವೇ !

೧೯ ವಸಿಷ್ಠನೆಂಬ ನಾಮದಿಂದ ಇರುವ ದೇಹವನ್ನು ಧರಿಸಿರುವ ನಾನು ಆಕಾಶ ವಸಿಷ್ಠನು. ನಾನು ವಸಿಷ್ಠ, ನಾನು ವಸಿಷ್ಠ, ಎಂದುಕೊಂಡು ಎಂದುಕೊಂಡು ವಾಸನಾ ಬಲದಿಂದ ದೃಢವಾಸನನಾಗಿ : ಹೀಗಿರುವೆನು. ನಿಮ್ಮಗಳ ಭವಸಂಸ್ಥಿತಿಯೂ ಹೀಗೆಯೇ !

(ಭವತ್‌ಸ್ಥಿತಿಃ, ಭವದ್ಬುದ್ಧ್ಯನುಸಾರಿ ಭೌತಿಕ ದೇಹಸ್ಥಿತಿಃ—ತಾ. ಪ್ರ.)

೨೦. ಸ್ವಯಂಭುವಿಗೂ ಹೀಗೆಯೇ ಎಲ್ಲವೂ ಆಕಾಶಾತ್ಮಗಳಾಗಿಯೇ ತೋರುವುವು. ಎಲ್ಲವೂ ಆತನ ಮನೋಮಾತ್ರಗಳೇ ! ಈ ಸರ್ಗಗಳೆಲ್ಲವೂ ಆತನ ಸಂಕಲ್ಪ ಕಲ್ಪಿತಗಳೇ !

ಅಹಮಾದಿರಯಂ ಸರ್ಗಸ್ತ್ವಪರಿಜ್ಞಾನದೋಷತಃ।
ವೇತಾಲ ಇವ ಬಾಲಾನಾಂ ಗತೋ ವ್ರೀ ವಜ್ರಸಾರತಾಂ ॥೩೧॥

ಪರಿಜ್ಞಾತಸ್ತು ಕಾಲೇನ ಸ್ವಲ್ಪೇನೈವೋಪಶಾಮ್ಯತಿ।
ವಾಸನಾತಾನವಾತ್ಸ್ನೇಹೋ ಬಂಧೌ ದೂರಗತೇ ಯಥಾ ॥೩೨॥

ಘನತ್ವಮಹಮಾನಾದ್ಯ ತಥಾ ಸರ್ವಸ್ಯ ಶಾಮ್ಯತಿ।
ಪರಿಜ್ಞಾತಾ ಯಥಾ ಸ್ವಪ್ನನಿಧೇರಾದೇಯಭಾವನಾ ॥೩೩॥

ಶಾಮ್ಯಂತಿ ಸಂಪರಿಜ್ಞಾತಾಃ ಸಕಲಾ ದೃಶ್ಯದೃಷ್ಟಯಃ।
ಯಥಾ ಮರುನದೀವೇಗ ವಾರಿಗ್ರಹಣಬುದ್ಧಯಃ ॥೩೪॥

---

೩೧. ಅಹಂ ಮುಂತಾಗಿರುವ ಈ ಸರ್ಗವೆಲ್ಲವೂ ಅಪರಿಜ್ಞಾನ ದೋಷದಿಂದ ಬಂದುದು. ಬಾಲಕರ ಭ್ರಾಂತಿಯಿಂದ ಹುಟ್ಟಿದ ವೇತಾಲನಂತೆ, (ವಾಸನಾಬಲದಿಂದ) ವಜ್ರಸಾರವಾಗಿರುವುದು.

೩೨. ಬರುಬರುತ್ತ, ಇದು ಹೀಗೆ ಎಂದು ಅರ್ಥವಾಗಿ ಪರಿಜ್ಞಾತವಾದರೆ, ಬಹುಸ್ವಲ್ಪ ಚಿಕಿತ್ಸೆಯಿಂದಲೇ ಉಪಶಾಂತವಾಗುವುದು. ದೂರಗತನಾದ ಬಂಧುವಿನಲ್ಲಿಟ್ಟಿರುವ ಅಭಿಮಾನದಂತೆ, ವಾಸನಾತಾನವದಿಂದ ಶಿಥಿಲವಾಗುವುದು.

೩೩. ಸ್ವಪ್ನದಲ್ಲಿ ಕಂಡ ನಿಧಿಯನ್ನು ತೆಗೆದುಕೊಳ್ಳಬೇಕೆಂಬ ಭಾವನೆಯು, ಇದು ಕನಸು ಎಂದು ತಿಳಿದಕೂಡಲೇ ಶಾಂತವಾಗುವಂತೆ, ಅಖಂಡ ಚೇತನೆಯಿಂದ ಖಂಡವಾದ ಅಹಂಪ್ರತ್ಯಯ ಘನತ್ವವು ಶಾಂತವಾಗುವುದು.

೩೪. ದೃಶ್ಯಗಳು ಉಂಟೆಂಬ ದೃಶ್ಯದೃಷ್ಟಿಗಳು ಎಲ್ಲವೂ, ಮರುಭೂಮಿಯಲ್ಲಿ ಭ್ರಾಂತಿಗೋಚರವಾದ ನದಿಯಲ್ಲಿ ನೀರು ಉಂಟು ಎಂಬ ಭಾವನೆಯಂತೆ, ಸಂಪರಿಜ್ಞಾನವಾಗುತ್ತಲೂ, ನಾಶವಾಗುವುವು.

ಮಹಾರಾಮಾಯಣಪ್ರಾಯಶಾಸ್ತ್ರಪ್ರೇಕ್ಷಣಮಾತ್ರತಃ ।
ಏತದಾಸಾದ್ಯತೇ ನಿತ್ಯಂ ಕಿಮೇತಾವತಿ ದುಷ್ಕರಂ ॥೨೫॥

ಸಂಸಾರವಾಸನಾಭಾವರೂಪೇ ಸಕ್ತಾ ನು ಯಸ್ಯ ಧೀಃ ।
ಮಂದೋ ಮೋಕ್ಷೇ ನಿರಾಕಾಂಕ್ಷೀ ಸ ಶ್ವಾ ಕೀಟೋಽಥವಾ ಜನಃ ॥೨೬॥

ಭೋಗಾಭೋಗಃ ಕಿಲಾಯಂ ಯಃ ಸ ಜೀವನ್ಮುಕ್ತಬುದ್ಧಿನಾ ।
ಕೀದೃಶೋ ಭುಜ್ಯಮಾನಃ ಸ್ಯಾತ್ಕೀದೃಕ್ಸ್ಯಾತ್ಮೌರ್ಖ್ಯಸೇವಿನಾ ॥೨೭॥

---

೨೫. ಮಹಾ ರಾಮಾಯಣದಂತಹ ಶಾಸ್ತ್ರವನ್ನು ನೋಡುತ್ತಿದ್ದರೆ ಸಾಕು, ಈ ಸಂಪರಿಜ್ಞಾನವು ಲಭಿಸುವುದು. ಹೀಗೆ ಮಾಡುವುದೂ ಕಷ್ಟವೇ ?

೨೬. ಸಂಸಾರ ವಾಸನಾಬಲದಿಂದ ಅಭಾವರೂಪವಾದ ಸಂಸಾರದಲ್ಲಿ ಯಾವನ ಬುದ್ಧಿಯು ಆಸಕ್ತವಾಗಿ, ಮೋಕ್ಷದ ಕಡೆಯ ಆಶೆಯೂ ಇಲ್ಲದಿರುವುದೋ ಅಂತಹ ಮಂದನು, ನಾಯಿ, ಅಥವಾ ಕೀಟ ಎನ್ನಬೇಕು.

(ಜನಃ ಅಶುಚಿ ಭೋಗಾಸಕ್ತಿ ಸಾಮಾನ್ಯಾತ್ ಶ್ವಾ, ಅಥವಾ ಕೀಟೋ ನತು ಮನುಷ್ಯಃ–ತಾ. ಪ್ರ.)

೨೭. ಜೀವನ್ಮುಕ್ತ ಬುದ್ಧಿಯುಳ್ಳವನು ಭೋಗಾಭೋಗಗಳನ್ನೆಲ್ಲ ಬ್ರಹ್ಮಾನಂದ ಬುದ್ಧಿಯಿಂದ ಭೋಗಿಸುವನು. ಮೌರ್ಖ್ಯವನ್ನು ಆಶ್ರಯಿಸಿದ ಮಂದನು ಅವನ್ನೇ ವಿಷಯಾನಂದವಾಗಿ ಅನುಭವಿಸುವನು. ಅದು ಹೇಗೆ ? ಇದು ಹೇಗೆ ? ನೋಡಿಕೊ.

(ಯಥೈಕಮೇವಾನ್ನಂ ಹವಿಃ ಪುರೋಡಾಶಾದಿ ಶುಚಿತಮರೂಪಂ ದೇವದ್ವಿಜಾದಿಭಿರ್ಭುಜ್ಯತೇ, ಉಚ್ಛಿಷ್ಟ ಪುರೀಷಾದ್ಯಶುಚಿರೂಪಂ ತು ಶ್ವಕೀಟಾದಿಭಿಸ್ತಥಾ ಜೀವನ್ಮುಕ್ತೈಃ ಶಬ್ದಾದಿರ್ಭೋಗಃ ಶುದ್ಧ ಚಿನ್ಮಾತ್ರಾನಂದ ಸ್ವರೂಪೋ ಭುಜ್ಯತೇ । ಮೂರ್ಖೈಸ್ತು ಅಶುಚಿತಮ ವಿಷಯರೂಪಃ, ಇತ್ಯಾಶಯೇನಾಹ–ತಾ. ಪ್ರ.)

ಮಹಾರಾಮಾಯಣಪ್ರಾಯಶಾಸ್ತ್ರಪ್ರೇಕ್ಷಣಮಾತ್ರತಃ ।
ಅಂತಃಶೀತಲತೋದೇತಿ ಪರಾರ್ಥೇಷು ಹಿಮೋಪಮಾ ॥೨೮॥

ಮೋಕ್ಷಃ ಶೀತಲಚಿತ್ತತ್ವಂ ಬಂಧಃ ಸಂತಪ್ತಚಿತ್ತತಾ ।
ಏತಸ್ಮಿನ್ನಪಿ ನಾರ್ಥಿತ್ವಮಹೋ ಲೋಕಸ್ಯ ಮೂಢತಾ ॥೨೯॥

ಅಯಂ ಪ್ರಕೃತ್ಯಾ ವಿಷಯೈರ್ವಶೀಕೃತಃ ।
ಪರಸ್ಪರಂ ಸ್ತ್ರೀಧನಲೋಲುಪೋ ಜನಃ ॥
ಯಥಾರ್ಥಸಂದರ್ಶನತಃ ಸುಖೀ ಭವೇ ।
ನ್ಮುಮುಕ್ಷುಶಾಸ್ತ್ರಾರ್ಥವಿಚಾರಣಾದಿತಃ ॥೩೦॥

---

೨೮. ಅಷ್ಟೇ ಅಲ್ಲ. ಮಹಾ ರಾಮಾಯಣದಂತಹ ಶಾಸ್ತ್ರಗಳನ್ನು ಪದೇ ಪದೇ ನೋಡುತ್ತಿದ್ದರೆ, ಭೋಗರೂಪವಾದ ಅರ್ಥಗಳಲ್ಲಿ ಮುಳುಗಿದ್ದರೂ ಉತ್ತಮವಾಗಿ ಹಿಮದಂತಿರುವ, ಅಂತಶ್ಶೀತಲತೆಯು ಉದಯಿಸುವುದು.

(ಕಿಂಚ, ಅಜ್ಞಾನಾಂ ಭೋಗಾರ್ಥೇಷು ಅಗ್ನಿರಿವ ತೃಷ್ಣಾಕ್ರೋಧಲೋಭಾದಿ ಲಕ್ಷಣಃ ಸಂತಾಪ ಏವ ಉದೇತಿ, ಶಾಸ್ತ್ರಪರಿಶೀಲಾನಾಂ ಸುಜ್ಞಾನಾಂ ಸರ್ವಾರ್ಥೇಷು ಪರಾ ಅಂತಶ್ಶೀತಲತಾ ಉದೇತಿ ಇತ್ಯಪರೋ ವಿಶೇಷ ಇತ್ಯಾಹ–ತಾ. ಪ.)

೨೯. ಶೀತಲ ಚಿತ್ತತ್ವವೇ ಮೋಕ್ಷವು: ಸಂತಪ್ತ ಚಿತ್ತತೆಯೇ ಬಂಧವು. ಹೀಗಿದ್ದರೂ ಮೋಕ್ಷದಲ್ಲಿ ಆಸಕ್ತಿಯಿಲ್ಲವೆಂದರೆ, ಈ ಲೋಕದ ಮೂಢತನಕ್ಕೆ ಏನು ಹೇಳಬೇಕು!

೩೦. ಜನರು ಸ್ವಭಾವವಾಗಿ ವಿಷಯಗಳ ಅಧೀನರಾಗಿರುವರು. ಒಬ್ಬರು ಇನ್ನೊಬ್ಬರ ಸ್ತ್ರೀ, ಧನ, ಇವುಗಳನ್ನು ಹಾರಿಸಿ, ಲೋಲರಾಗಿರಬೇಕು ಎನ್ನುವರು. ಆದರಿಂದ ಸುಖಿಯಾಗಬೇಕು ಎನ್ನುವವನು ಯಥಾರ್ಥವು ಯಾವುದು ಎನ್ನುವುದನ್ನು ಸಾಕ್ಷಾತ್ಕರಿಸಿಕೊಳ್ಳಬೇಕು. ಆ ಸಾಕ್ಷಾತ್ಕಾರವಾಗುವುದು ಮುಮುಕ್ಷುವಾಗಿ ಶಾಸ್ತ್ರಾರ್ಥ ವಿಚಾರಣ ಮನನಾದಿಗಳನ್ನು ಮಾಡುವುದರಿಂದ.

ಶ್ರೀ ವಾಲ್ಮೀಕಿರುವಾಚ —

ಇತ್ಯುಕ್ತವತ್ಯಥ ಮುನೌ ದಿವಸೋ ಜಗಾಮ ।
ಸಾಯಂತನಾಯ ವಿಧಯೇಽಸ್ತಮಿನೋ ಜಗಾಮ ॥
ಸ್ನಾತುಂ ಸಭಾ ಕೃತನಮಸ್ಕರಣಾ ಜಗಾಮ ।
ಶ್ಯಾಮಾಕ್ಷಯೇ ರವಿಕರೈಶ್ಚ ಸಹಾಜಗಾಮ ॥೩೧॥

ಇತ್ಯಾರ್ಷೇ ವಾಸಿಷ್ಠಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಪಾಷಾಣೋ
ಪಾಖ್ಯಾನೇ ವಸಿಷ್ಠಶರೀರವರ್ಣನಂ ನಾಮ ಷಾಡನವತಿತಮಃ ಸರ್ಗಃ
ದಿವಸಃ ೧೬
ಪಾಷಾಣೋಪಾಖ್ಯಾನಂ ಸಮಾಪ್ತಂ ।

---

೩೧. ಮುನೀಂದ್ರನು ಹೀಗೆ ಹೇಳುತ್ತಿರಲು ದಿವಸವು ಮುಗಿಯಿತು. ಸಂಧ್ಯಾಕಾರ್ಯಗಳಾಗಲೆಂದು ಸೂರ್ಯನು ಅಸ್ತನಾದನು ಸಭೆಯು ವಸಿಷ್ಠಮುನಿಗೆ ನಮಸ್ಕರಿಸಿ ಸ್ನಾನಾರ್ಥವಾಗಿ ಹೊರಟಿತು. ರಾತ್ರಿಯಾದ ಮೇಲೆ ಸೂರ್ಯನು ಹುಟ್ಟುತ್ತಿದ್ದ ಹಾಗೆಯೇ ಸಭೆಯು ಮತ್ತೆ ಶ್ರವಣಾರ್ಥವಾಗಿ ಬಂತು.

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ವಸಿಷ್ಠ ಶರೀರ ವರ್ಣನ" ಎಂಬ
ತೊಂಭತ್ತಾರನೆಯ ಸರ್ಗವು

# ಷಣ್ಣವತಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ:—

ಪಾಷಾಣಾಖ್ಯಾನಮೇತತ್ತೇ ಕಥಿತಂ ಕಾರ್ಯಕೋವಿದ ।
ಅನಯೇಮಾಃ ಸ್ಫುರದ್ದೃಷ್ಟ್ಯಾ ಸೃಷ್ಟಯೋ ನಭಸಿ ಸ್ಥಿತಾಃ ॥೧॥

ನಚ ಸ್ಥಿತಂ ಕಿಂಚನಾಪಿ ಕ್ವಚನಾಪಿ ಕಥಂಚನ ।
ಸ್ಥಿತಂ ಬ್ರಹ್ಮಘನೇ ಬ್ರಹ್ಮ ಯಥಾಸ್ಥಿತಮಖಂಡಿತಂ ॥೨॥

ಬ್ರಹ್ಮಚಿನ್ಮಾತ್ರಕಂ ವಿದ್ಧಿ ತದ್ಯಥಾ ಸ್ವಪ್ನದೃಷ್ಟಿಷು ।
ಪುರಂ ಭವನ್ನಿಜಾದ್ರೂಪಾನ್ನ ಕದಾಚನ ಭಿದ್ಯತೇ ॥೩॥

---

# ತೊಂಭತ್ತಾರನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧. ಎಲೈ ಕಾರ್ಯಕೋವಿದನೆ, ಈ ಪಾಷಾಣೋಪಾಖ್ಯಾನವನ್ನು ನಿನಗೆ ಹೇಳಿದುದಾಯಿತು. ಈ ಉಪಾಖ್ಯಾನದಲ್ಲಿ ಹೇಳಿರುವಂತೆ, ಜ್ಞಾನವನ್ನು ಅವಲಂಬಿಸಿ ನೋಡಿದರೆ ಸೃಷ್ಟಿಗಳೆಲ್ಲವೂ ಚಿದಾಕಾಶದಲ್ಲಿಯೇ ಇರುವುವು.

೨. ಯಾವುದೂ ಎಲ್ಲಿಯೂ ಯಾವಾಗಲೂ ಇಲ್ಲ. ಬ್ರಹ್ಮಘನದಲ್ಲಿ ಬ್ರಹ್ಮವೇ ಇರುವುದು. ಇರುವದು ಯಾವದೋ ಅದು ಇದ್ದಂತೆಯೇ ಇರುವುದು; ಮತ್ತು ಅಖಂಡಿತವಾಗಿ ಇರುವುದು.

೩. ಬ್ರಹ್ಮವೆಂಬುದು ಚಿನ್ಮಾತ್ರಕವೆಂದು ತಿಳಿ. ಅದು ಹೇಗೆ ಕನಸಿನಲ್ಲಿ ನಗರವಾಗುವುದೋ, ಹಾಗೇ ಅದು ಆಗಲೂ ತನ್ನ ನಿಜರೂಪದಿಂದ ಯಾವಾಗಲೂ ಬೇರೆಯಾಗುವುದಿಲ್ಲ.

ಸ್ವಯಂಭೂತ್ವಸಮಾಪತ್ತೌ ತಥಾ ದೃಶ್ಯಸ್ಯವಸ್ಥಿತೌ ।
ಸ್ವರೂಪಮಜಹತ್ತ್ವೇವ ಚಿದಾಕಾಶಮಜಂ ಸ್ಥಿತಂ ॥೪॥

ನ ಸ್ವಯಂಭೂರ್ನ ಚ ಜಗನ್ನ ಸ್ವಪ್ನಪುರಮಸ್ತ್ಯಲಂ ।
ಸ್ಥಿತಂ ಸಂವಿನ್ಮಹಾದೃಷ್ಟ್ಯಾ ಬ್ರಹ್ಮಚಿನ್ಮಾತ್ರಮೇತಯಾ ॥೫॥

ಯಥಾ ಪುರಂ ಭವತ್ಸ್ವಪ್ನೇ ಚಿದ್ರೂಪಂ ಸ್ವಾತ್ಮನಿ ಸ್ಥಿತಂ ।
ಅಖಂಡಮೇವಮಾಸೃಷ್ಟೇರಾ ಮಹಾಪ್ರಲಯಸ್ಥಿತೇಃ ॥೬॥

ಹೇಮಹೇಮಾಶ್ಮನೋಃ ಸ್ವಪ್ನಪುರಚೇತನಯೋರ್ಯಥಾ ।
ಭೇದೋ ನ ಸಂಭವತ್ಯೇವ ನ ಭೇದಶ್ಚಿತಿಸರ್ಗಯೋಃ ॥೭॥

೪. ಸ್ವಯಂಭುವಾಗಿರುವಾಗಲೇ ಆಗಲಿ ದೃಶ್ಯವಾಗಿರುವಾಗಲೇ ಆಗಲಿ, ತನ್ನ ಸ್ವರೂಪವನ್ನು ಬಿಡದೆಯೇ ಚಿದಾಕಾಶವಾಗಿರುವುದರಿಂದಲೇ ಅದು ಅಜವಾಗಿ ಇರುವುದು.

೫. ಆ ಬ್ರಹ್ಮವು ಸ್ವಯಂಭುವೂ ಅಲ್ಲ: ಜಗತ್ತೂ ಅಲ್ಲ: ಸ್ವಪ್ನಪುರವೂ ಅಲ್ಲ. ಸಂವಿತ್ತಾಗಿ ಅದಿರುವುದು. ಮಹಾದೃಷ್ಟಿಯಿಂದ ಇದನ್ನು ನೋಡಬೇಕು. ಆಗ ಬ್ರಹ್ಮವೆಂಬುದು ಚಿನ್ಮಾತ್ರವೆಂದು ತಿಳಿಯುವುದು.

೬. ಚಿದ್ರೂಪವು ತನ್ನಲ್ಲಿಯೇ ಇದ್ದುಕೊಂಡಿದ್ದೂ ಸ್ವಪ್ನದಲ್ಲಿ ಪುರವಾಗುವಂತೆ, ಸೃಷ್ಟಿಯಲ್ಲಿಯೂ ಮಹಾ ಪ್ರಲಯದಲ್ಲಿಯೂ ಸ್ಥಿತಿಯಲ್ಲಿಯೂ ಸಹ ಅಖಂಡವಾಗಿಯೇ ಇರುವುದು.

೭. ಹೇಮಕ್ಕೂ ಹೇಮದ ಕಲ್ಲಿಗೂ, ಸ್ವಪ್ನಪುರ ಚೇತನಗಳಿಗೂ ಹೇಗೆ ಭೇದವಿಲ್ಲವೋ ಹಾಗೆಯೇ ಚಿತ್ತಿಗೂ ಸರ್ಗಕ್ಕೂ ಯಾವ ಭೇದವೂ ಇಲ್ಲ.

ಚಿತಿರೇಕಾಸ್ತಿ ನೋ ಸರ್ಗೋ ಹೇಮಾಸ್ತಿ ನ ತದೂರ್ಮಿಕಾ ।
ಸ್ವಪ್ನಾಚಲೇ ಚಿದೇವಾಸ್ತಿ ನ ತು ಕಾಚನ ಶೈಲತಾ ॥೮॥

ಚಿದೇವ ಶೈಲವದ್ಭಾತಿ ಯಥಾ ಸ್ವಪ್ನೇ ನಿರಾಮಯಾ ।
ತಥಾ ಬ್ರಹ್ಮ ನಿರಾಕಾರಂ ಸರ್ಗವದ್ಭಾತಿ ನೇತರತ್ ॥೯॥

ಚಿನ್ಮಾತ್ರಮಿದಮಾಕಾಶಮನಂತಮಜಮವ್ಯಯಂ ।
ಮಹಾಕಲ್ಪಸಹಸ್ರೇಷು ನೋದೇತಿ ನ ಚ ಶಾಮ್ಯತಿ ॥೧೦॥

ಚಿದಾಕಾಶೋ ಹಿ ಪುರುಷಶ್ಚಿದಾಕಾಶೋ ಭವಾನಯಂ ।
ಚಿದಾಕಾಶೋಽಹಮಜರಶ್ಚಿದಾಕಾಶೋ ಜಗತ್ತ್ರಯಂ ॥೧೧॥

---

೮. ಇರುವುದೆಲ್ಲಾ ಚಿತಿಯೊಂದೇ ಒಂದು! ಸರ್ಗವಿಲ್ಲ. ಹೇಮವಿರುವುದೇ ಹೊರತು ಅದರ ವಿಕಾರಗಳೊಂದೂ ಇಲ್ಲ. ಸ್ವಪ್ನಶೈಲದಲ್ಲಿ ಚಿತ್ತಿರುವುದೇ ಹೊರತು ಅದರಲ್ಲಿ ಶೈಲತೆಯೂ ಇರುವುದೇನು ?

೯. ನಿರಾಮಯವಾದ (ಯಾವ ವಿಕಾರವನ್ನೂ ಹೊಂದದ) ಚಿತ್ತೇ ಸ್ವಪ್ನದಲ್ಲಿ ಶೈಲವಾಗಿ ಕಾಣುವುದು. ಅದರಂತೆಯೇ ನಿರಾಕಾರವಾದ ಬ್ರಹ್ಮವೇ ಈ ಸರ್ಗದಂತೆ ಕಾಣಿಸುವುದಷ್ಟೇ ಅಲ್ಲದೆ, ಸರ್ಗವಾಗುವ ಇನ್ನೊಂದು ಯಾವುದೂ ಇಲ್ಲ.

೧೦. ಈ ಆಕಾಶವು ಅನಂತವೂ ಅಜವೂ ಅವ್ಯಯವೂ ಆಗಿರುವುದಲ್ಲವೆ ? ಇದೂ ಚಿನ್ಮಾತ್ರವೇ! ಮಹಾಕಲ್ಪ ಸಹಸ್ರಗಳಾದರೂ ಅದು ಉದಯವೂ ಆಗುವುದಿಲ್ಲ: ಉಪಶಮನವೂ ಆಗುವುದಿಲ್ಲ.

೧೧. ಚಿದಾಕಾಶವೇ ಪುರುಷನು: ಚಿದಾಕಾಶವೇ ನೀನು: ಇವನೂ ಚಿದಾಕಾಶವೇ! ಅಜರನಾದ ನಾನೂ ಚಿದಾಕಾಶವೇ! ಜಗತ್ತ್ರಯವೂ ಚಿದಾಕಾಶವೇ!

ಚಿದಾಕಾಶಂ ವರ್ಜಯಿತ್ವಾ ಶವಮೇವ ಶರೀರಕಂ ।
ಅಚ್ಛೇದ್ಯೋಽಸಾವದಾಹ್ಯೋಽಸೌ ಚಿದಾಕಾಶೋ ನ ಶಾಮ್ಯತಿ ॥೧೨॥

ಅತೋ ನ ಕಿಂಚನ ಮ್ರಿಯತೇ ನ ಚ ಕಿಂಚನ ಜಾಯತೇ ।
ಚಿತ್ತ್ವಾತ್ತತ್ಕಚನಂ ಜಗದಿತ್ಯನುಭೂಯತೇ ॥೧೩॥

ಚಿನ್ಮಾತ್ರಪುರುಷೋ ಜಂತುರ್ಮ್ರಿಯತೇ ಯದಿ ನಾಮ ವಾ ।
ತತೋ ಮರಿಷ್ಯತ್ತತ್ಪುತ್ರೋ ನಿಃಸಂದೇಹಂ ಪಿತುರ್ಮೃತೌ ॥೧೪॥

---

೧೨. ಚಿದಾಕಾಶವಿಲ್ಲದಿದ್ದರೆ ಶರೀರವು ಶವವೇ ಆಗುವುದು. ಅಚ್ಛೇದ್ಯವಾದ ಚಿದಾಕಾಶವು, ಅದಾಹ್ಯವಾದ ಚಿದಾಕಾಶವು ಎಂದಿಗೂ ಶಾಂತವಾಗುವುದಿಲ್ಲ

೧೩. ಅದರಿಂದ ಯಾವುದೂ ಸಾಯುವುದೂ ಇಲ್ಲ: ಯಾವುದೂ ಹುಟ್ಟುವುದೂ ಇಲ್ಲ. ಏಕೆಂದರೆ ಎಲ್ಲವೂ ಚಿತ್ತೇ! ಚಿತ್ತಿನ ಕಚನವೇ ಜಗತ್ತು ಎನ್ನಿಸಿಕೊಳ್ಳುವುದು.

೧೪. ಚಿನ್ಮಾತ್ರ ಪುರುಷನಾದ ಜಂತುವು ಸಾಯುವನು ಎಂದಾದರೆ, ತಂದೆಯು ಸತ್ತರೆ ಅವನ ಮಗನೂ ಸಾಯಬೇಕಾಗುವುದು.

(ಚಿತೋ ಮರಣೇ ತದ್ಭೇದೇ ಪ್ರಮಾಣಾಭಾವಾತ್ ಸರ್ವ ಮರಣಂ ಸ್ಯಾದಿತ್ಯಾಹ—ಆತ್ಮಾವೈ ಪುತ್ರನಾಮಾಸಿ ಇತಿ ಪುತ್ರಸ್ಯ ಪಿತ್ರಾತ್ಮಾಭೇದಶ್ರುತೇರಿತಿ ಭಾವಃ—ತಾ. ಪ್ರ.)

(ತಂದೆಯ ಪ್ರಾಣವೇ ಯೋನ್ಯಂತರದಲ್ಲಿ ಬೇರೊಂದು ದೇಹವನ್ನು ಪಡೆದು ಪುತ್ರನಾಗುವವನು ಎಂಬ ಸಿದ್ಧಾಂತದಿಂದ ಪಿತೃ ಮರಣದಲ್ಲಿ ತದಂಶವಾದ ಪುತ್ರನೂ ಇಲ್ಲವಾಗಬೇಕಾಗುವುದು ಎಂದು ಭಾವ)

ಏಕಸ್ಮಿನ್ಪ್ರಮೃತೇ ಜಂತಾವಮರಿಷ್ಯಂಸ್ತು ಸರ್ವದಾ ।
ಸರ್ವ ಏವ ಜನಾಃ ಶೂನ್ಯಮಭವಿಷ್ಯನ್ಮಹೀತಲಂ ।।೧೫।

ನ ಚಾದ್ಯಾಪಿ ಮೃತಂ ರಾಮ ಚಿನ್ಮಾತ್ರಂ ಕಸ್ಯಚಿತ್ಕ್ವಚಿತ್ ।
ನಚ ಶೂನ್ಯಾ ಸ್ಥಿತಾ ಭೂಮಿಸ್ತಸ್ಮಾಚ್ಚಿತ್ಪುರುಷೋಽಕ್ಷಯಃ ।೧೬॥

ಏಕಂ ಚಿನ್ಮಾತ್ರಮೇವಾಹಂ ನ ಶರೀರಾದಯೋ ಮಮ ।
ಇತಿ ಸತ್ಯನುಸಂಧಾನೇ ಕ್ವ ಜನ್ಮಮರಣಾದಯಃ ।।೧೭॥

ಅಹಂ ಚಿನ್ಮಾತ್ರಮಮಲಮಿತ್ಯಾತ್ಮಾನುಭವಂ ಸ್ವಯಂ ।
ಅಪಹಂತ್ಯಾತ್ಮಹಂತಾರೋ ನಿಮಜ್ಜಂತ್ಯಾಪದರ್ಣವೇ ॥೧೮॥

---

೧೫. ಯಾವುದಾದರೂ ಒಂದು ಜಂತುವು ಮೃತವಾದರೆ, ಸರ್ವಜನರೂ ಸತ್ತುಹೋಗಬೇಕಾಗಿ ಬಂದು, ಮಹೀಮಂಡಲವೇ ಶೂನ್ಯವಾಗಿ ಹೋದೀತು.

("ಏಕ ಏವ ಹಿ ಭೂತಾತ್ಮಾ ಭೂತೇಭೂತೇ ವ್ಯವಸ್ಥಿತಃ" ಇತಿ ಶ್ರುತೇರೇಕ ಮರಣೇ ಸರ್ವಮರಣ ಪ್ರಸಂಗಶ್ಚೇತ್ಯಾಹ)

೧೬. ಯಾವನೊಬ್ಬನಲ್ಲಿರುವ ಚಿತ್ತಾದರೂ ಇದುವರೆಗೆ ಮೃತವಾದ್ದಿಲ್ಲ : ರಾಮ, ಭೂಮಿಯೂ ಬರಿದಾಗಲಿಲ್ಲ. ಆದರಿಂದ ಚಿತ್ಪುರುಷನು ಅಕ್ಷಯನು.

೧೭. "ಏಕೈಕವಾದ ಚಿನ್ಮಾತ್ರವೇ ನಾನು : ನನಗೆ ಶರೀರಾದಿಗಳಿಲ್ಲ" ಎಂಬ ಅನುಸಂಧಾನವು ನಡೆಯುತ್ತಿರಲು ಜನ್ಮಮರಣಾದಿಗಳು ಎಲ್ಲಿಯವು ?

೧೮. ನಾನು ಚಿನ್ಮಾತ್ರನು ಅಮಲನು ಎಂಬ ಅನುಭವವು ತಾನೇ ತಾನಾಗಿ ರಲು, ಅದನ್ನು ಇಲ್ಲವೆನ್ನುವವರು ಆತ್ಮಘಾತಿಗಳಾಗಿ ಆಪತ್ಸಮುದ್ರದಲ್ಲಿ ಮುಳು ಗುವರು.

ಚಿದಹಂ ಗಗನಾದಚ್ಛಾ ನಿತ್ಯಾನಂತಾ ನಿರಾಮಯಾ ।
ಕಿಂ ಜೀವಿತಂ ಮೇ ಕಿಂವಾಪಿ ಮರಣಂ ವಾ ಸುಖಾಸುಖೇ ॥೧೯॥

ವ್ಯೋಮಾತ್ಮಚೇತನಮಹಂ ಕೇ ಶರೀರಾದಯೋ ಮಮ ।
ಇತ್ಯಾತ್ಮಹಾಪಹ್ನುತೇಂತರ್ಯೋಽನುಭೂತಂ ಧಿಗಸ್ತು ತಂ ॥೨೦॥

ಚಿದಾಕಾಶಮಹಂ ಸ್ವಚ್ಛಮನುಭೂತಿರಿತಿ ಸ್ಫುಟಾ ।
ಯಸ್ಯಾಸ್ತಮಾಗತಾ ಮೂಢಂ ತಂ ಜೀವಂತಂ ಶವಂ ವಿದುಃ ॥೨೧॥

ಅಹಂ ವೇದನಮಾತ್ರಾತ್ಮಾ ಕಾನಿ ದೇಹೇಂದ್ರಿಯಾಣಿ ಮೇ ।
ಲಬ್ಧಾತ್ಮಾನಮಿತಿ ಸ್ವಚ್ಛಂ ಪ್ರವಿಲುಂಪಂತಿ ನಾಪದಃ ॥೨೨॥

---

೧೯. ನಾನು ಗಗನಕ್ಕಿಂತಲೂ ಸ್ವಚ್ಛವಾದ ಚಿತ್. ಅದು ನಿತ್ಯವಾದುದು. ಅನಂತವಾದುದು. ನಿರಾಮಯವಾದುದು. ಹೀಗಿರಲು ನನಗೆ ಜೀವಿತವಾದರೇನು ? ಮರಣವಾದರೇನು ? ಸುಖ–ಅಸುಖಗಳೆಂದರೇನು ?

೨೦. ನಾನು ಆಕಾಶವೇ ಆತ್ಮವಾಗುಳ್ಳ ಚೇತನನು. ಇಂತಹ ನನಗೆ ಶರೀರಾದಿಗಳು ಯಾವವು ? ಹೀಗೆ ತನ್ನೊಳಗೆ ಸ್ಥಿರವಾಗಿರುವ ಅನುಭವವನ್ನೂ ಇಲ್ಲವೆನ್ನುವ ಆತ್ಮಘಾತಿಗೆ ಧಿಕ್ಕಾರವು.

೨೧. ನಾನು ಸ್ವಚ್ಛವಾದ ಚಿದಾಕಾಶ ಸ್ವರೂಪನು ಎಂಬ ಅನುಭವವು ಸ್ಫುಟವಾಗಿರಲು, ಅದನ್ನು ಯಾವನು ಇಲ್ಲವೆನ್ನುವನೋ, ಯಾವನಿಗೆ ಅದಿಲ್ಲವಾಗುವುದೋ ಅವನನ್ನು ಬದುಕಿರುವ ಹೆಣ ಎನ್ನುವರು.

೨೨. ನಾನು ಸಂವೇದನ ಮಾತ್ರ ಸ್ವರೂಪನು. ಇಂತಹ ನನಗೆ ದೇಹೇಂದ್ರಿಯಾದಿಗಳು ಎಲ್ಲಿಯವು ? ಇಂತಹ ಬೋಧದಿಂದ ಆತ್ಮಲಾಭವನ್ನು ಪಡೆದವನಿಗೆ, ಅವಿದ್ಯಾದಿಮಾಲಿನ್ಯಗಳನ್ನು ಕಳೆದುಕೊಂಡು ಸ್ವಚ್ಛನಾದವನಿಗೆ ಮರಣಾದ್ಯಾಪದಗಳು ಏನೂ ಹಾನಿಯನ್ನು ತರಲಾರವು.

ಚಿನ್ಮಾತ್ರಂ ಶುದ್ಧಮಾತ್ಮಾನಂ ಯೋಽವಲಂಬ್ಯ ಸ್ಥಿರಃ ಸ್ಥಿತಃ ।
ನಾದಯಸ್ತಂ ವಿಲುಂಪಂತಿ ಮಹೋಪಲಮಿವೇಷವಃ ॥೨೩॥

ಚಿತ್ತ್ವಂ ಸ್ವಭಾವಂ ವಿಸ್ಮೃತ್ಯ ಬದ್ಧಾಸ್ಥಾ ಯೋಽ ಶರೀರಕೇ ।
ತೈಃ ಸುವರ್ಣಂ ಪರಿತ್ಯಜ್ಯ ಗೃಹೀತಂ ಭಸ್ಮ ವಸ್ತುತಃ ॥೨೪॥

ಬಲಂ ಬುದ್ಧಿಶ್ಚ ತೇಜಶ್ಚ ದೇಹೋಽಹಮಿತಿ ಭಾವನಾತ್ ।
ನಶ್ಯತ್ಯುದೇತ್ಯೇತದೇವ ಚಿದೇವಾಹಮಿತಿ ಸ್ಥಿತೇಃ ॥೨೫॥

ಚಿದಾಕಾಶಮಹಂ ಶುದ್ಧಂ ಕೇ ಮೇ ಮರಣಜನ್ಮನೀ ।
ಏವಂ ಸ್ಥಿತೇ ಸ್ಯುಃ ಕಿಂನಿಷ್ಠಾ ಲೋಭಮೋಹಮದಾದಯಃ ॥೨೬॥

---

೨೩. ಯಾವನು ಚಿನ್ಮಾತ್ರನೂ ಶುದ್ಧನೂ ಆದ ಆತ್ಮನನ್ನು ಅವಲಂಬಿಸಿ ಸ್ಥಿರನಾಗಿರುವನೋ ಅವನನ್ನು ಆಧಿಗಳು ಯಾವವೂ ಏನೂ ಮಾಡಲಾರವು. ಮಹಾಶಿಲೆಯನ್ನು ಬಾಣಗಳು ಭೇದಿಸಬಲ್ಲವೆ ?

೨೪. ಸಹಜವಾಗಿರುವ ಚಿತ್ತ್ವವನ್ನು ಮರೆತು ಯಾರು ಶರೀರಕದಲ್ಲಿ ಅಭಿಮಾನವಿಡುವರೋ ಅವರು ಸುವರ್ಣವನ್ನು ಬಿಟ್ಟು ಭಸ್ಮವನ್ನು ವಸ್ತುವೆಂದು ಪರಿಗ್ರಹಿಸಿದವರು.

೨೫. ಬಲವು, ಬುದ್ಧಿಯು, ತೇಜಸ್ಸು, ದೇಹವು, ಇವು ನಾನೆಂದು ಭಾವನ ಮಾಡುವುದರಿಂದ, ನಾಶವನ್ನು ಹೊಂದುವವು. ನಾನು ಚಿತ್ತು ಎಂಬ ಸ್ಥಿತಿಯಿಂದ ಉದಯವನ್ನು ಹೊಂದುವವು

೨೬. ಶುದ್ಧವಾದ ಚಿದಾಕಾಶವು ನಾನು. ನನಗೆ ಮರಣ ಜನ್ಮಗಳೆಲ್ಲಿಯವು ? ಎಂದು ಸ್ಥಿತಿಯನ್ನು ಪಡೆದವನಿಗೆ ಲೋಭ ಮೋಹಮದಾದಿಗಳು ಎಲ್ಲಿದ್ದಾವು ?

ಚಿದಾಕಾಶಾಚ್ಚ್ಯುತೇ ದೇಹಾನ್ಯೋನ್ಯಾತ್ಮತ್ವೇನಮುಪಾಶ್ರಯಾತ್ ।
ತಸ್ಯೈವ ತದ್ಯುಜ್ಯತೇ ವಕ್ತುಂ ಸಂತಿ ಲೋಭಾದಯಸ್ತ್ವಿತಿ ॥೨೭॥

ನ ಛೇದ್ಯೋ ನ ಚ ದಹ್ಯೋಽಹಂ ಚಿನ್ಮಾತ್ರಂ ವಜ್ರವಚ್ಚಿತಿ ।
ನ ದೇಹೀ ನಿಶ್ಚಯೋ ಯಸ್ಯ ತಂ ಪ್ರತ್ಯಂತಕರಸ್ತೃಣಂ ॥೨೮॥

ಅಹೋ ನು ಮುಗ್ಧತಾ ಜ್ಞಾನದೃಷ್ಟೀನಾಂ ಯದ್ವಿದಂತ್ಯಲಂ ।
ಶರೀರಶಕಲಾಭಾವೇ ನಶ್ಯಾಮ ಇತಿ ಮೋಹಿತಾಃ ॥೨೯॥

ಅಹಂ ಚಿನ್ನಭ ಏವೇತಿ ಸತ್ಯೇ ಭಾವೇ ಸ್ಥಿರೇ ಸತಿ ।
ವಜ್ರಪಾತಯುಗಾಂತಾಗ್ನಿದಾಹಾಃ ಪುಷ್ಪೋತ್ಕರೋಪಮಾಃ ॥೩೦॥

---

೨೭. ಚಿದಾಕಾಶವನ್ನು ಬಿಟ್ಟು ಸ್ಥೂಲಸೂಕ್ಷ್ಮ ಕಾರಣಗಳೆಂಬ ದೇಹಗಳನ್ನು ಆತ್ಮನೆಂದು ಕೊಳ್ಳುವವನಿಗೆ ಲೋಭಾದಯಗಳುಂಟು ಎಂಬುದು ಯೋಗ್ಯವು.

೨೮. ಛೇದ್ಯವೂ ದಹ್ಯವೂ ಅಲ್ಲದ ವಜ್ರದಂತಹ ಚಿತ್ತಿನಲ್ಲಿ ನಾನು ಚಿನ್ಮಾತ್ರನಾಗಿರುವೆನು. ನಾನು ದೇಹಿಯೂ ಅಲ್ಲ ಎಂಬ ನಿಶ್ಚಯವು ಯಾರಿಗುಂಟೋ ಅವನಿಗೆ ಮೃತ್ಯುವು ತೃಣಪ್ರಾಯವು.

೨೯. ಆಹಾ! ಏನು ಹೇಳಲಿ! ಶರೀರವೆಂಬ ಒಂದು ತುಂಡು ಇಲ್ಲವಾದರೆ ನಾವು ಹೋದೆವು ಎಂದು ಮೋಹದಿಂದ ಜ್ಞಾನದೃಷ್ಟಿಯುಳ್ಳವರೂ ತಿಳಿದುಕೊಂಡು ವ್ಯಾಮೋಹಪಟ್ಟುಕೊಳ್ಳುವರಲ್ಲಾ!

೩೦. ನಾನು ಚಿದಾಕಾಶವೇ! ಇನ್ನೇನೂ ಅಲ್ಲ! ಎಂಬ ಭಾವವು ಸತ್ಯವಾಗಿ ಸ್ಥಿರವಾಗಿ ನಿಲ್ಲಲು, ವಜ್ರದಿಂದ ಹೊಡೆ (ಸಿಡಿಲು ಬೀಳಲಿ) ಪ್ರಲಯಾಗ್ನಿಯು ಸುಡಲಿ, ಅದೆಲ್ಲವೂ ಹೂವು ಎರಚಿದಂತಾಗುವುದು.

ಚಿನ್ಮಾತ್ರಮಮರಂ ನಾಶಂ ಯನ್ನಶ್ಯಾಮೀತಿ ರೋದಿತಿ ।
ಅನಷ್ಟ ಏವ ತದ್ದೇಹೋ ಜಾತಾಪೂರ್ವಾ ಖಿಲೋಲಿಕಾ ॥೩೧॥

ಇದಂ ಚೇತನಮೇವಾಹಂ ನಾಹಂ ದೇಹಾದಿದೃಷ್ಟಯಃ ।
ಇತಿ ನಿಶ್ಚಯವಾನ್ಯೋಽಂತರ್ನ ಸ ಮುಹ್ಯತಿ ಕರ್ಹಿಚಿತ್ ॥೩೨॥

ಅಹಂ ಚೇತನಮಾಕಾಶೋ ನಾಶೋ ಮೇ ನೋಪಪದ್ಯತೇ ।
ಚೇತನೇನ ಜಗತ್ಪೂರ್ಣಂ ಕೇವ ಸಂದೇಹಿತಾತ್ರ ವಃ ॥೩೩॥

ಚೇತನಂ ವರ್ಜಯಿತ್ವಾನ್ಯತ್ಕಿಂಚಿನ್ನಾಯಂ ಜನಾ ಯದಿ ।
ಯದುಚ್ಯತಾಂ ಮಹಾಮೂಢಾಃ ಸ್ವಾತ್ಮಾ ಕಿಮಪಲಪ್ಯತೇ ॥೩೪॥

---

೩೧. ಅಮರವಾದ ಚಿನ್ಮಾತ್ರವೂ ನಾಶವಿಲ್ಲ: ನಾನು ಸಾಯುವೆನಲ್ಲಾ! ಎಂದು ಅಳುವುದು ಯಾವುದುಂಟೋ ಅದು, ಅನಷ್ಟವಾದವನಿಗೆ (ಇದ್ದವನಿಗೆ) ಅತ್ತಂತೆ! ಅದನ್ನು ವಿವೇಕಿಗಳು ನಾಟಕದ ಅಳು ವಿಡಂಬನ, ವಿನೋದ ಎನ್ನುವರು.

(ಸೇಯಂ ವಿವೇಕಿದೃಶಾ ನಟಸ್ಯೇವ ರೋದನ ವಿಡಂಬನಾ ಅಪೂರ್ವಾ ಖಿಲೋಲಿಕಾ ಪರಿಹಾಸಕ್ರೀಡೈವ ಜಾತಾ—ತಾ. ಪ್ರ.)

೩೨. "ಈ ಚೇತನವೇ ನಾನು! ನಾನು ದೇಹಾದಿದೃಷ್ಟಿ ಸಿದ್ಧಗಳಾದ ಒಂದೂ ಅಲ್ಲ." ಎಂಬ ನಿಶ್ಚಯವು ಯಾವನ ಮನಸ್ಸಿನಲ್ಲಿ ದೃಢವಾಗಿರುವುದೋ ಅವನು ಹೇಗೆ ಹೇಗೂ ಮೋಹಪಡುವುದಿಲ್ಲ.

(ಇದಂ ನಿತ್ಯಾಪರೋಕ್ಷಂ ಚಿನ್ಮಾತ್ರಂ ಚೇತನಮೇವಾಹಂ—ತಾ. ಪ್ರ.)

೩೩. ನಾನು ಚೇತನನು: ಆಕಾಶರೂಪನು. ನನಗೆ ನಾಶವೆಲ್ಲಿಯದು? ಚೇತನವು ಜಗತ್ತನ್ನೆಲ್ಲಾ ತುಂಬಿರುವುದು. ಇದರಲ್ಲಿ ನಿಮಗೆ ಸಂದೇಹವೆಲ್ಲಿಯದು?

(ಸಂದೇಹಿತಾ ಜನ್ಮ ಮರಣಾದಿ ಸಂಶಯಃ-ತಾ. ಪ್ರ.)

೩೪. ಚೇತನವನ್ನು ಬಿಟ್ಟು ಇನ್ನೇನೋ ನಾವು ಎನ್ನುವ ಜನರೂ ಇರುವುದಾದರೆ, ಅವರಿಗೆ ಹೇಳಿ: "ಅಯ್ಯೋ! ಮಹಾ ಮೂಢರೇ! ನಿಮ್ಮ ಆತ್ಮವನ್ನು ನೀವೇ ಏಕೆ ಅಪಲಪಿಸುವಿರಿ?" ಎನ್ನಿರಿ.

ತಚ್ಚೇತನಂ ಚೇನ್ಮ್ರಿಯತೇ ತಜ್ಜನಾಃ ಪ್ರತ್ಯಹಂ ಮೃತಾಃ ।
ಬ್ರೂತ ಕಿಂ ನ ಮೃತಾ ಯೂಯಂ ತಸ್ಮೃತಂ ಕಿಲ ಚೇತನಂ ॥೩೫॥

ತಸ್ಮಾನ್ನ ಮ್ರಿಯತೇ ಕಿಂಚಿನ್ನ ಚ ಜೀವತಿ ಕಿಂಚನ ।
ಜೀವಾಮಿ ಮೃತೋಸ್ಮೀತಿ ಚಿಚ್ಚೇತತಿ ನ ನಶ್ಯತಿ ॥೩೬॥

ಚಿಚ್ಚೇತತಿ ಯಥಾ ವಾ ಯತ್ತತ್ತಥಾ ಸಾಶು ಪಶ್ಯತಿ ।
ಆಬಾಲಮೇಷೋಽನುಭವೋ ನ ಕ್ವಚಿತ್ಸಾ ಚ ನಶ್ಯತಿ ॥೩೭॥

(ಚೇತನಾದಸ್ಯಪ್ಪಯಮಿತಿ ಹಿ ಚೇತಯದ್ಭಿರುಚ್ಯೇತ, ಅಚೇ ತಯದ್ಭಿರ್ವಾ ನಾದ್ಯಃ ಚೇತಯದ್ಭಿಃ ಚೇತನಾ ಸ್ವಭಾವಂ ಸ್ವಸ್ಯ ಅನುಭವದ್ಭಿಃ ತಥಾ ವಕ್ತುಮಶಕ್ಯ ತ್ವಾತ್ । ನದ್ವಿತೀಯಃ । ಅಚೇತಯದ್ಭಿಃ ಜಡೈಃ ವಯಮಚೇತನಾ ಇತ್ಯನುಭವಿತು ಮಭಿಲಪಿತುಂ ಕಿಂಚಿದಪಲಪಿತುಂವಾ ಶಕ್ಯಂ ಇತ್ಯಾಶಯೇನಾಹ-ತಾ. ಪ್ರ)

೩೫. ಆ ಚೇತನವು ಸಾಯುವುದು ಎನ್ನುವುದಾದರೆ, ಆ ಜನರೂ ನಿತ್ಯವೂ ಮೃತರೇ! ಚೇತನವೇ ಮೃತವೆಂದಮೇಲೆ ನೀವು ಹೇಗೆ ಮೃತರಲ್ಲ ಹೇಳಿ!

(ಕಿಂಚ ಚೈತನ್ಯಂ ಸ್ವಮರಣಂ ಚೇತ್ ಪಶ್ಯತಿ ತರ್ಹಿಸದೈವ ಪಶ್ಯೇತ್ । ತೇನಾ ಸರ್ವದಾ ಸರ್ವೇಷಾಂ ಜೀವತಾಂ ಮರಣಾನುಭವಃ ಸ್ಯಾದಿತ್ಯಾಹ-ತಾ.ಪ್ರ.)

೩೬. ಆದರಿಂದ ಯಾವುದೂ ಸಾಯುವುದಿಲ್ಲ (ಸಾವೇ ಇಲ್ಲವಾದ್ದರಿಂದ) ಯಾವುದೂ ಬದುಕುವುದೂ ಎನ್ನುವುದಿಲ್ಲ. ಜೀವಾಮಿ, ಮ್ರಿಯೇ, ಎಂಬುದೆಲ್ಲಾ ಚಿತ್ತದ ಭ್ರಾಂತಿಗಳು. ನಿಜವಾಗಿ ಚಿತ್ತು ನಾಶವಾಗುವುದಿಲ್ಲ

(ಏವಂ ಮರಣಪ್ರಸಿದ್ಧೌ ತದ್ವ್ಯಾವೃತ್ತಂ ಜೀವನಮಿತ್ಯಪಿ ಕಲ್ಪನಾ ವೃಥೇ ತ್ಯಾಶಯೇನಾಹ ತಸ್ಮಾದಿತಿ ತಥಾಚ ಶ್ರುತಿಃ "ನಹಿದ್ರಷ್ಟು ದೃಷ್ಟೇರ್ವಿ ಪರಿಲೋಪೋ ವಿದ್ಯತೇ ಅವಿನಾಶಿತ್ವಾತ್"+ಇತಿ–ತಾ. ಪ್ರ.)

೩೭. ಚಿತ್ತು ಯಾವಯಾವ ರೂಪವಾಗಿ ಸಂಕಲ್ಪಿಸುವುದೋ ಅದದೇ ಆಗಿ ತನ್ನನ್ನೇ ಆ ಕೂಡಲೇ ನೋಡಿಕೊಳ್ಳುವುದು. ಆಬಾಲರಾಗಿ ಇದೇ ಅನುಭವವು. ಹೀಗಿರಲು ಆ ಚಿತ್ತು ಸಾಯುವುದು ಹೇಗೆ?

ಪರಿಪಶ್ಯತಿ ಸಂಸಾರಂ ಪರಿಪಶ್ಯತಿ ಮುಕ್ತತಾಂ ।
ಸುಖದುಃಖಾನಿ ಜಾನಾತಿ ಸ್ವರೂಪಾತ್ತನ್ನ ಭಿದ್ಯತೇ ॥೩೮॥

ಅಪರಿಜ್ಞಾನದೇಹಾತ್ತು ಧತ್ತೇ ಮೋಹಾಭಿದಾಂ ಸ್ವಯಂ ।
ಪರಿಜ್ಞಾತಸ್ವರೂಪಾತ್ತು ಧತ್ತೇ ಮೋಕ್ಷಾಭಿಧಾಂ ಸ್ವಯಂ ॥೩೯॥

ನಾಸ್ತಮೇತಿ ನ ಚೋದೇತಿ ನ ಕದಾಚನ ಕಿಂಚನ ।
ಸರ್ವಮೇವ ಚ ಚಿನ್ಮಾತ್ರಮಾಕಾಶವಿಶದಂ ಯತಃ ॥೪೦॥

---

೩೮. ಆ ಚಿತ್ತು ಸಂಸಾರವನ್ನೂ ಅನುಭವಿಸುವುದು, ಮುಕ್ತತೆಯನ್ನೂ ಅನುಭವಿಸುವುದು. ಸುಖದುಃಖಗಳನ್ನೂ ತಿಳಿಯುವುದು ಆದರೂ ಅದು ತನ್ನ ಸ್ವರೂಪದಿಂದ ಎಂದಿಗೂ ಬೇರೆಯಾಗುವುದಿಲ್ಲ.

. (ಸ್ವರೂಪಾಚ್ಚಿತ್ಸ್ವಭಾವಾತ್ತು ಜೈತ್ಯಭೇದೇ ದೇಶಭೇದೇ ಕಾಲಭೇದೇ ಚ ನಭಿದ್ಯತೇ – ತಾ. ಪ್ರ.)

೩೯ ದೇಹವೆಂದರೇನು ಎಂಬುದನ್ನು ತಿಳಿಯದೆ ಮೋಹ (ಗೊಂದು ಸಂಸಾರ) ವನ್ನು ಅನುಭವಿಸುವುದು. ಸ್ವರೂಪವನ್ನು ತಿಳಿದುದಾದರೆ ಮೋಕ್ಷವನ್ನು ಪಡೆಯುವುದು. ಆದರೆ ಅದು ಆಗುವುದು ಸ್ವಯಂ : ಪರರಿಂದಲ್ಲ.

೪೦. ಯಾವುದೂ ಅಸ್ತವಾಗುವುದಿಲ್ಲ : ಯಾವುದೂ ಉದಯವಾಗುವುದಿಲ್ಲ. ಅಸ್ತೋದಯಗಳು ಯಾವಾಗಲೂ ಇಲ್ಲ ಏಕೆಂದರೆ ಎಲ್ಲವೂ ಚಿತ್ತೇ! ಎಲ್ಲವೂ ಆಕಾಶದಂತೆ ವಿಶದವಾಗಿರುವುದು.

ನ ತದಸ್ತಿ ನ ಯತ್ಸತ್ಯಂ ನ ತದಸ್ತಿ ನ ಯನ್ಮೃಷಾ ।
ಯದ್ಯಥಾ ಯೇನ ನಿರ್ಣೀತಂ ತತ್ತಥಾ ತಂ ಪ್ರತಿ ಸ್ಥಿತಂ ॥೪೧॥

ಯದ್ಯದ್ಯಥಾ ಜಗತಿ ಚೇತತಿ ಚೇತನಾತ್ಮಾ ।
ತತ್ತತ್ತಥಾನುಭವತೀತ್ಯನುಭೂತಿಸಿದ್ಧಂ ॥
ದೃಷ್ಟಂ ವಿಷಾಮೃತದೃಶೇವ ಪದಾರ್ಥಜಾತಂ ।
ನಾತೋಸ್ತಿ ಸಂವಿದವಿಧೇಯಮಿತಿ ಪ್ರಸಿದ್ಧಂ ॥೪೨॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಅಮರತ್ವಪ್ರತಿಪಾದನಂ ನಾಮ ಷಣ್ಣವತಿತಮಃ ಸರ್ಗಃ

---

೪೧. ಯಾವುದು ಸತ್ಯವಲ್ಲವೋ ಅದಿಲ್ಲ; ಯಾವುದು ಮೃಷಾ ಅಲ್ಲವೋ ಅದೂ ಇಲ್ಲ. ಯಾವುದನ್ನು ಹೇಗೆಂದು ನಿರ್ಣಯಿಸಿದರೆ ಅದರಂತೆ ಅದು. ಸತ್ಯವೆಂದರೆ ಸತ್ಯ. ಅಸತ್ಯವೆಂದರೆ ಅಸತ್ಯ.

೪೨. ಚೇತನನಾದ ಆತ್ಮನು ಯಾವ ಯಾವದನ್ನು ಹೇಗೆ ಹೇಗೆ ಸಂಕಲ್ಪಿಸಿದರೆ ಅದನ್ನು ಹಾಗೆ ಹಾಗೆ ಅನುಭವಿಸುವನೆನ್ನುವುದು ಅನುಭವಸಿದ್ಧವು. ಪದಾರ್ಥ ಪದಾರ್ಥವೆಲ್ಲವೂ ವಿಷ-ಅಮೃತ ಎರಡೂ ಆಗುವುದು ಉಂಟು. (ಹಾಗಾಗುವುದು ಅವರವರ ದೃಷ್ಟಿಯಿಂದ) ಆದರಿಂದ ಸಂವಿತ್ತು ನೋಡಿದಂತೆ ಆಗುವುದು ಎನ್ನುವುದು ಪ್ರಸಿದ್ಧವು.

(ಪದಾರ್ಥಜಾತಂ ವಿಷಾಮೃತದೃಶೇವ ಕಾಲಭೇದಾತ್, ಭೋಕ್ತೃಭೇದಾತ್ ಸಹಕಾರಿ ಭೇದಾಚ್ಚ ಅನಿಯತ ವಿಪರೀತ ವ್ಯವಸ್ಥಿತಾರ್ಥ ಕ್ರಿಯಾಭೇದ ಸಂವಿದನುಸಾರೇಣೈವ ವ್ಯವಸ್ಥಿತಂ ದೃಷ್ಟಂ ಇತ್ಯತೋ ಹೇತೋಃ ಸಂವಿದವಿಧೇಯಂ ಸಂವಿದನನುಸಾರಿ ಕಿಂಚಿದಪಿ ವಸ್ತು ನಾಸ್ತೀತಿ ಯದುಕ್ತಂ ತತ್ಪ್ರಸಿದ್ಧ ಮಿತ್ಯರ್ಥಃ-ತಾ.ಪ್ರ.)

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ "ಅಮರತ್ವಪ್ರತಿಪಾದನ" ಎಂಬ ತೊಂಭತ್ತಾರನೆಯ ಸರ್ಗವು

# ಸಪ್ತನವತಿತಮಃ ಸರ್ಗಃ

ಶ್ರೀವಸಿಷ್ಠ ಉವಾಚ—

ಸಂವಿನ್ಮಯತ್ವಾಜ್ಜಗತಃ ಸ್ವಪ್ನಸ್ಯ ಪರಮಾತ್ಮನಃ ।
ಬ್ರಹ್ಮಾಕಾಶತಯಾ ಸರ್ವಂ ಬ್ರಹ್ಮೈವೇತ್ಯನುಭೂಯತೇ ॥೧॥

ಭ್ರಮಸ್ಯ ಚಾತಿಪ್ರತ್ಯಕ್ಷತ್ವಾದದೃಶ್ಯತ್ವಾನ್ಮಹಾಚಿತೇಃ ।
ಮದಶಕ್ತಿವದಾತ್ಮೇತಿ ಸತ್ಯತಾಸ್ಯಾಪಿ ಯುಜ್ಯತೇ ॥೨॥

---

# ತೊಂಭತ್ತೇಳನೆಯ ಸರ್ಗವು

ಶ್ರೀವಸಿಷ್ಠನು ಹೇಳಿದನು—

೧. ಜಗತ್ತು ಎನ್ನುವುದು ಸಂವಿನ್ಮಯವಾದ್ದರಿಂದ, ಅದು ಪರಮಾತ್ಮನ ಸ್ವಪ್ನವಾದ್ದರಿಂದ, ಸರ್ವವೂ ಬ್ರಹ್ಮಾಕಾಶವೇ ಆಗಿರುವುದರಿಂದ, ಸರ್ವವೂ ಬ್ರಹ್ಮವೇ ಎಂಬ ಅನುಭವವು ಉಂಟಾಗಬೇಕಾಗುವುದು.

೨. "ಭ್ರಮವು ಚೆನ್ನಾಗಿ ಗೊತ್ತಾಗುವುದು. ಮಹಾಚಿತಿಯು ಅದೃಶ್ಯವು. ಆದರಿಂದ ಆತ್ಮ ಎನ್ನುವುದು ಮದಶಕ್ತಿಯಂತೆ" ಎಂಬುದರಿಂದಲೂ ನಾವು ಹೇಳುವುದೇ ಸತ್ಯವೆಂದು ಒಪ್ಪಬೇಕಾಗುವುದು.

(ಏವಂ ಬ್ರಹ್ಮರೂಪೇಣ ಸತ್ಯತ್ವೇಽಪಿ ಕಥಂ ಪ್ರತೀಯಮಾನರೂಪೇಣ ಸತ್ಯತಾ ? ನಹಿ ರಜ್ಜುರೂಪಂ ಸತ್ಯಮಿತಿ ತದಧ್ಯಸ್ತಃ ಸರ್ಪಃ ಸತ್ಯೋ ಭವತಿ ತತ್ರಾಹ ಭ್ರಮಸ್ಯೇತಿ ! ತತ್ರಹಿ ಸರ್ಪೋಽಪಿ ದೃಶ್ಯೋ ರಜ್ಜುರಪಿದೃಶ್ಯಾ । ಉಭಯೋರ್ದೃಶ್ಯತ್ವೇ ರಜ್ಜುದರ್ಶನೇ ಸರ್ಪಬಾಧಾತ್ ಅಸತ್ಯತಾ । ಇಹತು ಜಗದ್ಭ್ರಾಂತಿರ್ದೃಶ್ಯಾ, ತದಧಿಷ್ಠಾನಂ ಮಹಾಚಿತಿರದೃಶ್ಯಾ–ಇತಿ, ವೈಷಮ್ಯಾತ್, ಚಿದಾತ್ಮಾ ಮದಶಕ್ತಿರಿವ ಸ್ವಯಮದೃಶ್ಯೋ ದೃಶ್ಯ ಭ್ರಮಹೇತುಃ ಕಾರ್ಯರೂಪೇಣೈವ ಸ್ವಸತ್ತಾಂ ಪ್ರಕಟಯತೀತ್ಯಸ್ಯ ಜಗದ್ರೂಪಸ್ಯ ಸತ್ಯತಾ ಯುಜ್ಯತ ಇತ್ಯರ್ಥಃ ॥ —ತಾ. ಪ್ರ.)

ಅಸತ್ತ್ವಾದ್ದೃಶ್ಯವಿಶ್ರಾಂತೇರಲಭ್ಯತ್ವಾನ್ಮಹಾಚಿತೇಃ ।
ಉಪಲಬ್ಧುರಭಾವಾಚ್ಚ ಶೂನ್ಯನಾಮ್ನೀವ ಸತ್ಯಪಿ ॥೩॥

ಚಿನ್ಮಾತ್ರಂ ಪುರುಷೋಽಕರ್ತಾ ಸಮೇತ್ಯವ್ಯಕ್ತತೋ ಜಗತ್ ।
ಏವಂ ದೃಷ್ಟೇಃ ಸತ್ಯಮೇತದೇವಮರ್ಥಾನುಭೂತಿತಃ ॥೪॥

---

೩. (ಬಂಧವಿರುವವರೆಗೂ) ದೃಶ್ಯವಿಶ್ರಾಂತಿಯೆನ್ನುವುದು ಇಲ್ಲವಾಗಿ, ಮತ್ತು ಮಹಾ ಚಿತ್‌ಸ್ವರೂಪವಾದ ಆತ್ಮವು ಸಿಕ್ಕುವುದಿಲ್ಲವಾಗಿ, ಅದನ್ನು ಹಿಡಿಯುವವರೂ ಇಲ್ಲವಾಗಿ, ಶೂನ್ಯನಾಮದಿಂದ ಪ್ರಸಿದ್ಧವಾದ ಆತ್ಮವಸ್ತುವೂ ಉಂಟಾಗಿ (ಮೃಷಾ ಎನ್ನುವುದೂ ಇಲ್ಲ.)

(ತರ್ಹಿ ನ ತದಸ್ತಿ ನ ಯನ್ಮೃಷೇತ್ಯುಕ್ತಿಃ ಕಥಂ ಘಟತಾಂ ಬ್ರಹ್ಮಣೋ ಮೃಷಾತ್ವಾಯೋಗಾತ್ತತ್ರಾಹ–ಅಸತ್ತ್ವಾದಿತಿ । ಬಂಧಕಾಲೇ ದೃಶ್ಯವಿಶ್ರಾಂತೇಃ ಸರ್ವದೃಶ್ಯೋಪರಮಲಕ್ಷಣ ಮೋಕ್ಷಸ್ಯ ಅಸತ್ತ್ವಾತ್, ಅಸಂಪತ್ತೇಸ್ತಾಂವಿನಾ ಮಹಾಚಿತೇರದ್ವಿತೀಯ ಚಿದಾತ್ಮನಃ ಅಲಭ್ಯತ್ವಾತ್, ಮುಕ್ತಿಕಾಲೇಽಪಿ ಉಪಲಬ್ಧುಃ ಪ್ರಮಾತುಃ ಅಂತಃಕರಣೋಪಹಿತ ಜೀವಸ್ಯ ಉಪಲಂಭಕ ಪ್ರಮಾಣಾದೇಶ್ಚ ಬಾಧೇನ ಅಭಾವಾಚ್ಚ ಅತ್ಯಂತಾಪ್ರಸಿದ್ಧಪ್ರಾಯತಯಾ ಸತಿ ಪರಮಾರ್ಥ ವಸ್ತುನ್ಯಪಿ ಶೂನ್ಯತ್ವಮಿವ ಸುಘಟಮಿತ್ಯರ್ಥಃ —ತಾ. ಪ್ರ.)

೪. ಚಿನ್ಮಾತ್ರನಾದ ಪುರುಷನು ಅಕರ್ತನು. ಅವ್ಯಕ್ತದಿಂದ ಈ ಜಗತ್ತು ಆವಿರ್ಭಸುವುದು. ಈ ದೃಷ್ಟಿಯು ಸತ್ಯವೆಂಬುದು ಅರ್ಥ (ವಿಚಾರ) ದಿಂದಲೂ ಅನುಭೂತಿಯಿಂದಲೂ ಸಿದ್ಧವಾಗುವುದು,

(ಏವಂ ಸತಿ ಸರ್ವೇಷಾಂ ವಾದಿನಾಂ ವಾಕ್ಯಂ ಸ್ವಸ್ವಾನುಭವ ಸಿದ್ಧಾರ್ಥ ಪ್ರತಿಪಾದನಾತ್ ಸತ್ಯಮೇವೇತಿ ಪ್ರಪಂಚಯಿಷ್ಯನ್ ಪ್ರಥಮಂ ಸಾಂಖ್ಯೋಕ್ತೇಃ ಸತ್ಯತಾಂ ದರ್ಶಯತಿ–ಚಿನ್ಮಾತ್ರಮಿತಿ । ಇದಂ ಜಗತ್ಸುಖದುಃಖಮೋಹಾತ್ಮತಯಾ ಅನ್ವೀಯಮಾನಂ ತಥಾವಿಧ ಸಾಮಾನ್ಯ ಪರಂಪರಾವಧಿ ಭೂತಗುಣತ್ರಯ ಸಾಮ್ಯಾವಸ್ಥಾ ಲಕ್ಷಣಾದವ್ಯಕ್ತಾತಃ ಪ್ರಧಾನಾಖ್ಯಾತ್ ಮೂಲಕಾರಣಾತ್ ಮಹದಹಂಕಾರಾದಿ ಕ್ರಮೇಣ ಸಮೇತಿ ಆವಿರ್ಭವತಿ। ಪುರುಷಸ್ತು ಚಿನ್ಮಾತ್ರಮಕರ್ತಾಚ ।

ವಿವರ್ತೋ ಬ್ರಹ್ಮಣೋ ದೃಶ್ಯಮಿತ್ಯೇವಂವಾದಿನೋಪಿ ಸತ್ ।
ಮತಮೇವಂ ಸ್ವರೂಪಾಣಾಮರ್ಥಾನಾಮನುಭೂತಿತಃ ॥೫॥

ಪರಮಾಣುಸಮೂಹಾತ್ಮ ಜಗದಿತ್ಯಪಿ ಸತ್ಯತಃ ।
ಸಂವೇದ್ಯತೇ ಯಥಾ ಯದ್ಯತ್ತತ್ತಥೈವಾನುಭೂತಿತಃ ॥೬॥

ಯಥಾ ದೃಷ್ಟಂ ತಥೈವೇದಮಿಹ ಲೋಕೇ ಪರತ್ರ ಚ ।
ನಾಸನ್ನ ಸದಿತಿ ಪ್ರೌಢಾ ಸತ್ಯಮಾಧ್ಯಾತ್ಮಿಕೀ ಗತಿಃ ॥೭॥

---

ತಸ್ಯ ಭೋಗ ಮೋಕ್ಷ ಸಿದ್ಧಯೇ ಸರ್ಗಃ ಪ್ರವರ್ತತ ಇತ್ಯೇವಂ ದೃಷ್ಟಿರ್ಯಸ್ಯ ಕಪಿಲಸ್ಯ ತಸ್ಯ ತಥೈವ ತತ್ಸತ್ಯಮಿತ್ಯರ್ಥಃ ॥ —ತಾ. ಪ್ರ.)

೫. ದೃಶ್ಯವು ಬ್ರಹ್ಮದ ವಿವರ್ತವು ಎಂಬ ವಾದವನ್ನು ಅಂಗೀಕರಿಸಿದವರ ಮಾತೂ ಸತ್ಯವೇ! ಹೀಗೆ ಹೇಳುವವರ ಮತವೂ ಸ್ವರೂಪ ಅರ್ಥಗಳ ಅನುಭವ ದಿಂದ ಸತ್ಯವು.

೬. "ಜಗತ್ತು ಎಂಬುದು ಪರಮಾಣು ಸಮೂಹಗಳೆಂಬ ಆತ್ಮವುಳ್ಳದು" ಎಂಬ ವಾದವೂ ಸತ್ಯವೇ! ಯಾವುದೇ ಆಗಲಿ ಹೇಗೆ ಭಾವಿಸಿದರೆ ಹಾಗೆಯೇ ಅನು ಭವವು ಬರುವುದರಿಂದ ಅದೂ ಸತ್ಯವೇ!

(ಏವಂ ಕಣಾದ ಗೌತಮ ಸೌಂತ್ರಾಂತಿಕ ವೈಭಾಷಿಕ ಆರ್ಹತಾನಾಂ ಪರ ಮಾಣು ಸಮೂಹಾತ್ಮಕಮೇವ ಜಗದಿತಿ ಕಲ್ಪನಾಽಪಿ ತದನುಭವಾನುಸಾರಿ ತ್ವಾತ್ ಸತ್ಯೈವೇತ್ಯಾಹ --ತಾ. ಪ್ರ.)

೭. (ಅದರಿಂದ) ಹೇಗೆ ದೃಷ್ಟವಾದರೆ ಹಾಗೆ ತೋರುವುದು ಎಂಬುದು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸಿದ್ಧವು ಹೀಗಿರುವುದರಿಂದ ಈ ದೃಶ್ಯವು ಸತ್ ಅಲ್ಲ; ಅಸತ್ ಅಲ್ಲ ಎಂಬ ಆಧ್ಯಾತ್ಮಿಕ ದೃಷ್ಟಿಯೇ ಪ್ರೌಢವಾದರೂ ಸತ್ಯವು.

(ಏವಂ ದೃಷ್ಟಸೃಷ್ಟಿವ ದಿನಾಂಅನಿರ್ವಚನೀಯಮೇವೇಹಲೋಕೇ ಪರತ್ರಚ ಜಗನ್ನತು ಸದಸದನ್ಯತರ ಕೋಟಿಪ್ರತಿಷ್ಠಿತ ಮಿತ್ಯಾಧ್ಯಾತ್ಮಿಕೀ ಮನಃ ಕಲ್ಪನಾ

ಬಾಹ್ಯಮೇವಾಸ್ತಿ ನಾಸ್ತ್ಯನ್ಯದಿತ್ಯನ್ಯೇ ಸತ್ಯವಾದಿನಃ ।
ಸ್ವಾತ್ಮನ್ಯಕ್ಷಗಣಾತೀತಂ ಪ್ರಾಪ್ನುವಂತಿ ನ ತೇ ಯತಃ ॥೮॥

ಅನಾರತವಿಪರ್ಯಾಸದರ್ಶನಾತ್ ಕ್ಷಣಭಂಗಧೀಃ ।
ಯುಕ್ತೈವ ತದ್ವಿದಾಮಾದ್ಯಂ ಸರ್ವಶಕ್ತಿ ಹಿ ತತ್ಪದಂ ॥೯॥

ಕಲವಿಂಕಘಟನ್ಯಾಯೋ ಧರ್ಮ ಇತ್ಯಪಿ ತದ್ವಿದಾಂ ।
ತಥಾತ್ಮಸಿದ್ಧೇರ್ಮ್ಲೇಚ್ಛಾನಾಂ ತದ್ದೇಶೇಷು ನ ದುಷ್ಯತಿ ॥೧೦॥

---

ಮಾತ್ರರೂಪಾ ಜಗತೋ ಗತಿರವಗತಿರಪಿ ಸತ್ಯಂ । ತೈಸ್ತಥೈವಾನುಭವಾದಿತ್ಯರ್ಥಃ ॥ —ತಾ. ಪ್ರ.)

೮. ಇರುವುದೆಲ್ಲ ಬಾಹ್ಯವೇ! ಇನ್ನೇನೂ ಇಲ್ಲ ಎಂಬ ವಾದವನ್ನು ಪುರಸ್ಕರಿಸುವ ಅನ್ಯರೂ ಸತ್ಯವಾದಿಗಳೇ! ಏಕೆಂದರೆ, ಅವರು ತಮ್ಮ ಇಂದ್ರಿಯಗಳಿಂದ ಲಭಿಸುವದೆಷ್ಟೋ ಅಷ್ಟು ಬಿಟ್ಟು ಇನ್ನೇನನ್ನೂ ಹೇಳುವುದಿಲ್ಲ.

(ಏವಂ ಯೇ ಅನ್ಯಾ ಚಾರ್ವಾಕಾ ಬಾಹ್ಯಂ ಪೃಥಿವ್ಯಾದಿ ಭೂತಚತುಷ್ಟಯಮೇವಾಸ್ತಿ, ಅನ್ಯದಾಂತರಮಾತ್ಮರೂಪಂ ನಾಸ್ತೀತಿ ವದಂತಿ, ತೇಪಿ ಸತ್ಯವಾದಿನ ಏವ । ಯತಸ್ತೇ ಅಕ್ಷಗಣೇಭ್ಯಶ್ಚಕ್ಷುರಾಭ್ಯಃ ಅತೀತಂ ಸ್ವಾತ್ಮನಿ ದೇಹೇ ವಿಮೃಶಂತೋ ನ ಪ್ರಾಪ್ನುವಂತಿ ॥ —ತಾ. ಪ್ರ.)

೯. ಒಂದೇಸಮನಾಗಿ ಪ್ರತಿಯೊಂದೂ ಬದಲಾಯಿಸುತ್ತಿರುವುದನ್ನು ಕಂಡು ಎಲ್ಲವೂ ಕ್ಷಣಕ್ಷಣಕ್ಕೂ ಭಂಗುರವಾಗುತ್ತಿದೆ ಎಂದವನೂ ಕೂಡ ಸರಿಯೇ! ಅದನ್ನು ಬಲ್ಲವರಿಗೆ ಅಷ್ಟು ವಿಪರ್ಯಾಸಗಳನ್ನು ಪಡೆಯುತ್ತಿರುವ ಸರ್ವಶಕ್ತಿಯು ಯಾವುದಿರುವುದೋ ಅದೇ ತತ್ಪದವು!

೧೦. ಕಲವಿಂಕಘಟನ್ಯಾಯವು ಅದನ್ನು ಬಲ್ಲವರಿಗೆ ಧರ್ಮವೇ ಹೌದು! ಅದರಂತೆಯೇ ಮ್ಲೇಚ್ಛಾದಿಗಳ ಆತ್ಮಸಿದ್ಧಿಯೂ ಆಯಾ ದೇಶದಲ್ಲಿ ದೂಷ್ಯವಾಗುವುದಿಲ್ಲ.

ಸಮಾಃ ಸಂತಸ್ತು ವಿಪ್ರಾಗ್ನಿವಿಷಾಮೃತಮೃತಿಷ್ವಪಿ ।
ಭಾಂತ್ಯೇವಂ ತದ್ವಿದಾಂ ಸರ್ವಮಿದಂ ಸರ್ವಾತ್ಮಕಂ ಯತಃ ॥೧೧॥

ಸ್ವಭಾವಸಿದ್ಧಮೇವೇದಂ ಯುಕ್ತಮಿತ್ಯೇವ ತದ್ವಿದಾಂ ।
ಅಸಿದ್ಧಾ ಯಾತಿ ನೋ ಪ್ರಾಪ್ತಿಂ ಬುದ್ಧಿಮತ್ಸರ್ವಕರ್ತೃತಾ ॥೧೨॥

---

• (ಯಥಾ ಘಟೇಽವರುದ್ಧಃ ಕಲವಿಂಕಸ್ತಸ್ಯಾಪಾವರಣೇ ಬಹಿರುಡ್ಡೀಯ ಗಚ್ಛತಿ ಏವಂ ದೇಹಾಂತಃ ಪರಿಚ್ಛಿನ್ನೋ ಧರ್ಮಾರ್ಜೀವಃ ಕರ್ಮಕ್ಷಯೇ ಪರಲೋಕೇ ಉಡ್ಡೀಯ ಗಚ್ಛತೀತಿ ಆರ್ಹತಕಲ್ಪನಾಪಿ ಸತ್ಯಾ । ತಥಾ ಮ್ಲೇಚ್ಛಾನಾಂ ಯವನಾದೀನಾಂ ಈಶ್ವರೋತ್ಪಾದಿತೋ ದೇಹಾಕಾರ ಏವ ಜೀವೋ ದೇಹಸಂಬಂಧದೇಶೇಷು ತಿಷ್ಠತಿ, ಸ ತತಃ ಕಾಲಾಂತರೇ ಈಶ್ವರೇಣ ಪರಾಮೃಷ್ಟಸ್ತದಿಚ್ಛಯಾ ಸಮುಚ್ಛ್ಯತೇ । ಉಚ್ಛಿದ್ಯತೇ । ಶಾಶ್ವತಂ ಸ್ವರ್ಗೇ ನರಕೇ ವಾ ನಿವೇಶ್ಯತ ಇತಿ ಕಲ್ಪನಾಪಿ ತದನುಭವಾನುಸಾರಾದೇವ ನ ದುಷ್ಯತಿ ॥ —ತಾ.ಪ್ರ.)

೧೧. ಬ್ರಹ್ಮವನ್ನು ಬಲ್ಲವರಿಗೆ ಈ ಸರ್ವವೂ ಬ್ರಹ್ಮವೇ ಆದುದರಿಂದ ವಿಪ್ರ ಅಗ್ನಿ, ವಿಷ, ಅಮೃತ, ಮೃತಿ, ಮೊದಲಾದ ಸರ್ವವೂ ಸಮವೇ ಆಗಿ ಕಾಣಿಸುವುವು. (ಹೀಗಿರುವಲ್ಲಿ ವಾದಿ ಸಿದ್ಧಾಂತಗಳು ವಿಪರೀತವು ಹೇಗೆ ಆದೀತು?)

೧೨. (ಸ್ವಭಾವವಾದಿಗಳಾದ ಚಾರ್ವಾಕರು ಹೇಳುವಂತೆ) ಈ ಜಗತ್ತು ಸ್ವಭಾವವಾಗಿ ಸಿದ್ಧವಾಯಿತು ಎಂಬ ವಾದವೂ ಬ್ರಹ್ಮಜ್ಞರಿಗೆ ವಿರೋಧವಾದುದಲ್ಲ. ಆದರೆ, ಬುದ್ಧಿಮತಿಯಾದ ಸರ್ವಕರ್ತೃತೆಯು ಕೆಲವು ಕಡೆ ಕಂಡು ಕೆಲವುಕಡೆ ಕಾಣದಿರುವುದರಿಂದ ಎದುರಿಗೆ ಇದ್ದರೂ ಕಾಣದಾಗುವುದು.

(ಏವಂ ಸ್ವಭಾವಾದೇವ ಸ್ವಯಮೇವ ಸರ್ವಂ ಜಗದುತ್ಪದ್ಯತೇ, ಸ್ವಭಾವಾದೇವ ನಶ್ಯತಿ, ನ ಜಗತಃ ಕರ್ತಾ ಕಶ್ಚಿದಸ್ತಿ, ಇತಿ ತದ್ವಿದಾಂ ಸ್ವಭಾವವಾದಿನಾಂ ಚಾರ್ವಾಕಾಣಾಂ ಮತಮಪಿಯುಕ್ತಮೇವ । ಯತೋ ಘಟಪಟಾದೌ ದೃಷ್ಟಾಪಿ ಬುದ್ಧಿಮತ್ಸರ್ವಕರ್ತೃತಾ ವೃಷ್ಟಿವಾತತೃಣಾಂಕುರಾದೌ ಸಮ್ಯಗಸಿದ್ಧಾಪಿ ಪ್ರಾಪ್ತಿಂ ನೋಯಾತಿ । ಸಸ್ಯಕಾಲವೃಷ್ಟಿ ಸುಕ್ಷೇತ್ರತೃಣಾದಯಃ ಕೃಷೀವಲಾನಾಂ ಸ್ವ ಕರ್ತೃಣಾಮಸಿದ್ಧಾ ವಿನೈವ ಕರ್ತಾರಂ ಸ್ವಭಾವಾದೇವ ಜಾಯಮಾನಾಃ ಕರ್ತೃ

ಏಕಃ ಸರ್ವತ್ರ ಕರ್ತೇತಿ ಸತ್ಯಂ ತನ್ಮಯಚೇತಸಾಂ ।
ಸೋಽಯಂ ನಿಶ್ಚಯವಾನ್ಸೋಽತ್ರ ತದಾಪ್ನೋತೀತ್ಯಬಾಧಿತಂ ॥೧೩॥

ಅಯಂ ಲೋಕಃ ಪರಶ್ಚಾಸ್ತಿ ಸ್ನಾನಾಗ್ನ್ಯಾದಿ ಚ ನೇತರತ್ ।
ಏತದೇತಾದೃಶಂ ಸತ್ಯಂ ವಿದ್ಧಿ ಭಾವಿತಭಾವನಂ ॥೧೪॥

---

ಕಲ್ಪನಾಂ ಸಹಂತೇ । ನಹಿ ಸರ್ವಾನಿಷ್ಟಕರ್ತಾ ಕಶ್ಚಿದಸ್ತಿ ತಸ್ಯ ಚಾಕಾಲವೃಷ್ಟಿ ಪರ ಕ್ಷೇತ್ರ ತೃಣಾದಿನಾ ಪ್ರಯೋಜನಮಸ್ತೀತಿ ಕಲ್ಪನಾ ಸಂಭವತೀತಿ ಭಾವಃ ॥
—ತಾ. ಪ್ರ.)

೧೩. ತನ್ಮಯಚೇತಸ್ಕರಿಗೆ (ಬ್ರಹ್ಮಾಕಾರವೃತ್ತಿಯುಳ್ಳವರಿಗೆ) ಎಲ್ಲೆಲ್ಲಿಯೂ ಕರ್ತೃತ್ವವು ಏಕನಿಷ್ಠವೆಂಬುದು ಸತ್ಯವಾಗಿ ಅನುಭವಗೋಚರವಾಗುತ್ತಿರುವುದು. ಯಾವುದು ಯಾವನಿಗೆ ಅನುಭವದಿಂದ ದೃಢವಾಗಿ ನಿಶ್ಚಯವಾಗಿರುವುದೋ ಅದನ್ನೇ ಅವನು ಅಬಾಧಿತವಾಗಿ ಎಲ್ಲೆಲ್ಲಿಯೂ ಕಾಣುವನು.

(ಕ್ಷಿತ್ಯಂಕುರಾದೌ ಸರ್ವತ್ರ ಕಾರ್ಯಮಾತ್ರೇ ಏಕಃ ಕರ್ತಾ ಇತಿ ಯತ್ಕಲ್ಪನಂ ತದಪಿ ಸತ್ಯಂ । ತಥಾ ನಿಶ್ಚಯವತಾಮೀಶ್ವರೋಪಾಸಕಾನಾಂ ತತ್ಪ್ರಾಪ್ತ್ಯನುಗ್ರಹ ವರದಾನಾದ್ಯರ್ಥ ಕ್ರಿಯಾದರ್ಶನಾದಿತ್ಯಾಹ—ಏಕ ಇತಿ । ತನ್ಮಯಂ ತದಾಸಕ್ತಂ ಚೇತೋ ಯೇಷಾಂ । ಸೋಽಯಮುಪಾಸಕೋ ಯತಸ್ತಥಾ ನಿಶ್ಚಯವಾಂಸ್ತತಃ ಸೋಽನ್ತ್ರಸ್ತತ್ರೋಪಾಸ್ಯಂ ಸರ್ವಕರ್ತಾರಂ ಪ್ರಾಪ್ನೋತಿ । ನಹ್ಯಸೌ ಪೂರ್ವ ವಾದೀವ ತಂ ಬಾಧಿತಂ ಮನ್ಯತೇ । ಅಕಾಲವೃಷ್ಟಿ ಸುಕ್ಷೇತ್ರ ತೃಣಾದೀನಾಮಪಿ ಸರ್ವಾನಿಷ್ಟತ್ವಾಸಿದ್ಧೇಃ ಸರ್ವಕರ್ಮಫಲಪ್ರದಸ್ಯ ಈಶ್ವರಸ್ಯ ದುಷ್ಕರ್ಮಫಲಾನಿಷ್ಟ ಕರ್ತೃತ್ವೇ ದೋಷಾಭಾವಾಚ್ಚ ಇತಿ ॥ —ತಾ. ಪ್ರ.)

೧೪. ಆಸ್ತಿಕರು ಈ ಲೋಕದಂತೆಯೇ ಪರಲೋಕವೂ ಉಂಟು ಎನ್ನುವರಾಗಿ ತೀರ್ಥಸ್ನಾನ ಅಗ್ನಿಹೋತ್ರಾದಿ ಕರ್ಮಗಳು ನಿಷ್ಫಲಗಳಲ್ಲ. ಅದರಂತೆಯೇ ಭಾವನೆಯುಳ್ಳವರಿಗೆ ಸತ್ಯವು ಅದೇ ರೂಪವಾಗಿ ಕಾಣುವುದು.

ಅಶೇಷಂ ಶೂನ್ಯಮೇವೇತಿ ಬೌದ್ಧಾನಾಮೇತದೇವ ಸತ್ ।
ಲಭ್ಯತೇ ತದ್ವಿಚಾರೇಣ ಯತ್ರ ಕಿಂಚನ ನೈವ ಹಿ ॥೧೫॥

ಚಿತಿಶ್ಚಿಂತಾಮಣಿರಿವ ಕಲ್ಪದ್ರುಮ ಇವೇಪ್ಸಿತಂ ।
ಆಶು ಸಂಪಾದಯತ್ಯಂತರಾತ್ಮನಾತ್ಮನಿ ಖಾತ್ಮಿಕಾ ॥೧೬॥

ನೇದಂ ಶೂನ್ಯಂ ನ ಚಾಶೂನ್ಯಮಿತ್ಯವಸ್ತು ನ ತದ್ವಿದಾಂ ।
ಸರ್ವಶಕ್ತಿರ್ಹಿ ಸಾ ಶಕ್ತಿರ್ನ ತದ್ವಿದ್ಯತ ಏವ ತತ್ ॥೧೭॥

ತಸ್ಮಾತ್ಸ್ವನಿಶ್ಚಯೇ ಯಸ್ಮಿನ್ಯಃ ಸ್ಥಿತಃ ಸ ತಥಾ ತತಃ ।
ಅವಶ್ಯಂ ಫಲಮಾಪ್ನೋತಿ ನ ಚೇದ್ಬಾಲ್ಯಾನ್ನಿವರ್ತತೇ ॥೧೮॥

---

೧೫ ಬೌದ್ಧರೂ ಅಶೇಷವಾಗಿ ಸರ್ವವೂ ಶೂನ್ಯವೆನ್ನುವರು. ಅವರಿಗೆ ಅದೇ ಸತ್ಯವು. ಹಾಗೆ ಮನಸ್ಸಿನಲ್ಲಿಟ್ಟುಕೊಂಡು ವಿಚಾರಮಾಡುವಾಗ ಹಾಗೆಯೇ ತೋರಿ ಎಲ್ಲಿಯೂ ಏನೂ ಇಲ್ಲ ಎನ್ನಿಸುವುದು.

೧೬. ಚಿತ್ತು ಆಕಾಶಾತ್ಮವಾದುದು. ಅದು ಚಿಂತಾಮಣಿಯಂತೆ, ಕಲ್ಪದ್ರುಮದಂತೆ, ಅದು ಸಂಕಲ್ಪಿಸಿದಕೂಡಲೇ ತನ್ನೊಳಗೆ ತನ್ನಿಂದಲೇ ಬೇಕೆಂದುದನ್ನು ಸಂಪಾದಿಸಬಲ್ಲುದು.

೧೭. "ಸತ್ಯವು ಶೂನ್ಯವೂ ಅಲ್ಲ; ಅಶೂನ್ಯವೂ ಅಲ್ಲ. ಅದನ್ನು ಬಲ್ಲವರು ಅದನ್ನು ಅವಸ್ತುವಲ್ಲ ಎನ್ನುವರು. ಆ ಮಾಯಾಶಕ್ತಿಯು ಸರ್ವಶಕ್ತಿಯಾದ್ದರಿಂದ ಅದು ಬೇರೆಯಾಗಿ ಇಲ್ಲವೇಇಲ್ಲ; ಇರುವುದೆಲ್ಲ ತತ್ ಒಂದೇ" ಎಂಬ ಮತವೂ ಸತ್ಯವೇ!

(ಏವಂ ಶೂನ್ಯಾಶೂನ್ಯವಿಲಕ್ಷಣ ಅನಿರ್ವಚನೀಯ ತೃತೀಯವಿಧೌ, ಅವಾದಿನಾಮಪಿ ತತ್ ಸ್ವಾಭಿಮತಮವಸ್ತ್ವಸತ್ಯಂ ನ । ಯತಃ ಸರ್ವಶಕ್ತೇಃ ಬ್ರಹ್ಮಣಃ ಸಾ ಅನಿರ್ವಚನೀಯಾ ಮಾಯಾಶಕ್ತಿಃ । ಹಿ ಯಸ್ಮಾತ್ತಚ್ಛೂನ್ಯಂ ನ । ಯದ್ವಿದ್ಯತೇ ಬ್ರಹ್ಮ ತದೇವಚ ನ ಉಭಯ ವಿಲಕ್ಷಣಾ ಇತ್ಯರ್ಥಃ ॥ —ತಾ.ಪ್ರ.)

೧೮. ಅದರಿಂದ ಯಾವನು ಯಾವ ರೂಪವಾದ ಸ್ವನಿಶ್ಚಯದಲ್ಲಿ ದೃಢವಾಗಿರುವನೋ ಅವನಿಗೆ ಅದೇ ಸತ್ಯವು. ಅವನು ಚಪಲನಾಗಿ ತನ್ನ ಸಿದ್ಧಾಂತ

ವಿಚಾರ್ಯಂ ಪಂಡಿತೈಃ ಸಾರ್ಧಂ ಶ್ರೇಷ್ಠವಸ್ತೂನಿ ಧೀಮತಾ ।
ಸ ರೂಢೋ ನಿಶ್ಚಯೋ ಗ್ರಾಹ್ಯೋ ನೇತರತ್ರ ಯಥಾ ತಥಾ ॥೧೯॥

ಸಂಭವತ್ಯುತ್ತಮಪ್ರಜ್ಞಃ ಶಾಸ್ತ್ರತೋ ವ್ಯವಹಾರತಃ ।
ಯೋ ಯತ್ರ ನಾಮ ತತ್ರಾಸೌ ಪಂಡಿತಸ್ತಂ ಸಮಾಶ್ರಯೇತ್ ॥೨೦॥

ಸತಾಂ ವಿವದಮಾನಾನಾಂ ಸಚ್ಛಾಸ್ತ್ರವ್ಯವಹಾರಿಣಾಂ ।
ಯಃ ಸಮಾಹ್ಲಾದಕೋ ನಿಂದ್ಯಃ ಸ ಶ್ರೇಷ್ಠಸ್ತಂ ಸಮಾಶ್ರಯೇತ್ ॥೨೧॥

---

ವನ್ನು ಬಿಡದೆ ದೃಢವಾಗಿ ಇದ್ದರೆ, ಅವಶ್ಯವಾಗಿ ಫಲವನ್ನು ಹೊಂದಿಯೇ ಹೊಂದುವನು.

(ಬಾಲ್ಯಾದವಿಶ್ವಾಸಲಕ್ಷಣಾಚ್ಚಾಪಲಾದ್ಧೇತೋಃ ಪೂರ್ವನಿಶ್ಚಯಾನ್ನ ನಿವರ್ತತೇ ಚೇದಿತ್ಯರ್ಥಃ । ಅಥವಾ ಬಾಲ್ಯಾದಜ್ಞಾನಾನ್ನ ನಿವರ್ತತೇ ಚೇತ್ । ತಥಾಚ ಯಾವದಾತ್ಮಜ್ಞಾನಂ ನಾಸ್ತಿ ತಾವದೇವ ತತ್ತತ್ಸಿದ್ಧಾಂತಾಃ ಸತ್ಯಾಃ।ಆತ್ಮಜ್ಞಾನೇತು ಆತ್ಮೈವ ಸತ್ಯೋನಾನ್ಯದಿತಿ ಭಾವಃ ॥ —ತಾ. ಪ್ರ.)

೧೯. ಬುದ್ಧಿವಂತನಾದವನು ಪಂಡಿತರೊಡನೆ ವಿಚಾರಮಾಡಬೇಕು. ಶ್ರೇಷ್ಠವಾದ ವಸ್ತುವು ಯಾವುದೆಂದು ಗೊತ್ತುಮಾಡಿಕೊಂಡು ನಿಶ್ಚಯವನ್ನು ಗ್ರಹಿಸಬೇಕು. ತೋರಿದಂತೆ ಯಾವುದೋ ಒಂದು ನಿಶ್ಚಯವನ್ನು ಹಿಡಿಯಬಾರದು.

೨೦. ಶಾಸ್ತ್ರದಿಂದಲೂ ವ್ಯವಹಾರದಿಂದಲೂ ಉತ್ತಮ ಪ್ರಜ್ಞನಾಗುವನು. ಸಂದೇಹವಿಲ್ಲ. ಶಾಸ್ತ್ರ ವ್ಯವಹಾರಗಳೆರಡರಲ್ಲೂ ಪಂಡಿತನಾದವನು ಯಾವನೋ ಅವನನ್ನೇ ಸಮಾಶ್ರಯಿಸಬೇಕು.

(ಪಂಡಿತಶ್ರೇಷ್ಠಲಕ್ಷಣಮಾಹ—ಶಾಸ್ತ್ರತಃ ಅಧ್ಯಯನತಃ । ವ್ಯವಹಾರತಃ ಆಚರಣಾತ್ । ಯತ್ರ ದೇಶೇ । ನಾಮೇತಿ ತಸ್ಯ ದೌರ್ಲಭ್ಯಾನ್ಸ್ಪೇಷ್ಯತ್ವದ್ಯೋತನಾಯ —ತಾ. ಪ್ರ.)

೨೧. ಸಜ್ಜನರಾಗಿ ಸಚ್ಛಾಸ್ತ್ರವನ್ನು ಬಲ್ಲವರಾಗಿ, ಸದಾಚಾರಸಂಪನ್ನರಾಗಿಯೂ ಭಿನ್ನಾಭಿಪ್ರಾಯಗಳಿದ್ದು ವಿವಾದಮಾಡುವವರಲ್ಲಿ ಯಾರು ನಿಷಿದ್ಧಾಚರಣಹೀನನಾಗಿ ಇತರರನ್ನೂ ಆಹ್ಲಾದಪಡಿಸುವವನೋ ಅವನೇ ಶ್ರೇಷ್ಠನು. ಅಂಥವನನ್ನು ಆಶ್ರಯಿಸಬೇಕು.

ಸರ್ವ ಏವಾನಿಶಂ ಶ್ರೇಯೋ ಧಾವಂತಿ ಪ್ರಾಣಿನೋ ಬಲಾತ್ ।
ಪರಿನಿಮ್ನಂ ಪಯಾಂಸೀವ ತದ್ವಿಚಾರ್ಯ ಸಮಾಶ್ರಯೇತ್ ॥೨೨॥

ಕಲ್ಲೋಲೈರುಹ್ಯಮಾನಾನಾಂ ನೃಣಾಂ ಸಂಸಾರಸಾಗರೇ ।
ಅಜ್ಞಾತಂ ದಿವಸಾ ಯಾಂತಿ ತೃಣಾನಾಮಿವ ಬಿಂದವಃ ॥೨೩॥

ಶ್ರೀರಾಮ ಉವಾಚ—

ಜಗತ್ಪೂರ್ವಂ ಲತೇವಾಪಿ ವಿಶ್ರಾಂತಾ ವಿತತೇ ಪದೇ ।
ಪೂರ್ವಾಪರವಿಚಾರೇಣ ಕೇ ಪರಾಭಾವದರ್ಶಿನಃ ॥೨೪॥

---

೨೨. ಸರ್ವ ಪ್ರಾಣಿಗಳೂ ಬಲಾತ್ಕಾರದಿಂದಲೋ ಎಂಬಂತೆ, ತಾವು ಯಾವುದನ್ನು ಶ್ರೇಯಸ್ಸು ಎಂದು ನಂಬಿರುವರೋ ಅದನ್ನೇ ಕುರಿತು, ಹಳ್ಳದ ಕಡೆಗೆ ಹೊರಟ ನೀರಿನಂತೆ, ಓಡಾಡುತ್ತಿರುವರು. ಆದರಿಂದ, ಶ್ರೇಯಸ್ಸು ಎಂದರೇನು ಎಂಬುದನ್ನು ಚೆನ್ನಾಗಿ ವಿಚಾರಮಾಡಿ, ಗ್ರಹಿಸಿ, ಅನಂತರ ಅದನ್ನು ಸಾಧಿಸಬೇಕು.

೨೩. ಸಂಸಾರಸಾಗರದಲ್ಲಿ (ಅಭಿಲಷಿತಗಳೆಂಬ) ಕಲ್ಲೋಲಗಳು ಮನುಷ್ಯರನ್ನು ಎತ್ತೆತ್ತಲೋ ಹೊಡೆದುಕೊಂಡು ಹೋಗುವುವು. ದಿವಸ ದಿವಸವೂ ತನಗೆ ತಿಳಿಯದಂತೆಯೇ ಕಳೆದು ಆಯುಸ್ಸು ನಾಶವಾಗುತ್ತಿರುವುದು; ಅದೂ ಹುಲ್ಲಿನ ಕೊನೆಯಲ್ಲಿ ನಿಂತ ನೀರಿನಂತೆ ಆಗುತ್ತಿರುವುದು. ಆದರಿಂದ ಆದಷ್ಟುಬೇಗ ಶ್ರೇಯೋಮಾರ್ಗವನ್ನು ಹಿಡಿಯಬೇಕು.

ಶ್ರೀರಾಮನು ಕೇಳಿದನು—

೨೪. ಭೋಗತೃಷ್ಣಾರೂಪವಾದ ಜಗತ್ತು ವಿತತವಾದ ಬ್ರಹ್ಮದಲ್ಲಿ ಲತೆಯಂತೆ ಹರಡಿಕೊಂಡಿರುವುದು. ಹೀಗಿರಲು ಪೂರ್ವ-ಅಪರ ವಿಚಾರದಿಂದ ಭೋಗತೃಷ್ಣೆಯನ್ನು ನೀಗಿಕೊಂಡು ಪರಮಾರ್ಥದಲ್ಲಿ ಆಸಕ್ತರಾಗಿ, ಪರಂಭಾವವನ್ನು ಹೊಂದಿದವರು ದುರ್ಲಭರಲ್ಲವೇ?

ಶ್ರೀವಸಿಷ್ಠ ಉವಾಚ—

ಜಾತೌ ಜಾತೌ ಕತಿಪಯೇ ವ್ಯಪದೇಶ್ಯಾ ಭವಂತಿ ತೇ ।
ಯೇಷಾಂ ಯಾಂತಿ ಪ್ರಕಾಶೇನ ದಿವಸಾ ಭಾಸ್ವತಾಮಿವ ॥೨೫॥

ಅಧಶ್ಚೋರ್ಧ್ವಂ ಚ ಧಾವಂತಶ್ಚಕ್ರಾವರ್ತವಿವರ್ತನೈಃ ।
ಸರ್ವೇ ತೃಣವದುಹ್ಯಂತೇ ಮೂಢಾ ಮೋಹಭವಾಂಬುಧೌ ॥೨೬॥

ನಷ್ಟಾತ್ಮಸ್ಥಿತಯೋ ಭೋಗವಹ್ನಿಷು ಪ್ರಜ್ವಲಂತ್ಯಲಂ ।
ದೇವಾ ದಿವಿ ದವೇನಾದ್ರೌ ದಹ್ಯಮಾನಾ ದ್ರುಮಾ ಇವ ॥೨೭॥

ಪಾತಿತಾ ಮದಸಂಪನ್ನಾ ದಾನವಾ ದಾನವಾರಿಭಿಃ ।
ಗಜಾ ಇವ ನಿರಾಲಾನಾ ಘೋರೇ ನಾರಾಯಣಾವಟೇ ॥೨೮॥

---

ಶ್ರೀವಸಿಷ್ಠನು ಹೇಳಿದನು—

೨೫. (ದೇವಾಸುರ ಮನುಷ್ಯ ಗಂಧರ್ವಾದಿ) ಜಾತಿಜಾತಿಗಳಲ್ಲಿಯೂ ಕೆಲವರು ಗುರುತಾದವರು ಇದ್ದೇಇರುತ್ತಾರೆ. ಹಗಲು ಸೂರ್ಯನ ಕಾಂತಿಯಿಂದ ಆಗಿರುವಂತೆ, ಅವರೂ ತಮ್ಮ ಪ್ರಕಾಶದಿಂದ ಬೆಳಗುತ್ತಾ ಇತರರಿಗೆ ಲಭಿಸುವರು.

(ತದ್ಯೋಯೋ ದೇವಾನಾಂ ಪ್ರತ್ಯಬುಧ್ಯತ ಸ ಏವ ತದಭವತ್ತಥರ್ಷೀಣಾಂ ತಥಾ ಮನುಷ್ಯಾಣಾಂ" ಇತ್ಯಾದಿ ಶ್ರುತಿ ವ್ಯಪದೇಶ್ಯಾ ಭವಂತಿ – ಸಂಭವಂತ್ಯೇವ —ತಾ. ಪ್ರ.)

೨೬. ಮೂಢರು, ಕೆಳಗಿನಿಂದ ಮೇಲಕ್ಕೆ ಮೇಲಿನಿಂದ ಕೆಳಕ್ಕೆ ಚಕ್ರಾವರ್ತ ವಿವರ್ತನಗಳಿಂದ (ಚಕ್ರದಂತೆ ಸುತ್ತುತ್ತಾ ಹಿಂದಕ್ಕೆ ಮುಂದಕ್ಕೆ) ಮೋಹ ಭವಾಂಬುಧಿಯಲ್ಲಿ ಹುಲ್ಲುಗಳಂತೆ ಕೊಚ್ಚಿಹೋಗುತ್ತಿರುವರು.

೨೭. ಆತ್ಮಜ್ಞಾನವಿಲ್ಲದವರು ದೇವತೆಗಳೇಆದರೂ ಬೆಟ್ಟಗಳು ಹತ್ತಿಕೊಂಡು ಬೇಯುವಾಗ ಸುಟ್ಟುಹೋಗುವ ಮರಗಳಂತೆ, ಭೋಗಗಳೆಂಬ ಬೆಂಕಿಯಲ್ಲಿ ಸುಟ್ಟುಹೋಗುವರು.

೨೮. ಆತ್ಮಜ್ಞಾನವಿಲ್ಲದ ದಾನವರು, ದಾನವಾರಿಗಳಿಂದ ಏಟು ತಿಂದು,

ನ ಗಂಧಮಪಿ ಗಂಧರ್ವಾ ದರ್ಶಯಂತಿ ವಿವೇಕಜಂ ।
ಗೀತಪೀತಪರಾಮರ್ಶಾಃ ಸರಂತಿ ಹರಿಣಾ ಇವ ॥೨೯॥

ವಿದ್ಯಾಧರಾಶ್ಚ ವಿದ್ಯಾನಾಮಾಧಾರತ್ವೇನ ಮೋಹಿತಾಃ ।
ಸ್ಫುರಿತಾನಾಮುದಾರಾಣಾಮಪಿ ಕುರ್ವಂತಿ ನಾದರಂ ॥೩೦॥

ಯಕ್ಷಾ ವಿಕ್ಷೋಭಿತಭುವೋ ದಕ್ಷತಾಮಕ್ಷತಾ ಇವ ।
ದರ್ಶಯಂತ್ಯಸಹಾಯೇಷು ಬಾಲವೃದ್ಧಾತುರೇಷು ಚ ॥೩೧॥

ದಂತಿನಾಮಿವ ಮತ್ತಾನಾಂ ರಂಹಸಾ ಹರಿಣಾರಿಣಾ ।
ಕೃತಃ ಕರಿಷ್ಯಸಿ ತ್ವಂ ಚ ರಾಕ್ಷಸಾನಾಂ ಪರಿಕ್ಷಯಂ ॥೩೨॥

---

ಹಳ್ಳದಲ್ಲಿ ಬೀಳುವಹಾಗೆ, ನಾರಾಯಣನೆಂಬ ಘೋರವಾದ ಹಳ್ಳದಲ್ಲಿ ಬಿದ್ದು ಹೋಗುವರು.

೨೯. ಗಂಧರ್ವರೂ ಕೂಡ ಗೀತ ಪೀತಗಳಲ್ಲಿ ಆಸಕ್ತರಾಗಿ, ವಿವೇಕದ ಗಂಧವೂ ಇಲ್ಲದವರಾಗಿ, ಜಿಂಕೆಗಳಂತೆ (ಮೃತ್ಯುವ್ಯಾಧ ಸನ್ನಿಧಿಯನ್ನು) ಸೇರುವರು.

೩೦. ವಿದ್ಯಾಧರರೂ ಕೂಡ, ತಾವು ಬ್ರಹ್ಮವಿದ್ಯೆಯನ್ನು ಪಡೆಯಬಲ್ಲವರಾದರೂ ಅದನ್ನು ಒಲ್ಲದೆ, ತಾವು ವಿದ್ಯೆಗಳಿಗೆ ಆಧಾರರಾದವರು ಎಂಬ ಮೋಹಕ್ಕೆ ಸಿಕ್ಕಿ, ಅದು ತಮಗೆ ಸಿಕ್ಕುವಂತಿದ್ದರೂ ಬ್ರಹ್ಮವಿದ್ಯೆಯನ್ನು ಆದರಿಸದೆ ಹೋಗುವರು. (ಭೋಗಸಾಧನ ವಿದ್ಯೆಗಳಲ್ಲಿಯೇ ರಮಿಸುವರು.)

೩೧. ಯಕ್ಷರು ಜನರನ್ನು ಭಯ ಜ್ವರ ಉನ್ಮಾದಾದಿ ದೋಷಗಳನ್ನು ಉತ್ಪಾದನಮಾಡಿ ವಿಕ್ಷೋಭಗೊಳಿಸುವುದರಲ್ಲಿ ನಿರತರಾಗಿ, ತಾವು ಅಕ್ಷತರು ಶಾಶ್ವತರು ಎಂಬ ಭ್ರಾಂತಿಯಿಂದ ಮಣಿಮಂತ್ರಾದಿ ಬಲಗಳಿಲ್ಲದ ಅಸಹಾಯರಾದ ಬಾಲ ವೃದ್ಧಾದಿಗಳಲ್ಲಿ ತಮ್ಮ ಪ್ರಭಾವವನ್ನು ತೋರಿಸುವರು.

೩೨. ಆನೆಗಳಂತೆ ಮದಿಸಿರುವ ರಾಕ್ಷಸಗಣಗಳ ಪರಿಕ್ಷಯವನ್ನು ದಾನವಾರಿಯಾದ ಹರಿಯು ಹಿಂದೆ ಮಾಡಿದಂತೆ ನೀನೂ ಮಾಡಲಿರುವೆ.

ಭೃಶಂ ಪಿಶಾಚಾಃ ಪಶ್ಯಂತಿ ಭೂತಭೋಜನಚಿಂತಯಾ ।
ಧೂಮಾಂಧಕಾರಾನಿಲಯಾ ಜ್ವಾಲಯಾಹುತಯೋ ಯಥಾ ॥೩೩॥

ನಾಗಜಾಲಮೃಣಾಲಾನಿ ಮಗ್ನಾನಿ ಧರಣೀತಲೇ ।
ನಗಾನಾಮಿವ ಮೂಲಾನಿ ಜಡಾನೀವ ಸ್ಥಿತಾನ್ಯಲಂ ॥೩೪॥

ವಿವರಂ ಶರಣಂ ಯೇಷಾಂ ಕೀಟಾನಾಮಿವ ಭೂತಲೇ ।
ತೇಷಾಮಸುರಬಾಲಾನಾಂ ವಿವೇಕೇಷು ಕಥೈವ ಕಾ ॥೩೫॥

ಅಲ್ಪಮಾತ್ರಕಣಾರ್ಥೇನ ಸಂಚರಂತಿ ದಿವಾನಿಶಂ ।
ಪಿಪೀಲಿಕಾಸಧರ್ಮಾಣಃ ಪ್ರಾಯೇಣ ಪುರುಷಾ ಅಪಿ ॥೩೬॥

---

೩೩. ಪಿಶಾಚಗಳು ಭೂತಭೋಜನ ಚಿಂತೆಯೊಂದೇ ಉಳ್ಳವರಾಗಿ, ಧೂಮ, ಅಂಧಕಾರ, ಗಾಳಿ, ಇವುಗಳಿಂದ ಕೂಡಿದ ಜ್ವಾಲೆಯಿಂದ ಆಹುತಿಗಳು ದೂಷಿತವಾಗುವಂತೆ, ಅವಿವೇಕಾದಿಗಳಿಂದ ದೂಷ್ಯರಾಗಿರುವರು.

( ಅಜ್ಞಾನಧೂಮಾಂಧಕಾರಸ್ಯಾನಿಲವತ್ಕ್ರೋಧ ಹಿಂಸಾದಿ ಜ್ವಾಲಾತ್ವ ಸಂಪಾದಿಕಯಾ ಭೂತಭೋಜನಚಿಂತಯಾ । ಯಥಾ ಅಗ್ನೌ ಪತಿತಾ ಆಹುತಯಃ ಸದ್ಯೈವ ಸಧೂಮ ಜ್ವಾಲಯಾದಂದಹ್ಯಮಾನಂ ಸ್ವಂ ಪಶ್ಯಂತಿ ತಥಾ ಪಿಶಾಚಾ ಅಪೀತ್ಯರ್ಥಃ ॥ —ತಾ. ಪ್ರ.)

೩೪. ನಾಗಗಣಗಳೆಂಬ ತಾವರೆಯ ದಂಟುಗಳು ಧರಣೀತಲ (ಪಾತಾಲ) ದಲ್ಲಿ ಮುಳುಗಿ, ಮರಗಳ ಬೇರುಗಳಂತೆ ಜಡ (ವಿವೇಕಹೀನ) ರಾಗಿ ಬಿದ್ದಿರುವುವು.

೩೫. ಭೂಮಿಯಲ್ಲಿ ಹೊಕ್ಕಿಕೊಂಡಿರುವ ಕೀಟಗಳಂತೆ, ಬಿಲಗಳಲ್ಲಿ ಸೇರಿಕೊಂಡಿರುವ ಅಸುರ ಬಾಲಕರಿಗೆ ವಿವೇಕವು ಹೇಗೆತಾನೇ ಬಂದೀತು ?

೩೬. ಮನುಷ್ಯರೂ ಕೂಡ ಪಿಪೀಲಿಕಾಸಹಧರ್ಮಿಗಳಾಗಿ, ಅತ್ಯಲ್ಪವಾದ ಅರ್ಥಗಳಿಗಾಗಿ ದಿವಾನಿಶವೂ ಓಡ್ಡಾಡುತ್ತಿರುವರು.

ಸರ್ವಾಸಾಂ ಭೂತಜಾತೀನಾಂ ತೃಷ್ಣಾಗ್ರಾಣಾಂ ವ್ಯರ್ಥದೀರ್ಘಯಾ ।
ಕ್ಷೀಬಾಣಾಮಿವ ಗಚ್ಛಂತಿ ದಿವಸಾನಿ ದುರೀಹಯಾ ॥೩೭॥

ನ ಕಂಚಿತ್ಸಂಸ್ಪೃಶಂತ್ಯಂತರ್ವಿವೇಕೋ ವಿಮಲೋ ಜನಂ ।
ಜಲೇ ಗಾಧೇ ನಿಪತಿತಂ ನಿಮಜ್ಜಂತಂ ರಜೋ ಯಥಾ ॥೩೮॥

ನಿಯಂತೇ ನಿಯಮಾಭೂತಾ ಮಾನವಾ ಮಾನವಾಯುಭಿಃ ।
ಕಾಂಪಿಕೈಃ ಸ್ಫುಟಿತಾ ಪೂತಾಃ ಕಿರಾರುನಿಕರಾ ಇವ ॥೩೯॥

ಪಾನಭೋಜನಜಂಬಾಲೇ ಗಹನೇ ಯೋಗಿನೀಗಣಾಃ ।
ದುರ್ಗಂಧಪಲ್ವಲೋದ್ಗಾರೇ ಪತಿತಾಃ ಪಾಮರಾ ಇವ ॥೪೦॥

ಕೇವಲಂ ಯಮಚಂದ್ರೇಂದ್ರರುದ್ರಾರ್ಕವರುಣಾನಿಲಾಃ ।
ಜೀವನ್ಮುಕ್ತಾ ಹರಿಬ್ರಹ್ಮಗುರುಶುಕ್ರಾನಲಾದಯಃ ॥೪೧॥

೩೭. ಸರ್ವಭೂತಗಳಿಗೂ ವ್ಯರ್ಥವೂ ದೀರ್ಘವೂ ಆದ ದುರಿಚ್ಛೆಗಳೇ ತುಂಬಿ ಅದರಲ್ಲಿ ಅವು ಮುಳುಗಿರಲು, ದಿವಸಗಳು, ಪಾನೋನ್ಮತ್ತರಿಗೆ ಹೇಗೋ ಹಾಗೇ ಆಯುಸ್ಸು ಕಳೆದುಹೋಗುವುದು.

೩೮. ಆಳವಾದ ಜಲದಲ್ಲಿ ಮುಳುಗಿರುವವನನ್ನು, ಜಲದಮೇಲೆ ಬೀಳುವ ರಜಸ್ಸು ಹೇಗೆ ಮುಟ್ಟಲಾರದೋ ಹಾಗೆ, ಅಂತರ್ವಿವೇಕವುಳ್ಳ ಶುದ್ಧರಾದ ಜನವನ್ನು ಅವಿವೇಕವು ಯಾವುದೂ ಎಳ್ಳಷ್ಟೂ ಮುಟ್ಟುವುದಿಲ್ಲ.

೩೯. ಮೊರದಲ್ಲಿ ತೂರುತ್ತಿರುವ ಧಾನ್ಯದ ಜಳ್ಳನ್ನು ಗಾಳಿಯು ಹಾರಿಸಿ ಕೊಂಡು ಹೋಗುವಂತೆ, ನಿಯಮಗಳನ್ನು ಬಿಟ್ಟು ನಡೆಯುವವರನ್ನು ದೇಹಾದ್ಯಭಿ ಮಾನಲಕ್ಷಣಗಳಾದ ವಾಯುಗಳು ಹೊತ್ತುಕೊಂಡು ಹೋಗುವುವು.

೪೦. ಪಾನಭೋಜನಗಳೆಂಬ ಗಾಢವಾದ ಪಂಕದಲ್ಲಿ, ದುರ್ಗಂಧವನ್ನು ಕಾರುವ ಹಳ್ಳದಲ್ಲಿ ಬಿದ್ದ ಪಾಮರರಂತೆ, ಯೋಗಿನೀಗಣಗಳು ಸಿಕ್ಕಿಕೊಂಡಿರುವುವು.

೪೧. ಆದರೆ ಜೀವನ್ಮುಕ್ತರು ಯಾರು ಎಂದರೆ, ಯಮ, ಚಂದ್ರ, ಇಂದ್ರ ರುದ್ರ, ಅರ್ಕ, ವರುಣ, ಅನಿಲ, ಹರಿ, ಬ್ರಹ್ಮ ಗುರು, ಶುಕ್ರ, ಅನಲ ಮೊದಲಾದ ಕೆಲವರು ಮಾತ್ರ.

ಪ್ರಜಾಪತೀನಾಂ ಸಪ್ತರ್ಷಿದಕ್ಷಾದ್ಯಾಃ ಕಶ್ಯಪಾದಯಃ ।
ನಾರದಾದ್ಯಾಃ ಕುಮಾರಾದ್ಯಾಃ ಸನಕಾದ್ಯಾಃ ಸುರಾತ್ಮಜಾಃ ॥೪೨॥

ದಾನವಾನಾಂ ಹಿರಣ್ಯಾಕ್ಷಬಲಿಪ್ರಹ್ಲಾದಶಂಬರಾಃ ।
ಮಯವೃತ್ರಾಂಧನಮುಚಿಕೇಶಿಪುತ್ರಮುರಾದಯಃ ॥೪೩॥

ವಿಭೀಷಣಾದ್ಯಾ ರಕ್ಷಸ್ಸು ಪ್ರಹಸ್ತೇಂದ್ರಜಿದಾದಯಃ ।
ಶೇಷತಕ್ಷಕಕರ್ಕೋಟಮಹಾಪದ್ಮಾದಯೋಹಿಷು ॥೪೪॥

ಬ್ರಹ್ಮವಿಷ್ಣ್ವಿಂದ್ರಲೋಕೇಷು ವಾಸ್ತವ್ಯಾ ಮುಕ್ತದೇಹಿನಃ ।
ಮುಕ್ತಸ್ವಭಾವಾಸ್ತುಷಿತಾಃ ಸಿದ್ಧಾಃ ಸಾಧ್ಯಾಶ್ಚ ಕೇಚನ ॥೪೫॥

ಮಾನವೇಷು ರಾಜನೋ ಮುನಯೋ ಬ್ರಾಹ್ಮಣೋತ್ತಮಾಃ ।
ಜೀವನ್ಮುಕ್ತಾಃ ಸಂಭವಂತಿ ವಿರಲಾಸ್ತು ರಘೂದ್ವಹ ॥೪೬॥

---

೪೨. ಪ್ರಜಾಪತಿಗಳಲ್ಲಿ ಸಪ್ತರ್ಷಿಗಳು, ದಕ್ಷಾದಿಗಳು, ಕಶ್ಯಪಾದಿಗಳು, ನಾರದಾದಿಗಳು, ಕುಮಾರಾದಿಗಳು, ಸನಕಾದಿಗಳು, ಮೊದಲಾದ ಸುರಾತ್ಮಜರು.

೪೩. ದಾನವರಲ್ಲಿ ಹಿರಣ್ಯಾಕ್ಷ, ಬಲಿ, ಪ್ರಹ್ಲಾದ, ಶಂಬರರು, ಮಯ, ವೃತ್ರ, ಅಂಧ, ನಮುಚಿ, ಕೇಶಿಪುತ್ರ, ಮುರಾದಿಗಳು.

೪೪. ರಾಕ್ಷಸರಲ್ಲಿ ವಿಭೀಷಣಾದಿಗಳು, ಪ್ರಹಸ್ತ ಇಂದ್ರಜಿದಾದಿಗಳು, ನಾಗರಲ್ಲಿ ಶೇಷ ತಕ್ಷಕ ಕರ್ಕೋಟಕ ಮಹಾಪದ್ಮಾದಿಗಳು.

೪೫. ಬ್ರಹ್ಮ, ವಿಷ್ಣು, ಇಂದ್ರಲೋಕಗಳಲ್ಲಿ ಕೆಲವರು ಮುಕ್ತರು ಇರುವರು. ತುಷಿತರಲ್ಲಿ, ಸಿದ್ಧರಲ್ಲಿ, ಸಾಧ್ಯರಲ್ಲಿ ಕೆಲವರು ಮುಕ್ತರು.

೪೬. ಮಾನುಷರಲ್ಲಿ ರಾಜರು, ಮುನಿಗಳು, ಬ್ರಾಹ್ಮಣೋತ್ತಮರು, ಜೀವನ್ಮುಕ್ತರಾಗುವರು. ಅಂಥವರು ವಿರಲರು. ರಾಘವ!

ಭೂತಾನಿ ಸಂತಿ ಸಕಲಾನಿ ಬಹೂನಿ ದಿಕ್ಷು ।
ಬೋಧಾನ್ವಿತಾನಿ ವಿರಲಾನಿ ಭವಂತಿ ಕಿಂತು ॥
ವೃಕ್ಷಾ ಭವಂತಿ ಫಲಪಲ್ಲವಜಾಲಯುಕ್ತಾಃ ।
ಕಲ್ಪದ್ರುಮಾಸ್ತು ವಿರಲಾಃ ಖಲು ಸಂಭವಂತಿ ॥೪೭॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ "ವಿವೇಕಿ
ವಿರಲತ್ವವರ್ಣನಂ" ನಾಮ ಸಪ್ತನವತಿತಮಃ ಸರ್ಗಃ

---

೪೭. ದಿಕ್ಕುದಿಕ್ಕುಗಳಲ್ಲಿಯೂ ನಾನಾವಿಧಗಳಾದ ಸಕಲ ಭೂತಗಳೂ ಇರುತ್ತವೆ. ಆದರೆ, ಬೋಧಸಂಪನ್ನವಾದವು ಬಹು ವಿರಲ. ಫಲಪಲ್ಲವಾದಿ ಸಮೇತಗಳಾದ ವೃಕ್ಷಗಳು ಬೇಕಾದಹಾಗೆ ಇದ್ದರೂ ಕಲ್ಪದ್ರುಮಗಳು ಮಾತ್ರ ವಿರಲಗಳಲ್ಲವೆ?

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ವಿವೇಕಿವಿರಲತ್ವ ವರ್ಣನ" ಎಂಬ
ತೊಂಭತ್ತೇಳನೆಯ ಸರ್ಗವು

---

# ಅಷ್ಟನವತಿತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ—

ವಿವೇಕಿನೋ ವಿರಕ್ತಾ ಯೇ ವಿಶ್ರಾಂತಾ ಯೇ ಪರೇ ಪದೇ ।
ತೇಷಾಂ ತನುತ್ವಮಾಯಾಂತಿ ಲೋಭಮೋಹಾದಯೋಽರಯಃ ॥೧॥

ನ ಹೃಷ್ಯಂತಿ ನ ಕುಪ್ಯಂತಿ ನಾವಿಶಂತ್ಯಾಹರಂತಿ ಚ ।
ಉದ್ವಿಜಂತೇಪಿ ನೋ ಲೋಕಾಲ್ಲೋಕಾನ್ನೋದ್ವೇಜಯಂತಿ ಚ ॥೨॥

ನ ನಾಸ್ತಿಕ್ಯಾನ್ನ ಚಾಸ್ತಿಕ್ಯಾತ್ಕಷ್ಟಾನುಷ್ಠಾನವೈದಿಕಾಃ ।
ಮನೋಜ್ಞಮಧುರಾಚಾರಾಃ ಪ್ರಿಯಪೇಶಲವಾದಿನಃ ॥೩॥

---

# ತೊಂಭತ್ತೆಂಟನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು—

೧. ಪರಮಪದದಲ್ಲಿ ವಿಶ್ರಾಂತಿಯನ್ನು ಪಡೆದ ವಿವೇಕಿಗಳು ವಿರಕ್ತರು. ಅಂತಹವರಿಗೆ ಲೋಭ ಮೋಹಾದಿ ಅರಿಷಡ್ವರ್ಗವು ಶಿಥಿಲವಾಗುವುದು.

೨. ಅಂತಹವರು ಹರ್ಷದಲ್ಲಿ ಕೋಪದಲ್ಲಿ ಪರವಶರಾಗುವುದಿಲ್ಲ ಯಾವುದರಲ್ಲಿಯೂ ಹೆಚ್ಚು ಅಭಿಮಾನವಿಟ್ಟುಕೊಳ್ಳುವುದಿಲ್ಲ; ಭೋಗಜಾತಗಳನ್ನು ಸಂಪಾದಿಸುವುದರಲ್ಲಿ ವ್ಯಗ್ರರಾಗಿರುವುದಿಲ್ಲ.

೩. ನಾಸ್ತಿಕ್ಯದಿಂದಲಾಗಲಿ, ಆಸ್ತಿಕ್ಯದಿಂದಲಾಗಲಿ, ವಿವೇಕವು ಬರುವುದಿಲ್ಲ. ಕಷ್ಟವಾದ ಅನುಷ್ಠಾನಗಳನ್ನು ಆಚರಿಸುತ್ತಾ, ಮನೋಜ್ಞವಾದ ಮಧುರಾಚಾರವನ್ನು ಆಚರಿಸುತ್ತಾ ಪ್ರಿಯವೂ ಸುಂದರವೂ ಆದ ಮಾತುಗಳನ್ನಾಡುತ್ತ,

ಸಂಗದಾಹ್ಲಾದಯಂತ್ಯಂತಃ ಶಶಾಂಕಕಿರಣಾ ಇವ ।
ವಿವೇಚಿತಾರಃ ಕಾರ್ಯಾಣಾಂ ನಿರ್ಣೇತಾರಃ ಕ್ಷಣಾದಪಿ ॥೪॥

ಅನುದ್ವೇಗಕರಾಚಾರಾ ಬಾಂಧವಾ ನಾಗರಾ ಇವ ।
ಬಹಿಃ ಸರ್ವಸಮಾಚಾರಾ ಅಂತಃ ಸರ್ವಾರ್ಥಶೀತಲಾಃ ॥೫॥

ಶಾಸ್ತ್ರಾರ್ಥರಸಿಕಾಸ್ತಜ್ಜ್ಞಾ ಜ್ಞಾನಲೋಕಪರಾವರಾಃ ।
ಹೇಯೋಪಾದೇಯವೇತ್ತಾರೋ ಯಥಾಪ್ರಾಪ್ತಾಭಿಪಾತಿನಃ ॥೬॥

ವಿರುದ್ಧಕಾರ್ಯವಿರತಾ ರಸಿಕಾಃ ಸಜ್ಜನಸ್ಥಿತೌ ।
ಅನಾವರಣಸೌಗಂಧ್ಯೈಃ ಪರಾಸ್ಪದಸುಖಾಶನೈಃ ॥೭॥

೪. ತಮ್ಮ ಸಂಗದಿಂದಲೇ ಬೆಳದಿಂಗಳಂತೆ ಆಹ್ಲಾದಕರರಾಗಿ, ವಿವೇಚನ ಮಾಡಬಲ್ಲವರಾಗಿ, ಒಂದುಕ್ಷಣದಲ್ಲಿ ಕಾರ್ಯ-ಅಕಾರ್ಯಗಳನ್ನು ನಿರ್ಣಯಿಸುವವರಾಗಿ,

೫. ನಾಗರಿಕರಾದ ಬಾಂಧವರಂತೆ, ಅನುದ್ವೇಗಕರವಾದ ಆಚಾರವುಳ್ಳವರಾಗಿ, ಬಹಿಃ ಪ್ರತಿಯೊಂದರಲ್ಲೂ ಆಸಕ್ತರಾಗಿ, ಅಂತಃ ಸರ್ವಾರ್ಥಶೀತಲರಾಗಿ, (ಬಹಿಃ ಎಲ್ಲದರಲ್ಲಿಯೂ ಆಸಕ್ತರಾಗಿರುವಂತಿದ್ದರೂ ಅಂತಃ ಎಲ್ಲದರಲ್ಲಿಯೂ ಉದಾಸೀನರಾಗಿ)

೬. ಶಾಸ್ತ್ರಾರ್ಥದಲ್ಲಿ ಸಂತೋಷಪಡುವವರಾಗಿ, ಅದನ್ನು ಬಲ್ಲವರಾಗಿ, ಪರ, ಅವರ, ಲೋಕಗಳನ್ನು ತಿಳಿದವರಾಗಿ, ಹೇಯವಾವುದು? ಉಪಾದೇಯವಾವುದು? ಎಂಬುದನ್ನು ಅರಿತವರಾಗಿ, ಯಥಾಪ್ರಾಪ್ತವಾದುದನ್ನು ಅನುಭವಿಸುವವರಾಗಿ,

೭. ವಿರುದ್ಧವಾಕ್ಯವನ್ನು ಮಾಡದೆ, ಸಜ್ಜನರಾಗಿರುವುದರಲ್ಲೇ ಆಸಕ್ತಿಯುಳ್ಳವರಾಗಿ, ಉಪದೇಶದಿಂದ ಜ್ಞಾನಸೌರಭವನ್ನು ಹಂಚುವರಾಗಿ, ಬಂದವರನ್ನು ವಸತಿ ಸುಖಾನ್ನಗಳಿಂದ ಗೌರವಿಸುವವರಾಗಿ,

(ಅನಾವರಣಮುಪದೇಶೇನ ಹೃದಯಕೋಶೋದ್ಘಾಟನಂ ತತ್ಪ್ರಯುಕ್ತ್ಯೈ ಜ್ಞಾನೋದಯಸೌಗಂಧ್ಯೈಃ, —ತಾ. ಪ್ರ.)

ಪೂಜಯಂತ್ಯಾಗತಂ ಫುಲ್ಲಾ ಭೃಂಗಂ ಪದ್ಮಾ ಇವಾರ್ಥಿನಂ |
ಆವರ್ಜಯಂತಿ ಜನತಾಂ ಜನತಾಪಾಪಹಾರಿಣಃ ||೮||

ಶೀತಲಾಸ್ಪದವತ್ಸ್ನಿಗ್ಧಾಃ ಪ್ರಾವೃಷೀವ ಪಯೋಧರಾಃ |
ಭೂಭೃದ್ಭಂಗಕರಂ ಧೀರಾ ದೇಶಭಂಗದಮಾಕುಲಂ ||೯||

ರೋಧಯಂತ್ಯಾಗತಂ ಕ್ಷೋಭಂ ಭೂಕಂಪಮಿವ ಪರ್ವತಾಃ |
ಉತ್ಸಾಹಯಂತಿ ವಿಪದಿ ಸುಖಯಂತಿ ಚ ಸಂಪದಿ ||೧೦||

ಚಂದ್ರಬಿಂಬೋಪಮಾಕಾರಾ ದಾರಾ ಇವ ಗುಣಾಕರಾಃ |
ಯಶಃಪುಷ್ಪಾಮಲದಿಶೋ ಭಾವಿಸತ್ಫಲಹೇತವಃ ||೧೧||

---

೮. ಚೆನ್ನಾಗಿ ಅರಳಿದ ತಾವರೆಗಳು ಭೃಂಗವನ್ನು ಆದರಿಸುವಂತೆ, ಮನೆಗೆ ಬಂದ ಅತಿಥಿಯನ್ನು ಸತ್ಕಾರಾದಿಗಳಿಂದ ಅರ್ಚಿಸಿ, ಜನತಾಪಾಪಹಾರಿಗಳಾದರೂ ಜನರ ಜೊತೆ ಸೇರದೆ ಇರುವವರಾಗಿ—

(ಆವರ್ಜಯಂತಿ ಗುಣೈರ್ವಶೀಕುರ್ವಂತಿ —ತಾ.ಪ್ರ.)

೯. ಮಳೆಗಾಲದ ಮೋಡಗಳಂತೆ ಶೀತಲವಾಗುವಷ್ಟು ಸ್ನಿಗ್ಧರಾಗಿ, ರಾಜರಿಗೂ ರಾಜ್ಯಕ್ಕೂ ಬಂದ ಭಂಗಗಳನ್ನೂ ವ್ಯಸನಗಳನ್ನೂ ನಿವಾರಿಸುವವರಾಗಿ,

(ಭೂಭೃತಾಂ ರಾಜ್ಞಾಂ ಭಂಗಕರಂ ದೇಶಭಂಗದಂ ಚ ಆಕುಲಂ ದುರ್ಭಿಕ್ಷಮಾರೀ ಪರಚಕ್ರಾದಿಪ್ರಯುಕ್ತಂ ಜನಕ್ಷೋಭಂ ತಪಃ ಪ್ರಭಾವ ಸತ್ಕರ್ಮಾನುಷ್ಠಾಪನ ಸಾಮಾದ್ಯುಪಾಯೈಃ ರೋಧಯಂತೀ —ತಾ.ಪ್ರ )

೧೦. ಪರ್ವತಗಳು ಭೂಕಂಪವನ್ನು ನಿರೋಧಿಸುವಂತೆ, ಬಂದ ಕ್ಷೋಭವನ್ನು ಪರಿಹರಿಸುವವರಾಗಿ, ವಿಪತ್ತಿನಲ್ಲಿಯೂ ಉತ್ಸಾಹವುಳ್ಳವರಾಗಿ, ಸಂಪತ್ತಿನಲ್ಲಿ ಸುಖಪಡುವವರಾಗಿ,

೧೧. ಚಂದ್ರಬಿಂಬಕ್ಕೆ ಸಮವಾದ ಆಕಾರವುಳ್ಳವರಾಗಿ, ಗುಣವಂತೆಯರಾದ ಪತ್ನಿಯರಂತೆ ಹಿತರಾಗಿ, ಯಶಸ್ಸೆಂಬ ಪುಷ್ಪಗಳಿಂದ ಬೆಳಗುವ ದಿಗಂತವುಳ್ಳವರಾಗಿ, ಭಾವಿ ಸತ್ಫಲಕ್ಕೆ ಕಾರಣರಾಗಿ,

ಪುಂಸ್ಕೋಕಿಲಸಮಾಲಾಪಾ ಮಾಧವಾ ಇವ ಸಾಧವಃ ।
ಕಲ್ಲೋಲಬಹುಲಾವರ್ತಂ ವ್ಯಾಮೋಹಮಕರಾಲಯಂ ॥೧೨॥

ಉತಂತಮಿವ ಹೇಮಂತಂ ಲೋಡಯಂತಂ ಜನಾಸ್ಪದಂ ।
ವೀಚಿವಿಕ್ಷೋಭಚಪಲಂ ಪರಚಿತ್ತಮಹಾರ್ಣವಂ ॥೧೩॥

ತಜ್ಜ್ಞ ರೋಧಯಿತುಂ ಶಕ್ತಾಸ್ತಟಸ್ಥಾಃ ಸಾಧುಪರ್ವತಾಃ ।
ಆಪತ್ಸು ಬುದ್ಧಿನಾಶೇಷು ಕಲ್ಲೋಲೇಷ್ವಾಕುಲೇಷು ಚ ॥೧೪॥

ಸಂಕಟೇಷು ದುರಂತೇಷು ಸಂತ ಏವ ಗತಿಃ ಸತಾಂ ।
ಏಭಿಶ್ಚಿಹ್ನೈರಥಾನ್ಯೈಶ್ಚ ಜ್ಞಾತ್ವಾ ತಾನುಚಿತಾಶಯಾನ್ ॥೧೫॥

---

೧೨. ಗಂಡುಕೋಗಿಲೆಯಂತೆ ಕರ್ಣಮಧುರವಾದ ಆಲಾಪವುಳ್ಳವರಾಗಿ, ಸಾಧುಗಳು ಮಾಧವಮಾಸದಂತೆ ಮೆರೆಯುವರು. ಅವರು ಕಲ್ಲೋಲಗಳಿಂದಲೂ ಬಹುವಾದ ಸುಳಿಗಳಿಂದಲೂ ಕೂಡಿದ ವ್ಯಾಮೋಹವೆಂಬ ಮಕರಾಲಯವನ್ನು,

೧೩. ಹೇಮಂತದಂತೆ, ದೇಶವನ್ನು ಒದ್ದಾಡಿಸುವ, ಹುಚ್ಚುಹಿಡಿಸುವ, ಪರಚಿತ್ತವೆಂಬ ಮಹಾರ್ಣವವನ್ನು ವೀಚಿಗಳಿಂದ ವಿಕ್ಷುಬ್ಧವಾಗಿ ಚಪಲಗೊಳಿಸುವ, ವ್ಯಾಮೋಹವನ್ನು

(ವೀಚಯಃ ಷಡೂರ್ಮಯಃ ತದ್ವಿಕ್ಷೋಭೈಶ್ಚಪಲಂ ತತ್ಪ್ರಸಿದ್ಧಲೋಭ ದ್ವೇಷಾದಿ ಮೋಹಿತಃ । – – । ಈದೃಶಾಮಪಿ ಪರೇಷಾಂ ರಾಜಾದೀನಾಂ ಚಿತ್ತ ಮಹಾರ್ಣವಂ ಸಾಮದಾನಾದಿನಾ ವಿವೇಕೋಪದೇಶೈಶ್ಚ ರೋಧಯಿತುಂ ಶಕ್ತಾಃ ॥ —ತಾ. ಪ್ರ.)

೧೪. ತಡೆದುನಿಲ್ಲಿಸುವ ಶಕ್ತಿಯುಳ್ಳವರು ತಟಸ್ಥರಾದೀ ಸಾಧುಪರ್ವತಗಳ.. ಆಪತ್ತುಗಳಲ್ಲಿ ಬುದ್ಧಿನಾಶವಾದಾಗ, ಅಶನಾಯಾಪಿಪಾಸಾ ಶೋಕ ಮೋಹ ಜರಾ ಮೃತ್ಯುಲಕ್ಷಣ ಷಡೂರ್ಮಿಗಳಾದ ಕಲ್ಲೋಲಗಳಲ್ಲಿ ವ್ಯಸನಗಳಲ್ಲಿ,

೧೫. ದುರಂತವಾದ ಸಂಕಟಗಳಲ್ಲಿ ಸಂತರೇ ಸತ್ಪುರುಷರಿಗೆ ಗತಿಯು. ಈಗ ಹೇಳಿದ ಈ ಗುರುತುಗಳಿಂದಲೂ ಇತರ ಚಿಹ್ನೆಗಳಿಂದಲೂ ಆ ಉಚಿತಾಶಯ ರನ್ನು ಗುರುತಿಸಿ,

ಆಶ್ರಯೇತ್ಯೈಕವಿಶ್ರಾಂತ್ಯೈ ಶ್ರಾಂತಃ ಸಂಸಾರವರ್ತ್ಮನಾ ।
ಯಸ್ಮಾದತ್ಯಂತವಿಷಮಃ ಸಂಸಾರೋರಗಸಾಗರಃ ॥೧೬॥

ವಿನಾ ಸತ್ಸಂಗಮನ್ಯೇನ ಪೋತಕೇನ ನ ತೀರ್ಯತೇ ।
ಆಸ್ತಾಂ ಕಿಂ ಮೇ ವಿಚಾರೇಣ ಯದ್ಭವೇದಸ್ತು ತನ್ಮಮ ।
ಇತ್ಯಂತಃ ಕಲ್ಕಮಾಸಾದ್ಯ ನ ಸ್ಥೇಯಂ ಗರ್ತಕೀಟವತ್ ॥೧೭॥

ಏಕೋಽಪಿ ವಿದ್ಯತೇ ಯಸ್ಯ ಗುಣಸ್ತಂ ಸರ್ವಮುತ್ಸೃಜನ್ ।
ಅನಾದೃತಾನ್ಯತದ್ದೋಷಂ ತಾವನ್ಮಾತ್ರಂ ಸಮಾಶ್ರಯೇತ್ ॥೧೮॥

ಗುಣಾನ್ದೋಷಾಂಶ್ಚ ವಿಜ್ಞಾತುಮಾಬಾಲ್ಯಾತ್ಸ್ವಪ್ರಯತ್ನತಃ ।
ಯಥಾಸಂಭವಸತ್ಸಂಗಶಾಸ್ತ್ರೈಃ ಪ್ರಾಗ್ಧಿಯಮೇಧಯೇತ್ ॥೧೯॥

---

೧೬. ಸಂಸಾರದ ಹಾದಿಯಲ್ಲಿ ಶ್ರಾಂತರಾದವರು ಅದ್ವಯಬ್ರಹ್ಮನಲ್ಲಿ ಶಾಂತಿಯನ್ನು ಪಡೆಯಲು ಆಶ್ರಯಿಸಬೇಕು. ಅತ್ಯಂತ ವಿಷಮವಾಗಿರುವ ಸಂಸಾರವೆಂಬ ರಗದಂತೆ ಭೀಷಣವಾದ ಸಾಗರವು,

೧೭. ಸತ್ಸಂಗವೆಂಬ ಒಂದು ನೌಕೆಯಿಂದಲ್ಲದೆ ಇನ್ನು ಏತರಿಂದಲೂ ದಾಟಲಾಗುವುದಿಲ್ಲ. "ವಿಚಾರಮಾಡಿ ಆಗಬೇಕಾದುದೇನು ? ಯಾವುದು ಆಗಬೇಕೋ ಅದು ಆಗೇ ಆಗುತ್ತದೆ. ಆಗಲಿ" ಎಂಬ ಪ್ರಮಾದ ಸಿದ್ಧಾಂತವನ್ನು ಹಿಡಿದು ಹಳ್ಳದಲ್ಲಿರುವ ಹುಳುವಿನಂತೆ ಸುಮ್ಮನೆ ಕುಳಿತಿರಬಾರದು.

೧೮. ಮೇಲೆ ಹೇಳಿರುವ ಗುಣಗಳಲ್ಲಿ ಎಲ್ಲವೂ ಇಲ್ಲದೆ ಯಾವುದಾದರೂ ಒಂದು ಗುಣವಿರುವುದಾದರೂ, ಆ ಒಂದು ಗುಣವುಳ್ಳವನನ್ನು, ಮಿಕ್ಕ ಬೇರೆ ದೋಷಗಳಿದ್ದರೂ ಅವೆಲ್ಲವನ್ನೂ ಬಿಟ್ಟು, ಆ ಒಂದು ಗುಣಕ್ಕಾಗಿ ಆಶ್ರಯಿಸಬೇಕು.

೧೯. ಗುಣವಾವುದು ದೋಷವಾವುದು ಎಂಬುದನ್ನು ತಿಳಿದು ನಿರ್ಣಯಿಸುವುದನ್ನು ಬಾಲ್ಯದಿಂದ ಸ್ವಪ್ರಯತ್ನದಿಂದ, ಅನುಕೂಲವಿದ್ದಂತೆ ಸತ್ಸಂಗ ಶಾಸ್ತ್ರಗಳಿಂದ ಬೆಳೆಸಿಕೊಳ್ಳಬೇಕು.

ದೋಷಲೇಶಮನಾದೃತ್ಯ ನಿತ್ಯಂ ಸೇವೇತ ಸಜ್ಜನಂ ।
ಸ್ಥೂಲದೋಷಂ ತ್ವನಿರ್ವಾಣಂ ಶನೈಃ ಪರಿಹರೇತ್ಕ್ರಮಾತ್ ॥೨೦॥

ಯಾತಿ ರಮ್ಯಮರಮ್ಯತ್ವಂ ಸ್ಥಿರಮಸ್ಥಿರತಾಮಪಿ ।
ಯಥಾ ದೃಷ್ಟಂ ತಥಾ ಮನ್ಯೇ ಯಾತಿ ಸಾಧುರಸಾಧುತಾಂ ॥೨೧॥

ಏಷ ಸೋತ್ಯಂತ ಉತ್ಪಾತೋ ಯಃ ಸಾಧುರ್ಯಾತಿ ದುಷ್ಟತಾಂ ।
ದೇಶಕಾಲವಶಾತ್ಪಾಪೈರ್ಮಹೋತ್ಪಾತೋಪಿ ದೃಶ್ಯತೇ ॥೨೨॥

ಸರ್ವಕರ್ಮಾಣಿ ಸಂತ್ಯಜ್ಯ ಕುರ್ಯಾತ್ಸಜ್ಜನಸಂಗಮಂ ।
ಏತತ್ಕರ್ಮ ನಿರಾಬಾಧಂ ಲೋಕದ್ವಿತಯಸಾಧನಂ ॥೨೩॥

---

೨೦. ದೋಷಲೇಶವಿಲ್ಲದಿದ್ದರೂ ಅದನ್ನು ಲೆಕ್ಕಿಸದೆ ನಿತ್ಯವೂ ಸಜ್ಜನನನ್ನು ಸೇವಿಸಬೇಕು. ಬಹಳ ಭಾರಿಯ ದೋಷಗಳಿದ್ದರೆ ಅಂತಹವನನ್ನು ಆಶ್ರಯಿಸುವುದಾದರೆ ಆ ದೋಷಗಳನ್ನು ಕ್ರಮವಾಗಿ ಪರಿಹರಿಸಬೇಕು.

೨೧. ಇಲ್ಲದಿದ್ದರೆ ರಮ್ಯವು ಅರಮ್ಯವಾಗುವುದು; ಸ್ಥಿರವು ಅಸ್ಥಿರವಾಗುವುದು. ನೋಡುತ್ತಿದ್ದಹಾಗೆಯೇ ಸಾಧುವು ಅಸಾಧುವಾಗುವನು.

೨೨. ಸಾಧುವು ದುಷ್ಟನಾಗುವುದಕ್ಕಿಂತ ಹೆಚ್ಚಿನ ಉತ್ಪಾತವು ಇನ್ನಿಲ್ಲ. ದೇಶಕಾಲವಶವಾಗಿಯೂ ಪಾಪಮಾಡುವುದರಿಂದಲೂ ಇಂತಹ ಮಹೋತ್ಪಾತಗಳು ಕಾಣಬರುವುವು.

೨೩. ಎಲ್ಲಾ ಕರ್ಮಗಳನ್ನೂ ಬಿಟ್ಟು, ಸಜ್ಜನಸಂಗವನ್ನು ಭಜಿಸಬೇಕು. ಈ ಕರ್ಮವು ನಿರ್ಬಾಧಕವಾನುದು ಮಾತ್ರವಲ್ಲ; ಇಹಪರಗಳೆರಡಕ್ಕೂ ಸಾಧಕವಾದುದು.

ನ ಸಜ್ಜನಾದ್ದೂರತರಃ ಕ್ವಚಿದ್ಭವೇತ್ ।
ಭಜೇತ ಸಾಧೂನ್ವಿನಯಕ್ರಿಯಾನ್ವಿತಃ ॥
ಸ್ಪೃಶಂತ್ಯಯತ್ನೇನ ಹಿ ತತ್ಸಮಾಪಗಂ ।
ವಿಸಾರಿಣಸ್ತದ್ಗತಪುಷ್ಪರೇಣವಃ ॥೨೪॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ " ಸಜ್ಜನ
ಸಮಾಗಮಪ್ರಶಂಸಾ" ನಾಮ ಅಷ್ಟನವತಿತಮಃ ಸರ್ಗಃ

---

೨೪. ಸಜ್ಜನರನ್ನು ಬಿಟ್ಟು ದೂರವಿರಬಾರದು ವಿನಯ, ಕ್ರಿಯಾವಂತನಾಗಿ ಸಾಧುಗಳನ್ನು ಭಜಿಸಬೇಕು ಸಜ್ಜನರ ಬಳಿಯಿರುವವನನ್ನು ಅವರ ಸದ್ಗುಣಗಳು ಪುಷ್ಪರೇಣುಗಳು ಪಕ್ಕದಲ್ಲಿರುವವರನ್ನು ಮುಟ್ಟುವಂತೆ, ಅಯತ್ನವಾಗಿಯೇ ಸ್ಪರ್ಶಿಸುವುವು

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಸಜ್ಜನಸಮಾಗಮ ಪ್ರಶಂಸಾ" ಎಂಬ
ತೊಂಭತ್ತೆಂಟನೆಯ ಸರ್ಗವು

---

# ನವನವತಿತಮಃ ಸರ್ಗಃ

ಶ್ರೀರಾಮ ಉವಾಚಃ—

ಸಂತಿ ದುಃಖಕ್ಷಯೇಽಸ್ಮಾಕಂ ಶಾಸ್ತ್ರಸತ್ಸಂಗಯುಕ್ತಯಃ |
ಮಂತ್ರೌಷಧಿತಪೋದಾನತೀರ್ಥಪುಣ್ಯಾಶ್ರಮಾಶ್ರಯಾಃ ||೧||

ಕೃಮಿಕೀಟಪತಂಗಾದ್ಯಾಸ್ತಿರ್ಯಕ್ಸ್ಥಾವರಜಾತಯಃ |
ಕಥಂ ಸ್ಥಿತಾಃ ಕಿಮಾರಂಭಾಸ್ತೇಷಾಂ ದುಃಖಕ್ಷಯಃ ಕಥಂ ||೨||

ಶ್ರೀ ವಸಿಷ್ಠ ಉವಾಚ –

ಸರ್ವಾಣ್ಯೇವೇಹ ಭೂತಾನಿ ಸ್ಥಾವರಾಣಿ ಚರಾಣಿ ಚ |
ಆತ್ಮೋಚಿತಾಯಾಂ ಸತ್ತಾಯಾಂ ವಿಶ್ರಾಂತಾನಿ ಸ್ಥಿತಾನ್ಯಲಂ ||೩||

---

# ತೊಂಭತ್ತೊಂಭತ್ತನೆಯ ಸರ್ಗವು

ಶ್ರೀರಾಮನು ಕೇಳಿದನು—

೧ ನಮ್ಮ ದುಃಖವು ಕ್ಷಯವಾಗಲು, ಶಾಸ್ತ್ರ, ಸತ್ಸಂಗ, ಯುಕ್ತಿಗಳು, ಮಂತ್ರ, ಔಷಧಿ, ತಪಸ್ಸು ದಾನ ತೀರ್ಥ, ಪುಣ್ಯಾಶ್ರಮ, ಆಶ್ರಯಗಳೂ ಉಂಟು.

೨. ಕೃಮಿ, ಕೀಟ, ಪತಂಗಾದಿಗಳೂ ತಿರ್ಯಕ್ ಸ್ಥಾವರಜಾತಿಗಳೂ ಇರುವವಲ್ಲಾ! ಅವು ತಮ್ಮ ದುಃಖಕ್ಷಯವಾಗಬೇಕಾದರೆ ಏನು ಮಾಡಬೇಕು? ಹೇಗಿರಬೇಕು?

ಶ್ರೀ ವಸಿಷ್ಠನು ಹೇಳಿದನು—

೩. ಸ್ಥಾವರಗಳೂ ಜಂಗಮಗಳೂ ಆದ ಭೂತಗಳೆಲ್ಲವೂ ತಮತಮಗೆ ಉಚಿತವಾದ ಸತ್ತೆಯಲ್ಲಿಯೇ ಇರುವುವು.

(ಆತ್ಮೋಚಿತಾಯಾಂ ತತ್ತದ್ಯೋಗ್ಯಭೋಗೋಚಿತಾಯಾಂ ಸುಖಸತ್ತಾಯಾಂ ತಥಾ ಚ ತತ್ತದ್ಯೋನಿಭೋಗ್ಯ ವಿಷಯ ಸುಖಲವ ಏವ ತೇಷಾಂ ಮಹಾ ಪುರು ಷಾರ್ಥ ಇವಭಾತಿ | ತಾವನ್ಮಾತ್ರೇಣ ವಿಶ್ರಾಂತಾಃ ತದಾಶಯೈವ ಬಹುತರದುಃಖಾ ನ್ಯಪಿ ಸಹಮಾನಾ ಜೀವಂತಿ | ಇತ್ಯರ್ಥಃ —ತಾ. ಪ್ರ.)

ಭೂತಾನಾಮಣುಮಾತ್ರಾಣಾಮಪ್ಯಸ್ಮಾಕಮಿವೈಷಣಾಃ ।
ಕಿಂತ್ವಲ್ಪಾಸ್ಥಾ ವಯಂ ವಿಘ್ನಾಸ್ತೇಷಾಂ ತ್ವಚಲಸಂನಿಭಾಃ ॥೪॥

ಯಥಾ ವಿರಾಟ್ ಪ್ರಯತತೇ ವಾಲಖಿಲ್ಯಾಸ್ತಥೈವ ಹೇ ।
ಬಾಲಮುಷ್ಟ್ಯಲ್ಪಕಾಯೇಽಪಿ ಪಶ್ಯಾಹಂಕೃತಿಜೃಂಭಿತಂ ॥೫॥

ಜಾಯಂತೇ ಚ ಮ್ರಿಯಂತೇ ಚ ನಿರಾಧಾರೇಂಬರೇ ಖಗಾಃ ।
ಶೂನ್ಯೈಕವಿಷಯಾಸ್ತೇಷಾಂ ಸ್ವಾಸ್ಥ್ಯಂ ನ ಭವತಿ ಕ್ಷಣಂ ॥೬॥

ಪಿಪೀಲಿಕಾ ಯಾಶ್ಚೇಷ್ಟಾಭಿಗ್ರಾಸವಾಸಾತ್ಮಬಂಧುಭಿಃ ।
ಅಸ್ಮದ್ದಿವಸಕಲ್ಪೋಽಪಿ ನ ಪರ್ಯಾಪ್ತಃ ಕ್ಷಣೋ ಯಥಾ ॥೭॥

---

೪. ಪ್ರಾಣಿಗಳು ಅಣುಮಾತ್ರಗಳೇ ಆಗಿದ್ದರೂ ಅವುಗಳಿಗೆ ನಮ್ಮಂತೆಯೇ ಏಷಣತ್ರಯಗಳೂ ಉಂಟು. ಆದರೆ ನಮ್ಮಂತಹವರಿಗೆ ಆಸ್ಥೆಗಳೂ ಅಲ್ಪ; ವಿಘ್ನಗಳೂ ಅಲ್ಪ. ಆತ್ಮಜ್ಞಾನರಹಿತರಾದವರಿಗೆ ಆಸ್ಥೆಯೂ ಬಹಳ; ವಿಘ್ನಗಳೂ ಪರ್ವತಗಳಂತೆ.

೫. ವಿರಾಟ್ಪುರುಷನು ಹೇಗೆ ಸ್ವಾಧಿಕಾರನಿರ್ವಾಹಕ್ಕಾಗಿಯೂ ಸ್ವಭೋಗಕ್ಕಾಗಿಯೂ ಪ್ರಯತ್ನಮಾಡುವನೋ ಹಾಗೆಯೇ ಆಕಾಶದಲ್ಲಿರುವ ಕೂದಲು ಕೊನೆಯಷ್ಟು ಇರುವ, ಮಕ್ಕಳ ಬೆರಳಸಂದಿಯಲ್ಲಿ ತೂರುವಷ್ಟು ಸಣ್ಣ ದೇಹವುಳ್ಳ ಪ್ರಾಣಿಗಳೂ ಸ್ವಾಧಿಕಾರ ನಿರ್ವಾಹ ಸ್ವಭೋಗಸಾಧನಗಳಿಗಾಗಿ ಪ್ರಯತ್ನಪಡುವುವು. ಈ ಅಹಂಕಾರವಿಜೃಂಭಣವನ್ನು ನೋಡು.

೬. ನಿರಾಧಾರವಾದ ಆಕಾಶದಲ್ಲಿ ವ್ಯೋಮಪಕ್ಷಿಗಳು ಹುಟ್ಟುವುವು (ಬಾಳುವುವು) ಸಾಯುವುವು. ಶೂನ್ಯವೊಂದನ್ನೇ ವಿಷಯವಾಗುಳ್ಳ ಅವು ಒಂದು ಗಳಿಗೆಯೂ ಸ್ವಸ್ಥವಾಗಿರುವುದನ್ನು ಕಾಣವು.

೭. ಇರುವೆಗಳೂ ಕೂಡ ಗ್ರಾಸವಾಸಗಳಿಗಾಗಿ ಆತ್ಮಬಂಧುಗಳೊಡನೆ ಸೇರಿಕೊಂಡು ಒಂದು ಕ್ಷಣವೂ ವಿಚ್ಛಿತ್ತಿಯಿಲ್ಲದೆ, ನಮ್ಮ ದಿವಸವು ಅವುಗಳ ದೃಷ್ಟಿಯಿಂದ ಬಹು ದೀರ್ಘವಾದರೂ, ಆ ಕಾಲವನ್ನೆಲ್ಲ ಪ್ರಯತ್ನದಿಂದಲೇ ನೀಗುತ್ತಿರುವುವು.

ತ್ರಸರೇಣುಪ್ರಮಾಣಾತ್ಮಾ ಕೃಮ್ಯಣುಸ್ತಿಮಿನಾಮಕಃ ।
ಗಗನೇ ವ್ಯಗ್ರತಾ ತಸ್ಯ ಗರುಡಸ್ಯೇವ ಲಕ್ಷ್ಯತೇ ।೮।

ಅಯಂ ಸೋಽಹಮಿದಂ ತನ್ಮ ಇತ್ಯಾಕಲ್ಪಿತಕಲ್ಪನಂ ।
ಜಗದ್ಯಥಾ ನೃಣಾಂ ಸ್ಫಾರಂ ತಥೈವೋಚ್ಚೈರ್ಗುಣೈಃ ಕೃಮೇಃ ॥೯॥

ದೇಶಕಾಲಕ್ರಿಯಾದ್ರವ್ಯವ್ಯಗ್ರಯಾ ಜರ್ಜರೀಕೃತಂ ।
ಕ್ಷೀಯತೇ ವ್ರಣಕೀಟಾನಾಮಸ್ಮಾಕಮಿವ ಜೀವಿತಂ ॥೧೦॥

ಪಾದಪಾಃ ಕಿಂಚಿದುನ್ನಿದ್ರಾ ಘನನಿದ್ರಾಃ ಖಲೂಪಲಾಃ ।
ಕೃಮಿಕೀಟಾದಯಃ ಕಾರ್ಯೇ ನರವತ್ಸ್ವಪ್ನಬೋಧಿನಃ ॥೧೧॥

---

೮. ತ್ರಸರೇಣುವಿನಷ್ಟು ಆಕಾರವಾಗಿರುವ ತಿಮಿಯೆಂಬೊಂದು ಕೃಮಿಯುಂಟು. ಆದರೂ ಅದು ಮುಂದಕ್ಕೆ ಹೋಗುವುದರಲ್ಲಿ ಗರುಡನು ಎಷ್ಟು ಪ್ರಯತ್ನ ಮಾಡುವನೋ ಅಷ್ಟೇ ಪ್ರಯತ್ನಮಾಡುವುದು.

೯. ಇವನು, ಅವನು, ನಾನು. ಇದು, ಅದು, ನನ್ನದು, ಎಂಬ ಕಲ್ಪನೆಗಳನ್ನು ಮಾಡಿಕೊಂಡು ಇರುವ ಮನುಷ್ಯರಿಗೆ ಜಗತ್ತು ಎಷ್ಟು ವಿಸ್ತಾರವಾಗಿರುವುದೋ ಹಾಗೆಯೇ ಕೃಮಿಗೂ ಗುಣಾತಿಶಯಗಳಿಂದ ವಿಸ್ತಾರವಾಗಿರುವುದು.

೧೦. ದೇಶ ಕಾಲಕ್ರಿಯಾ ದ್ರವ್ಯಗಳಲ್ಲಿ ಆಸಕ್ತರಾಗಿ ಜರ್ಜರಿತವಾಗುವ ನಮಗೆ ಹೇಗೋ ಹಾಗೇ ವ್ರಣದಲ್ಲಿರುವ ಕೀಟಕ್ಕೂ ಜೀವಿತವು ಕಳೆಯುವುದು.

೧೧. ವೃಕ್ಷಗಳು ನಿದ್ದೆಯಿಂದ ಏಳುವ ಅವಸ್ಥೆಯಲ್ಲಿರುವುವು. ಶಿಲೆಗಳು ಘನನಿದ್ರೆಯಲ್ಲಿರುವುವು. ಕೃಮಿ ಕೀಟಾದಿಗಳು ಮನುಷ್ಯರಂತೆ ಕನಸು ಕಾಣುತ್ತಿರುವುವು.

ಶರೀರನಾಶ ಏಸ್ಯೈಷಾಂ ಸುಖಂ ಸಂಪ್ರತಿ ದುಃಖಕೃತ್ ।
ಅಸ್ಮಾಕಮಿವ ತೇಷಾಂ ತಜ್ಜೀವಿತಂ ತು ಸುಖಾಯತೇ ॥೧೨॥

ಜನೋ ದ್ವೀಪಾಂತರಂ ಯಾದೃಗ್ವಿಕ್ರೀತಃ ಪರಿಪಶ್ಯತಿ ।
ಪದಾರ್ಥಜಾಲಂ ಪಶ್ಯಂತಿ ತಾದೃಕ್ಪಶುಮೃಗಾದಯಃ ॥೧೩॥

ಅಸ್ಮಾಕಮಿವ ಸಂಸಾರಸ್ತಿರಶ್ಚಾಂ ಸುಖದುಃಖದಃ ।
ಪದಾರ್ಥಪ್ರವಿಭಾಗೇನ ಕೇವಲಂ ತೇ ವಿವರ್ಜಿತಾಃ ॥೧೪॥

ಹೃದಯಾತ್ಸುಖದುಃಖಾಭ್ಯಾಂ ನಾಸಾತೋ ರಶನಾಗುಣೈಃ ।
ಪಶವಃ ಪರಿಕೃಷ್ಯಂತೇ ವಿಕ್ರೀತಾಃ ಪಾಮರಾ ಅಪಿ ॥೧೫॥

---

೧೨. ನಮ್ಮಂತೆಯೇ ಇವುಗಳೂ ಕೂಡ ಜೀವಿತವನ್ನು ಸುಖವೆಂದುಕೊಂಡು ಜೀವಿತನಾಶವನ್ನು ದುಃಖವನ್ನಾಗಿ ಭಾವಿಸುವುವು.

೧೩. ಪಾಮರನಾದವನನ್ನು ಕೊಂಡುಹೋಗಿ ದ್ವೀಪಾಂತರದಲ್ಲಿ ಮಾರಿಬಿಟ್ಟರೆ ಅಲ್ಲಿ ಅವನು ಹೇಗೆ ಇರುವನೋ ಹಾಗೆ ಪಶುಮೃಗಾದಿಗಳು ಎಲ್ಲವನ್ನೂ ನೋಡುವುವು.

೧೪. ಸಂಸಾರವು ನಮಗೆ ಹೇಗೋ ಹಾಗೆ ತಿರ್ಯಗ್ಜಂತುಗಳಿಗೂ ಸುಖದುಃಖಗಳನ್ನು ಕೊಡುವುದು. ಆದರೆ ಅವು ಶಾಸ್ತ್ರದೃಷ್ಟಿಯಿಂದ ಇವು ಹೇಯಗಳು ಇವು ಉಪಾದೇಯಗಳು ಎಂಬುದನ್ನು ಮಾತ್ರ ನೋಡಲಾರವು.

೧೫. ಸುಖದುಃಖಗಳು ಪಶ್ವಾದಿಗಳ ಹೃದಯವನ್ನು ಆಕರ್ಷಿಸುವಂತೆ, ಮೂಗುದಾರದಿಂದ ದೇಹವು ಎಳೆಯಲ್ಪಡುವುದು: ಪಾಮರಾದಿಗಳೂ ಅವುಗಳಂತೆಯೇ ದೇಹ ಮನಸ್ಸುಗಳಲ್ಲಿ ಪರಾಧೀನರಾಗಿ ಏನು ಹೇಳಿಕೊಳ್ಳುವುದಕ್ಕೂ ಇಲ್ಲದೆ ಒದ್ದಾಡುವರು.

ಸುಪ್ತಾನಾಂ ಯಾದೃಗಸ್ಮಾಕಂ ವೇದನಂ ಸ್ಪೃಷ್ಟಸುತ್ವಚಾಂ ।
ವೃಕ್ಷಗುಲ್ಮಾಂಕುರಾದೀನಾಂ ತಾದೃಗುದ್ದಾಮವೇದನಂ ॥೧೬॥

ಯಾದೃಗಸ್ಮಾಕಮಿತ್ಯರ್ಥಕ್ರಮಸಂಸಾರಪಾತಿನಾಂ ।
ಪದಾರ್ಥವೇದನಂ ತಾದೃಕ್ತಿರಶ್ಚಾಂ ಭ್ರಾಂತಮಭ್ರಮಂ ॥೧೭॥

ಆಹ್ಲಾದಮಾತ್ರಸಾಮ್ಯತ್ವಂ ಸುಖತಶ್ಚೇಂದ್ರಕೀಟಯೋಃ ।
ಸಮಂ ವಿಕಲ್ಪವಿನ್ಮುಕ್ತಂ ವಿಕಲ್ಪಸ್ತ್ವನತಿಕ್ರಮಃ ॥೧೮॥

ರಾಗದ್ವೇಷಭಯಾಹಾರಮೈಥುನೋತ್ಥಂ ಸುಖಾಸುಖಂ ।
ತಿರಶ್ಚಾಂ ಜನ್ಮಮೃತ್ಯಾದಿಖೇದಃ ಕಶ್ಚಿನ್ನ ಭಿದ್ಯತೇ ॥೧೯॥

---

೧೬. ಮೃದುವಾದ ಶರೀರವುಳ್ಳ ನಮಗೆ ಮಲಗಿರುವಾಗ ಸೊಳ್ಳೆ ಮೊದಲಾದವುಗಳು ಕಚ್ಚಿದಾಗ ಆಗುವಹಾಗೆ ವೃಕ್ಷಗುಲ್ಮ ಅಂಕುರಾದಿಗಳಿಗೆ ವೇದನಾದಿಗಳು ಆಗುವುವು.

೧೭. ಈತಿ ಬಾಧೆಗಳುಂಟಾದಾಗ ಸಂಸಾರಿಗಳಾದ ನಮಗೆ ಹೇಗೆ ಸ್ವದೇಶವನ್ನು ಬಿಟ್ಟು ಓಡುವುದು ಮುಂತಾದ ಬಾಧೆಯುಂಟಾಗುವುದೋ ಅಂತಹ ಬಾಧೆಯು ತಿರ್ಯಕ್ಪ್ರಾಣಿಗಳಿಗೆ ಯಾವಾಗಲೂ ಆಗುತ್ತಿರುವುದು.

೧೮. ವಿಕಲ್ಪ ಕ್ಷಯದಿಂದ ಆಗುವ ಮುಕ್ತಾನಂದವನ್ನು ಬಿಟ್ಟು ಮಿಕ್ಕೆಲ್ಲದರಲ್ಲಿಯೂ ವಿಕಲ್ಪವು ಅನತಿಕ್ರಮವಾದುದರಿಂದ, ಆಹಾರ ನಿದ್ರಾದಿಗಳಿಂದ ಉಂಟಾಗುವ ಸುಖದಲ್ಲಿ ಇಂದ್ರನಿಗೂ ಕೀಟಕ್ಕೂ ಏನೂ ವ್ಯತ್ಯಾಸವಿಲ್ಲ.

೧೯. ರಾಗ ದ್ವೇಷ ಭಯ ಆಹಾರಮೈಥುನ ಇವುಗಳಿಂದ ಉಂಟಾಗುವ ಸುಖಾಸುಖಗಳೆಲ್ಲವೂ ಜನ್ಮಮೃತಿಗಳಿಂದಾಗುವ ಖೇದಗಳೂ ತಿರ್ಯಗ್ಯೋನಿಗಳಿಗೂ ನಮಗೂ ಒಂದೇ!

ಋತೇ ಪದಾರ್ಥಭೂತಾರ್ಥಭವಿಷ್ಯದ್ವಸ್ತುಬೋಧತಃ ।
ಶೇಷಂ ಬಭ್ರ್ವಹಿಗೋಮಾಯುಗಜಾದೀನಾಂ ನೃಭಿಃ ಸಮಂ ॥೨೦॥

ನಿದ್ರಾಮಯಾನಾಂ ವೃಕ್ಷಾಣಾಂ ಸ್ವಸತ್ತಾಮಚಲಾದಯಃ ।
ಸ್ಥಿತಾ ಅನುಭವಂತೋಽನ್ಯೇ ಚಿದಾಕಾಶಮಖಂಡಿತಂ ॥೨೧॥

ಆಪೀನನಿದ್ರಾ ವೃಕ್ಷಾದ್ಯಾಃ ಸ್ವಸತ್ತಾಸ್ಥಾಸ್ತಥಾದ್ರಯಃ ।
ಜಂಗಮಾನಿ ಚಿದಾಕಾಶಂ ನಾಮ ಕಿಂಚಿತ್ಕದಾಚನ ॥೨೨॥

---

೨೦. ಶಾಸ್ತ್ರಾದಿಗಳಿಂದ ತಿಳಿಯುವ ಹೇಯೋಪಾದೇಯ ಪದಾರ್ಥಗಳು, ಗತಾರ್ಥಗಳು, ಭವಿಷ್ಯದರ್ಥಗಳು, ಇವುಗಳ ಬೋಧವನ್ನು ಬಿಟ್ಟು ಉಳಿದೆಲ್ಲದರಲ್ಲೂ ಮುಂಗುಸಿ, ಹಾವು, ನರಿ, ಆನೆ ಮೊದಲಾದುವುಗಳು ಮನುಷ್ಯರಿಗೆ ಸಮಾನಗಳು.

೨೧. ವೃಕ್ಷಗಳ ನಿದ್ರಾಮಯ ಸ್ಥಿತಿ ಯಾವುದೋ ಅದೇ ಪರ್ವತಗಳ ಸ್ಥಿತಿಯು. ಆದರೆ, ಮೇರು ಮೊದಲಾದ ಪುಣ್ಯ ಪರ್ವತಗಳು ಮಾತ್ರ ಒಳಗೆ ಚಿದಾಕಾಶ ಲಕ್ಷ್ಯದಲ್ಲಿ ಅಖಂಡ ಸಮಾಧಿಯಲ್ಲಿ ಇರುವುವು.

೨೨. ವೃಕ್ಷಾದಿಗಳು ಆಪೀನ (ಗಾಢ) ನಿದ್ರೆಯಲ್ಲಿರುವುವು. ಅದ್ರಿಗಳೂ ಹಾಗೆಯೇ ಸ್ವಸತ್ತೆಯಲ್ಲಿಯೇ ನಿದ್ರಾಲುಗಳಾಗಿ ಇರುವವು ಜಂಗಮಗಳು ಕಿಂಚಿನ್ಮಾತ್ರ ವಿಕಾಸವಾಗಿರುವುವು. ಯಾವಾಗಲೋ ಒಮ್ಮೆ ಇವು ಪೂರ್ಣವಿಕಾಸವನ್ನು ಪಡೆಯುವುವು. ಆದರೂ ಇವೆಲ್ಲವೂ ಚಿದಾಕಾಶಗಳೇ !

(ಇತ್ಥಂಚ ನ ವೃಕ್ಷಾದಿ ಜೀವದೃಶಾ ಜಗತ್ಕಲ್ಪನಾ । ತೇಷಾಮಾಪೀನ ನಿದ್ರತ್ವಾತ್ । ನಾಪ್ಯದ್ರ್ಯಾದಿ ಜೀವಜಾತಿದೃಶಾ ತೇಷಾಂ ಸ್ವಸತ್ತಾಸ್ಥತ್ವಾತ್ । ಜಂಗಮ ಜಾತಿಷ್ವಪಿ ನತತ್ವಜ್ಞದೃಶಾ । ತೇಷಾಂ ಚಿದಾಕಾಶ ಮಾತ್ರತ್ವಾತ್ಕಿಂತು ಕತಿಪಯಾಜ್ಞ ಜಂಗಮ ಜಾತಿದೃಶಾ । ಸಾಚದೃಷ್ಟಿರ್ನ ಬಹುತರದೃಷ್ಟಿ ವಿರುದ್ಧಾಂ ಜಗತ್ಸತ್ತಾಂ ಸಾಧಯಿತುಂ ಕ್ಷಮತ ಇತ್ಯಾಶಯೇನಾಹ—ಯಾನಿ ಜಂಗಮಾನಿ ಜೀವಜಾತಾನಿ ತಾನ್ಯಸುಷುಪ್ತಿ ಮರಣಮೂರ್ಛಾ ಮೋಕ್ಷಾದ್ಯವಸ್ಥಾಸು ಚಿದಾಕಾಶಮೇವ ನಾಮ। ತತ್ರ ಕೇಷಾಂಚಿತ್ ಕದಾಚನ ಸ್ವಪ್ನೇ ಅರ್ಧ ವಿಕಾಸೇನ, ಜಾಗರೇ ಸರ್ವವಿಕಾಸೇನ ಭಾಸಮಾನಂ ಕಿಂಚಿಜ್ಜಗತ್ ಬಹುತರ ದೃಷ್ಟ್ಯನುರೋಧಾತ್ ಚಿದಾಕಾಶಮೇವೇತಿ ಯುಕ್ತ ಮಿತ್ಯರ್ಥಃ)

ಅಖಂಡಚಿತ್ತಾ ಶೈಲಾದಿಸತ್ತಾ ನಿದ್ರಾ ಚ ಭೂರುಹಾಂ ।
ದ್ವೈತೋಪಲಂಭಮುಕ್ತತ್ವಾತ್ಖಮೇವೈಕಮತೋ ಜಗತ್ ॥೩೩॥

ಪರಿಜ್ಞಾತಂ ಜಗದ್ಯಾವದಪರಿಜ್ಞಾನಸಂಯುತಂ ।
ನ ತ್ವಂ ನಾಹಂ ನ ಚೈವಾಸ್ತಿನಾಸ್ತೀ ನಚ ಭವಿಷ್ಯತಿ ॥೩೪॥

ಯಥಾಸ್ಥಿತಂ ಸದೈವೇದಂ ಮೌನಮೇವ ಶಿಲಾಘನಂ ।
ಅನಾದ್ಯಂತಮವಿಚ್ಛಿದ್ರಮನಿದ್ರಂ ಚ ಸನಿದ್ರಕಂ ॥೩೫॥

ಪೂರ್ವಂ ಸರ್ಗಾದ್ಯಥೈವಾಸೀತ್ತಥೈವೈಕಂ ಸಮುಸ್ಥಿತಂ ।
ಭವಿಷ್ಯತ್ಯಧುನಾನಂತಂ ಕಾಲಮೇವಂ ತಥೈವ ಚ ॥೩೬॥

---

೩೩. ಶೈಲಾದಿ ಸತ್ತೆಗಳು ಅಖಂಡ ಚಿತ್ತಗಳು. ಭೂರುಹಾದಿಗಳ ನಿದ್ರೆಯೂ ಹಾಗೆಯೇ ಅಖಂಡ ಚಿತ್ತವು. ಆದರಿಂದ ಅವುಗಳಲ್ಲಿ ದ್ವೈತವೆನ್ನುವುದೇ ಇಲ್ಲ. ಅದರಿಂದ ಅವು ಕೇವಲ ಆಕಾಶವೇ ಹೊರತು ಇನ್ನೇನೂ ಅಲ್ಲ. ಆದರಂತೆಯೇ ಜಗತ್ತೂ ಕೂಡ (ಅಜ್ಞಾನೋಪಹಿತ) ಚಿನ್ಮಾತ್ರವೇ !

೩೪. ಅಪರಿಜ್ಞಾನ ಸಂಯುತವಾಗಿರುವವರೆಗೂ ಜಗತ್ತು ಉಂಟು. ಪರಿಜ್ಞಾತವಾದಾಗ, ನೀನೂ ಇಲ್ಲ ನಾನೂ ಇಲ್ಲ. ಅಸ್ತಿನಾಸ್ತಿ ಭವಿಷ್ಯತಿಗಳೊಂದೂ ಇಲ್ಲ.

೩೫. ಹೀಗೆ ಯಾವುದೂ ಇಲ್ಲವಾಗಲು ಇರುವುದು ಒಂದೇ ಒಂದು ಎಂದಾಗುವುದು. ಅದು ಯಾವಾಗಲೂ ಯಥಾಸ್ಥಿತವಾಗಿರುವ ಸತ್ ಒಂದೇ ಒಂದು. ಅದು ಶಿಲಾಘನವಾದ ಮೌನವು. ಆದಿ–ಅಂತಗಳಿಲ್ಲದ್ದು. ಅವಿಚ್ಛಿದ್ರವು. ಜ್ಞಾನ ದೃಷ್ಟಿಯಿಂದ ಅನಿದ್ರವು. ಅಜ್ಞದೃಷ್ಟಿಯಿಂದ ಸನಿದ್ರಕವು.

೩೬. ಅದು ಸರ್ಗಾತ್ಪೂರ್ವದಲ್ಲಿ ಹೇಗೆ ಏಕವಾಗಿ ಸಮುಸ್ಥಿತವಾಗಿ ಇತ್ತೋ ಹಾಗೆಯೇ ಈಗಲೂ ಇರುವುದು. ಮುಂದೆ ಅನಂತಕಾಲದವರೆಗೂ ಹಾಗೆಯೇ ಇರುವುದು.

ನೈವಾತ್ಮತಾ ನ ಪರತಾ ನ ಜಗತ್ತಾ ನ ಶೂನ್ಯತಾ ।
ನ ಮೌನತಾ ನ ಮೌನಿತ್ವಂ ಕಿಂಚಿನ್ನೇಹೋಪಪದ್ಯತೇ ॥೨೭॥

ತ್ವಂ ಯಥಾಸ್ಥಿತಮೇವಾಸ್ಸ್ವ ಯಥಾಸ್ಥಿತಮಹಂ ಸ್ಥಿತಃ ।
ಸುಖಾಸುಖೇ ಪರಾಕಾಶೇ ಶಾಂತೇ ನೇಹಾಸ್ತಿ ಕಿ ಚನ ।೨೮॥

ಪರಮಾಕಾಶತಾಂ ಮುಕ್ತ್ವಾ ಕಿಂ ಸ್ವಪ್ನನಗರೇ ವದ ।
ವಿದ್ಯತೇ ಕಿಲ ತಚ್ಛಾಂತಂ ಚಿದ್ವ್ಯೋಮಾಚ್ಛಮನಾಮಯಂ ॥೨೯॥

ಅಪರಿಜ್ಞಪ್ತಿರೇವೈಕಾ ತತ್ರ ಸಂಭ್ರಮಕಾರಿಣೀ ।
ಪರಿಜ್ಞಾತಮಿದಂ ಯಾವದ್ವಿದ್ಯತೇ ಸಾಪಿ ನ ಕ್ವಚಿತ್ ॥೩೦॥

---

೨೭. ಅದು ಆತ್ಮತಾ ಅಲ್ಲ: ಪರತಾ ಅಲ್ಲ: ಜಗತ್ತಾ ಅಲ್ಲ: ಶೂನ್ಯತಾ ಅಲ್ಲ: ಮೌನತಾ ಅಲ್ಲ. ಮೌನಿತ್ವವಲ್ಲ. ಅದನ್ನು ಹೀಗೆ ಎಂದು ಹೇಳುವುದಕ್ಕೇ ಆಗುವುದಿಲ್ಲ.

೨೮. ಆದರಿಂದ ನೀನು ಯಥಾಸ್ಥಿತವಾಗಿರು ನಾನೂ ಯಥಾಸ್ಥಿತನಾಗಿರುವೆನು. ಸುಖ–ಅಸುಖರೂಪವಾದ ಪರಮಾಕಾಶವು ಶಾಂತವಾಗಲು ಏನೂ ಉಳಿಯುವುದಿಲ್ಲ.

೨೯. ಸ್ವಪ್ನ ನಗರದಲ್ಲಿ ಕಾಣುವುದು ಪರಮಾಕಾಶವಲ್ಲದೆ ಇನ್ನೇನು ? ಅದು ಶಾಂತವಾಗಿಯೇ ಇರುವುದಲ್ಲವೆ ? ಚಿದಾಕಾಶವು ಯಾವಾಗಲೂ ಅಚ್ಛವೂ ಅನಾಮಯವೂ ಆಗಿಯೇ ಇರುವುದು.

೩೦. ಅಪರಿಜ್ಞಪ್ತಿ ಎಂಬುದೊಂದೇ ಆ ಚಿದಾಕಾಶದಲ್ಲಿ ಇಲ್ಲದ ಸಂಭ್ರಮವನ್ನು ತಂದೊಡ್ಡುವುದು. ಅದನ್ನು ಹಾಗೆ ತಿಳಿದುದಾದರೆ ಆ ಅಪರಿಜ್ಞಪ್ತಿಯೂ ಇಲ್ಲವಾಗುವುದು.

ಪರಿಜ್ಞಾತೇ ಜಗತ್ಸ್ವಪ್ನೇ ಯಾವತ್ಸತ್ಯಂ ನ ಕಿಂಚನ ।
ಗ್ರಹಸ್ತದೇನಂ ಪ್ರತಿ ಕಿಂ ಸ್ನೇಹೋ ವಂಧ್ಯಾಸುತೇ ತು ಕಃ ॥೩೧॥

ಸ್ವಪ್ನಕಾಲೇ ಪರಿಜ್ಞಾತೇ ಜಗತ್ಸ್ವಪ್ನಃ ಕ್ಷಣಾಕ್ಷಣೌ ।
ಕಿಮುಪಾದೇಯತಾ ಕಾಸ್ಥಾ ಪ್ರಬೋಧೇಸೌ ನ ಕಿಂಚನ ॥೩೨॥

ಯಸ್ಯ ಕಿಂಚಿತ್ಪ್ರಬೋಧೋಽಸ್ತಿ ನಾಪ್ರಬೋಧೋಽಸ್ತಿ ತಸ್ಯ ಕ್ವಚಿತ್ ।
ಯಸ್ತೂಪಲಂಭಸ್ತತ್ಕಾಲೇ ಪೂರ್ವಾವಸ್ಥೈವ ಸಾ ತಥಾ ॥೩೩॥

ವಿದ್ಯತೇ ವರ್ತಮಾನತ್ವಂ ಭವಿಷ್ಯದ್ಭೂತತಾ ತಥಾ ।
ಬೋಧಾಬೋಧಶ್ಚ ನೋ ಸತ್ಯಂ ವಸ್ತು ಶಾಂತಂ ಕಿಲಾಖಿಲಂ ॥೩೪॥

---

೩೧. ಈ ಜಗತ್ಸ್ವಪ್ನವನ್ನು ತಿಳಿದುದೇ ಆದರೆ ಅದರಲ್ಲಿ ಎಳ್ಳಷ್ಟೂ ಸತ್ಯವಿಲ್ಲ ಎಂಬುದೂ ತಿಳಿಯುವುದು. ಹೀಗಿರಲು ಈ ಜಗತ್ತಿನ ವಿಚಾರವಾಗಿ ಇಷ್ಟು ಗ್ರಹ (ಅಭಿನಿವೇಶ)ವು ಏಕೆ? ವಂಧ್ಯಾಪುತ್ರನ ಸ್ನೇಹವೆಂದರೇನು?

೩೨. ಸ್ವಪ್ನಕಾಲದಲ್ಲಿ ಅರಿವುಂಟಾದರೆ ಕ್ಷಣಾಕ್ಷಣ ವಿನಲ್ಲಿಯೂ ಜಗತ್ಸ್ವಪ್ನವನ್ನು ಕಾಣಬಹುದಲ್ಲ! ಈ ಜಗತ್ಸ್ವಪ್ನವು ಪ್ರಬೋಧಕಾಲದಲ್ಲಿ ಹುಡುಕಿದರೂ ಇಲ್ಲವಲ್ಲ! ಹೀಗಿರಲು ಇದರಲ್ಲಿ ಉಪಾದೇಯವಾದುದು ಏನು? ಆಸ್ಥೆಯಾದರೂ ಏನು?

೩೩. ಆ ಪ್ರಬೋಧವೆಂಬುದೂ ಯಾವುದೂ ಇಲ್ಲ: ಅಪ್ರಬೋಧವೆಂಬುದೂ ಯಾವುದೂ ಇಲ್ಲ. ಯಾವುದು ದೊರೆಯುವುದೋ ಅದು ಪೂರ್ವಾವಸ್ಥೆಯು: ಸರ್ಗಕ್ಕಿಂತ ಮೊದಲು ಇದ್ದುದು. ಅದು ಯಾವಾಗಲೂ ಒಂದೇ ಸಮವಾಗಿರುವುದು.

(ಪ್ರಬೋಧ ಕಾಲೇ ಅಸದಪಿ, ಅಪ್ರಬೋಧಕಾಲೇ ಸದಸ್ತು ತತ್ರಾಹ—ಪೂರ್ವಾವಸ್ಥಾ ಅಜ್ಞತೈವ। ಸಾ ತಥಾ ತದುಪಲಂಭಾತ್ಮನಾ ಪ್ರಥವೇ ಇತ್ಯರ್ಥಃ—ತಾ ಪ್ರ.)

೩೪. ವರ್ತಮಾನ, ಭೂತ, ಭವಿಷ್ಯತ್ತು ಎಂಬ ಮೂರೂ ಬೋಧಾಬೋಧವೂ ಸತ್ಯವಲ್ಲ: ಸತ್ಯವಾದ ವಸ್ತುವು ಶಾಂತವಾಗಿ ಅಖಿಲವಾಗಿ ಇರುವುದು.

ಯಥೋರ್ಮಿಣೋರ್ಮೌ ನಿಹತೇ ನ ಕಾಚಿತ್ಪಯಸಾಂ ಕ್ಷತಿಃ ।
ತಥಾ ದೇಹೇನ ನಿಹತೇ ದೇಹೇ ನಾಸ್ತಿ ಚಿತೇಃ ಕ್ಷತಿಃ ॥೩೫॥

ಚಿತಾವಕಾಶ ಏವಾಹಂ ದೇಹ ಇತ್ಯುಪಜಾಯತೇ ।
ಸಂವಿದೇವ ತತೋ ದೇಹೇ ನಷ್ಟೇ ಕಿಂ ನಾಮ ನಶ್ಯತಿ ॥೩೬॥

ಪ್ರಬುದ್ಧಸ್ಯೈವ ಚಿದ್ವ್ಯೋಮ್ನಃ ಸ್ವಪ್ನೋ ಜಗದಿತಿ ಸ್ಥಿತಂ ।
ಪೃಥ್ವ್ಯಾದಿರಹಿತಂ ಯಸ್ಮಾತ್ತಸ್ಮಾತ್ಸ್ವಪ್ನಾತ್ಮಕಂ ಜಗತ್ ॥೩೭॥

ಸರ್ಗಾದೌ ಪೂರ್ವಚಿತ್ಸ್ವಪ್ನಾಜ್ಜಾತಾ ಪೃಥ್ವ್ಯಾದಿವಸ್ತುಧೀಃ ।
ಸ್ವಪ್ನಾರ್ಥೇ ಸತ್ಯತಾಭ್ರಾಂತಿಃ ಕಲ್ಪನಾಮಾತ್ರರೂಪಿಣೀ ॥೩೮॥

---

೩೫. ತರಂಗವೊಂದು ಇನ್ನೊಂದು ತರಂಗವನ್ನು ಹೊಡೆದರೆ ನೀರಿಗೇನಾದರೂ ಹಾನಿಯಾಯಿತೆ? ಅದರಂತೆ ದೇಹವು ದೇಹವನ್ನು ಹೊಡೆದರೆ, ಚಿತಿಗೆ ಏನೂ ಹಾನಿಯಿಲ್ಲ.

೩೬. ಚಿದಾಕಾಶದಲ್ಲಿ ಹುಟ್ಟಿದ ಅಹಮ್ಮೇ ದೇಹವೆಂದು ಸ್ಪಷ್ಟವಾಗುವುದು. ಸಂವಿತ್ತು ಸಿಕ್ಕಿದಾಗ ದೇಹವು ನಷ್ಟವಾದರೆ ನಷ್ಟವಾಗುವುದಾದರೂ ಏನು ?

೩೭. ಪ್ರಬುದ್ಧವಾದ ಚಿದಾಕಾಶಕ್ಕೆ ಸ್ವಪ್ನವಾಗುವುದೇ ಜಗತ್ತು ಎಂದು ಇರುವುದು. ಪೃಥಿವ್ಯಾದಿರಹಿತವಾದುದೇ ಸ್ವಪ್ನವು. ಈ ಜಗತ್ತು ಹಾಗೇ ಒಂದು ಸ್ವಪ್ನವು.

೩೮. ಸರ್ಗಾದಿಯಲ್ಲಿ ಪೂರ್ವಚಿತ್ತಿನ ಸ್ವಪ್ನದಿಂದ ಪೃಥಿವ್ಯಾದಿ ವಸ್ತುಗಳು ಉಂಟೆಂಬ ಬುದ್ಧಿಯು ಹುಟ್ಟಿತು. ಸ್ವಪ್ನವನ್ನು ಕಂಡು ಇದು ಸತ್ಯವೆಂಬ ಭ್ರಾಂತಿಯು : ಅದು ಕಲ್ಪನಾಮಾತ್ರ ರೂಪವು.

ಪೂರ್ವಾತ್ಪೂರ್ವತರಸ್ಯಾಸ್ಯ ಸ್ವಪ್ನಸ್ಯಾವಯವಸ್ಥಿತೌ ।
ಸತ್ಯೇವಾಸತ್ಯರೂಪಾಯಾಂ ಪೃಥ್ವ್ಯಾದಿಕಲನಾಕೃತಾ ॥೩೯॥

ಸಾ ಚ ಭ್ರಾಂತಿಸ್ತಥಾ ರೂಢಾ ಯಥಾಸತ್ಯೈವ ಸತ್ಯತಾಂ ।
ಪರಮಾಮಾಗತಾ ತತ್ತು ಸತ್ಯಮತ್ಯಂತನಿರ್ಮಲಂ ॥೪೦॥

ವಸ್ತುತಸ್ತು ಯಥಾಭೂತಂ ಚಿದ್ಬ್ರಹ್ಮೈವಾತತಂ ಸ್ಥಿತಂ ।
ನ ಚ ತತ್ಸಂಸ್ಥಿತಂ ಕಿಂಚಿತ್ಸ್ಮೃತಿರಸ್ಮೃತಿರ್ವಿಸ್ಮೃತಿರ್ವಾ ಕಿಮಾತ್ಮಕಃ ॥೪೧॥

---

೩೯. ಈ ಸ್ವಪ್ನಗಳಲ್ಲಿ ಎರಡನೆಯದು ಮೊದಲನೆಯದಕ್ಕೆ ಅವಯವವಾಗುವುದು: ಹೀಗೆ ಮುಂದುಮುಂದಕ್ಕೆ ಬೆಳೆದುಕೊಂಡು ಹೋಗುತ್ತಿರುವುದೇ ಅದರ ಸ್ಥಿತಿಯು. ಅಸತ್ಯರೂಪವಾದ ಆ ಸ್ವಪ್ನದಲ್ಲಿಯೇ ಪೃಥಿವ್ಯಾದಿ ಕಲ್ಪನಾ ಆಗಿರುವುದು.

(ಏವಂ ಪೂರ್ವಾತ್ ಪೂರ್ವತರಸ್ಯ ಅನಾದಿ ಪ್ರವಾಹ ರೂಪಸ್ಯ ಸ್ವಪ್ನಸ್ಯ ಅವಯವ ಸ್ಥಿತೌ ಇದಾನೀಂತನ್ಯಾಂ ಅಸತ್ಯರೂಪಾಯಾಮೇವ ಸತ್ಯೇವ ಕಲನಾ ಮೂಢೈಃ ಕೃತಾ—ತಾ ಪ್ರ.)

೪೦. ಆ ಭ್ರಾಂತಿಯು ಹಾಗೆಯೇ ರೂಢವಾಗಿರುವುದು. ಅಸತ್ಯವೇ ಆದರೂ ಸತ್ಯತೆಯಂತೆ ತೋರುತ್ತಿರುವುದು. ಪರಮವಾದ ಸತ್ಯವಾದರೋ ಅತ್ಯಂತ ನಿರ್ಮಲವಾಗುವುದು.

೪೧ ವಸ್ತುತಃ ಚಿತ್ ಬ್ರಹ್ಮವಾದರೋ ಯಥಾಭೂತವಾಗಿ ವಿಸ್ತಾರವಾಗಿ ತಾನೇ ತಾನಾಗಿರುವುದು. ಅದು ತಾನಲ್ಲವೆ ಇನ್ನೇನೂ ಆಗಿಲ್ಲ. ಹೀಗಿರಲು, ಅದಲ್ಲದ ಇನ್ನೊಂದನ್ನು ಅನುಭವಿಸಿದೆನೆನ್ನುವ ಸ್ಮೃತಿ, ಅಸ್ಮೃತಿ, ವಿಸ್ಮೃತಿಗಳು ಎಷ್ಟುಮಟ್ಟಿಗೆ ಸತ್ಯವು ?

(ಅಸತ್ಯರೂಪಾಯಾಂ ಸತ್ಯೇವ ಕಲನಾ ಕೃತಾ ಇತಿ ಇವಕಾರೇಣ ಉಪಮಿತ್ವಾ ತೇನ ಭ್ರಾಂತಿಕಲನಾಯಾಂ ಸತ್ಯಾರ್ಥಕಲನಾ ಸಾದೃಶ್ಯಂ ದರ್ಶಿತಂ। ತಚ್ಚ ಸತ್ಸು ಪ್ರಾಕ್ ಸತ್ಯಾರ್ಥೇಷು ತದನುಭವೇ ಸಾಂಪ್ರತಂ ಚ ತತ್ಸ್ಮೃತೌ ಯುಜ್ಯತೇ ನಾನ್ಯಥೇತ್ಯಾಶಂಕ್ಯಾಹ—ತತ್ ಸತ್ಯರೂಪಂ ಪೃಥಿವ್ಯಾದಿ ಕಿಂಚಿತ್ ಪ್ರಾಗಪಿ ನ ಸಂಸ್ಥಿತಂ । ಏವಂ ಚ ತದನುಭವಸ್ಯ ಅತ್ಯಂತಾಪ್ರಸಿದ್ಧೌ ಸ್ಮೃತಿರ್ ಅಸ್ಮೃತಿರ್ ವಿಸ್ಮೃತಿರ್ ವಾ ಕಿಮಾತ್ಮಕಃ—ತಾ. ಪ್ರ.)

ಏವಂ ಮಾತ್ರಾಪರಿಜ್ಞಾನಮೇವಾತ್ರ ಪ್ರತಿಬೋಧಕಂ ।
ಅತ್ರೈವ ತು ಪರಿಜ್ಞಾನಂ ಕವಾಟಪ್ರವಿಘಾಟನಂ ॥೪೨॥

ಪಾರಿಶೇಷ್ಯಾನ್ನ ಪೃಥ್ವ್ಯಾದಿ ಕಿಂಚಿತ್ಸಂಭವತಿ ಕ್ವಚಿತ್ ।
ಯೋ ದ್ರಷ್ಟಾ ಯಚ್ಚ ವಾ ದೃಶ್ಯಂ ವಿಮಲಂ ಶಿವಮೇವ ತತ್ ॥೪೩॥

ಮುಕುರೇಽಂತರ್ಯಥಾ ಬಿಂಬಾದ್ಬಿಂಬಂ ಭಾತಿ ಜಗತ್ತಥಾ ।
ಚಿದ್ವ್ಯೋಮನಿ ಸ್ವತೋ ಭಾತಮಬಿಂಬಾದೇವ ಬಿಂಬಿತಂ ॥೪೪॥

ಮುಕುರೇಽಂತರ್ಯಥಾ ಬಿಂಬಂ ನ ದೃಷ್ಟಮಪಿ ಕಿಂಚನ ।
ತಥಾ ಚಿದ್ವ್ಯೋಮಗಂ ವಿಶ್ವಂ ನ ದೃಷ್ಟಮಪಿ ಕಿಂಚನ ॥೪೫॥

ಲಭ್ಯತೇ ಯದ್ವಿಚಾರೇಣ ಯತ್ಸಕಾರಣಕಂ ಸ್ಥಿತಂ ।
ತತ್ಸಚ್ಛೇಷಂ ತು ಭಾಮಾತ್ರಮಭೂತಂ ಸತ್ಕಥಂ ಭವೇತ್ ॥೪೬॥

---

೪೨. ಹೀಗೆ ಸೂಕ್ಷ್ಮವಾದ ಈ ಮಾತ್ರವನ್ನು ತಿಳಿಯದಿರುವಿಕೆಯೇ ಜಗತ್ತು ಸತ್ಯವೆಂದು ಪ್ರತಿಬೋಧವಾಗಲು ಕಾರಣವು. ಇವನ್ನು ತಿಳಿದುದೇ ಆದರೆ, (ಅಜ್ಞಾನಾವರಣ ಭ್ರಾಂತ್ಯಾದಿ ವಿಕ್ಷೇಪ) ಕವಾಟದ ಒಡೆಯುವಿಕೆಯು.

೪೩. ಎಲ್ಲವೂ ಹೋದಮೇಲೆ ಉಳಿಯುವ ಪರಿಶೇಷವು ಚಿತ್ತಾದ್ದರಿಂದ ಪೃಥಿವ್ಯಾದಿ ಯಾವುದೂ ಎಲ್ಲಿಯೂ ಸಂಭವಿಸುವುದೇ ಇಲ್ಲ. ದ್ರಷ್ಟಾ, ದೃಶ್ಯ, ಎರಡೂ ಶಿವವಾದ ಚಿತ್ತೇ ಆಗುವುದು.

೪೪. ಕನ್ನಡಿಯಲ್ಲಿ ಬಿಂಬದ ಪ್ರತಿಬಿಂಬವು ಭಾತವಾಗುವಂತೆ ಜಗತ್ತು, ಚಿದಾಕಾಶದಲ್ಲಿ ತಾನಾಗಿ ಬಿಂಬವಿಲ್ಲದೆಯೇ ಪ್ರತಿಫಲಿಸಿದ ಪ್ರತಿಬಿಂಬವು.

೪೫. ಕನ್ನಡಿಯೊಳಗಿನ ಬಿಂಬವು ಕಂಡರೂ ಹೇಗೆ ನಿಜವಲ್ಲವೋ ಹಾಗೆಯೇ ಚಿದಾಕಾಶದಲ್ಲಿರುವ ವಿಶ್ವವು ಕಂಡರೂ ನಿಜವಲ್ಲ.

೪೬. ಯಾವುದು ವಿಚಾರಮಾಡಿ ನೋಡಿದಾಗ ಸಕಾರಣವಾಗಿ ಇರುವುದು ಎಂದು ಕಂಡುಬಂದು, ಸಚ್ಛೇಷವಾಗಿ ಕಂಡರೆ, ಅದನ್ನು ಸತ್ಯವೆನ್ನಬಹುದು. ಆದರೆ ವಿಚಾರದಿಂದ ಕೇವಲ ಭಾನಮಾತ್ರವಾಗಿ ಯಾವುದು ಕಾಣುವುದೋ, ಅಭೂತವಾಗಿರುವುದೋ ಅದೇತು ಸತ್ ಆಗುವುದು ?

ಭವೇದ್ಭ್ರಮಾತ್ಮಕಮಪಿ ಕಿಂಚಿದರ್ಥಕ್ರಿಯಾಕರಂ ।
ಸ್ವಪ್ನಾಂಗನಾಪಿ ಕುರುತೇ ಸತ್ಯಾಮರ್ಥಕ್ರಿಯಾಂ ನೃಣಾಂ ॥೪೭॥

ಯತ್ತದ್ಭಾನಂ ತು ಸಾ ಚಿದ್ಭಾ ಪರಮಂ ತಚ್ಚಿದಂಬರಂ ।
ಇತಿ ಕ್ವಾಹಂ ಕ್ವ ವಿಶ್ವಶ್ರೀಃ ಕ್ವ ತ್ವಂ ದೃಶ್ಯದೃಶಶ್ಚ ಕಾಃ ॥೪೮॥

ವೃತ್ವಾ ಪುನರ್ಭವನಮಸ್ತಿ ಕಿಮಂಗ ನಷ್ಟಂ ।
ವೃತ್ವಾ ನ ಚೇದ್ಭವನಮಸ್ತಿ ತಥಾಪಿ ಶಾಂತಿಃ ।
ವಿಜ್ಞಾನದೃಷ್ಟಿವಶತೋಽಸ್ತ್ಯಥ ಚೇದ್ವಿಮೋಕ್ಷಃ ।
ತ್ತನ್ನೇಹ ಕಿಂಚಿದಪಿ ದುಃಖಮುದಾರಬುದ್ಧೇಃ ॥೪೯॥

---

೪೭. ಭ್ರಮಾತ್ಮಕವೇ ಆದ ವಸ್ತುವೂ ಅರ್ಥಕ್ರಿಯಾಕಾರಿಯಾಗುವು ದುಂಟು. ಸ್ವಪ್ನಸ್ತ್ರೀಯೂ ಕೂಡ ಸತ್ಯವಾದ ಅರ್ಥಕ್ರಿಯೆಯನ್ನು ಪುರುಷರಲ್ಲಿ ಮಾಡುವುದಿಲ್ಲವೆ ?

೪೮. (ಆದರಿಂದ) ಯಾವ ಯಾವುದು ಭಾನವಾಗುವುದೋ ಅದದೆಲ್ಲ ಚಿತ್ತಿನ ಭಾನವೇ ! ಆ ಪರಮವಾದ ಚಿತ್ತು ಆಕಾಶವೇ ! ಹೀಗಿರಲು, ಅಹಂ ಎಲ್ಲಿ ? ವಿಶ್ವಶ್ರೀಯೆಲ್ಲಿ ? ನೀನು ಎಲ್ಲಿ ? ದೃಶ್ಯ–ಅದೃಶ್ಯಗಳು ಎಲ್ಲಿ ?

೪೯. ಸತ್ತಮೇಲೆ ಮತ್ತೆ ಹುಟ್ಟುವುದಾದರೆ, ಏನು ನಷ್ಟವಾಯಿತು ? ಸತ ಮೇಲೆ ಮತ್ತೆ ಹುಟ್ಟುವುದಿಲ್ಲವೆಂದರೆ ಆಗಲೂ ಶಾಂತಿಯೇ ಉಂಟು. ವಿಜ್ಞಾನ ದೃಷ್ಟಿಯು ಬಂದಮೇಲೆ ಮೋಕ್ಷವಿಲ್ಲ ಎನ್ನುವುದಾದರೆ, ವಿಜ್ಞಾನ ದೃಷ್ಟಿಯುಳ್ಳ ಉದಾರಬುದ್ಧಿಗೆ ದುಃಖವು ಎಳ್ಳಷ್ಟೂ ಆಗುವುದಿಲ್ಲ.

ಮೂರ್ಖಸ್ಯ ಯಾದೃಶಮಿದಂ ತು ತದಜ್ಞ ಏವ ।
ಜಾನಾತ್ಯಸೌ ನಹಿ ವಯಂ ಕಿಲ ತತ್ರ ತಜ್ಜ್ಞಾಃ ।
ಮತ್ಸ್ಯೋ ಹಿ ಯೋ ಮೃಗನದೀಸಲಿಲೇ ಸ ಏವ ।
ಜಾನಾತಿ ತಚ್ಚಪಲವೀಚಿವಿವರ್ತನಾನಿ ॥೫೦॥

ಅಂತರ್ಬಹಿಸ್ತ್ವಮಹಮಿತ್ಯಪಿ ಚೈವಮಾದಿ ।
ಸರ್ವಾತ್ಮಕಂ ತಪತಿ ಚಿನ್ನಭ ಏಕಮೇವ ।
ಶಾಖಾಶಿಖಾವಿಟಪಪತ್ರಫಲೈಕದೇಹಃ ।
ಸಂಕಲ್ಪವೃಕ್ಷ ಇವ ಬೋಧ ಖಮಾತ್ರಸಾರಃ ॥೫೧॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ "ಪರಮಾರ್ಥನಿರೂಪಣಂ"
ನಾಮ ನವನವತಿತಮಃ ಸರ್ಗಃ

---

೫೦. ಮೂರ್ಖನಿಗೆ ಈ ಜನನ ಮರಣಾದಿಗಳಿಂದ ಯಾವ ದುಃಖವು ಉಂಟಾಗುವುದೋ ಅದನ್ನು ಅಜ್ಞನು ಅರಿಯಬಲ್ಲನೇ ಹೊರತು ನಾವು ಅದನ್ನು ಅರಿಯಲಾರೆವು. ಮೃಗನದಿಯ ನೀರಲ್ಲಿರುವ ಮತ್ಸ್ಯವು ಆ ನದಿಯ ತರಂಗ ಆವರ್ತನಗಳನ್ನು ಬಲ್ಲುದೇ ಹೊರತು ಇತರರೆಂತು ಅರಿಯುವರು ?

೫೧. ಅಂತರ್ಬಹಿಃ ಎಲ್ಲೆಲ್ಲೂ ತ್ವಂ, ಅಹಂ ಮುಂತಾದ ಸರ್ವವೂ ಚಿತ್ತೇ ! ಸರ್ವಾತ್ಮಕವಾದ ಚಿದಾಕಾಶವು ತಾನೇ ತಾನಾಗಿ ಮೆರೆಯುತ್ತಿರುವುದು. ಶಾಖಾ, ವಿಟಪ, ಪತ್ರ, ಫಲ, ಮುಂತಾದವುಗಳೆಲ್ಲವೂ ಸೇರಿ ಏಕದೇಹವಾಗಿರುವ ಸಂಕಲ್ಪ ವೃಕ್ಷದಲ್ಲಿ ಯಾವುದು ಹೇಗೆ ಬೇರೆಯಾಗುವುದು ? ಎಲ್ಲವೂ ಸಂಕಲ್ಪವೇ ಆಗಿರುವಂತೆ, ಬೋಧಾಕಾಶವೊಂದೇ ಎಲ್ಲವೂ ಆಗಿರುವುದು.

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಪರಮಾರ್ಥ ನಿರೂಪಣ" ಎಂಬ
ತೊಂಭತ್ತೊಂಭತ್ತನೆಯ ಸರ್ಗವು

# ಶತತಮಃ ಸರ್ಗಃ

ಶ್ರೀರಾಮ ಉವಾಚಃ—

ಯುಕ್ತಿಃ ಸ್ಯಾತ್ಕೀದೃಶೀ ಬ್ರಹ್ಮನ್ಸಂಸಾರೇ ದುಃಖಶಾಂತಯೇ ।
ತೇಷಾಂ ಯೇಷಾಮಯಂ ಪಕ್ಷಃ ಶ್ರೂಯತಾಮುಚ್ಯತಾಂ ತತಃ ॥೧॥

ಯಾವಜ್ಜೀವಂ ಸುಖಂ ಜೀವೇನ್ನಾಸ್ತಿ ಮೃತ್ಯುರಗೋಚರಃ ।
ಭಸ್ಮೀಭೂತಸ್ಯ ಶಾಂತಸ್ಯ ಪುನರಾಗಮನಂ ಕುತಃ ॥೨॥

ಶ್ರೀ ವಸಿಷ್ಠ ಉವಾಚಃ—

ಯಂ ಯಂ ನಿಶ್ಚಯಮಾದತ್ತೇ ಸಂವಿದಂತರಖಂಡಿತಂ ।
ತತ್ತಥೈವಾನುಭವತಿ ಪ್ರತ್ಯಕ್ಷಮಿತಿ ಸರ್ವಗಂ ॥೩॥

---

# ನೂರನೆಯ ಸರ್ಗವು

ಶ್ರೀರಾಮನು ಕೇಳಿದನು:—

೧. ಎಲೈ ಬ್ರಹ್ಮನೆ, ಮುಂದೆ ಹೇಳುವ ಪಕ್ಷವನ್ನು ಹಿಡಿದಿರುವವರಿಗೆ ಸಂಸಾರದಲ್ಲಿ ದುಃಖಶಾಂತಿಯಾಗಲು ಯುಕ್ತಿಯು ಯಾವುದು ? ನನ್ನ ಪ್ರಶ್ನವನ್ನು ಸಾವಧಾನವಾಗಿ ಕೇಳಿ ಉತ್ತರವನ್ನು ಕೊಡಬೇಕು.

೨. ಆ ಪಕ್ಷವಿದು. "ಇರುವವರೆಗೂ ಸುಖವಾಗಿರಬೇಕು. ಅಗೋಚರವಾದ ಮೃತ್ಯುವೊಂದಿಲ್ಲ: ಭಸ್ಮೀಭೂತವಾಗಿ ಇಲ್ಲದೆಯೇ ಹೋದವನು ಮತ್ತೆ ಬರುವುದೆಲ್ಲಿಂದ ?"

(ಪರೇಷಾಂ ಮೃತ್ಯುದರ್ಶನಾದ್ಧಿ ಸ್ವಸ್ಯಾಪಿ ಮೃತ್ಯುಸ್ತದ್ವದನುಮೀಯತೇ । ನಚಾನುಮಾನಂ ಚಾರ್ವಾಕಾಣಾಂ ಪ್ರಮಾಣಂ । ಪ್ರತ್ಯಕ್ಷಾತಿರಿಕ್ತ ಪ್ರಮಾಣಾನಭ್ಯುಪಗಮಾದಿತಿ ಭಾವಃ। ಅಸ್ತುವಾ ದೇಹನಾಶ ಏವ ಮೃತ್ಯುಸ್ತಥಾಪಿ ಪುನರ್ಜನ್ಮಾನಭ್ಯುಪಗಮಾತ್ ಸ ಏವ ಸರ್ವದುಃಖ ನಿವೃತ್ತಿ ಲಕ್ಷಣಃ, ಮೋಕ್ಷಏವ, ಇತಿಸ್ಪೃಹಣೀಯ ಏವ ತೇಷಾಂ—ತಾ. ಪ್ರ.)

ಶ್ರೀ ವಸಿಷ್ಠನು ಹೇಳಿದನು:—

೩. ಸಂವಿತ್ತು ತನ್ನೊಳಗೆ ಅಖಂಡಿತವಾಗಿ ಯಾವಯಾವ ನಿಶ್ಚಯವನ್ನು ತಳೆಯುವುದೋ ಅದದನ್ನು ಹಾಗೆ ಹಾಗೆಯೇ ಅನುಭವಿಸುವುದು ಎಂಬುದು ಎಲ್ಲೆಲ್ಲಿಯೂ ಪ್ರತ್ಯಕ್ಷವು.

ಯಥಾ ಖಂ ಸರ್ವಗಂ ಶಾಂತಂ ತಥಾ ಚಿದ್ವ್ಯೋಮ ಸರ್ವಗಂ।
ತದೇವೈಕ್ಯಮಥದ್ವೈತಮನ್ಯಾರ್ಥಸ್ಯಾತ್ಯಸಂಭವಾತ್ ॥೪॥

ಸರ್ಗಾದೌ ತದೃತೇನ್ಯೋರ್ಥೋ ಮಹಾಪ್ರಲಯರೂಪಿಣಿ।
ಅಕಾರಣತ್ವಾನ್ನಾಸ್ತ್ಯೇವ ಬ್ರಹ್ಮೈವೇದಮತಸ್ತತಂ ॥೫॥

ಸಮಸ್ತವೇದಶಾಸ್ತ್ರಾರ್ಥಂ ಯೋ ಮಹಾಪ್ರಲಯಾದಿ ಚ।
ನೇಚ್ಛಂತಿ ತೇ ಮಹಾಮೂಢಾ ನಿಃಶಾಸ್ತ್ರಾ ನೋ ಮೃತಾ ಇವ ॥೬॥

---

೪. ಆಕಾಶವು ಹೇಗೆ ಶಾಂತವಾಗಿ ಎಲ್ಲೆಲ್ಲಿಯೂ ಇರುವುದೋ ಹಾಗೆಯೇ ಚಿದ್ವ್ಯೋಮವೂ ಸರ್ವತ್ರ ಇರುವುದು. ಅದರಿಂದಲೇ ಅದನ್ನು ಐಕ್ಯ ಏಕಭಾವ ಎನ್ನುವುದು. ದ್ವೈತವೆನ್ನುವುದು ಇತರಾರ್ಥವು. ಅದು ಸರ್ವಥಾ ಅಸಂಭವವು.

೫. ಮಹಾಪ್ರಲಯರೂಪವಾದ ಸರ್ಗಾದಿಯಲ್ಲಿ ಬ್ರಹ್ಮವನ್ನುಬಿಟ್ಟು ಇನ್ನೊಂದಿತ್ತು ಎನ್ನಲು ಕಾರಣವಿಲ್ಲವಾಗಿ ಇದ್ದುದೆಲ್ಲವೂ ಬ್ರಹ್ಮವೊಂದೇ! ಆದರಿಂದ ಅದೇ ಎಲ್ಲೆಲ್ಲೂ ಹರಡಿತ್ತು ಎನ್ನಬೇಕು.

೬. ಸಮಸ್ತ ವೇದಶಾಸ್ತ್ರಾರ್ಥವನ್ನೂ ಮಹಾ ಪ್ರಲಯಾದಿಗಳನ್ನೂ ಯಾರು ಬೇಕಿಲ್ಲವೆನ್ನುವರೋ ಅವರು ಮಹಾ ಮೂಢರು. ನಿಶ್ಶಾಸ್ತ್ರರಾದ ಅವರು ನಮ್ಮ ಪಾಲಿಗೆ ಸತ್ತಂತೆಯೇ ಸರಿ.

(ನನು ಬ್ರಹ್ಮರೂಪೋ ಮಹಾಪ್ರಲಯ ಏವ ನಾಭ್ಯುಪಗಮ್ಯತೇ ಬೀಜಾಂಕುರಾದಿ ಪರಂಪರಾನಾದಿತ್ವೇನ ಪೃಥಿವ್ಯಾದಿ ಭೂತಾನಾಂ ಪ್ರವಾಹ ಅನಾದಿತ್ವಾನ್ನ ಕದಾಚಿದನೀದೃಶಂ ಜಗದಿತಿ ಕರ್ಮಜಡಾನಾಂ ಪೂರ್ವಮೀಮಾಂಸ ಕಾದೀನಾಂ ಪಕ್ಷಂ ದೂಷಯತಿ–ಸಮಸ್ತೇತಿ "ಸರ್ವೇ ವೇದಾ ಯತ್ಪದಮಾಮನಂತಿ" "ತಮೇತಂ ವೇದಾನು ವಚನೇನ ಬ್ರಾಹ್ಮಣಾ ವಿವಿದಿಷಂತಿ" ಇತ್ಯಾದಿ ಶ್ರುತೇಃ ಸಮಸ್ತ ವೇದಶಾಸ್ತ್ರಾರ್ಥಂ ಆದಿ ಪದಾಜ್ಜೀವಾನಾಂ ಬ್ರಹ್ಮಪ್ರಾಪ್ತಿ ಲಕ್ಷಣಂ ಮೋಕ್ಷಂ ತತ್ಸಾಧನಾನಿ ಚ ಯೇ ನೇಚ್ಛಂತಿ ತೇ ಮೋಕ್ಷಶಾಸ್ತ್ರ ವೈಯರ್ಥ್ಯೇ ತುಲ್ಯನ್ಯಾಯೇನ ಕರ್ಮಶಾಸ್ತ್ರಸ್ಯಾಪಿ ಅಪ್ರಾಮಾಣ್ಯ ಅಪಾರಣಾತ್ ನಿಃಶಾಸ್ತ್ರಾಃ ನೋಽಸ್ಮಾಕಂ ತತ್ವವಿದಾಂ ದೃಶ್ಯಾಮೃತಾ ಇವ ನ ತಥ್ಯೋಪದೇಶಕಥಾಯೋಗ್ಯಾ ಇತ್ಯರ್ಥಃ–ತಾ. ಪ್ರ.)

ಸರ್ವಶಾಸ್ತ್ರಾವಿರುದ್ಧೇನ ಸರ್ವಂ ಬ್ರಹ್ಮೇದಮಿತ್ಯಲಂ ।
ಸ್ಥಿತಂ ಸ್ವಾನುಭವಂ ಯೋಕ್ತ್ರೃ ಯೇಷಾಂ ತೈರ್ನ ಕಥಾಕ್ರಮಃ　　॥೭॥

ನಿತ್ಯಾ ನಿರಂತರೋದೇತಿ ಯಾದೃಶೀ ಸಂವಿದಾಶಯೇ ।
ಭೂಯತೇ ತನ್ಮಯೇನೈವ ಪುಂಸಾ ದೇಹೋಽಸ್ತು ಮಾಥವಾ　　॥೮॥

ಬೋಧಾಚ್ಚೇತ್ಸಂವಿದೋ ಜಾತಃ ಸ ದುಃಖೀ ಪುರುಷೋ ಭವೇತ್ ।
ವಿರುದ್ಧ ವೇದನಂ ಯಾವತ್ತಾವಜ್ಜೀವೋಽಂಗ ತನ್ಮಯಃ　　॥೯॥

---

೭. ಸರ್ವಶಾಸ್ತ್ರಗಳಿಗೂ ಅವಿರುದ್ಧವಾಗಿ, ಸರ್ವಂಖಲ್ವಿದಂ ಬ್ರಹ್ಮ ಎಂಬ ಮಹಾವಾಕ್ಯವು ಬೋಧಿಸುವ ಬೋಧವನ್ನು ಪಡೆದವರಾಗಿ, ಅನುಭವ ಸಂಪನ್ನರಾಗಿ ಇರುವ, ಎಲ್ಲಾ ಕಾರ್ಯಕ್ಕೂ ಕಾರಣವಾದ ಯೋಕ್ತೃ ಮನವೇ ಬ್ರಹ್ಮವೆನ್ನುವ ಪುಣ್ಯಾತ್ಮರಿಗೂ ಕಥಾಕ್ರಮವು ಬೇಕಿಲ್ಲ

(ಯೇಷಾಂ ಯೋಕ್ತೃ ದೇಹೇಂದ್ರಿಯಾದೀನಾಂ ಸರ್ವವ್ಯವಹಾರೇಷು ನಿಯೋಕ್ತೃ ಪ್ರತ್ಯಗಾತ್ಮ ಚೈತನ್ಯಂ ಮನೋ ವಾ ಸರ್ವಶಾಸ್ತ್ರಾವಿರುದ್ಧೇನ ಸರ್ವಂ ಖಲ್ವಿದಂ ಬ್ರಹ್ಮೇತಿ ದರ್ಶನೇನ ಸಾನುಭವಮಲಂ ಪರ್ಯಾಪ್ತಃಪೂರ್ಣಕಾಮಂ ಸ್ಥಿತಂ। ಕೃತಕೃತ್ಯೈಃ ತೈಃ ಸಹಾಪಿ ನೋಪದೇಶಕಥಾಕ್ರಮ ಇತಿ ಜಿಜ್ಞಾಸೂನ್ ಪ್ರತ್ಯೇವೋಪದೇಶ ಕಥಾ ಪ್ರಸ್ತಾಪ ಇತ್ಯರ್ಥಃ—ತಾ. ಪ್ರ.)

೮. ಹೃದಯದಲ್ಲಿ ಸಂವಿತ್ತು ಯಾವ ರೂಪವಾಗಿ ನಿತ್ಯವಾಗಿ ನಿರಂತರವಾಗಿ ಉದಯವಾಗುವುದೋ ಅದೇ ಪುರುಷನ ಅನುಭವವಾಗಿ ನಿಲ್ಲುವುದು. ಆಗ ದೇಹವು ಇರಬಹುದು ಇಲ್ಲದಿರಬಹುದು.

(ತಥಾಚ ಚಾರ್ವಾಕಾಭಿಮತೇ ದೇಹಾತ್ಮಭಾವೇಽಪಿ ತಾದೃಶ ದೃಢನಿಶ್ಚಯಾತ್ಮಕ ಸಂವಿದುದಯ ಏವ ಅನ್ವಯವ್ಯತಿರೇಕಾಭ್ಯಾಂ ಹೇತುಃ ನ ದೇಹೋ ವ್ಯಭಿಚಾರಾತ್ ಇತಿ ಭಾವಃ—ತಾ. ಪ್ರ.)

೯. ಆ ಸಂವಿದವು ಬೋಧದಿಂದ ಕೂಡಿದರೆ, ಆ ಪುರುಷನು ದುಃಖಪಡುವನು. ವಿರುದ್ಧವಾದ ವೇದನವು ಹುಟ್ಟಿದಾಗ, ಜೀವನೂ ತನ್ಮಯನೇ ಆಗುವನು.

ಜಗಚ್ಚಿದ್ವ್ಯೋಮಕಚನಮಾತ್ರಮೇವೇತಿ ಭಾವಿತೇ ।
ತತ್ಕಥಂ ವೇದನಂ ವ್ಯೋಮ್ನಾ ಬೋಧಃ ಕಸ್ಯ ಕುತೋ ಭವೇತ್ ॥೧೦॥

ನ ಕಾನಿಚಿತ್ಪೃಥಾವಂತಿ ಏಕನಿಶ್ಚಯಸಂವಿದಾಂ ।
ಪುಂಸಾಂ ಸುಖಾನಿ ದುಃಖಾನಿ ರಜಾಂಸಿ ನಭಸಾಮಿವ ॥೧೧॥

ಸಂವಿತ್ಸತ್ಯಾಸ್ತ್ವಸತ್ಯಾ ವಾ ನಿಶ್ಚಯಸ್ತಾವದೀದೃಶಃ ।
ಆಬಾಲಮೇತತ್ಸಂಸಿದ್ಧಂ ಕೇನಾಪಹ್ನೂಯತೇ ಕಥಂ ॥೧೨॥

---

೧೦. ಜಗತ್ತು ಎಂಬುದು ಚಿದಾಕಾಶದ ಕಚನವಲ್ಲದೆ ಇನ್ನೇನೂ ಅಲ್ಲ ಎಂಬ ಭಾವವು ಬಂದರೆ, ಆದು ಆಕಾಶದಿಂದ ಬಂದ ಬೋಧವಾದ್ದರಿಂದ ಯಾರಿಗೆ ಹೇಗೆ ಎತ್ತಲಿಂದ ವೇದನವಾದೀತು ?

(ಏವಂ ದುಃಖಮಯಸ್ಯಾಪಿ ಜಗತೋ ನಿರತಿಶಯಾನಂದ ಚಿದ್ವ್ಯೋಮ ಕಚನಮಾತ್ರಮೇವೇತಿ ಭಾವನಾದ್ವಾಸ್ತವ ತದ್ಭಾವದರ್ಶನೇ ಭ್ರಾಂತಿಕಲ್ಪಿತ ದುಃಖ ರೂಪತಾ ತದ್ಗ್ರಹಣಗ್ರಾಹಕಾದಯಶ್ಚಶಾಮ್ಯಂತೀತಿ ದೇಹಾತ್ಮವಾದಿನಾಮಪಿ ತಥಾ ಭಾವನೇ ನಿಸ್ತಾರ ಸಿದ್ಧಿರಿತ್ಯಾಶಯೇನಾಹ-ತತ್‌ಪ್ರಾಕ್ ಪ್ರಸಿದ್ಧಂ ದುಃಖಾದಿವೇದನಂ ಕಥಂ ವ್ಯೋಮ್ನಾ ಕೂಟಸ್ಥಾದ್ವಯ ಚಿದಾಕಾಶೇನ ದುಃಖಾದೇರ್ಬೋಧಃ ಕಸ್ಯ ಭವೇತ್ ಕುತೋ ವಾ ನಿಮಿತ್ತಾದಿತ್ಯರ್ಥಃ–ತಾ. ಪ್ರ.)

೧೧. ಏಕನಿಶ್ಚಯರೂಪವಾದ ಸಂವಿತ್ತುಳ್ಳ ಪುರುಷರಿಗೆ ಸುಖಗಳು ದುಃಖಗಳು, ಪಾಪಗಳು, ಯಾವವೂ ಆಕಾಶಕ್ಕೆ ಹೇಗೋ ಹಾಗೆ ಅಂಟುವುದಿಲ್ಲ.

೧೨. ಸಂವಿತ್ತು ಸತ್ಯವಾಗಲಿ ಅಸತ್ಯವಾಗಲಿ ಅದರ ನಿಶ್ಚಯವು ಹೇಗಿರುವುದೋ ಹಾಗೆಯೇ ಎಲ್ಲವೂ ಅನುಭೂತವಾಗುವುದು ಎಂಬುದನ್ನು ಯಾರೂ ಇಲ್ಲವೆನ್ನುವಂತಿಲ್ಲ.

(ಸ್ವ ಸ್ವದೃಢನಿಶ್ಚಯಾನುಸಾರ್ಯರ್ಥಾನುಭವೇ ಸಂವಿದಃ ಪ್ರಾಮಾಣ್ಯಂ ಚಿತ್ತವೃತ್ತೇಃ ಸತ್ಯತ್ವಂ ವಾ ನೋಪಯುಜ್ಯತೇ,ದೇಹಾತ್ಮಭಾವಾದ್ಯನುಭವೇ ಆದ್ಯಾಭಾವಾದ್ಬ್ರಹ್ಮ ಸಾಕ್ಷಾತ್ಕಾರವೃತ್ತೌ ದ್ವಿತೀಯಾಭಾವಾದಿತ್ಯಾಶಯೇನಾಹ ಸಂವಿದಿತಿ। ಸಂವೇದನಂ ಸಂವಿತ್ ಸತ್ಯಾ ಪ್ರಮಾ। ಸಂವೇದ್ಯತೇ ಯಯಾ ಸಾ ಸಂವಿತ್ ಸತ್ಯಾ ಅಬಾಧಿತಾ ವೇತ್ಯುಭಯನಿಯಮಾ ಭಾವೋಕ್ತಿಃ । ಈದೃಶ ಏತಾದೃಶ ಸದಸದರ್ಥ ಅನುಭವಹೇತುಃ ಭವತ್ಯೇವೇತ್ಯರ್ಥಃ। ಕಥಮಪನ್ಹೂಯತೇ। ನಹ್ಯನುಭವ ವಿರುದ್ಧ ಮವಲಂಬ್ಯ ಅನುಭವೋಽಪಹ್ನೋತುಂ ಶಕ್ಯ ಇತ್ಯರ್ಥಃ–ತಾ ಪ್ರ.)

ನ ದೇಹಃ ಪುರುಷೋ ವಾಪಿ ಜೀವೋಽನ್ಯ ಉಪಲಭ್ಯತೇ ।
ಸಂವಿತ್ಸರ್ವಮಿದಂ ಸಾ ತು ಯಥಾ ವೇತ್ತಿ ತಥಾ ಜಗತ್ ॥೧೩॥

ಸಾ ಸತ್ಯಾಪ್ಯಥವಾಽಸತ್ಯಾ ತಯಾ ದೇಹೋಽನುಭೂಯತೇ ।
ಸ್ವಾತಂತ್ರ್ಯೇಣ ಯಥಾ ಸ್ವಪ್ನೇ ಪಾತಾಲೇ ಖೇ ಜಲೇ ದಿವಿ ॥೧೪॥

ಸಂವಿತ್ಸತ್ಯಾಸ್ತ್ವಸತ್ಯಾ ವಾ ತಾವನ್ಮಾತ್ರಃ ಸ್ಮೃತಃ ಪುಮಾನ್ ।
ಸ ಯಥಾನಿಶ್ಚಯೋ ನೂನಂ ತತ್ಸತ್ಯಮಿತಿ ನಿಶ್ಚಯಃ ॥೧೫॥

---

೧೩. ದೇಹ, ಪುರುಷ, ಜೀವ ಎಂಬ ಯಾವುದೂ ಇಲ್ಲವೇ ಇಲ್ಲ: ಇರುವುದೆಲ್ಲ ಸಂವಿತ್ ಒಂದೇ ಒಂದು. ಆ ಸಂವಿತ್ತು ಹೇಗೆ ತಿಳಿದರೆ ಅದೇ ಜಗತ್ತು.

(ಅತಏವ ಸರ್ವವಾದ್ಯಭಿಪ್ರೇತ ತತ್ತ್ವದ್ವೇಷ ಕಲ್ಪನಾ ಸಮರ್ಥಾ ಸಂವಿದೇವಾತ್ಮಾ ಇತಿ ಸರ್ವೇ ವಾದಿನೋ ಮೋಥಯಿತ್ವಾ ಕೃತಾರ್ಥೀಕರ್ತುಂ ಶಕ್ಯಾ ಇತ್ಯಾಶಯೇನಾಹ–ನದೇಹ ಇತಿ । ದೇಹಶ್ಚಾರ್ವಾಕಾಭಿಮತಃ, ಪುರುಷಃ ಸಾಂಖ್ಯಾಭಿಮತೋ, ಜೀವೋ ಮೀಮಾಂಸಕಾದ್ಯಭಿಮತೋ, ವಾಪಿ ಭೋಕ್ತಾ ಅನ್ಯಃ ಸಂವಿತ್ ಪೃಥಕ್ಕೃತೋ ನೋಪಲಭ್ಯತೇ । ಅತಸ್ಸರ್ವಮಿದಂ ವಾದಿನಾಂ ಕಲ್ಪನಾಪದಂ ದೇಹಾದಿ ಸಂವಿದೇವ–ತಾ. ಪ್ರ.)

೧೪. ಆ ಸಂವಿತ್ ಸತ್ಯವಾಗಲಿ ಅಸತ್ಯವಾಗಲಿ ಈ ದೇಹವನ್ನು ಅನುಭವಿಸುವುದು ಅದು. ಪಾತಾಲದಲ್ಲಿ ಆಕಾಶದಲ್ಲಿ ಜಲದಲ್ಲಿ ಅಂತರಿಕ್ಷದಲ್ಲಿ ಎಲ್ಲಾದರೂ ಅದು ಸ್ವಪ್ನದಲ್ಲಿ ಹೇಗೋ ಹಾಗೆ ಸ್ವಾತಂತ್ರ್ಯದಿಂದ ಅನುಭವಿಸುವುದು.

೧೫. ಸಂವಿತ್ತು ಸತ್ಯವಾಗಲಿ ಅಸತ್ಯವಾಗಲಿ, ಪುರುಷನೆಂಬುವನು (ಆತ್ಮನು) ಅದಷ್ಟೇ ಎಂಬುದು ಸ್ಮೃತಿಯು. ಆತ್ಮನು ಹೇಗೆ ನಿಶ್ಚಯಿಸುವನೋ ತಪ್ಪದೇ ಅದೇ ಸತ್ಯ ಎಂಬುದೇ ನಿಶ್ಚಯವು.

ಪ್ರಾಮಾಣ್ಯಂ ಸರ್ವಶಾಸ್ತ್ರಾಣಾಮೇತೇನೈವ ಪ್ರಸಿದ್ಧ್ಯತಿ ।
ಸರ್ವಸಿದ್ಧಾಂತಸಿದ್ಧಾಂತ ಏಷ ಏವೇತಿ ಮೇ ಮತಿಃ ॥೧೬॥

ತಸ್ಮಾದಬೋಧತಯಾಸ್ತೇ ಯಥಾ ಸಂವಿತ್ತಥೈವ ಸಾ ।
ಭವತ್ಯಕಲುಷಾಕಾರಾ ತಥೈವ ಫಲಭಾಗಿನೀ ॥೧೭॥

ದೇಶಕಾಲಕ್ರಿಯಾದ್ರವ್ಯ ವೇದಶಾಸ್ತ್ರೈಷಣಾಭ್ರಮೈಃ ।
ಅಬೋಧತಾ ತು ಯಾ ಸಂವಿತ್ಕದಾಚಿತ್ಸಾ ನ ನಶ್ಯತಿ ॥೧೮॥

---

೧೬. ಸರ್ವಶಾಸ್ತ್ರಗಳಿಗೂ ಪ್ರಾಮಾಣ್ಯವು ಸಿದ್ಧಿಸುವುದು ಹೀಗೆ! ಇದೇ ಸರ್ವಸಿದ್ಧಾಂತಗಳ ಸಿದ್ಧಾಂತವು ಎಂಬುದು ನನ್ನ ಮತಿಯು

(ಸಂವಿದ ಏವ ಸರ್ವವಾದ್ಯಭಿಮತಾತ್ಮಾದಿ ಭಾವೇನಾವಸ್ಥಾನೇತಸ್ಯಾಃ ಪರಮಾರ್ಥ ಸತ್ಯತ್ವಾತ್ ತತ್ಕಲ್ಪಿತಾರ್ಥಾನಾಂ ತತ್ತದಭಿಮತಾರ್ಥ ಕ್ರಿಯಾಸಮರ್ಥತ್ವಾಚ್ಚ ಸರ್ವಶಾಸ್ತ್ರ ಪ್ರಾಮಾಣ್ಯಂ ಪ್ರಾಗುಕ್ತಂ ಪ್ರತಿಷ್ಠಿತ ಮಿತ್ಯಾಹ—— ತಥಾ ಚಾಯಂ ಸಂವಿದದ್ವೈತಾತ್ಮವಾದ ಸಿದ್ಧಾಂತಃ ಸರ್ವವಾದಿನಾಮುಪ ಜೀವ್ಯತ್ವಾತ್ ಪುರುಷಾರ್ಥಹೇತುತ್ವಾಚ್ಚ ಸರ್ವಸಿದ್ಧಾಂತ ಶಿರೋಮಣಿಃ ಸಿದ್ಧಾಂತ ಇತ್ಯಾಹ— ತಾ. ಪ್ರ.)

೧೭. ಆದರಿಂದ ಅಬೋಧತಾ ಸ್ವರೂಪವಾದ ಅವಿದ್ಯೆಯಿಂದ ಸಂವಿತ್ತು ನಾನಾವಿಧವಾಗುವುದು. ಹೀಗೆ ಅವಿದ್ಯೆಯಿಂದ ಕಲುಷಿತವಾಗಿದ್ದ ಸಂವಿತ್ತು ಎಂದಿಗೆ ಕಾಲುಷ್ಯವನ್ನು ಕಳೆದುಕೊಂಡು ಶುದ್ಧವಾಗುವುದೋ ಆಗ ಅದು ಶುದ್ಧ ಚಿದಾಕಾರವಾಗಿ ಮೋಕ್ಷಫಲ ಭಾಗಿನಿಯಾಗುವುದು.

೧೮. ದೇಶ ಕಾಲ ಕ್ರಿಯಾ ದ್ರವ್ಯ ವೇದ ಶಾಸ್ತ್ರ ಈಷಣಾ ಭ್ರಾಂತಿಗಳಿಂದ ಅಬೋಧತೆಯು ಸಂವಿತ್ತನ್ನು ಕಲುಷಿತಮಾಡುವುದು. ಈ ಅಬೋಧತೆಯು ಯಾವಾಗಲೂ ನಾಶವಾಗುವುದೇ ಇಲ್ಲ.

ಆವಿರ್ಭವತಿ ಸಾ ಭೂಯಃ ಕ್ಷೀಣಾಶಂಕಾ ಕ್ಷಣೇನ ಚೇತ್ ।
ತತ್ಕೇನ ಸಂವಿದೋ ದುಃಖಂ ಕದಾ ನಾಮೋಪಶಾಮ್ಯತಿ ॥೧೯॥

ಸಂವಿದೇವ ನೃಣಾಂ ಜೀವಃ ಸ ಯಥಾ ದೃಢಭಾವನಃ ।
ತಥಾ ಸುಖೀ ವಾ ದುಃಖೀ ವಾ ಭವೇದಿತ್ಯೇಷ ನಿಶ್ಚಯಃ ॥೨೦॥

ಸಂವಿಚ್ಚೇದಸ್ತಿ ತಜ್ಜ್ಞಾನಾಂ ಶರಣಂ ಭವಭೇದನೇ ।
ನಾಸ್ತಿ ಚೇತ್ತಚ್ಛಿಲಾಮೂಕಮಾಂಧ್ಯಮೇವಾವ ಶಿಷ್ಯತೇ ॥೨೧॥

---

(ಪುಣ್ಯದೇಶ ಕಾಲಾದೌ ಸ್ನಾನದಾನಾದಿ ಕ್ರಿಯಾಭಿಃ ರಸಾಯನ ಮಂತ್ರ ಔಷಧಾದಿ ದ್ರವ್ಯೈಃ ಕರ್ಮಶಾಸ್ತ್ರ ಬೋಧಿತೈಃ ಸ್ವರ್ಗಪಶುಪುತ್ರಾ ದ್ಯೇಷಣಾ ಧರ್ಮೈಶ್ಚ ಸಾ ಅಬೋಧತಾ ತತ್ಪ್ರಯುಕ್ತಯಾ ವಿಕ್ಷೇಪ ಸಂವಿತ್ನಾಶ ಕದಾಚಿದಪಿ ನ ವಿನಶ್ಯತಿ— ತಾ. ಪ್ರ.)

೧೯. ಈ ಅವಿದ್ಯೆಯು ಬೋಧದಿಂದ ಕ್ಷೀಣವಾಗುವುದು: ಪೂರ್ಣವಾಗಿ ನಾಶವಾಗಿ ಹೋಗುವುದು: ಇಂಥದೂ ಮತ್ತೊಂದು ಕ್ಷಣದಲ್ಲಿ ಆವಿರ್ಭಾವವನ್ನು ಒಂದೇ ಕ್ಷಣದಲ್ಲಿ ಹೊಂದಿ ಬೆಳೆಯುವುದು ಎಂದು ಆಶಂಕೆಮಾಡುವುದಾದರೆ, ಸಂವಿತ್ತಿನ ದುಃಖವಾದರೂ ಏತರಿಂದ ಯಾವಾಗ ನಾಶವಾದೀತು ?

೨೦. ಮನುಷ್ಯರು ಜೀವ ಜೀವ ಎನ್ನುತ್ತಿರುವುದೇ ಸಂವಿತ್ತು. ಆದರಿಂದ ಮನುಷ್ಯನು ಯಾವ ರೀತಿಯಾದ ದೃಢಭಾವನವುಳ್ಳವನಾಗಿರುವನೋ ಹಾಗೇ ಆಗುವನು. ತಾನು ಸುಖಿಯೆಂದುಕೊಂಡರೆ ಸುಖಿಯು, ದುಃಖಿಯೆಂದುಕೊಂಡರೆ ದುಃಖಿಯು. ಇದೇ ನಿಶ್ಚಯವು.

೨೧. ಸಂವಿತ್ತು ಒಂದುಂಟು ಎನ್ನುವುದಾದರೆ, ಅದೇ ಭವಭೇದನಕ್ಕೆ ಉಪಾಯವು. ಇಲ್ಲವೆನ್ನುವುದಾದರೆ, ಶಿಲೆಯಂತೆ ಮಾನವನೂ ಮೂಕನೂ ಅಂಧನೂ ಆಗಿ ಇರಬೇಕಾದೀತು.

ಯತ್ತಯೈವ ಚ ಸಂವಿತ್ತ್ಯಾ ವೇದನೇನೈವ ಲಭ್ಯತೇ ।
ಅಯಂ ಸ್ವಭಾವಜ್ಞಪ್ತ್ಯಾಂತರ್ಜಾಡ್ಯಂ ಪುಂಸೇವ ನಿದ್ರಯಾ ॥೨೨॥

ಶ್ರೀರಾಮ ಉವಾಚ:—

ದಿಕ್ಸ್ವಧಸ್ತಾಚ್ಚ ನಾಂತೋಽಸ್ಯಾ ಭಾವೀ ನಾಪಿ ಜಗತ್ಕ್ಷಯಃ ।
ಅಸ್ತೀತಿ ಭಾವಿತಂ ಯೇನ ಸಂತ್ಯಕ್ತಾಭಾವಬುದ್ಧಿನಾ ॥೨೩॥

---

(ಪ್ರತ್ಯಗಾತ್ಮರೂಪಸಂವಿದೇವ ತತ್ತ್ವತೋ ಜ್ಞಾತಾ ಸ್ವಕಾರ್ಯಂ ಬಂಧಂ ಹರತೀತಿ ಸೈವ ಮುಮುಕ್ಷೂಣಾಂ ಶರಣಂ ತದಭಾವೇತು ಜಗದಾಂಧ್ಯ ಮೇವ ಸ್ಯಾದ್ದೂರೇ ಮೋಕ್ಷಂ ಪ್ರತ್ಯಾಶಾ ಇತ್ಯಾಹ—ತಾ. ಪ್ರ.)

೨೨. ಯಾವುದೇ ಆಗಲಿ ಆ ಸಂವಿತ್ತು ತನಗೆ ವೇದ್ಯವಾಯಿತು ಎಂದರೇನೇ ತಿಳಿಯುವುದು. ಹಾಗೆ ತಿಳಿಯುವುದು ಸಂವಿತ್ತಿನ ಸ್ವಭಾವವಾದ ಜ್ಞಪ್ತಿಯಿಂದ. ಅಂತಹ ಸ್ವಭಾವಜ್ಞಪ್ತಿಯಿಲ್ಲದವರಿಗೆ, ನಿದ್ದೆಯಂತಹ ಅಂತರ್ಜಾಡ್ಯವು ತಪ್ಪುವುದಿಲ್ಲ.

(ಯಸ್ಮಾದ್ಧೇತೋಃ ಸ್ವಭಾವಜ್ಞಪ್ತ್ಯಾ ಸ್ವಪ್ರಕಾಶಯಾ ತಯೈವ ಪ್ರತ್ಯಗಾತ್ಮ ಸಂವಿತ್ತ್ಯಾ ಪುಂಸಾನಿದ್ರಯಾ ಸ್ವಜಾಡ್ಯಮಿವ, ಆಂಧ್ಯಕಲ್ಪೇನ ಅವೇದನೇನ ಏವ ಅಯಂ ಪ್ರಪಂಚೋ ಲಭ್ಯತೇ ತತ್ರ ಸಂವಿತ್ತ್ಯಪಲಾಪೇ ಅಸಾಕ್ಷಿಕಸ್ಯ ಆಂಧ್ಯಸ್ಯೈವ ಪರಿಶೇಷಾತ್- ತಾ. ಪ್ರ )

ಶ್ರೀರಾಮನು ಕೇಳಿದನು:—

೨೩. ಊರ್ಧ್ವ, ಅಧಸ್ಸು, ಮೊದಲಾದ ದಶದಿಕ್ಕುಗಳಲ್ಲಿಯೂ ಅಂತವೇ ಇಲ್ಲ ಎಂಬ ನಿಶ್ಚಯವುಳ್ಳವನಿಗೆ ಜಗತ್ಕ್ಷಯವಾಗುವುದೇ ಇಲ್ಲ. ಅಭಾವ ಬುದ್ಧಿಯನ್ನು ಬಿಟ್ಟು ಅಸ್ತಿ ಎಂಬ ಭಾವನೆಯನ್ನೇ ಹಿಡಿದಿರುವವನಿಗೆ (ಗತಿಯೇನು ?)

(ನ ಕದಾಚಿದನೀದೃಶಂ ಜಗದಿತ್ಯಭ್ಯುಪಗಮ್ಯ ಯೇ ಮಹಾಪ್ರಲಯಾದಿ ನೇಚ್ಛಂತಿ ತೇ ನೈಃಶಾಸ್ತ್ರಾ ಮೃತಾ ಇವೇತಿ ಯೇ ತ್ವಯಾ ನಿಂದಿತಾಃ ತನ್ಮತಾನುಸಾರಿ ದೃಢನಿಶ್ಚಯವತಾಂ ತತ್ತ್ವಜ್ಞಾನಾವತಾರಾದೌ ಯುಕ್ತಿರಸ್ತಿ ನವಾ ಇತಿ ಸಂದಿಹಾನೋ ರಾಮಃ ಪೃಚ್ಛತಿ—ತಾ. ಪ್ರ.)

ವಿಜ್ಞಾನಘನಮೇವೇದಮಿತಿ ನೂನಮಪಶ್ಯತಾ ।
ಪಶ್ಯತಾ ಚ ಯಥಾ ದೃಷ್ಟಂ ಸರ್ವಕ್ಷಯಮಪಶ್ಯತಾ ॥೨೪॥

ತಸ್ಯ ಸ್ಯಾತ್ಕೀದೃಶೀ ಬ್ರಹ್ಮನ್ಯುಕ್ತಿರಾಧಿವಿನಾಶನೇ ।
ಇತಿ ಮೇ ಸಂಶಯಂ ಛಿಂದಿ ಭೂಯೋ ಬೋಧಾಭಿವೃದ್ಧಯೇ ॥೨೫॥

ಶ್ರೀ ವಸಿಷ್ಠ ಉವಾಚಃ—

ಆತ್ರೈಕಂ ತಾವದುಚಿತಂ ಪೂರ್ವಮೇವ ತಥೋತ್ತರಂ ।
ದ್ವಿತೀಯಮುತ್ತರಂ ನ್ಯಾಯ್ಯಂ ವಕ್ಷ್ಯಮಾಣಮಿದಂ ಶೃಣು ॥೨೬॥

---

೨೪. ಇದಂ ಎಂಬ ದೃಶ್ಯವೆಲ್ಲವೂ ವಿಜ್ಞಾನ ಘನವೇ ಎಂಬುದನ್ನು ನೋಡದೆ, ಯಥಾದೃಷ್ಟವಾಗಿ ಎದುರಿಗೆ ಇರುವುದನ್ನೇ ಶಾಶ್ವತವೆಂದು ನೋಡುವ, ಸರ್ವಕ್ಷಯವಾಗುವುದು ಎಂಬುದನ್ನು ನಂಬದವನ ಗತಿಯೇನು ?

೨೫. ಮನುಷ್ಯನಿಗೆ, ಎಲೈ ಬ್ರಹ್ಮನೆ ಆಧಿವಿನಾಶದಲ್ಲಿ ಯುಕ್ತಿ ಯಾವುದು ? ಇದು ನನ್ನ ಸಂಶಯವು. ಇವನ್ನು ಕತ್ತರಿಸು. ನನಗೆ ಮತ್ತೆ ಬೋಧವು ಅಭಿವೃದ್ಧಿಯಾಗಲಿ.

ಶ್ರೀ ವಸಿಷ್ಠನು ಹೇಳಿದನು—

೨೬. ಈ ಸಂದರ್ಭದಲ್ಲಿ ಏನು ಹೇಳಬೇಕೋ ಅದನ್ನು ಮೊದಲೇ—("ನಿಃಶಾಸ್ತ್ರಾ ನೋವ್ಯತಾ ಇವ ತೈರ್ನ ಕಥಾಕ್ರಮಃ ಎಂದೂ ಮತ್ತೂ " ಯಂ ಯಂ ನಿಶ್ಚಯಮಾದತ್ತೇ ಸಂವಿದಂತರ ಖಂಡಿತಂ " ಇತ್ಯಾದಿಯಾಗಿಯೂ) ಉತ್ತರವನ್ನು ಕೊಟ್ಟಿದೆ. ಅದು ಉಚಿತವಾದುದೇ ! ಹಾಗಾದರೂ ಇನ್ನೂ ಒಂದು ನ್ಯಾಯವಾದ ಉತ್ತರವನ್ನು ಹೇಳುವೆನು ಕೇಳು.

(ತಥಾಚ ಚೈತನ್ಯಾನನುವಿದ್ಧ ತಾದೃಶ ನಿಶ್ಚಯಾಃಪ್ರಸಿದ್ಧೇ ಸೋಽಪಿ ಮಂದ ಚೈತನ್ಯಂ ವ್ಯುತ್ಪಾದ್ಯ ಪೂರ್ವ ನಿಶ್ಚಯಸ್ಯ ತದ್ವಿವರ್ತತಾ ವ್ಯುತ್ಪಾದನೇನ ಚಿದಖಂಡೈಕರಸಸ್ಯ ಅನುಭವೇ ಅವತಾರಯಿತುಂ ಶಕ್ಯ ಇತಿಭಾವಃ—ತಾ. ಪ್ರ.)

ಈದೃಗ್ಭಾವಸ್ತ್ವಯಾ ಪ್ರೋಕ್ತೋ ಯಃ ಪುಮಾನ್ಪುರುಷೋತ್ತಮ ।
ಸ ತಾವಚ್ಚೇತನಾಮಾತ್ರಂ ಭವತೀತ್ಯನುಭೂಯತೇ ॥೨೭॥

ಸ ಚಾಕಾರವಿನಾಶೇನ ಯುಜ್ಯತೇ ನಾತ್ರ ಸಂಶಯಃ ।
ಅಥಾವಿನಾಶೋ ದೇಹಶ್ಚೇತ್ತದ್ದುಃಖಸ್ಯಾತ್ರ ಕಃ ಕ್ರಮಃ ॥೨೮॥

ಭವೇದ್ಭಾಗವಿಭಾದಾತ್ಮವಿನಾಶಸ್ತ್ವವಿಚಾರಿತಃ ।
ಅವಶ್ಯಂ ತಸ್ಯ ಭವತಿ ಕಿಲೇತಿ ನನು ನಿಶ್ಚಯಃ ॥೨೯॥

---

೨೭. ಎಲೈ ಪುರುಷೋತ್ತಮನೇ, ನೀನು ಹೇಳಿದಂತಹ ಮನುಷ್ಯನು ಯಾವನೋ ಅವನೂ ಚೇತನಾಮಾತ್ರನೆಂದು ಹೇಳಬಹುದು ತಾನೇ? ಯಾಕೆಂದರೆ ಅವನು ಅಚೇತನನೆಂದರೆ ಅನುಭವವಿರುದ್ಧವಾಗುವುದು.

(ಈದೃಗ್ಭಾವಃ ತ್ವದುಕ್ತನಿಶ್ಚಯವಾನ್ ಯಃ ಪುಮಾನ್ ತ್ವಯಾ ಪ್ರೋಕ್ತಃ ಸ ಕಿಂ ದೇಹಾತಿರಿಕ್ತ ಚೇತನಾತ್ಮದರ್ಶೀ, ಉತ ನಿತ್ಯಾತಿವಾಹಿಕ ದೇಹಾತ್ಮದರ್ಶೀ, ಉತಾಜ್ಞಾನಾವೃತ ಸಂವಿದಾತ್ಮದರ್ಶೀ, ಉತ ಸ್ಥೂಲದೇಹಾತ್ಮಾ ದರ್ಶೀ, ಉತ ಸಂವಿದಪಲಾಪಿ?—ತಾ. ಪ್ರ.)

೨೮. ಆ ಪುರುಷನೂ ಆಕಾರ ವಿನಾಶವನ್ನು ಯಾವಾಗಲಾದರೂ ಹೊಂದುವನೆಂಬುದರಲ್ಲಿ ಸಂಶಯವಿಲ್ಲ. ಹಾಗಿಲ್ಲ. ದೇಹವು ಅವಿನಾಶಿಯು ಎನ್ನುವುದಾದರೆ ಆತನ ದುಃಖದ ಪ್ರಸಂಗವೆಲ್ಲಿ?

(ಯಸ್ಮಾತ್ಸ ದೇಹಾದ್ಯಾಕಾರೋಪಾಧಿ ನಾಶೇನ ಪರಮಾತ್ಮನಾ ಸಹ ಯುಜ್ಯತೇ ಏಕೀಭವತಿ । ದ್ವಿತೀಯೇತು ಅಹ ವಿನಾಶಿನ್ಯನ್ನಮಯೇ ದೇಹೇ ಆತ್ಮತಾ ಬುದ್ಧ್ಯಾ ಸರ್ವತೋ ವಿನಾಶಶಂಕಯಾ ದುಃಖಂ । ಅವಿನಾಶಿನ್ಯಾತ್ಮತಾ ನಿಶ್ಚಯೇತು ನದೇಹಾಕಾರತ್ವ ದರ್ಶನಮಾತ್ರಾಪರಾಧೇನ ದುಃಖಪ್ರಸಕ್ತಿರಿತಿ ಕ್ರಮಾತ್ಸೋಽಪಿ ಬೋಧ್ಯಮಾನಸ್ತತ್ತ್ವಂ ಪ್ರತಿಪತ್ಸ್ಯತ ಇತಿ ಭಾವಃ । ಕ್ರಮಃ ಪ್ರಸಂಗಃ–ತಾ. ಪ್ರ.)

೨೯. ಭಾಗ ವಿಭಾಗಗಳುಳ್ಳ ದೇಹವೇ ಆತ್ಮವು ಎನ್ನುವುದಾದರೆ ದೇಹನಾಶವಾದಾಗ ಆತ್ಮವೂ ನಾಶವಾಗಬೇಕು. ಹಾಗೆ ಹೇಳುವುದು ಅವಿಚಾರ ಸಿದ್ಧಾಂತವು ವಿಚಾರಮಾಡಿ ನೋಡಿದಾಗ ತನ್ನ ಸಿದ್ಧಾಂತವು ತಪ್ಪು ಎನ್ನುವುದು ಅವನಿಗೇ ತಿಳಿಯುವುದು. ಆಗ ಆತ್ಮನು ದೇಹವಲ್ಲ ಎಂದು ಅವನೇ ಒಪ್ಪಿಕೊಳ್ಳಬೇಕಾಗುವುದು.

(ಅವಶ್ಯಂ ಚ ಸಾವಯವಸ್ಯ ವಿನಾಶೋ ಭವತಿ ಕಿಲೇತಿ–ತಾ. ಪ್ರ.)

ಮೃತಃ ಸ ಸಂವಿದಾತ್ಮತ್ವಾದ್ಭೂಯೋ ನೋ ವೇತ್ತಿ ಸಂಸೃತಿಂ ।
ಜ್ಞಾನಧೌತಾ ನ ಯಾ ಸಂವಿನ್ನ ಸಾ ತಿಷ್ಠತ್ಯಸಂಸೃತಿಃ॥ ॥೩೦॥

ಅಥವಾ ನಾಸ್ತಿ ಸಂವಿತ್ತಿರಿತಿ ನಿಶ್ಚಯವಾನ್ಯದಿ ।
ತತಸ್ತಾದೃಗ್ವೇದನತೋ ಭವತ್ಯೇವ ದೃಷಜ್ಜಡಃ ॥೩೧॥

ಯಥಾವೇದನಮರ್ಥೇಷು ಚಿತ್ತ್ವೇ ದೇಹಕ್ಷಯಾತ್ಕ್ಷತೇ ।
ಮೃತಿರೇವ ಪರಂ ಶ್ರೇಯೋ ದೃಷ್ಟಂ ನಾನುಭವಾದಿತಿ ॥೩೨॥

---

೩೦. ಹೀಗೆ ವಿಚಾರದಿಂದ ಆತ್ಮಜ್ಞಾನವನ್ನು ಪಡೆದವನು ಸಂವಿತ್ತೇ ಆತ್ಮವೆಂದು ತಿಳಿದವನಾಗಿ ಮೃತನಾದರೆ ಮತ್ತೆ ಸಂಸಾರಕ್ಕೆ ಬರುವುದಿಲ್ಲ. ಹಾಗಿಲ್ಲದೆ, ಯಾವ ಸಂವಿತ್ತು ಜ್ಞಾನಧೌತವಲ್ಲವೋ ಅದು ಯಾವಾಗಲೂ ಅಸಂಸೃತಿಯಾಗಿ ಇರುವುದೇ ಇಲ್ಲ.

(ಚತುರ್ಥಕಲ್ಪೇ ವ್ಯಾಹ—ಸ ಶುದ್ಧಸಂವಿದಾತ್ಮದರ್ಶೀ ಜೀವನ್ಮುಕ್ತಃ ಸರ್ವದಾ ಸರ್ವತ್ರ ಲೀಲಯಾ ಜಗತ್ಪಶ್ಯನ್ನಪಿ ಮೃತೋ ವಿದೇಹತಾ ಮಾತ್ರೇಣ ಕೈವಲ್ಯಂ ಪ್ರಾಪ್ತಃ ಸತ್ ಭೂಯಃ ಸಂಸೃತಿಂ ನೋವೇತ್ತಿ ನ ಪಶ್ಯತೀತ್ಯರ್ಥಃ । ಪಂಚಮಕಲ್ಪೇ ವ್ಯಾಹ-ಯಾಸಂವಿತ್ ತತ್ವಜ್ಞಾನೇನ ನಧೌತಾ ಸಾ ಸಂಸೃತಿವೀಜಭಾವಾವಿನಾಶಾದ ಸಂಸೃತಿರ್ನತಿಷ್ಠತಿ—ತಾ. ಪ್ರ.)

೩೧. ಅಥವಾ ಸಂವಿತ್ತೇ ಇಲ್ಲ ಎಂಬ ನಿಶ್ಚಯವಂತನಾಗಿದ್ದರೆ, ಅವನು ಹಾಗೆ ತಿಳಿದುಕೊಂಡಿರುವುದರ ಫಲವಾಗಿ ಕಲ್ಲಿನಂತೆ ಜಡನಾಗಿರುವನು.

(ಷಷ್ಠೇಕಲ್ಪೇವ್ಯಾಹ—ದೃಷದಿವ ಜಡೋ ವಿಶೇಷ ಜ್ಞಾನಶೂನ್ಯೋ ಭವತ್ಯೇವ ಚಿರ ಮಿತ್ಯರ್ಥಃ—ತಾ. ಪ್ರ )

೩೨ ಅರ್ಥಗಳಲ್ಲಿ ಆವೇದನನಾಗಿ ಮರಣಾಂತದವರೆಗೂ ಇದ್ದ ದೇಹಕ್ಷಯದಿಂದ ಚಿತ್ತ್ವವೂ ಕ್ಷತವಾಗುವುದು ಎನ್ನುವುದಾದರೆ, ಮರಣವು ಪರಮ ಶ್ರೇಯಸ್ಕರವೇ ಆದೀತು. ಆದರೆ, ಇದನ್ನು ಒಪ್ಪುವವರು ನಿರತಿಶಯಾನಂದದ ಅನುಭವವಿಲ್ಲದ (ಮೂರ್ಖ)ರು.

ಅಸಂಭವಚ್ಛುದ್ಧವಿದೋ ನಿಃಶರೀರಾ ಭವಂತಿ ಯೇ ।
ಜಡಭಾವಾ ಜಡೀಭೂಯ ದುರ್ಭೇದಾಂಧ್ಯಾ ಭವಂತಿ ತೇ ॥೩೩॥

ಯೇ ಚಾಪಿ ಸ್ವಪ್ನಪುರವತ್ಸರ್ವಂ ಪಶ್ಯಂತಿ ಚಿನ್ಮಯಾಃ ।
ತೇಷಾಮಿದಮಿವಾಶೇಷಂ ಜಗಜ್ಜಾಲಂ ಪ್ರವರ್ತತೇ ॥೩೪॥

ಸ್ಥೈರ್ಯಾಸ್ಥೈರ್ಯೇಣ ಭೂತಾನಾಂ ಕಿಮಪೂರ್ವಮತೌ ಭವೇತ ।
ಭೂತಸ್ಥೈರ್ಯೇ ತಥಾಸ್ಥೈರ್ಯೇ ಸುಖಂ ಚೈವಾಸುಖಂ ಸಮಂ ॥೩೫॥

---

೩೩. ಶುದ್ಧ ಸಂವಿತ್ತು ಅಸಂಭವವೆಂಬ ಶೂನ್ಯವಾದಿಗಳು ಮೃತರಾದರೆ, ಜಡಭಾವ ಸಂಪನ್ನರಾಗಿ, ಜಡರಾಗಿ, ದುರ್ಭೇದವಾದ ಆಂಧ್ಯವುಳ್ಳವರಾಗುವರು.

(ಯೇತು ಶೂನ್ಯವಾದಿನೋ ನೈರಾತ್ಮ್ಯ ದೃಢನಿಶ್ಚಯಾಸ್ತೇಷಾಂ ಮೃತಾನಾಂ ಕಾಗತಿಸ್ತಮಾಹ ತಥಾಚ ಶ್ರುತಿಃ "ಅಸುರ್ಯಾನಾಮ ತೇ ಲೋಕಾ ಅಂಧೇನ ತಮಸಾ ವೃತಾಃ ತಾಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇ ಕೇ ಚಾತ್ಮಹನೋಜನಾಃ। ಇತಿ—ತಾ. ಪ್ರ)

೩೪. ಯಾರು ಚಿನ್ಮಯರಾಗಿ ಸ್ವಪ್ನಪುರದಂತೆ ಎಲ್ಲವನ್ನೂ ನೋಡುವರೋ ಅವರಿಗೆ, ಈ ಜಗಜ್ಜಾಲವೆಲ್ಲ ಈಗಿರುವಂತೆಯೇ ಅಶೇಷವಾಗಿ ಪ್ರವರ್ತಿಸುವುದು.

(ಯೇಽಪಿ ವಿಜ್ಞಾನವಾದಿನಃ ಕ್ಷಣಿಕ ವಿಜ್ಞಾನಮಯಂ ಸ್ವಪ್ನತುಲ್ಯಂ ಜಗದಿತಿ ಪಶ್ಯಂತಿ ತೇಷಾಮಪಿ ವ್ಯವಹಾರಸಿದ್ಧಿಸ್ತುಲ್ಯೇತ್ಯಾಹ ಚಿನ್ಮಯಾಃ ಕ್ಷಣಿಕವಿಹಾರಿ ಚಿದಾತ್ಮ ಭೂತಾಃ—ತಾ. ಪ್ರ.)

೩೫. ಭೂತಗಳು ಸ್ಥಿರವಾಗಿರಲಿ, ಅಸ್ಥಿರವಾಗಿರಲಿ, ಜಗದ್ವ್ಯವಹಾರವು ವಿಚಿತ್ರವೆನ್ನುವ ಅಪೂರ್ವಬುದ್ಧಿಯಲ್ಲಿ ಏನು ವಿಶೇಷವಾದೀತು? ಭೂತಸ್ಥೈರ್ಯದಲ್ಲಾಗಲಿ, ಅಸ್ಥೈರ್ಯದಲ್ಲಾಗಲಿ, ಸುಖಾಸುಖಗಳು ಸಮವು.

ಸ್ಥಿರಮಸ್ತ್ವಸ್ಥಿರಂ ವಾಪಿ ಮಹ್ಯಾದಿ ಮಹತಾಮಪಿ ।
ಚಿದ್ಭಾವಮಾತ್ರಮಿದಂ ಭಾತಿ ಯಾವದಜ್ಞಾನಮಾತತಂ ॥೩೬॥

ಸಂವಿದಾ ಸಂವಿದೋಽಸತ್ತಾಮಿಹಾವ್ಯಾಪ್ಯ ವಿನಶ್ವರಾ ।
ನಿರ್ಣೀಯಾಂಗೀಕೃತಂ ಯೈರ್ವಾ ಜಾಡ್ಯಂ ತದ್ಬಾಲಕೈರಲಂ ॥೩೭॥

---

(ಯೇ ಜಗತಃ ಸ್ಥೈರ್ಯವಾದಿನಃ, ಯೇ ಚ ಕ್ಷಣಿಕತ್ವವಾದಿನಃ, ತೇಷಾಂ ಉಭಯೇಷಾಂ ಅಪಿ, ಸುಖದುಃಖಭೋಗಾಂತ ವ್ಯವಹಾರಸಿದ್ಧಿಃ ಸಮಾ ಇತ್ಯಾಹ —ತಾ. ಪ್ರ.)

೩೬. ಮಹಿಯಿಂದ ಹಿಡಿದು ಮಹತ್ತಿನವರೆಗೆ ಇರುವ ಸರ್ವವೂ ಸ್ಥಿರವಾದರೂ ಆಗಲಿ, ಅಸ್ಥಿರವಾದಲೂ ಆಗಲಿ, ಎಲ್ಲಿಯವರೆಗೆ ಅಜ್ಞಾನವು ಹರಡಿರುವುದೋ ಅಲ್ಲಿಯವರೆಗೂ ಈ ದೃಶ್ಯವು ತೋರುತ್ತಲೇ ಇರುವುದಾದರೂ ಸತ್ಯವಾಗಿ ಇದು ಚಿದ್ಭಾನಮಾತ್ರವು.

(ಅಧ್ಯಸ್ತಸ್ಯ ಅಧಿಷ್ಠಾನ ಬ್ರಹ್ಮಮಾತ್ರ ಸತತ್ತ್ವಕತ್ವೇನ ಶುಕ್ತಿರಜತಮೂಲ್ಯ ವಿಚಾರವತ್ ತದ್ವಿಚಾರಸ್ಯ ವ್ಯರ್ಥತ್ವಾತ್ ಇತ್ಯಾಶಯೇನಾಹ —ತಾ. ಪ್ರ.)

೩೭. ಸಂವಿತ್ತಿನ ಅಸತ್ತೆಯನ್ನು (ಕಾಲತೋ ಅಸತ್ತಾ ಕ್ಷಣಿಕತ್ವಂ, ದೇಶತೋ ಅಸತ್ತಾ ಜಾಡ್ಯಂ) ನಿರ್ಣಯಿಸಿ ಅದರಲ್ಲಿ ಜಾಡ್ಯವನ್ನು ಅಂಗೀಕರಿಸಿರುವವರು ಉಂಟಲ್ಲವೆ? ಅವರು ಕ್ಷಣಿಕತ್ವ ಜಾಡ್ಯತ್ವಗಳನ್ನು ಅಂಗೀಕರಿಸದೆಯೇ ತಿರೋಹಿತವಾಗುವ ಸಂವಿತ್ತಿನ ಸ್ವರೂಪವನ್ನು ತಿಳಿಯದ ಬಾಲಕರು. ಅವರೊಡನೆ ನಮಗೇನು?

(ಸಂವಿದಸ್ತು ನ ಕ್ಷಣಿಕತ್ವಂ ತಯಾ ಸ್ವಾಸತ್ತಾ ಲಕ್ಷಣಸ್ಯ ಸ್ವನಾಶಸ್ಯ ಜಾಡ್ಯಸ್ಯ ಚ ವ್ಯಾಪ್ತುಮಶಕ್ಯತಯಾ ಸಂವಿದ್ವ್ಯಾಪ್ತಿಮಂತರೇಣ ತದುಭಯ ಸಿದ್ಧ್ಯಯೋಗಾಚ್ಚ ತದುಕ್ತಿ ಸಂಭವಾಭಾವಾದಿತ್ಯಾಹ —ತಾ. ಪ್ರ.)

ಯೇಷಾಂ ವಿದ್ಭ್ಯಃ ಶರೀರಾಣಿ ತೇ ವಂದ್ಯಾಃ ಪುರುಷೋತ್ತಮಾಃ ।
ಶರೀರೇಭ್ಯೋ ವಿದೋ ಯೇಷಾಂ ತೈರಲಂ ಪುರುಷಾಧಮೈಃ ॥೩೮॥

ಚಿದ್ರೂಪೋ ಜೀವಬೀಜೌಘ ಆಕಾಶಕೃಮಿಜಾಲವತ್ ।
ಊರ್ಧ್ವಂ ತಿರ್ಯಗಧೋ ಯಾತಿ ಪೂರ್ಯಮಾಣ ಇವ ಸ್ವಯಂ ॥೩೯॥

ಚೇತ್ಯತೇ ಯೇನ ಕರ್ತಾನ್ಯೋ ಬೀಜೌಘೇನ ಸ ತತ್ಪರಃ ।
ತಥೈವಾನುಭವತ್ಯಂತಃ ಸ್ವಯಮೇವ ವಿವಲ್ಗತಿ ॥೪೦॥

---

೩೮. ಯಾರು ಸಂವಿತ್ತಿನಿಂದ ಶರೀರಾದಿಗಳು ಬರುವುವು ಎನ್ನುವರೋ ಆ ಪುರುಷೋತ್ತಮರು ವಂದ್ಯರು. ಶರೀರಾದಿಗಳಿಂದ ಸಂವಿತ್ತು ಎನ್ನುವವರು ಪುರುಷಾಧಮರು. ಅವರ ಸಹವಾಸವು ಸಾಕು.

(ಅತಏವ ಹಿ ಕೂಟಸ್ಥ ಚಿತೋ ವಿವರ್ತಭಾವೇನ ತದ್ವ್ಯಾಪ್ತದೇಹಾಂತ ಜಡ ಪ್ರಪಂಚೋತ್ಪತ್ತಿವಾದಿನೋ ಧನ್ಯಾಃ । ವಾಚಾರಂಭಣನ್ಯಾಯೇನ ವಿಕಾರಾನೃತತ್ವದರ್ಶನೇ ಚಿತ್ಪರಿಶೇಷಲಾಭಾತ್ । ಅಚಿತೋ ದೇಹಾದೇಶ್ಚಿದುತ್ಪತ್ತಿವಾದಿನಶ್ಚಾರ್ವಾಕ ಕಣಭಕ್ಷಾದಯೋ ಮೂರ್ಖಾಃ ಚಿದ್ವಿನಾಶೇನ ಜಡಪರಿಶೇಷಸ್ಯ ಅಪುರುಷಾರ್ಥತ್ವಾತ್ ಸಾಧಕಾಭಾವಾಚ್ಚ ಇತ್ಯಾಶಯೇನಾಹ —ತಾ. ಪ್ರ.)

೩೯. (ಕಣ್ಣು ಕೆಟ್ಟಿರುವಾಗ ಆಕಾಶದಲ್ಲಿ ಕಾಣುವ ಕೇಶೋಂಡ್ರಕಗಳಂತೆ ಅಥವಾ) ಆಕಾಶದಲ್ಲಿ ಹಾರಾಡುವ ಸೊಳ್ಳೆ ಮೊದಲಾದವುಗಳಂತೆ, ಜೀವ ಬೀಜಗಳನ್ನು ಅಸಂಖ್ಯಾತವಾಗಿ ಧರಿಸಿರುವ ಹಿರಣ್ಯಗರ್ಭನು ಚಿದ್ರೂಪನಾಗಿರಲು, ಆ ಹಿರಣ್ಯಗರ್ಭನಲ್ಲಿ ಜೀವಬೀಜಗಳು ಸ್ವಯಂಪೂರ್ಯಮಾಣವಾಗಿ ಮೇಲೆ ಕೆಳಗೆ ತಿರುಗುತ್ತಿರುವುವು. (ಹಿಂದೆ ಹೇಳಿರುವ ಧಾನ್ಯರಾಶಿ ನ್ಯಾಯವನ್ನು ಚಿಂತಿಸಿ)

(ಜೀವ ಸಮಷ್ಟಿರೂಪ ಹಿರಣ್ಯಗರ್ಭೇ........ತಥಾಚ ಸಮಷ್ಟ್ಯಾತ್ಮಾ ಹಿರಣ್ಯಗರ್ಭ ಏಕಏವ ನಾನಾಜೀವಾತ್ಮನಾ ಊರ್ಧ್ವ ಅಧೋಲೋಕ ಗಮನಾದಿನಾ ಸಂಸರತೀತಿ ಕಲ್ಪನಾಪಿ ಸಾಧು ಇತ್ಯಾಹ........ಯಥಾ ಮಣಿಮಲ್ಲಿಕಾದೌ ಪೂರ್ಯಮಾಣೋ ಜಲೌಘಃ ತಿರ್ಯಗೂರ್ಧ್ವಮಧೋಯಾತಿ ತದ್ವತ್ —ತಾ. ಪ್ರ.)

೪೦. ಬೀಜೌಘರೂಪನಾದ ಯಾವ ಸಮಷ್ಟಿರೂಪ ಹಿರಣ್ಯಗರ್ಭನಿಂದ ಕರ್ತೃರೂಪನಾದ ವ್ಯಷ್ಟಿಜೀವನು ಚೇತನವನ್ನು ಪಡೆಯುವನೋ ಆ ಸಮಷ್ಟಿ

ಯದ್ಯಥಾ ಚೇತ್ಯತೇ ಯೇನ ತಜ್ಜೀವೇನಾಶು ತೇನ ತತ್ ।
ಚಿದ್ರೂಪೇಣಾಪ್ಯತೇ ಸಿದ್ಧಮೇತದಾಬಾಲಮಕ್ಷತಂ ॥೪೧॥

ಯಥಾ ಧೂಮಸ್ಯ ನಭಸಿ ಯಥಾಂಭೋಧೌ ಮಹಾಂಭಸಃ ।
ಆವರ್ತವೃತ್ತಯಶ್ಚಿತ್ರಾಸ್ತಥಾ ಚಿದ್ವ್ಯೋಮ್ನಿ ಸಂಸೃತೇಃ ॥೪೨॥

ಪುರೀ ಭವತಿ ಚಿದ್ವ್ಯೋಮ ಯಥಾ ಸ್ವಪ್ನೇ ನರಂ ಪ್ರತಿ ।
ತಥಾದಿಸರ್ಗಾತ್ಪ್ರಭೃತಿ ತದೇವೇದಂ ಜಗತ್ಸ್ಥಿತಂ ॥೪೩॥

---

ರೂಪನು ಆ ಕರ್ತೃತ್ವದಲ್ಲಿ ಆಸಕ್ತನಾಗುವನು. ಆ ರೂಪದಲ್ಲಿ ಕರ್ತೃತ್ವಾನುಭವ ವನ್ನೂ ಪಡೆಯುವನು; ತಾನಾಗಿ ಸಂಸಾರವನ್ನೂ ವಹಿಸುವನು.

(ಸಾ ನಾನಾಕರ್ತೃಜೀವಸಮಷ್ಟಿತಾಪಿ ಹಿರಣ್ಯಗರ್ಭಚಿತಃ ಸ್ವಕಲ್ಪನಾಭಿನಿವೇಶ ವಶಾದೇವೇತ್ಯಾಹ– । ಯೇನ ಹಿರಣ್ಯಗರ್ಭ ಚಿದಾಭಾಸೇನ ಬೀಜೌಘಭಾವೇನ ಸಮಷ್ಟಿತಾಂ ಸ್ವಸ್ಯೋಪಾಸ್ಯ ತದ್ವಾಸನಾನುಸಾರಾತ್ಕಲ್ಪಾದೌ ಅನ್ಯಃ ಬಹುಧಾ ಭಿನ್ನೋ ವ್ಯಷ್ಟಿರೂಪಃ ಕರ್ತಾ ಸ್ವಾಂತಶ್ಚೇತ್ಯತೇ।ಸ ತತ್ಪರಸ್ತದಾಸಕ್ತಃ ಸ ತಯೈವ ನಾನಾಕರ್ತೃರೂಪಂ ಸ್ವಾಂತಃ ಸ್ವಯಮೇವಾನುಭವತಿ ತಥೈವ ವಿವಲ್ಗತಿ ಸ । ಸರತಿ ಚ ಇತ್ಯರ್ಥಃ ॥ —ತಾ. ಪ್ರ.)

೪೧. ಯಾವ ಜೀವನು ಹೇಗೆ ಯಾವುದನ್ನು ಚಿತ್ತದಿಂದ ಧ್ಯಾನಿಸುವನೋ ಅದನ್ನು ಅವನು ತಾನು ಚಿದ್ರೂಪನಾದ್ದರಿಂದ ಪಡೆಯುವನು. ಇದು ಆಬಾಲವೃದ್ಧ ರಾದಿಯಾಗಿ ಎಲ್ಲರ ವಿಷಯದಲ್ಲೂ ಸಾಧುವು.

೪೨. ಆಕಾಶದಲ್ಲಿ ಹೊಗೆಯೂ ಸಮುದ್ರದಲ್ಲಿ ಮಹಾಪೂರವೂ ತಾನಾಗಿ ಸುಳಿಸುತ್ತುವಂತೆ, ಚಿದಾಕಾಶದಲ್ಲಿ ಸಂಸಾರವೆಂಬ ಚಿತ್ರವು.

(ಅತಏವ ಹಿ ತಜ್ಜೀವ ಚಿತಾಂ ವಾಸನಾ ವೈಚಿತ್ರ್ಯಾನುರೂಪ ತತ್ತತ್ಸಂಸೃತಿ ಚೇತನ ವೈಚಿತ್ರ್ಯಾತ್ ಸಂಸೃತಿ ವೈಚಿತ್ರ್ಯಮನಂತಮಿತ್ಯಾಹ. —ತಾ. ಪ್ರ )

೪೩. ಸ್ವಪ್ನದಲ್ಲಿ ನೋಡುವವನಿಗೆ ಪುರಿಯಾಗಿ ಚಿತ್ತ ಕಾಣಿಸುವುದಲ್ಲವೆ ? ಅದರಂತೆಯೇ ಆದಿಸರ್ಗದಿಂದಲೂ ಅದೇ ಜಗತ್ತಾಗಿರುವುದು.

ಸಹಕಾರಿನಿಮಿತ್ತಾನಿ ಯಥಾ ಸ್ವಪ್ನೇ ನ ಸಂತಿ ವೈ ।
ಪೃಥ್ವ್ಯಾದೀನಿ ಭೂತಾನಿ ತಥೈವಾದೌ ಜಗತ್ಸ್ಥಿತೇಃ ॥೪೪॥

ಅಂಗಾನಾಂ ಸ್ವಪ್ನನಗರೇ ವಸುಧಾ ವಿವಿಧಾಃ ಕೃತಾಃ ।
ಯಾಸ್ತಾ ಏವ ಜಗತ್ಸ್ವಪ್ನನಗರೇ ಪುಷ್ಟತಾಂ ಗತಾಃ ॥೪೫॥

ಚಿನ್ಮಾತ್ರಾಕಾಶಮೇವೇಮಾಃ ಪ್ರಜಾ ದ್ವೈತೈಕ್ಯವರ್ಜಿತಾಃ ।
ಕೇವಾತ್ರ ರಂಜನಾನ್ಯಾ ಖೇ ಯದ್ವಾ ಭಾತಿ ಖಮೇವ ತತ್ ॥೪೬॥

ಚಿಚ್ಚಂದ್ರಿಕಾಚತುರ್ದಿಕ್ಕಂ ಶೀತಲಾಹ್ಲಾದಕಾರಿಣೀ ।
ತನೋತಿ ಚೇತನಾಲೋಕಂ ತಸ್ಯೇದಂ ಕಚನಂ ಜಗತ್ ॥೪೭॥

ಅದ್ಯೈವಾದ್ಯಂತಯೋರ್ವ್ಯೋಮ್ನಿ ಚಿನ್ಮಯೇ ಸರ್ಗದರ್ಶನಂ ।
ಚಿದುನ್ಮೇಷನಿಮೇಷಾಭ್ಯಾಂ ಖಾತ್ಮೋದೇತ್ಯಸ್ತಮೇತಿ ಚ ॥೪೮॥

---

೪೪. ಸ್ವಪ್ನದಲ್ಲಿ ಸಹಕಾರಿಕಾರಣ ನಿಮಿತ್ತಕಾರಣ ಮೊದಲಾದವು ಯಾವುದಾದರೂ ಉಂಟೇನು? ಹಾಗೆಯೇ ಜಗದಾದಿಯಲ್ಲೂ ಪೃಥಿವ್ಯಾದಿಗಳು ಯಾವವೂ ಇರಲಿಲ್ಲ.

೪೫. ಸ್ವಪ್ನನಗರದಲ್ಲಿ ಭೂಮಿಯನ್ನು ನಾನಾಭಾಗಗಳನ್ನು ಮಾಡಿದಂತೆ, ಆಗಿ, ಆ ಅಂಗಗಳೇ ಮತ್ತೆ ಜಗತ್ಸ್ವಪ್ನನಗರದಲ್ಲಿ ಪುಷ್ಟತೆಯನ್ನು ಹೊಂದಿ ಭಾರಿಯಾಗಿರುವುವು.

೪೬. ಇಷ್ಟಾದರೂ ಈ ಸರ್ವವೂ, ಈ ಪ್ರಜೆಗಳು, ದ್ವೈತ, ಐಕ್ಯವಿಲ್ಲದ ಚಿನ್ಮಾತ್ರವಾದ ಆಕಾಶವೇ ಸರಿ. ಆಕಾಶದಲ್ಲಿ ಮನೋಹರವಾಗಿ ಕಾಣುವ ರಂಜನೆಯು ಆಕಾಶದಿಂದ ಬೇರೆಯೇನು? ಅದೂ ಆಕಾಶವೇ!

೪೭. ಚಿತ್ತೆಂಬ ಚಂದ್ರಿಕೆಯು ಶೀತಲವಾಗಿ ಆಹ್ಲಾದಕಾರಿಣಿಯಾಗಿ ಚತುರ್ದಿಕ್ಕುಗಳಲ್ಲೂ ವ್ಯಾಪಿಸಿ ಚೇತನವೆಂಬ ಬೆಳಕನ್ನು ಹರಡುತ್ತಿರುವುದು. ಅದರ ಕಚನವೇ ಈ ಜಗತ್ತು.

೪೮. ಚಿನ್ಮಯವಾದ ಆಕಾಶದಲ್ಲಿ ಈಗಲೂ ಸರ್ಗದರ್ಶನವಾಗುತ್ತಿರುವುದು. ಚಿತ್ತಿನ ಉನ್ಮೇಷದಿಂದ ಸರ್ಗಾದಿಯು; ಚಿತ್ತಿನ ನಿಮೇಷದಿಂದ ಸರ್ಗದ ಪ್ರಲಯವು. ಅದರಿಂದ ಆಕಾಶಾತ್ಮವಾಗಿ ಉದಯ, ಅಸ್ತಗಳು ನಡೆಯುತ್ತಿರುವುವು.

ಯದ್ಯಥಾ ವೇತ್ತಿ ಯತ್ರತ್ಸತ್ತಥೈವಾನುಭವತ್ಯಲಂ ।
ಯಸ್ಮಾತ್ಸಮಸ್ತಂ ಚಿನ್ಮಾತ್ರಂ ಕಿಮಿವಾತ್ರ ನ ವಿದ್ಯತೇ ॥೪೯॥

ಶರದಾಕಾಶವಿಶದಂ ಸಂವಿದಃ ಸೌಮ್ಯಮಾನಸಾಃ ।
ಅಸಂತ ಏವ ತಿಷ್ಠಂತಿ ಸಂತೋಽಧಿಗತತತ್ಪದಾಃ ॥೫೦॥

ನಿರ್ಮಾನಮೋಹಾ ಜಿತಸಂಗದೋಷಾಃ ಪ್ರವಾಹಸಂಪ್ರಾಪ್ತನಿಜಾರ್ಥಭಾಜಃ ।
ತಿಷ್ಠಂತಿ ಕಾರ್ಯವ್ಯವಹಾರದೃಷ್ಟ್ಯಾ ನಿರಾಮಯಾ ಯಂತ್ರಮಯಾ ಇವೈತೇ ॥೫೧॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ "ನಾಸ್ತಿಕ್ಯ
ನಿರಾಕರಣಂ" ನಾಮ ಶತತಮಃ ಸರ್ಗಃ

---

೪೯. ಜೀವನು ಯಾವುದನ್ನು ಹೇಗೆ ತಿಳಿಯುವನೋ ಅದನ್ನು ಹಾಗೆಯೇ ಸತ್ ಎಂದು ಅನುಭವಿಸುವನು. ಏಕೆಂದರೆ ಸಮಸ್ತವೂ ಚಿನ್ಮಾತ್ರವೇ! ಚಿನ್ಮಾತ್ರದಲ್ಲಿ ಯಾವುದುತಾನೇ ಇಲ್ಲ?

೫೦. ಸೌಮ್ಯಮಾನಸರಾದ ಶುದ್ಧಸಂವಿತ್ತುಗಳು ಅಧಿಗತತತ್ಪದರಾಗಿ ಸಂತರಾಗಿ ಇರುವರು. ಅಸಂತರು ವಿಕ್ಷುಬ್ಧಚಿತ್ತರಾಗಿ ಸಂಸಾರಿಗಳಾಗಿ ಇರುವರು. ಇದು ಶರದಾಕಾಶವಿಶದವು.

೫೧. ಅಂತಹ ಸಂತರು ಮಾನ ಮೋಹಗಳನ್ನೂ ಮೀರಿದವರು; ಸಂಗದೋಷಗಳನ್ನು ಗೆದ್ದವರು; ಪ್ರವಾಹರೂಪವಾಗಿ ಹರಿದುಬಂದುದನ್ನೇ ತಮ್ಮದೆಂದು ನಿರ್ವಹಿಸುವವರು. ಕಾರ್ಯವ್ಯವಹಾರಗಳಲ್ಲಿ ಸೇರಿದ್ದರೂ ಯಂತ್ರಮಯರಾದವರಂತೆ ನಿರಾಮಯರಾಗಿಯೇ ಇರುವರು.

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ನಾಸ್ತಿಕ್ಯನಿರಾಕರಣ" ಎಂಬ
ನೂರನೆಯ ಸರ್ಗವು

---

# ಏಕಾಧಿಕಶತತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ—

ಚಿನ್ಮಾತ್ರಮೇವ ಪುರುಷಸ್ತದೇವೇತ್ಥಮವಸ್ಥಿತಂ ।
ಚಿನ್ಮಾತ್ರವ್ಯತಿರೇಕೇಣ ಕಿಮನ್ಯದುಪಪದ್ಯತೇ ॥೧॥

ತಚ್ಛಾವದಾತಮಾಕಾಶಂ ತನ್ಮಯೇ ದ್ರಷ್ಟೃ ದೃಶ್ಯತೇ ।
ತಾವನ್ಮಾತ್ರಂ ಜಗದತೋ ಹೇಯೋಪಾದೇಯಧೀಃ ಕುತಃ ॥೨॥

ನ ವಿದ್ಯತೇ ಪರೋ ಲೋಕೋ ಬಾರ್ಹಸ್ಪತ್ಯಸ್ಯ ಯಸ್ಯ ತು ।
ವಿದೋಽನ್ಯತ್ರಾಸ್ಯ ಕಿಂ ಸಾರಂ ರಾಗದ್ವೇಷಾವತಃ ಕುತಃ ॥೩॥

---

# ನೂರೊಂದನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು—

೧. ಪುರುಷನು ಚಿನ್ಮಾತ್ರನು. ಜಗತ್ತೂ ಚಿನ್ಮಾತ್ರವಾಗಿಯೇ ಇರುವುದು. ಚಿನ್ಮಾತ್ರವಲ್ಲದ ಇನ್ನೇನುತಾನೇ ಇದ್ದೀತು ?

(ಸರ್ವವಾದಿನಾಮಪಿ ಚಿನ್ಮಾತ್ರಮೇವ ತತ್ತ್ವಮಿತ್ಯವಗಮೇ ಯಥಾ ಅಭಯ ಪ್ರತಿಷ್ಠಾಪ್ರಾಪ್ತಿಸ್ತಥಾ ವರ್ಣಯಿತುಂ ಪೀಠಿಕಾಂ ರಚಯತಿ । – । ಇತ್ಥಮನೇನ ಶಾಣಾವಾದಿ ಪರಿಕಲ್ಪಿತಸ್ಥಾಯಿ ಕ್ಷಣಿಕಾದಿರೂಪೇಣ ಜನ್ಮ ಮರಣ ಭಯ ಶೋಕಾದಿ ರೂಪೇಣ ಚ ॥ ತಾ. ಪ್ರ.)

೨. ಜಗತ್ತು ಎಂಬುದು ಶುದ್ಧವೂ ನಿರ್ಮಲವೂ ಆದ ಆಕಾಶವು. ಚಿನ್ಮಯ ದಲ್ಲಿ ದ್ರಷ್ಟೃವು ಕಾಣಿಸಿಕೊಳ್ಳುವನು. ದ್ರಷ್ಟೃವಿನ ದೃಶ್ಯವೇ ಜಗತ್ತು. ಹೀಗಿರಲು ಹೇಯ-ಉಪಾದೇಯ ಬುದ್ಧಿಯು ಎಲ್ಲಿಯದು ?

೩. ಬಾರ್ಹಸ್ಪತ್ಯ (ಚಾರ್ವಾಕ) ನಿಗೆ ಪರಲೋಕವಿಲ್ಲ. ಚಾರ್ವಾಕನಿಗೆ ಕ್ಷಣಿಕವಾದ ಜ್ಞಾನಸಂತಾನವನ್ನು ಬಿಟ್ಟು ಇನ್ನೆಲ್ಲವೂ ಆಸಾರವು. ಅದರಿಂದ ಚಾರ್ವಾಕನಿಗೂ ರಾಗದ್ವೇಷಗಳಿಲ್ಲ.

ಇಷ್ಟಾನಿಷ್ಟದೃಶೋ ರಾಗದ್ವೇಷದೋಷಾಃ ಕಿಮಾತ್ಮಕಾಃ ।
ಸಂವಿದ್ವ್ಯೋಮಮಯೇ ಸ್ವಪ್ನೇ ಜಗದಾಖ್ಯೇಽಙ್ಗ ಕಥ್ಯತಾಂ ॥೪॥

ಇದಂ ಹೇಯಮುಪಾದೇಯಂ ವೇತ್ತಿ ಸಂವಿತ್ಸ್ವಮಾತ್ಮನಿ ।
ನಿರ್ಮಲೇ ನಿರ್ಮಲಂ ಭಾತಿ ಕೇವಾತ್ರ ತದತದ್ದೃಶೌ ॥೫॥

---

(ಹೇಯೋಪಾದೇಯಾಭಾವೇನ ರಾಗದ್ವೇಷಪ್ರಸಕ್ತಿರಿತಿ ವಿಜ್ಞಾನೈಕಸ್ಕಂಧವಾದಿನೋ ಬೌದ್ಧಸ್ಯಾಪಿ ಸಂಮತಂ, ಕಿಂತು ಕ್ಷಣಿಕವಿಜ್ಞಾನಮಸಾರಮಿತ್ಯೇವ ತನ್ಮತಮುಪೇಕ್ಷಿತಮಿತ್ಯಾಹ—ಬಾರ್ಹಸ್ಪತ್ಯಸ್ಯ ಬೃಹಸ್ಪತಿ ಪ್ರಣೀತ ಬುದ್ಧಶಾಸ್ತ್ರಾನುಸಾರಿಣೋ ಯಸ್ಯವಾದಿನಃ ಕ್ಷಣಿಕ ವಿಜ್ಞಾನಾತ್ ಪರೋಽನ್ಯೋ ಲೋಕೋ ಜಗನ್ನವಿದ್ಯತೇ ತಸ್ಯ । ಅತೋ ನಿರ್ವಿಷಯತ್ವಾದೇವ ರಾಗದ್ವೇಷೌ ಕುತಃ ನ ಪ್ರಸಜ್ಜೇತೇ ಏವ ಕಿಂತು ವಿದಃ ಅನ್ಯತ್ ಕಿಂ ಸಾರಂ ನಿತ್ಯಂ ಪುರುಷಾರ್ಥರೂಪಂ ಯತ್ಸಂಭಾವನಯಾ ವಿದಃ ಶಾಶ್ವತತ್ವಂ ಸನೇಚ್ಛತಿ । ರಜಿಪುತ್ರಾಣಾಂ ಅಸುರಾಣಾಂ ಚ ವಿಮೋಹನಾಯ ಬೃಹಸ್ಪತಿನಾಪಿ ಬುದ್ಧಶಾಸ್ತ್ರಂ ಪ್ರಣೀತಮಿತಿ ಮತ್ಸ್ಯಪುರಾಣಾದೌ ಪ್ರಸಿದ್ಧಂ —ತಾ. ಪ್ರ.)

೪. ಇಷ್ಟಾನಿಷ್ಟದೃಷ್ಟಿಗಳಿಂದಲೇ ರಾಗದ್ವೇಷಗಳೆಂಬ ದೋಷಗಳು. ಸಂವಿದಾಕಾಶರೂಪವಾದ ಜಗತ್ತೆಂಬ ಕನಸಿನಲ್ಲಿ ಈ ದೋಷಗಳ ಸ್ವರೂಪವೇನು ಹೇಳು.

(ಕೂಟಸ್ಥಸಂವಿದ ಏವ ವಿವರ್ತರೂಪಃ ಸ್ವಪ್ನಃ ಜಗದಿತಿ ಅಸ್ಮತ್ ಸಿದ್ಧಾಂತೇತು ಸುತರಾಂ ನ ರಾಗದ್ವೇಷ ಪ್ರಸಕ್ತಿರಿತ್ಯಾಹ —ತಾ. ಪ್ರ.)

೫. ಸಂವಿತ್ತೇ ತನ್ನಲ್ಲಿಯೇ ಇದು ಹೇಯ, ಇದು ಉಪಾದೇಯ, ಎಂದು ಕೊಳ್ಳುವುದು. ಆದರೂ ನಿರ್ಮಲವಾದ ಆಕಾಶದಲ್ಲಿ ನಿರ್ಮಲವಾದ ಆಕಾಶವು ತೋರುವಾಗ ಅತತ್ ಆದ ಈ ಹೇಯೋಪಾದೇಯಗಳು ಎಲ್ಲಿಯವು ?

(ಅಸ್ತು ವಾ ಹೇಯೋಪಾದೇಯಾದಿ ವಿಕಲ್ಪಾಧ್ಯಾಸಃ, ತಥಾಪಿ ಸಂವಿದಾಕಾಶೇನ ಕಶ್ಚಿದ್ವಿಶೇಷ ಇತ್ಯಾಶಯೇನಾಹ —ತಾ. ಪ್ರ.)

ಸಂವಿನ್ನರೋಽಮರೋ ನಾಗಃ ಸಂವಿತ್ಸ್ಥಾವರಜಂಗಮಮ್ ।
ಭಾವಾಭಾವಾದಯೋಸ್ಯಾಬ್ಧೇಸ್ತರಂಗಾವರ್ತವೃತ್ತಯಃ ॥೬॥

ಸಂವಿದಾಕಾಶಮೇವಾಹಂ ಭವಾನಪಿ ಜನಾ ಅಪಿ ।
ಮ್ರಿಯಾಮಹೇ ನೋ ಕದಾಚಿತ್ಸಂವಿತ್ಕಿಲ ಕದಾ ಮೃತಾ ॥೭॥

ಸಂವಿದೋ ನಾಸ್ತಿ ಸಂವೇದ್ಯಂ ಸ್ವಯಂ ಸಂವೇದ್ಯತಾಮಿತಾ ।
ಚಿತ್ತ್ವಾದಹೋ ವಿಶಾಲಾಕ್ಷ ದ್ವಿತ್ವೈಕತ್ವೇ ಕ್ವ ವಾ ಸ್ಥಿತೇ ॥೮॥

ಸಂವಿನ್ಮಾತ್ರಾದೃತೇ ತಸ್ಮಾದ್ಭೂತಂ ಕಿಮಿವ ಕಥ್ಯತಾಮ್ ।
ಕಥ್ಯತಾಂ ಮ್ರಿಯತೇ ತಚ್ಚೇತ್ತದದ್ಯೇಮೇ ಕುತೋ ವಯಮ್ ॥೯॥

---

೬. ನರ ಅಮರ ನಾಗಗಳೂ ಸಂವಿತ್ತೇ! ಸಂವಿತ್ತೇ ಸ್ಥಾವರಜಂಗಮಗಳು. ಭಾವ, ಅಭಾವ, ಆದಿಗಳೆಲ್ಲವೂ ಈ ಸಂವಿತ್ಸಮುದ್ರದ ತರಂಗ, ಆವರ್ತ ಮೊದಲಾದ ವೃತ್ತಿಗಳು.

೭. ನಾನೂ ನೀನೂ ಈ ಜನಗಳೂ ಎಲ್ಲವೂ ಸಂವಿದಾಕಾಶವೇ! ನಾವು ಸಾಯುವುದು ಎನ್ನುವುದು ಇಲ್ಲವೇಇಲ್ಲ; ಸಂವಿತ್ತು ಮೃತವಾದುದೂ ಉಂಟೇನು?

೮. ಸಂವಿತ್ತಿಗೆ ಸಂವೇದ್ಯವೆಂಬುದೊಂದು ಬೇರೆ ಇಲ್ಲ; ಏಕೆಂದರೆ ತಾನೇ ಸಂವೇದ್ಯವಾಯಿತು. ಆದರಿಂದ, ಎಲೈ ವಿಶಾಲಾಕ್ಷನೆ, ಚಿತ್ತ್ವದಿಂದ ಬೇರೆಯಾದ ದ್ವಿತ್ವಾ, ಏಕತ್ವಾ, ಗಳು ಎಲ್ಲಿಯುಂಟು?

(ಸರ್ವಸ್ಯ ಸಂವಿತ್ತ್ವೇ ಸಂವೇದ್ಯಮನ್ಯನ್ನ ಪರಿಶಿಷ್ಯತೇ । ಸ್ವಸ್ಯಾಃ ಸ್ವಸಂವೇದ್ಯತಾಕಲ್ಪನಾ ತು ಸ್ವಸ್ಯ ಸ್ವಸ್ಕಂಧಾರೋಹಣ ಕಲ್ಪನಾ ಕಲ್ಪೇತ್ಯಾಹ—ಸ್ವಯಮೇವಹೇತ್ ಸಂವೇದ್ಯತಾಂ ಇತಿ । ಪ್ರಾಪ್ತಾ ಅತಶ್ಚಿತ್ತತ್ತ್ವಾದನ್ಯತ್ ಸಂವೇದ್ಯತಾಲಕ್ಷಣ ಕ್ರಿಯಾಕರ್ಮಭೇದರೂಪಂ ದ್ವಿತ್ವಂ ತದ್ವ್ಯಾವೃತ್ತಮೇಕತ್ವಂ ವಾ ಕ್ವ ಸ್ಥಿತೇ —ತಾ. ಪ್ರ.)

೯. ಆದರಿಂದ ಸಂವಿನ್ಮಾತ್ರವಲ್ಲದ ಭೂತವು ಇನ್ನು ಯಾವುದುಂಟೋ ಹೇಳು. ಇದ್ದರೂ ಅದು ಸಾಯುವುದೂ ಉಂಟೇನೋ ಹೇಳು. ಹೀಗಿರಲು ಇವು ನಾವೂ ಸಾಯುವುದೆಂತು?

(ಭೂತಂ ನಿತ್ಯಂ ಸದ್ವಸ್ತು! ಕುತೋ ವಯಂ ಜೀವಾಮ ಇತಿಶೇಷಃ–ತಾ. ಪ್ರ)

ವಾದಿನಃ ಸೌಗತಾದ್ಯಾ ಯೇ ಯೇ ಲೋಕಾಯತಿಕಾದಯಃ ।
ಸಂವಿದಾಕಾಶಮುತ್ಸೃಜ್ಯ ಯನ್ಮಯಂತೇ ತದುಚ್ಯತಾಂ ॥೧೦॥

ಸಂವಿದಾಕಾಶಮೇವೈತತ್ಕೇನಚಿದ್ಬ್ರಹ್ಮ ಕಥ್ಯತೇ ।
ಕೇನಚಿತ್ಪ್ರೋಚ್ಯತೇ ಜ್ಞಾನಂ ಕೇನಚಿಚ್ಛೂನ್ಯಮುಚ್ಯತೇ ॥೧೧॥

ಕೇನಚಿನ್ಮದಶಕ್ತ್ಯಾಖ್ಯಂ ಕೇನಚಿತ್ಪುರುಷಾಭಿಧಂ ।
ಕೇನಚಿಚ್ಚ ಚಿದಾಕಾಶಂ ಶಿವ ಆತ್ಮಾ ಚ ಕೇನಚಿತ್ ।೧೨॥

ಚಿನ್ಮಾತ್ರಮೇವಮಪ್ಯುಕ್ತಂ ಯಾತಿ ನ ಕ್ವಚಿದನ್ಯತಾಂ ।
ಯಸ್ಮಾತ್ಸ್ವಯಂ ತದೇವೈವಮಾತ್ಮಾನಂ ವೇತ್ತಿ ನೇತರತ್ ॥೧೩॥

---

೧೦. ಸೌಗತರು ಮೊದಲಾದವರು, ಲೋಕಾಯುತಿಕರು ಮೊದಲಾದವರು, ಈ ವಾದಿಗಳೆಲ್ಲರೂ ಸಂವಿದಾಕಾಶವನ್ನು ಬಿಟ್ಟು ಇನ್ನೇನು ಹಿಡಿದಿರುವರು ಅದನ್ನಾದರೂ ಹೇಳು.

೧೧. ಸಂವಿದಾಕಾಶವನ್ನೇ ಕೆಲವರು ಬ್ರಹ್ಮವೆಂದೂ, ಕೆಲವರು ಜ್ಞಾನವಿಜ್ಞಾನವೆಂದೂ, ಕೆಲವರು ಶೂನ್ಯವೆಂದೂ ಹೇಳುವರು.

೧೨. ಕೆಲವರು ಇದು ಮದಶಕ್ತಿಯಂತೆ ಎನ್ನುವರು ; ಕೆಲವರು ಪುರುಷವೆನ್ನುವರು ; ಕೆಲವರು ಚಿದಾಕಾಶವು ಎನ್ನುವರು; ಕೆಲವರು ಶಿವನಾದ ಆತ್ಮಾ ಎನ್ನುವರು.

( ಕೇನ ಚಿದ್ದೇಹಾತ್ಮವಾದಿನಾ ಮದಿರಾಮದಶಕ್ತ್ಯಾಖ್ಯಂ ದೇಹಾಕಾರ ಪರಿಣತಭೂತ ಧರ್ಮಭೂತಂ। ಪುರುಷಾಭಿದಾ ಸಾಂಖ್ಯೇನ। ಚಿದಾಕಾಶಾ ಯೋಗಿನಾ । ಶಿವ ಈಶ್ವರ ಆತ್ಮಾ ಅಣುರ್ಜೀವಶ್ಚೇತಿ ಶೈವೇನ–ತಾ. ಪ್ರ )

೧೩. ಹೀಗೆ ಚಿನ್ಮಾತ್ರವನ್ನು ನಾನಾ ನಾಮಗಳಿಂದ ಕರೆದ ಮಾತ್ರಕ್ಕೇ ಅದು ಬೇರೆಯಾಗುವುದಿಲ್ಲ. ಏತಕ್ಕೆಂದರೆ ತಾನೇ ಎಲ್ಲವೂ ಆಗಿರುವುದು . ತಾನೇ ತನ್ನನ್ನೇ ತಿಳಿಯುವುದೇ ಹೊರತು ಅನ್ಯವನ್ನಲ್ಲ.

ಚೂರ್ಣತಾಂ ಯಾಂತು ಮೇಽಂಗಾನಿ ಸಂತು ಮೇರೂಪಮಾನಿ ಚ ।
ಕಾ ಕ್ಷತಿಃ ಕಾ ಚ ವಾ ವೃದ್ಧಿಶ್ಚಿದ್ರೂಪವಪುಷೋ ಮಮ ॥೧೪॥

ಮೃತಾಃ ಪಿತಾಮಹಾದ್ಯಾಶ್ಚಿನ್ನ ಮೃತಾ ಸಾ ಮ್ರಿಯೇತ ಚೇತ್ ।
ತಜ್ಜನ್ಮನ್ಯೈವ ನಾಮ ಸ್ಯಾದಸ್ಮಾಕಂ ಮೃತಸಂವಿದಾಂ ॥೧೫॥

ನ ಜಾಯತೇ ನ ಮ್ರಿಯತೇ ಸಂವಿದಾಕಾಶಮಕ್ಷಯಂ ।
ಭವೇತ್ಕಥಂ ಕಥಯ ಕಿಂ ಕಿಲಾಕಾಶಸ್ಯ ಸಂಕ್ಷಯಃ ॥೧೬॥

ಜಗದ್ರೂಪೈಕಕಚನಮವಿನಾಶಿ ಚಿದಂಬರಂ ।
ಉದಯಾಸ್ತಮಯೋನ್ಮುಕ್ತಂ ಸ್ಥಿತಮಾತ್ಮನಿ ಕೇವಲಂ ॥೧೭॥

---

೧೪. ನಾನು ಚಿದ್ರೂಪದೇಹಿಯಾಗಿರಲು ನನ್ನ ಅಂಗಗಳು ಚೂರ್ಣವಾಗಿ ಹೋಗಲಿ ; ಅಥವಾ ಮೇರುವಿನಷ್ಟು ಆಗಲಿ. ಚೂರ್ಣವಾದರೆ ಹಾನಿಯೇನು : ವೃದ್ಧಿಯಾದರೆ ಲಾಭವೇನು ?

೧೫. ಪಿತಾಮಹಾದಿಗಳೆಲ್ಲರೂ ಮೃತರಾದರೂ ಚಿತ್ತು ಮೃತವಾಗಲಿಲ್ಲ ; ಚಿತ್ತೂ ಸಾಯುವುದಾದರೆ, ಮೃತಸಂವಿತ್ತುಳ್ಳ ಅವರಿಗೆ ಅದರ ಜನ್ಮವಂತೂ ಆಗುವಂತೆಯೇ ಇಲ್ಲ : ನಮಗೂ ಹಾಗೇ–

(ಅಸ್ಮಾಕಂ ಪಿತಾಮಹಾದ್ಯಾಃ ದೇಹಾಃ ಮೃತಾಸ್ತೇಷಾಂ ಚಿತ್ತು ನ ಮೃತಾ । ಸಾಪಿ ಮ್ರಿಯೇತಚೇತ್ ಮೃತಸಂವಿದಾಂ ತೇಷಾಂ ಪುನರ್ಜನ್ಮೈವ ನ ಸ್ಯಾತ್। ಅಸ್ಮಾಕಮಿತಿ ಅಸ್ಮಾಸ್ವಪಿ ತನ್ನ್ಯಾಯಸಾಮ್ಯಪ್ರದರ್ಶನ ಪರತಯಾ ವಾ ಯೋಜ್ಯಂ –ತಾ. ಪ್ರ.)

೧೬. ಅಕ್ಷಯವಾದ ಸಂವಿದಾಕಾಶವು ಹುಟ್ಟುವುದೂ ಇಲ್ಲ : ಸಾಯುವುದೂ ಇಲ್ಲ : ಆಕಾಶಕ್ಕೆ ಸಂಕ್ಷಯವು ಹೇಗಾಗುವುದು ಅದನ್ನಾದರೂ ಹೇಳು.

೧೭. ಜಗದ್ರೂಪವಾದ ಕಚನವುಳ್ಳ ಚಿದಂಬರವು ಅವಿನಾಶಿಯು, ಅದಕ್ಕೆ ಉದಯವಿಲ್ಲ : ಅಸ್ತವಿಲ್ಲ. ಕೇವಲವಾಗಿ ಆತ್ಮನಲ್ಲಿಯೇ ಇರುವುದು.

ಜಗದ್ಭಾನಂ ದಧದ್ದಾಹಂ ಚಿನ್ನಭಃ ಸ್ಫಟಿಕಾಚಲಃ ।
ಅನಾದಿಮಧ್ಯಪರ್ಯಂತಃ ಸ್ವಚ್ಛ ಆತ್ಮನಿ ತಿಷ್ಠತಿ ॥೧೮॥

ಯಥಾಯಥಾಂಧಕಾರೇಣ ಪ್ರೇಕ್ಷ್ಯಮಾಣಂ ಪ್ರಣಶ್ಯತಿ ।
ಕಿಮಪ್ಯಂಗಾಭ್ರಚಕ್ರಾಭಂ ತಥೇದಂ ವಿಶ್ವಮಾತ್ಮನಿ ॥೧೯॥

ಯಥಾಂಬುಧಿಃ ಸ್ವಯಂ ಯಾತಿ ತೋಯಾದ್ಯಾವರ್ತಕಾದಿಕಂ ।
ಸ್ಥಿತೋ ದಧತ್ತಥೈವೇವಂ ಚಿದಾಕಾಶೋಂಗಮಾತ್ಮನಿ ॥೨೦॥

ಚಿನ್ಮಾತ್ರಮೇವ ಪುರುಷಃ ಖವತ್ಸ ಚ ನ ನಶ್ಯತಿ ।
ಕದಾಚನಾಪಿ ತದ್ವ್ಯರ್ಥಂ ಯನ್ನಶ್ಯಾಮೀತಿ ಶೋಚಿತಾ ॥೨೧॥

---

೧೮. ಜಗದ್ಭಾವವೆಂಬ ದಾಹವನ್ನು ತಳೆದಿರುವ ಚಿದಾಕಾಶವು ಸ್ಫಟಿಕ ಪರ್ವತದಂತೆ ಆದಿ ಮಧ್ಯ ಅಂತಗಳಿಲ್ಲದೆ, ಸ್ವಚ್ಛವಾಗಿ ಸ್ವಚ್ಛನಾದ ಆತ್ಮನಲ್ಲಿ ಉಳಿದಿರುವುದು.

( ಚಿನ್ನಭೋ ಲಕ್ಷಣಃ ಸ್ಫಟಿಕಾಚಲಃ ಸ್ವಾತಃ ಸ್ವಯಮೇವ ಜಗದ್ಭಾನಂ ದಧತ್ ಸ್ವತತ್ವ ಸಾಕ್ಷಾತ್ಕಾರವಹ್ನಿನಾ ತದ್ದಾಹಂ ವಿಧಾಯ ಸ್ವಚ್ಛ ಆತ್ಮನಿ ತಿಷ್ಠತಿ–ತಾ. ಪ್ರ )

೧೯. ರಾತ್ರಿಯ ಹೊತ್ತು ಅಂಧಕಾರವು ಸಂಪಾದಿಸಿದ್ದ ಅಭ್ರಚಕ್ರವು ಬೆಳಗಾಗುವಾಗ ಹೇಗೆ ನೋಡು ನೋಡುತ್ತಾ ನಾಶವಾಗುವುದೋ ಹಾಗೆಯೇ ಆತ್ಮಜ್ಞಾನವಾಗುವಾಗ ವಿಶ್ವವೂ ನಾಶವಾಗುವುದು.

೨೦. ಸಮುದ್ರವು ತಾನಾಗಿ ಪ್ರವಾಹ ತರಂಗ ಆವರ್ತ ಫೇನಾದಿಗಳಾಗುವಂತೆ, ಚಿದಾಕಾಶವೂ ತನ್ನಲ್ಲಿಯೇ ಇದ್ದುಕೊಂಡು ಜಗತ್ತಾಗುವುದು.

೨೧. ಚಿನ್ಮಾತ್ರನಾದ ಪುರುಷನು ಆಕಾಶದಂತೆ ಅವಿನಾಶಿಯು. ಆದರಿಂದ ನಶ್ಯಾಮಿ, ನಾಶವಾಗುವೆನು ಎಂದು ಶೋಕಿಸುವುದು ಉಂಟಲ್ಲ ಅದು ಯಾವಾಗಲೂ ವ್ಯರ್ಥವೇ ಸರಿ.

ದೇಹಾದ್ದೇಹಾಂತರಪ್ರಾಪ್ತೌ ನವ ಏವ ಮಹೋತ್ಸವಃ ।
ಮರಣಾತ್ಮನಿ ಕಿಂ ಮೂಢಾ ಹರ್ಷಸ್ಥಾನೇ ವಿಷೀದಥ ॥೨೨॥

ಮೃತಶ್ಚೇನ್ನ ಭವೇದ್ಭೂಯಃ ಸೋಽತ್ರಾಪ್ಯುಪಚಯೋ ಮಹಾನ್ ।
ಭಾವಾಭಾವಗ್ರಹೋತ್ಸರ್ಗಜ್ವರಃ ಪ್ರಶಮಮಾಗತಃ ॥೨೩॥

ಮರಣಂ ಜೀವಿತಂ ತಸ್ಮಾನ್ನ ದುಃಖಂ ನ ಸುಖಂ ಯತಃ ।
ನಾಸ್ತ್ಯೇವೈತಚ್ಚಿದಾಕಾಶಃ ಕಿಲೇತ್ಥಮಭಿಜೃಂಭತೇ ॥೨೪॥

ಮೃತಸ್ಯ ದೇಹಲಾಭಶ್ಚೇನ್ನವ ಏವ ತದುತ್ಸವಃ ।
ಮೃತಿರ್ನಾಶೋ ಹಿ ದೇಹಸ್ಯ ಸಾ ಮೃತಿಃ ಪರಮಂ ಸುಖಂ ॥೨೫॥

---

೨೨. ಅದರಿಂದ ದೇಹದಿಂದ ದೇಹಾಂತರಕ್ಕೆ ಹೋಗುವುದು ಹೊಸದೊಂದು ಮಹೋತ್ಸವವಾಗಬೇಕು : ಹರ್ಷಸ್ಥಾನವಾದ ಮರಣದಲ್ಲಿ ಮೂಢರು ಅದೇಕೆ ವಿಷಾದಪಡುವರು ?

೨೩. ಮತ್ತೆಯೂ ಸಾಯುವುದಾದರೆ ಅದೂ ಕೂಡ ಮಹತ್ತಾದ ವೃದ್ಧಿಯೇ! ಭಾವ, ಅಭಾವ, ಗ್ರಹ, ಉತ್ಸರ್ಗ ಎಂಬ ಜ್ವರವು ಆಗ ಪ್ರಶಾಂತವಾಗುವುದಲ್ಲವೆ ?

( ಯದಿ ಪುನರ್ಜನ್ಮ ನಾಸ್ತ್ಯೇವೇತಿ ವೋ ಭ್ರಮಸ್ತಥಾಪಿ ವಿಷಾದೋ ನೋಚಿತಃ । ಮರಣಾದೇವ ಸರ್ವಾನರ್ಥಪ್ರಾಪ್ತಿ ನಿವಾರಣಾದಿತ್ಯಾಹ–ತಾ. ಪ್ರ )

೨೪. ಮರಣವಾಗಲಿ ಜೀವಿತವಾಗಲಿ ಅದರಿಂದ ಸುಖವೂ ಇಲ್ಲ. ದುಃಖವೂ ಇಲ್ಲ: ಅಷ್ಟೇ ಅಲ್ಲ : ಅವು ಇಲ್ಲವೂ ಇಲ್ಲ : ಈ ಚಿದಾಕಾಶವು ಯಾವುದುಂಟೋ ಅದೇ ಹೀಗೆ ಅಭಿಜೃಂಭಣ ಮಾಡುವುದು.

೨೫ ಮೃತನಿಗೆ ದೇಹಲಾಭವುಂಟು ಎಂದರೆ ಅದು ಹೊಸದೊಂದು ಉತ್ಸವವು: ಮೃತಿಯು ದೇಹದ ನಾಶವು ಎನ್ನುವುದಾದರೆ ಅದೂ ಪರಮ ಸುಖವು.

(ಹಿ ಯಸ್ಮಾನ್ಮೃತಿರ್ಜರಾರೋಗಾದಿಗ್ರಸ್ತಸ್ಯ ಕಾರಾಗೃಹಕಲ್ಪಸ್ಯ ಪೂರ್ವದೇಹಸ್ಯ ನಾಶಃ–ತಾ. ಪ್ರ.)

ಮೃತಿರತ್ಯಂತನಾಶಶ್ಚೇತ್ತದ್ಭವಾಮಯಸಂಕ್ಷಯಃ ।
ಭೂಯಃ ಶರೀರಲಾಭಶ್ಚೇನ್ನವ ಏವ ತದುತ್ಸವಃ ॥೨೬॥

ಕುಕರ್ಮಭ್ಯೋಽಥ ಭೀತಿಶ್ಚೇತ್ತಾಸ್ಸ ಸಮೋಹ ಪರತ್ರ ಚ ।
ತಾನಿ ಮಾಕಾರ್ಷ ಭೋಸ್ತಸ್ಮಾಲ್ಲೋಕದ್ವಿತಯಸಿದ್ಧಯೇ ॥೨೭॥

ಮರಿಷ್ಯಾಮಿ ಮರಿಷ್ಯಾಮಿ ಮರಿಷ್ಯಾಮೀತಿ ಭಾಷಸೇ ।
ಭವಿಷ್ಯಾಮಿ ಭವಿಷ್ಯಾಮಿ ಭವಿಷ್ಯಾಮೀತಿ ನೇಕ್ಷಸೇ ॥೨೮॥

ಕ್ವ ನಾಮ ಜನ್ಮಮರಣೇ ಕ್ವ ಭವಾಭವಭೂಮಯಃ ।
ಸಂವಿದಾತ್ಮಕಮೇವೇದಂ ವ್ಯೋಮ ವ್ಯೋಮ್ನಿ ವಿವರ್ತತೇ ॥೨೯॥

---

೨೬. ಮೃತಿಯು ಅತ್ಯಂತ ನಾಶವೆನ್ನುವುದಾದರೆ, ಅದೂ ಕ್ಷೇಮವೇ! ಏಕೆಂದರೆ ಅದು ಭವರೋಗ ಶಾಂತಿಯಾಯಿತು: ಹಾಗಿಲ್ಲ, ಮತ್ತೆ ಶರೀರವು ಬರುವುದು ಎನ್ನುವುದಾದರೆ, ಲಾಭವು ಉತ್ಸವವು ತಾನೇ?

೨೭. ದುಷ್ಕರ್ಮಗಳನ್ನು ಮಾಡಿರುವೆನೆಂದು ಭಯಪಡುವುದಾದರೆ, ಆ ಭಯವು ಇಹಪರಗಳೆರಡಕ್ಕೂ ಅನ್ವಯಿಸುವುದು. ಅದರಿಂದ ಆ ದುಷ್ಕರ್ಮಗಳನ್ನೇ ಮಾಡಬೇಡ. ಆಗ ಈ ಲೋಕ ಪರಲೋಕಗಳೆರಡರಲ್ಲೂ ನೀನು ಸುಖವಾಗಿರುವೆ.

೨೮. ಮರಿಷ್ಯಾಮಿ ಸಾಯುವೆನು, ಸಾಯುವೆನು, ಸಾಯುವೆನು, ಎನ್ನುವೆಯಲ್ಲಾ; ಭವಿಷ್ಯಾಮಿ, ಹುಟ್ಟಿಬರುವೆನು, ಬರುವೆನು, ಬರುವೆನು, ಎಂಬುದನ್ನೇಕೆ ನೋಡುವುದಿಲ್ಲ?

೨೯. ಅದರಿಂದ ಜನ್ಮ ಮರಣಗಳು ಎಲ್ಲುಂಟು? ಭವ ಅಭವ ಭೂಮಿಗಳೆಲ್ಲುಂಟು? ಎಲ್ಲವೂ ಸಂವಿದಾತ್ಮಕವೇ ಆಗಿರಲು, ಆಕಾಶವು ಆಕಾಶದಲ್ಲಿ ವಿವರ್ತವಾಗುವುದು.

ಸಂವಿದಾಕಾಶಮಾತ್ರಾತ್ಮಾ ಪಿಬ ಭುಂಕ್ಷ್ವಾಸ್ಸ್ವ ನಿರ್ಮಮಃ ।
ಆಕಾಶಕೋಶಕಾಂತಸ್ಯ ಕುತ ಇಚ್ಛೋದಯಸ್ತವ ॥೩೦॥

ಸ್ವಪ್ರವಾಹಬಲೋದ್ವ್ಯಕ್ತ ದೇಶಕಾಲವಶಾದಿತಾನ್ ।
ಭವಾನ್ಭುಂಕ್ತೇಽಭಯೋ ಭವ್ಯಃ ಪಾವನಾನ್ಪಾವನಾದಪಿ ॥೩೧॥

ಮಧ್ಯಮಧ್ಯಗತಾನ್ದೋಷಾನ್ದೇಶಕಾಲವಶೋದಿತಾನ್ ।
ಅನಾಧೃತ್ಯಾಂತರೇವಾಸ್ತೇ ಸುಪ್ತಧೀರವಹೇಲಯನ್ ॥೩೨॥

---

೩೦. ಸಂವಿದಾಕಾಶಸ್ವರೂಪನಾದ ಆತ್ಮನೇ, ಕುಡಿ, ತಿನ್ನು, ಇರು; ಆದರೆ ಅದರಲ್ಲಿ ಮಮತ್ವವನ್ನಿಡಬೇಡ. ಆಕಾಶಕೋಶದಂತಿರುವ ನಿನಗೆ ಇಚ್ಛೋದಯವು ಎಲ್ಲಿಂದ ಬಂತು ?

೩೧. ಸ್ವಪ್ರವಾಹಬಲದಿಂದ ಹುಟ್ಟಿದ ದೇಶಕಾಲಗಳಿಂದ ವ್ಯಕ್ತವಾಗುವ ಭಾವಗಳನ್ನು, ಪಾವನಕ್ಕಿಂತ ಪಾವನವಾದವೆಂದು ಭವ್ಯನಾದ ಆತ್ಮನು ಅಭಯನಾಗಿ ಭೋಗಿಸುವನು. (ಎನ್ನು)

(ಪಾವನಾ ಭುಂಕ್ತೇ ನಮನೋ ಮಾಲಿನ್ಯ ವಿಕ್ಷೇಪಹೇತೂ–ತಾ ಪ್ರ.)

೩೨. ಪಾವನ ಭೋಗಗಳ ನಡುವೆ, ಮಧ್ಯ ಮಧ್ಯದಲ್ಲಿ, ದೇಶಕಾಲವಶವಾಗಿ ಸಂಭವಿಸುವ ದೋಷಗಳನ್ನು ಲಕ್ಷಿಸದೆ, ಸುಪ್ತಧೀಯಾಗಿ, ಆಟವಾಡುತ್ತ ಸಮಾಧಿಯಲ್ಲಿದ್ದು ಕಳೆಯುವನು.

(ಮಧ್ಯೇ ಮಧ್ಯೇ ದೇಶಕ್ಷೋಭ ದುರ್ಭಿಕ್ಷಾದಿ ಕಾಲೇಽಸ್ಯಸ್ಯ ನದುಃಖಪ್ರಸಕ್ತಿಸ್ತದಾ ಕ್ವಚಿದೇಕಾಂತ ಪರ್ವತಗುಹಾದೌ ಸಮಾಧಿ ಸುಖಾನುಭವೇನ ತತ್ಕಾಲಾವಹೇಲನ ಸಂಭವಾದಿತ್ಯಾಹ–ಅಂತರ್ನಿರ್ವಿಕಲ್ಪಸಮಾಧೌ ಸುಪ್ತಧೀಃ–ತಾ. ಪ್ರ.)

ನ ದುಃಖಮೇತಿ ಮರಣಾತ್ಸುಖಮೇತಿ ನ ಜೀವಿತಾತ್ ।
ನಾಭಿವಾಂಛತಿ ನ ದ್ವೇಷ್ಟಿ ಸ ತದಾಸ್ತೇ ವಿವಾಸನಃ ॥೩೩॥

ಮರಣಜೀವಿತಜನ್ಮಜರತ್ತೃಣಾನ್ಯವಿಮೃಶನ್ವಿಗತೇಚ್ಛಮವಾಸನಃ ।
ವಿದಿತವೇದ್ಯ ಇಹಾಜ್ಞ ಇವೋದಿತೋ ವಸತಿ ವೀತಭಯಸ್ತ್ವಚಲೋ ಯಥಾ ॥೩೪॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಪರಮೋಪದೇಶೋ
ನಾಮೈಕಾಧಿಕಶತತಮಃ ಸರ್ಗಃ

---

೩೩. ತಿಳಿದವನು ಮರಣದಿಂದ ದುಃಖವನ್ನಾಗಲಿ, ಜೀವಿತದಿಂದ ಸುಖವನ್ನಾಗಲಿ, ಹೊಂದುವುದಿಲ್ಲ. ಅವನು ಬೇಕು ಎನ್ನುವುದಿಲ್ಲ: ಬೇಡ ಎನ್ನುವುದಿಲ್ಲ: ಯಾವಾಗಲೂ ವಿವಾಸನನಾಗಿ ಬ್ರಹ್ಮವೇ ಆಗಿರುವನು.

೩೪. ಮರಣ, ಜೀವಿತ, ಜನ್ಮ ಎಂಬ ಕೊಳೆತ ಹುಲ್ಲುಗಳನ್ನು ಲೆಕ್ಕಿಸದೆ, ಇಚ್ಛಾದಿಗಳಿಲ್ಲದವನಾಗಿ, ಅವಾಸನನಾಗಿ, ವಿದಿತವೇದ್ಯನಾಗಿ, ಇಹದಲ್ಲಿ ಅಜ್ಞನಂತಿದ್ದರೂ ಯಾವಾಗಲೂ ಅಂತಃ ಉದಿತನಾಗಿ, ಪರ್ವತದಂತೆ ಅಚಲನಾಗಿ, ವೀತಭಯನಾಗಿ ಇರುವನು.

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಪರಮೋಪದೇಶ" ಎಂಬ
ನೂರೊಂದನೆಯ ಸರ್ಗವು

# ದ್ವ್ಯಧಿಕಶತತಮಃ ಸರ್ಗಃ

ಶ್ರೀರಾಮ ಉವಾಚಃ—

ಪರಿಜ್ಞಾತೇ ಪರೇ ವಸ್ತುನ್ಯನಾದಿನಿಧನಾತ್ಮನಿ ।
ಸಂಪದ್ಯತೇ ವದ ಬ್ರಹ್ಮನ್ಕೀದೃಶಃ ಪುರುಷೋತ್ತಮಃ ॥೧॥

ಶ್ರೀವಸಿಷ್ಠ ಉವಾಚಃ—

ಶೃಣು ಸಂಪದ್ಯತೇ ಕೀದೃಗ್ಜ್ಞಾತಜ್ಞೇಯೋ ನರೋತ್ತಮಃ ।
ಯಾವಜ್ಜೀವಂ ಕಥಂ ಚೈಷ ಕಿಮಾಚಾರೋಽವತಿಷ್ಠತೇ ॥೨॥

ಉಪಲಾ ಅಪಿ ಮಿತ್ರಾಣಿ ಬಂಧವೋ ವನಪಾದಪಾಃ ।
ವನಮಧ್ಯೇ ಸ್ಥಿತಸ್ಯಾಪಿ ಸ್ವಜನಾ ಮೃಗಪೋತಕಾಃ ॥೩॥

---

# ನೂರೆರೆಡನೆಯ ಸರ್ಗವು

ಶ್ರೀರಾಮನು ಕೇಳಿದನು:—

೧. ಆದಿ ನಿಧನಗಳಿಲ್ಲದ ಪರಮ ವಸ್ತುವನ್ನು ತಿಳಿದುದೇ ಆದರೆ, ಆತನೆಂತಹ ಪುರುಷೋತ್ತಮನಾಗುವನು ? ಅದನ್ನು ಎಲೈ ಬ್ರಹ್ಮನೇ ಹೇಳು.

ಶ್ರೀ ವಸಿಷ್ಠನು ಹೇಳಿದನು—

೨. ಜ್ಞಾತಜ್ಞೇಯನಾದ ನರೋತ್ತಮನು ಹೇಗೆ ಇರುವನು ಎಂಬುದನ್ನೂ ಆತನು ಬದುಕಿರುವವರೆಗೂ ಏನು ಮಾಡುತ್ತಿರುವನು ಎಂಬುದನ್ನೂ ಕೇಳು.

೩. ಆತನು ವನಮಧ್ಯದಲ್ಲಿದ್ದರೂ ಶಿಲೆಗಳು ಮಿತ್ರರಾಗುವುವು: ವನವೃಕ್ಷಗಳು ಬಂಧುಗಳಾಗುವುವು: ಮೃಗಗಳೆಲ್ಲವೂ ಸ್ವಜನರಾಗುವುವು.

(ಸಂಯೋಗ ವಿಯೋಗಾದಿಷು ತುಲ್ಯಾಂತ ಸ್ಥಿತಿರಿತಿ—ತಾ. ಪ್ರ.)

ಆಕೀರ್ಣಂ ಶೂನ್ಯಮೇವಾಸ್ಯ ವಿಪದಶ್ಚಾತಿ ಸಂಪದಃ ।
ಸ್ಥಿತಸ್ಯಾಪಿ ಮಹಾರಾಜ್ಯೇ ವ್ಯಸನಾನ್ಯೇವ ಸೂತ್ಸವಾಃ ॥೪॥

ಅಸಮಾಧಿಃ ಸಮಾಧಾನಂ ದುಃಖಮೇವ ಮಹತ್ಸುಖಂ ।
ವ್ಯವಹಾರೋಽಪಿ ಸನ್ನ್ಯಾಸಂ ಕರ್ಮಾಣ್ಯೇವಾತ್ಮಕರ್ಮತಾ ॥೫॥

ಜಾಗ್ರದೇವ ಸುಷುಪ್ತಸ್ಥೋ ಜೀವನ್ನೇವ ಮೃತೋಽಪಮಃ ।
ಕರೋತಿ ಸರ್ವಮಾಚಾರಂ ನ ಕರೋತಿ ನ ಕಿಂಚನ ॥೬॥

ರಸಿಕೋಽತ್ಯಂತವಿರಸೋ ನಿರ್ಘೃಣೋ ಬಂಧುವತ್ಸಲಃ ।
ನಿರ್ದಯೋಽತ್ಯಂತಕರುಣೋ ವಿತೃಷ್ಣಸ್ತೃಷ್ಣಯಾನ್ವಿತಃ ॥೭॥

---

೪. ತುಂಬಿರುವಿಕೆಯು ಶೂನ್ಯವಾಗಿ, ವಿಪತ್ತು ಅತಿಸಂಪತ್ತುಗಳಾಗಿ, ಮಹಾ ರಾಜ್ಯದಲ್ಲಿದ್ದರೂ ವ್ಯಸನಗಳನ್ನೇ ಮಹೋತ್ಸವಗಳನ್ನಾಗಿ ಕಾಣುತ್ತಿರುವವನು.

೫. ಅಸಮಾಧಿಯೇ ಸಮಾಧಾನವು; ದುಃಖವೇ ಮಹತ್ಸುಖವು. ವ್ಯವಹಾರವೇ ಸನ್ನ್ಯಾಸವು; ಕರ್ಮಗಳು ಅಕರ್ಮವು.

೬. ಜಾಗ್ರತ್ತಿನಲ್ಲಿದ್ದರೂ ಸುಷುಪ್ತದಲ್ಲಿರುವವನು; ಜೀವಿಸುತ್ತಿದ್ದರೂ ಮೃತೋಪಮನಾಗಿರುವವನು; ಸರ್ವ ಆಚಾರಗಳನ್ನೂ ಮಾಡುತ್ತಿದ್ದರೂ ಏನನ್ನೂ ಮಾಡದಿರುವವನು.

(ಸುಷುಪ್ತಸದೃಶೇ ನಿರ್ವಿಕಲ್ಪಾತ್ಮನಿತಿಷ್ಠತೀತಿ ಸುಷುಪ್ತಸ್ಥಃ । ಅಶರೀರಾತ್ಮಭಾವಸ್ಥಿತೇರ್ಮೃತೋಪಮಃ । ಅಕರ್ತ್ರಾತ್ಮ ಪ್ರತಿಷ್ಠತ್ವಾನ್ನ ಕರೋತಿ — ತಾ. ಪ್ರ.)

೭. ರಸಿಕನಾದರೂ ಅತ್ಯಂತ ವಿರಸನು; ನಿರ್ಘೃಣನಾದರೂ ಬಂಧುವತ್ಸಲನು; ನಿರ್ದಯನಾದರೂ ಅತ್ಯಂತ ಕರುಣನು; ವಿತೃಷ್ಣನಾದರೂ ತೃಷ್ಣಾಸಹಿತನು.

ಸರ್ವಾಭಿನಂದಿತಾಚಾರಃ ಸರ್ವಾಚಾರ ಬಹಿಷ್ಕೃತಃ ।
ವೀತಶೋಕಭಯಾಯಾಸಃ ಸಶೋಕ ಇವ ಲಕ್ಷ್ಯತೇ ॥೮॥

ತಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ತು ಸಃ ।
ಪರಮುದ್ವೇಗಮಾಪನ್ನಃ ಸಂಸೃತೌ ರಸಿಕೋಽಪಿ ಸನ್ ॥೯॥

ನಾಭಿನಂದತಿ ಸಂಪ್ರಾಪ್ತಂ ನಾಪ್ರಾಪ್ತಮಭಿವಾಂಛತಿ ।
ಆಸ್ತೇಽನುಭೂಯಮಾನೇಽರ್ಥೇ ನಚ ಹರ್ಷವಿಷಾದಯೋಃ ॥೧೦॥

ದುಃಖಿತೇ ದುಃಖಿತ ಕಥಃ ಸುಖಿತೇ ಸುಖಸಂಕಥಃ ।
ಆಸ್ತೇ ಸರ್ವಾಸ್ವವಸ್ಥಾಸು ಹೃದಯೇನಾಪರಾಜಿತಃ ॥೧೧॥

---

೮. ಸರ್ವರೂ ಅಭಿನಂದಿಸುವಂತಹ ಆಚಾರವುಳ್ಳವನಾದರೂ ಸರ್ವಾಚಾರ ಬಹಿಷ್ಕೃತನಾಗಿ ಶೋಕ ಭಯ ಆಯಾಸಗಳು ಯಾವವೂ ಇಲ್ಲದಿದ್ದರೂ ಸಶೋಕನಂತೆ ಕಾಣುತ್ತಿರುವನು.

೯. ಅವನಿಂದ ಲೋಕಕ್ಕೆ ಯಾವ ಉದ್ವೇಗವೂ ಇಲ್ಲ; ಅವನಿಗೂ ಲೋಕದಿಂದ ಯಾವ ಉದ್ವೇಗವೂ ಇಲ್ಲ; ಆದರೂ ಸಂಸಾರದಲ್ಲಿ ಪರಮೋದ್ವೇಗವನ್ನು ಪಡುವ ರಸಿಕನಾಗಿರುವನು.

(ಉದ್ವೇಗಂ ಭಯಂ —ತಾ. ಪ್ರ.)

೧೦. ಬಂದುದನ್ನು ಅಭಿನಂದಿಸುವುದಿಲ್ಲ; ಬರದುದನ್ನು ವಾಂಛಿಸುವುದಿಲ್ಲ. ಹರ್ಷವಿಷಾದಗಳೆರಡೂ ಇಲ್ಲದವನಾಗಿ, ಅನುಭವಿಸುತ್ತಿರುವ ಅರ್ಥವನ್ನು ಅನುಭವಿಸುವನು.

೧೧. ದುಃಖಪಡುವವರ ಜೊತೆಯಲ್ಲಿ ದುಃಖಿಯಾಗಿ, ಸುಖಪಡುವವರೊಡನೆ ಸುಖಸಂಕಥನಾಗಿ, ಸರ್ವ-ಅವಸ್ಥೆಗಳಲ್ಲಿಯೂ ಮನಸ್ಸಿನಲ್ಲಿ ಅಪರಾಜಿತನಾಗಿ (ಸಹಿಷ್ಣುತೆಯನ್ನು ಬಿಡದೆ) ಇರುವನು.

ಕರ್ಮಣಃ ಸುಕೃತಾದನ್ಯದಸ್ಮೈ ಕಿಂಚಿನ್ನ ರೋಚತೇ ।
ಸ್ವಭಾವ ಏವ ಮಹತಾಂ ನನು ಯನ್ನ ವಿಚೇಷ್ಟಿತಂ ॥೧೨॥

ನಾಲಂಬತೇ ರಸಿಕತಾಂ ನಚ ನೀರಸತಾಂ ಕ್ವಚಿತ್ ।
ನಾರ್ಥೇಷು ವಿಚರತ್ಯರ್ಥೀ ವೀತರಾಗಃ ಸರಾಗವತ್ ॥೧೩॥

ಯಥಾ ಶಾಸ್ತ್ರವ್ಯವಹೃತೇಃ ಸುಖದುಃಖೈಃ ಕ್ರಮಾಗತೈಃ ।
ಅನಾಗತೋಽಪಿ ಚಾಯಾತಿ ನ ಹರ್ಷಂ ನ ವಿಷಾದಿತಾಂ ॥೧೪॥

ಸಂಪ್ರಹೃಷ್ಟಾಶ್ಚ ಲಕ್ಷ್ಯಂತೇ ದುಃಖಿತಾಸ್ತಥಾ ।
ನ ಸ್ವಭಾವಂ ತ್ಯಜಂತ್ಯಂತಃ ಸಂಸಾರಾರಭಟೀನಟಾಃ ॥೧೫॥

ಆತ್ಮೀಯೇಷ್ವರ್ಥಜಾತೇಷು ಮಿಥ್ಯಾತ್ಮಸು ಸುತಾದಿಷು ।
ಬುದ್ಬುದೇಷ್ವಿವ ತೋಯಾನಾಂ ನ ಸ್ನೇಹಸ್ತತ್ತ್ವದರ್ಶಿನಾಂ ॥೧೬॥

---

೧೨. ಕರ್ಮಗಳಲ್ಲಿ ಸುಕೃತವಲ್ಲದೆ ಇನ್ನೇನೂ ಇವನಿಗೆ ರುಚಿಸುವುದಿಲ್ಲ; ಇದು ಮಹಾತ್ಮರ ಸ್ವಭಾವವು; ಅವರು ಬೇಕೆಂದು ಹಾಗೆ ಮಾಡುವುದಿಲ್ಲ.

(ನವಿಚೇಷ್ಟಿತಂ ಅಶಾಸ್ತ್ರೀಯ ಚೇಷ್ಟಾವರ್ಜನಂ ಯತ್ ತನ್ಮಹತಾಂ ಸ್ವಭಾವ ಏವ —ತಾ. ಪ್ರ.)

೧೩. ರಸಿಕತೆಯನ್ನೂ ಅವಲಂಬಿಸುವುದಿಲ್ಲ; ನೀರಸತೆಯನ್ನು ಅವಲಂಬಿಸುವುದಿಲ್ಲ. ಅರ್ಥಗಳಲ್ಲಿ ಅರ್ಥಿಯಾಗಿ ವಿಚಾರಿಸದೆ, ವೀತರಾಗನಾದರೂ ಸರಾಗನಂತೆ ವ್ಯವಹಾರಮಾಡುವನು.

೧೪. ಶಾಸ್ತ್ರಾನುಸಾರವಾಗಿ ವ್ಯವಹಾರಮಾಡುತ್ತ, ವ್ಯವಹಾರಕ್ರಮದಲ್ಲಿ ಲಭಿಸುವ ಸುಖದುಃಖಗಳಿಗೆ ವಶನಾಗದೆ, ಹರ್ಷವಿಷಾದಗಳನ್ನು ಹಚ್ಚಿಕೊಳ್ಳದೆ ಇರುವನು.

೧೫. ಇಂಥವರು ಒಮ್ಮೊಮ್ಮೆ ಸಂಪ್ರಹೃಷ್ಟರಾಗಿ, ಇನ್ನೊಮ್ಮೆ ದುಃಖಿತರಾಗಿ ಕಂಡರೂ ಸಂಸಾರ ರಂಗಮಂಟಪದ ನಟರಾಗಿ ತಮ್ಮ ಅಂತಃಸ್ವಭಾವವನ್ನು ಎಂದಿಗೂ ಬಿಡುವುದಿಲ್ಲ.

೧೬. ತಮ್ಮದೆನ್ನಿಸಿಕೊಂಡಿರುವ ವಸ್ತುಗಳಲ್ಲಿಯೂ ಪುತ್ರಾದಿಗಳಲ್ಲಿಯೂ

ಅಸ್ನೇಹ ಏವ ಸುಘನಸ್ನೇಹಾರ್ದ್ರಹೃದಯೋ ಯಥಾ |
ವತ್ಸಲಾಂ ದರ್ಶಯನ್ವೃತ್ತಿಂ ಜ್ಞಸ್ತಿಷ್ಠತಿ ಯಥಾಕ್ರಮಂ ||೧೭||

ವಾಯೂನಿವ ಪ್ರವಾಹಸ್ಥಾಃ ಸ್ಪೃಶಂತಿ ವಿಷಯಾನ್ಮೃಧಾ |
ದೇಹಸತ್ತಾವಿಷಾನ್ಮೂಢಾ ಲೀಯಂತೇ ವಿಷಯೋದರೇ ||೧೮||

ಬಹಿಃ ಸರ್ವಸಮಾಚಾರಮಂತಃ ಸರ್ವಾರ್ಥಶೀತಲಂ |
ನಿತ್ಯಮಂತರನಾವಿಷ್ಟ ಆವಿಷ್ಟ ಇವ ತಿಷ್ಠತಿ ||೧೯||

ಶ್ರೀರಾಮ ಉವಾಚ—

ಸ್ವರೂಪಮೀದೃಶಂ ತಸ್ಯ ಕೋ ವೇತ್ತಿ ಮುನಿನಾಯಕ |
ವದ ಸತ್ಯಮಸತ್ಯಂ ವಾ ಭವತ್ಯಜ್ಞೋ ಹ್ಯಪೀದೃಶಃ ||೨೦||

---

ಮಿಥ್ಯಾಬುದ್ಧಿಯನ್ನು ಬಿಡದೆ, ತತ್ವದರ್ಶಿಗಳು ನೀರಿನ ಗುಳ್ಳೆಗಳಲ್ಲಿ ಹೇಗೋ ಹಾಗೆ ಸ್ನೇಹವಿಲ್ಲದವರಾಗಿರುವರು.

೧೭. ತಾನು ಅಸ್ನೇಹನೇ ಆಗಿದ್ದರೂ ಸುಘನಸ್ನೇಹದಿಂದ ಆರ್ದ್ರವಾದ ಹೃದಯವುಳ್ಳವನಂತೆ ವತ್ಸಲವಾದ ವೃತ್ತಿಯನ್ನು ತೋರುವವನಾಗಿ ಆತ್ಮಜ್ಞನು ಯಥಾಕ್ರಮವಾಗಿ ಕುಳಿತಿರುವನು.

೧೮. ಪ್ರವಾಹದಲ್ಲಿ ದೋಣಿಯಲ್ಲಿ ಕುಳಿತು ಹೋಗುವವರು ವಾಯುವನ್ನು ಮುಟ್ಟುವಂತೆ, ವಿಷಯಗಳನ್ನು ಮುಟ್ಟಿಮುಟ್ಟದಂತೆ ಇರುವರು. ಮೂಢರು ದೇಹವೇ ಆತ್ಮನೆಂಬ ವಿಷವನ್ನು ಕುಡಿದು ವಿಷಯಗಳಲ್ಲಿ ಲಯವಾಗಿಹೋಗುವರು.

೧೯. ಅಂತಃ ಸರ್ವಾರ್ಥಶೀತಲನಾಗಿದ್ದರೂ ಬಹಿಃಸರ್ವಸಮಾಚಾರವುಳ್ಳವನಾಗಿ, ಒಳಗೆ ಅನಾವಿಷ್ಟನಾಗಿದ್ದರೂ ಆವಿಷ್ಟನಂತೆ ಇರುವನು.

(ಸರ್ವೈಃ ಶಿಷ್ಟೈಃ ಸಮ ಆಚಾರೋ ಯಸ್ಯಾಂ ಸ್ಥಿತೌ | —ತಾ. ಪ್ರ.)

ಶ್ರೀರಾಮನು ಕೇಳಿದನು—

೨೦. ಮುನಿನಾಯಕನೆ, ಇಂತಹ ಜ್ಞಾನಿಯ ಸ್ವರೂಪವನ್ನು ಯಾರು ತಿಳಿಯುವರು ? ಹೀಗೆ ಇರುವುದು ಅಜ್ಞನಿಗೂ ಸಾಧ್ಯವಾಗಿರಲು ಸತ್ಯವಾವುದು ? ಅಸತ್ಯವಾವುದು ? ಎಂದು ಯಾರು ತಿಳಿಯಬಲ್ಲರು ?

ಅಶ್ವವದ್ಬ್ರಹ್ಮಚರ್ಯೇಣ ಚರಂತೋಽಚಾರುಚೇತಸಃ ।
ಮಿಥ್ಯಾ ತಪಸ್ವಿದಾರ್ಢ್ಯಾಯ ಭವಂತ್ಯೇವಂವಿಧಾ ಮುನೇ ॥೨೧॥

ಶ್ರೀ ವಸಿಷ್ಠ ಉವಾಚ—

ಅಸತ್ಯಂ ವಾಸ್ತು ಸತ್ಯಂ ವಾ ಸ್ವರೂಪಂ ವರಮೀದೃಶಂ ।
ವಿದ್ಧಿ ವೇದವಿದಾಂ ತ್ವೇಷ ಸ್ವಭಾವಾನುಭವಸ್ಥಿತಃ ॥೨೨॥

ಅನಾವಿಷ್ಟಾ ವಿಚೇಷ್ಟಂತೇ ವೀತರಾಗಾಃ ಸರಾಗವತ್ ।
ಗತಹಾಸಾ ಹಸಂತ್ಯಜ್ಞಾನ್ಸಹಸಾ ಕರುಣಾಕುಲಾಃ ॥೨೩॥

ಚಿತ್ತಾದರ್ಶಗತಂ ದೃಶ್ಯಂ ಸರ್ವಂ ಕಪಟಕುಟ್ಟಿಮಂ ।
ಪಶ್ಯಂತ್ಯಸತ್ಪರಿಜ್ಞಾತಂ ಸ್ವಪ್ನೇ ಹೇಮೇವ ಹಸ್ತಗಂ ॥೨೪॥

---

೨೧. ಅಶ್ವದಂತೆ ಬ್ರಹ್ಮಚರ್ಯವುಳ್ಳವರಾದರೂ ಅಚಾರುಚೇತಸರಾಗಿ ಮಿಥ್ಯಾತಪಸ್ವಿವೇಷವನ್ನು ದೃಢಪಡಿಸಿಕೊಳ್ಳಲು, ಮುನಿಯೆ, ಅನೇಕರು ಹೀಗಿರಬಲ್ಲರು?

ಶ್ರೀವಸಿಷ್ಠನು ಹೇಳಿದನು—

೨೨. ಅಸತ್ಯವಾಗಲಿ, ಸತ್ಯವಾಗಲಿ, ಹೀಗಿರುವುದು ಒಳ್ಳೆಯದು. ಇದು ವೇದವಿತ್ತುಗಳಿಗೆ ಸ್ವಭಾವವಾಗಿ ಅನುಭವದಲ್ಲಿರುವ ಸ್ಥಿತಿಯು.

(ದಂಬಾರ್ಥಮಪಿ ದೃಢೀಕೃತಸ್ತೇತಾನಿ ಶುಭೋದರ್ಕಾಣಿ ಏವೇತಿ ನ ತಲ್ಲಕ್ಷಣವತಾಮುಪೇಕ್ಷಾಕಾರ್ಯಾ । ಯತಸ್ತಾದೃಶಾನಾಂ ಅನುಸರಣೇ ಸ್ವಭಾವಸಿದ್ಧಲಕ್ಷಣಸಂಪನ್ನಸ್ತತ್ತ್ವವಿದಪಿ ದೈವಾಲಭ್ಯತೇ) – ಇತ್ಯಾಶಯೇನ ಶ್ರೀವಸಿಷ್ಠ ಉತ್ತರಮಾಹ —ತಾ. ಪ್ರ.)

೨೩. ಅನಾವಿಷ್ಟರಾಗಿ ( ಕರ್ಮಫಲಾಸಕ್ತಿಯಿಲ್ಲದೆ, ವೀತರಾಗರಾದರೂ ಸರಾಗರಂತೆ ವ್ಯವಹಾರಮಾಡುವರು. ನಗುವಿಲ್ಲದೆ ಇದ್ದರೂ ಅಜ್ಞರನ್ನು ಕಂಡು ಥಟ್ಟನೆ ನಗುವರು.

೨೪. ಚಿತ್ತವೆಂಬ ಕನ್ನಡಿಯಲ್ಲಿ ಕಾಣುವ ದೃಶ್ಯವನ್ನೆಲ್ಲ ಅಸತ್ ಎಂದು ಕಾಣುತ್ತ, ಕನಸಿನಲ್ಲಿ ಕೈಯಲ್ಲಿರುವಂತೆ ಕಂಡ ಚಿನ್ನವನ್ನು ಹೇಗೋ ಹಾಗೆ ಲೋಕವನ್ನು ಕಾಣುತ್ತ ಇರುವರು.

ಅಂತಃಶೀತಲತಾಮೇಷಾಂ ತಾಂ ನ ಜಾನಂತಿ ಕೇಚನ ।
ದೂರಾಚ್ಚಂದನದಾರೂಣಾಮಾಮೋದಮಿವ ಜಂತವಃ ||೨೫||

ಯೇ ತು ವಿಜ್ಞಾತವಿಜ್ಞೇಯಾಸ್ತಾದೃಶಾಃ ಪಾವನಾಶಯಾಃ ।
ಜಾನಂತಿ ತಾಂಸ್ತಥೈವಾಂತರಹೇಃ ಪಾದಾನಿವಾಹಯಃ ||೨೬||

ಭಾವಂ ನಿಗೂಹಯಂತ್ಯೇತೇ ತಮುತ್ತಮಮನುತ್ತಮಾಃ ।
ಗ್ರಾಮ್ಯೈರ್ಧನೈಃ ಕಿಲಾನರ್ಘ್ಯಃ ಕಶ್ಚಿಂತಾಮಣಿರಾಪಣೇ ||೨೭||

ತಸ್ಮಿನ್ನಿಗೂಹನೇ ಭಾವೋ ಯತಸ್ತೇಷಾಂ ನ ದರ್ಶನೇ ।
ನಿರ್ವಾಸನಾ ಗತದ್ವೈತಾ ಗತಮಾನಾಃ ಕಿಲಾಂಗ ತೇ ||೨೮||

---

೨೫. ಹೀಗೆ ಅಂತಶ್ಶೀತಲರಾಗಿರುವ ಅವರನ್ನು, ಚಂದನದಾರುವಿನಲ್ಲಿರುವ ಆಮೋದವನ್ನು ದೂರದಿಂದ ಕಾಣದಂತೆ, ಕೆಲವರು ತಿಳಿಯುವುದಿಲ್ಲ.

೨೬. ಹಾವಿನ ಹಜ್ಜೆಯನ್ನು ಹಾವೇ ಅರಿಯುವಂತೆ ವಿಜ್ಞಾತವಿಜ್ಞೇಯರಾದ ಅವರ ಸ್ವರೂಪವನ್ನು ಪಾವನಾಶಯರಾದವರು ಯಥಾವತ್ತಾಗಿ ತಿಳಿಯುವರು.

೨೭. ಅನುತ್ತಮರಾದ ಉತ್ತಮೋತ್ತಮರಾದ ಆ ವಿಜ್ಞಾತವಿಜ್ಞೇಯರು ತಮ್ಮ ಉತ್ತಮ ಗುಣಗಳನ್ನೆಲ್ಲಾ ಬಚ್ಚಿಟ್ಟುಕೊಳ್ಳುವರು. ಏಕೆಂದರೆ ಬೆಲೆಯಿಲ್ಲದ ಚಿಂತಾಮಣಿಯನ್ನು ತಂದು ಅಂಗಡಿಯಲ್ಲಿ ಗ್ರಾಮ್ಯಧನಗಳಿಗೆ ಮಾರುವವರೂ ಉಂಟೆ?

೨೮. ಅಂತಹ ವಿಜ್ಞಾತವಿಜ್ಞೇಯರಿಗೆ ತಮ್ಮ ಗುಣಗಳನ್ನು ಮುಚ್ಚಿಟ್ಟುಕೊಳ್ಳುವುದರಲ್ಲೇ ಆಸಕ್ತಿ। ಏಕೆಂದರೆ ಅವರು ನಿರ್ವಾಸನರು; ಗತದ್ವೈತರು; ಮಾನಮೋಹಗಳಲ್ಲಿ ಆಸಕ್ತಿಯಿಲ್ಲದವರು.

ಏಕಾಂತಾಮಾನದೌರ್ಗತ್ಯಜನಾವಜ್ಞಪ್ತಯಸ್ತು ತಾನ್ ।
ಸುಖಯಂತಿ ಯಥಾ ರಾಮ ನ ತಥೈವ ಮಹದ್ಧರ್ಯಃ ॥೨೯॥

ಸ್ವಸಂವೇದನಸಂವೇದ್ಯಸಾರಾ ವಿದಿತವೇದ್ಯತಾ ।
ನೈಷಾ ದರ್ಶಯಿತುಂ ಶಕ್ಯಾ ದೃಶ್ಯತೇ ನ ಚ ತದ್ವಿದಾ ॥೩೦॥

ಗುಣಂ ಮಮೇದಂ ಜಾನಾತು ಜನಃ ಪೂಜಾಂ ಕರೋತು ಮೇ ।
ಇತ್ಯಹಂಕಾರಿಣಾಮೀಹಾ ನತು ತನ್ಮುಕ್ತಚೇತಸಾಂ ॥೩೧॥

ಕ್ರಿಯಾಫಲಾನಿ ಚಿದ್ವ್ಯೋಮ ಗಮನಾದೀನಿ ರಾಘವ ।
ಅಜ್ಞಾನಾಮಪಿ ಸಿಧ್ಯಂತಿ ಮಂತ್ರೌಷಧಿವಶಾದಿಹ ॥೩೨॥

ಯೋ ಯಾದೃಕ್ ಕ್ಲೇಶಮಾಧಾತುಂ ಸಮರ್ಥಸ್ತಾದೃಗೇವ ಸಃ ।
ಅವಶ್ಯಂ ಫಲಮಾಪ್ನೋತಿ ಪ್ರಬುದ್ಧೋಽಸ್ತ್ವಜ್ಞ ಏವ ವಾ ॥೩೩॥

---

೨೯. ಏಕಾಂತ, ಅಮಾನ, ರಾಮ, ದೌರ್ಗತ್ಯ, ಜನಾವಜ್ಞಪ್ತಿ ಇವು ಅವರಿಗೆ ಸುಖವನ್ನು ಕೊಡುತ್ತವೆ; ಇತರರು ಮಹಾಸೌಭಾಗ್ಯಗಳೆಂದು ಭಾವಿಸುವುದೆಲ್ಲವೂ ಅವರಿಗೆ ಸುಖವನ್ನು ಕೊಡುವುದಿಲ್ಲ.

೩೦. ವಿದಿತವೇದ್ಯತಾ ಎನ್ನುವುದುಂಟಲ್ಲವೇ ಅದು ತನಗೆ ಮಾತ್ರ ತಿಳಿಯುವ ಆನಂದವು. ಅದನ್ನು ಇತರರಿಗೆ ತೋರಿಸಲು ಸಾಧ್ಯವಿಲ್ಲ. ಅದನ್ನು ತಿಳಿಯದವರು ಅದನ್ನು ಕಾಣಲಾರರು.

೩೧. ನನ್ನ ಈ ಗುಣವನ್ನು ಜನರು ತಿಳಿಯಲಿ; ನನಗೆ ಪೂಜೆಯನ್ನು ಮಾಡಲಿ, ಎಂಬುದು ಅಹಂಕಾರಿಗಳ ಇಚ್ಛೆಯು. ಮುಕ್ತಚೇತನರ ಲಕ್ಷಣವಲ್ಲ.

೩೨. ಕ್ರಿಯಾಫಲಗಳಾದ ಆಕಾಶಗಮನಾದಿಗಳು, ರಾಘವ, ಮಂತ್ರ, ಓಷಧಿ ವಶವಾಗಿ ಅಜ್ಞಾನರಿಗೂ ಕೂಡ ಸಿದ್ಧಿಸುವುವು.

೩೩. ಪ್ರಬುದ್ಧನೇ ಆಗಿರಲಿ, ಅಜ್ಞನೇ ಆಗಿರಲಿ, ಅವನು ಯಾವರೀತಿಯಾದ ಕ್ಲೇಶವನ್ನು ಸಹಿಸಲು ಸಮರ್ಥನೋ ಅವನು ಅಷ್ಟು ಫಲವನ್ನು ಅವಶ್ಯವಾಗಿ ಹೊಂದುವನು.

ಆಮೋದಶ್ಚಂದನಸ್ಯೇವ ಸ್ಪಂದನಸ್ಯ ಫಲಂ ಹೃದಿ ।
ಸರ್ವಸ್ಯೈವಾಸ್ತಿ ತನ್ನೂನಂ ತದ್ವಶಾ ಸಮವಾಪ್ಯತೇ ॥೩೪॥

ಅಹಂತಾವಾಸನಾದ್ವೈತಂ ವಸ್ತುತಾ ದೃಶ್ಯವಸ್ತುಷು ।
ಯಸ್ಯಾಸ್ತ್ಯಸೌ ಸಾಧಯತಿ ಖಗಮಾದಿಕ್ರಿಯಾಫಲಂ ॥೩೫॥

ಇದಂ ನ ಕಿಂಚಿದ್ಭ್ರಾಂತಿರ್ವಾ ಖಂ ಚೇತಿ ಜ್ಞಸ್ತು ವೇತ್ತಿ ಯಃ ।
ಸೋಽವಾಸನಃ ಕರ್ಮವಾತ್ಯಾಃ ಕಥಂ ಸಾಧಯತಿ ಕ್ರಿಯಾಃ ॥೩೬॥

ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।
ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥೩೭॥

---

೩೪. ಚಂದನಕ್ಕೆ ಆಮೋದವು ಹೇಗೋ ಹಾಗೇ ಸ್ಪಂದನದ ಫಲವು ಹೃದಯದಲ್ಲಿ ಸರ್ವರಿಗೂ ಉಂಟು. ಅದು ತಪ್ಪದೆ ಸರ್ವರಿಗೂ ಲಭಿಸುವುದು.

(ಸ್ಪಂದನಸ್ಯ ವಿಹಿತ ನಿಷಿದ್ಧ ಕರ್ಮಣಾಂ—ಅಪೂರ್ವಾತ್ಮನಾ ಅಸ್ತಿ । ತಚ್ಚ ಕಾಲೇನಾವಿರ್ಭೂತಂ ಸಮವಾಪ್ಯತೇ ॥ —ತಾ. ಪ್ರ.)

೩೫. ಅಹಂತಾವಾಸನೆಯೇ ದ್ವೈತವು. ದೃಶ್ಯವಸ್ತುಗಳಲ್ಲಿ ವಸ್ತುತಾಬುದ್ಧಿಯಿರುವುದೇ ದ್ವೈತವು. ಇದು ಯಾವನಿಗೆ ಉಂಟೋ ಅವನು ಆಕಾಶಗಮನಾದಿ ಕ್ರಿಯಾಫಲವನ್ನು ಹೊಂದುವನು.

(ಸಿದ್ಧಿಲಕ್ಷಣ ದೃಶ್ಯವಸ್ತುಷು ಅಹಂ ಭೋಕ್ತಾಸ್ಯಾಮಿತ್ಯಹಂತಾ ವಾಸನಾ ಲಕ್ಷಣಂ ದ್ವೈತಂ ಪರಿಚ್ಛಿನ್ನಾತ್ಮಕಲ್ಪನಂ ಯಸ್ಯಾಸ್ತಿ ಸಃ ಖೇಚರಸಿದ್ಧ್ಯಾದಿ ಕ್ರಿಯಾ ಫಲಂ ಸಾಧಯತೀತ್ಯರ್ಥಃ ॥ —ತಾ. ಪ್ರ.)

೩೬. ಈ ಸಿದ್ಧಿಗಳೆಲ್ಲ ಭ್ರಾಂತಿಗಳಲ್ಲದೆ ಇನ್ನೇನೂ ಅಲ್ಲ; ಇವೆಲ್ಲ ಆಕಾಶ (ಅಧಿಷ್ಠಾನ ಚಿದಾಕಾಶಮಾತ್ರ) ವೇ ಹೊರತು ಇನ್ನು ಏನೂ ಅಲ್ಲ; ಎಂದು ಯಾವ ವಿದ್ವಾಂಸನು ಅರಿದಿರುವನೋ ಆತನು ಅವಾಸನನು; ಕರ್ಮವೆಂಬ ಬಿರುಗಾಳಿಗೆ ಸಿಕ್ಕಿ ಅಲೆಯುವ ಈ ಕ್ರಿಯಾ (ಸಿದ್ಧಿ) ಗಳನ್ನು ಹೇಗೆ ಸಾಧಿಸುವನು ?

೩೭. ಅಂತಹ ವಿದ್ವಾಂಸನಿಗೆ ಆದದ್ದರಿಂದ ಲಾಭವಿಲ್ಲ. ಆಗದಿದ್ದರೆ ನಷ್ಟವಿಲ್ಲ; ಆತನು ಯಾರನ್ನಾಗಲೀ ಆಶ್ರಯಿಸಿ ಏನನ್ನೂ ಪಡೆಯಬೇಕಾಗಿಲ್ಲ.

ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಕ್ವಚಿತ್ ।
ಯದುದಾರಮನೋವೃತ್ತೇರ್ಲೋಭಾಯ ವಿದಿತಾತ್ಮನಃ ॥೩೮॥

ಜಗದೇವ ತೃಣಂ ಯಸ್ಯ ನ ಕಿಂಚಿದ್ರಜ ಏವ ವಾ ।
ಕಿಂ ನಾಮ ತಸ್ಯ ಭವತು ಅನ್ಯದಾದೇಯತಾಂ ಗತಂ ॥೩೯॥

ನಿರ್ವಾಹಿತಜಗದ್ಯಾತ್ರಃ ಪರಿಪೂರ್ಣಮನಾ ಮುನಿಃ ।
ಯಥಾಸ್ಥಿತಮಸಾವಾಸ್ತೇ ಸಂಪ್ರಯಾತಿ ಯಥಾಗತಂ ॥೪೦॥

ನಿತ್ಯಾಂತಃಶೀತಲೋ ಮೌನೀ ಸತ್ವೀಭೂತಮನೋವನಃ ।
ಪರಿಪೂರ್ಣಾರ್ಣವಾಕಾರೋ ಗಂಭೀರ ಪ್ರಕಟಾಶಯಃ ॥೪೧॥

---

೩೮. ಉದಾರ ಮನೋವೃತ್ತಿಯುಳ್ಳ ಆತ್ಮಜ್ಞಾನಿಗೆ ಲೋಭವನ್ನು ಹುಟ್ಟಿಸುವಂತಹದು, ಪೃಥಿವಿಯಲ್ಲಾಗಲೀ, ಅಂತರಿಕ್ಷದಲ್ಲಿಯಾಗಲಿ, ದೇವಲೋಕದಲ್ಲಿಯಾಗಲಿ, ಅಥವಾ ಇನ್ನೆಲ್ಲಿಯಾದರೂ ಆಗಲಿ, ಯಾವುದೂ ಇಲ್ಲ.

೩೯. ಜಗತ್ತನ್ನೇ ತೃಣವೆಂದು, ಒಂದಿಷ್ಟು ಧೂಳೂ ಅಲ್ಲವೆಂದು, ಯಾವನು ಗಣಿಸಿರುವನೋ ಅಂತಹವನಿಗೆ ಮತ್ತೆ ಯಾವುದು ತಾನೇ ಬೇಕಾದೀತು ?

೪೦. ಆ ಮುನಿಯು ಪರಿಪೂರ್ಣ ಮನಸ್ಕನು: ಜಗದ್ಯಾತ್ರೆಯನ್ನು ನಿರ್ವಾಹ ಮಾಡಿದವನು. ಆದರಿಂದ ಆತನು ಹೇಗೆ ಇದ್ದರೆ ಹಾಗೆ ಇರುವನು. ಹೇಗೆಂದರೆ ಹಾಗೆ ವರ್ತಿಸುವನು.

೪೧. ಆತ್ಮಜ್ಞಾನಿಯು ಯಾವಾಗಲೂ ಅಂತಶ್ಶೀತಲನು. ಮೌನಿಯು ಸತ್ವಾತಿಶಯವುಳ್ಳ ಮನೋಭೂಮಿಕೆಯುಳ್ಳವನು. ಪರಿಪೂರ್ಣವಾದ ಸಾಗರದಂತಿರುವನು ಗಂಭೀರನಾದರೂ ತನ್ನ ಮನಸ್ಸಿನಲ್ಲಿರುವುದನ್ನು ಪ್ರಕಟವಾಗಿ ಹೇಳುವವನು.

ರಸಾಯನಪರಾಪೂರ್ಣಹ್ರದವತ್ ಹ್ಲಾದಮಾತ್ಮನಿ ।
ಧತ್ತೇ ಕರೋತಿ ವಾನ್ಯಸ್ಯ ಸಕಲೇಂದುರಿವಾಮಲಃ ॥೪೨॥

ಮಂದಾರಮಂಜರೀಕುಂಜಪಿಂಜರಾದೇವ ಭೂಮಯಃ ।
ನ ತಥಾ ಹ್ಲಾದಯಂತ್ಯೇತಾ ಯಥಾ ಪಂಡಿತಬುದ್ಧಯಃ ॥೪೩॥

ಚಂದ್ರಬಿಂಬೈರ್ವಸಂತೈಶ್ಚ ಮಹತಾಮಹತಾಶಯೈಃ ।
ಸಾರಂ ಸೌಭಾಗ್ಯಸೌಗಂಧ್ಯಸೌರಭಾಲೋಕಭೋಗಿಷು ॥೪೪॥

ಭ್ರಾಂತಿಮಾತ್ರಮಿದಂ ವಿಶ್ವಮಿಂದ್ರಜಾಲಮಸನ್ಮಯಂ ।
ತ್ಯಜತೀತಿ ವಿನಿಶ್ಚಿತ್ಯ ದಿನಾನುದಿನಮೇಷಣಾಃ ॥೪೫॥

---

೪೨. ರಸಾಯನದಿಂದ ಪರಿಪೂರ್ಣವಾಗಿರುವ ಮಡುವಿನಂತೆ ತನ್ನಲ್ಲಿ ಆಹ್ಲಾದವನ್ನು ತುಂಬಿಕೊಂಡು, ಅನ್ಯರಿಗೆ ನಿರ್ಮಲಪೂರ್ಣ ಚಂದ್ರನಂತೆ ಆಹ್ಲಾದ ವನ್ನು ಉಂಟುಮಾಡುವನು.

೪೩. ಪಂಡಿತಬುದ್ಧಿಗಳು ಸಂತೋಷಪಡಿಸುವಂತೆ ಮಂದಾರಮಂಜರೀ ಕುಂಜಗಳಿಂದ ತುಂಬಿರುವ ದೇವನಂದನ ಭೂಮಿಗಳೂ ಸಂತೋಷಪಡಿಸಲಾರವು.

೪೪. ಸಾರಗ್ರಾಹಿಯಾದವನು ಚಂದ್ರಬಿಂಬದಿಂದ ಸೌಭಾಗ್ಯದಲ್ಲಿರುವ ಸಾರ ವನ್ನೂ, ಸೌಗಂಧ್ಯ ಸೌರಭಗಳಿಂದ ಸುಂದರವಾದ ಭೋಗಗಳಲ್ಲಿರುವ ಸಾರವನ್ನು ವಸಂತಮಾಸಗಳಿಂದಲೂ ಸಂಗ್ರಹಿಸುವಂತೆ, ರಾಗದ್ವೇಷಗಳಿಂದ ಅಹತವಾದ ಮಹಾ ತ್ಮರಿಂದ ಬುದ್ಧಿವಂತನು ಸಾರವತ್ತಾದ ಆತ್ಮಜ್ಞಾನವನ್ನು ಪಡೆಯುವನು.

೪೫. "ಈ ವಿಶ್ವವೆಲ್ಲವೂ ಭ್ರಾಂತಿಮಾತ್ರವು: ಇಂದ್ರಜಾಲವು: ಅಸತ್ತಿ ನಿಂದ ತುಂಬಿದುದು:" ಎಂದು ವಿನಿಶ್ಚಯುಮಾಡಿ ದಿನದಿನವೂ ಈಷಣಗಳನ್ನು ತ್ಯಾಗಮಾಡುವುದು ಯಾವುದಿದೆಯೋ ಅದೇ ಮಹಾತ್ಮರ ಸಂಗತಿಯಿಂದ ಆಗುವ ಪ್ರಯೋಜನವು.

ಶೀತಾತಪಾದಿದುಃಖಾನಿ ನಿಜದೇಹಗತಾನ್ಯಪಿ ।
ಅನ್ಯದೇಹಗತಾನೀವ ಜ್ಞಃ ಪಶ್ಯತ್ಯವಹೇಲಯಾ ॥೪೬॥

ಕರುಣೋದಾರಯಾ ವೃತ್ತ್ಯಾ ವೃತ್ತ್ಯಾ ವ್ರತತಿಧೀರಯಾ ।
ನೀರಸೋ ನೀರಸಾರಾಂ ತ. ಸಾರತಾಂ ಸರತಿ ಸ್ಥಿತಿಂ ॥೪೭॥

ವ್ಯವಹಾರಂ ಯಥಾಪ್ರಾಪ್ತಂ ಲೋಕಸಾಮಾನ್ಯಮಾಚರನ್ ।
ಚರಾಚರ ಣಾಂ ಭೂತಾನಾಮುಪರ್ಯೇವಾವತಿಷ್ಠತೇ ॥೪೮॥

ಪ್ರಜ್ಞಾಪ್ರಾಸಾದಮಾರೂಢಸ್ತ್ವಶೋಚ್ಯಃ ಶೋಚತೇ ಜನಾನ್ ।
ಭೂಮಿಷ್ಠಾನಿವ ಶೈಲಸ್ಥಃ ಸರ್ವಾನ್ಪ್ರಾಜ್ಞೋಽನುಪಶ್ಯತಿ ॥೪೯॥

---

೪೬ ಶೀತ, ಆತಪ, ಮೊದಲಾದವುಗಳಿಂದ ಆದ ದುಃಖವು ತನಗೇ ಆಗುತ್ತಿದ್ದರೂ, ಜ್ಞಾನಿಯು, ಅನ್ಯದೇಹಕ್ಕೆ ಆದಾಗ ಹೇಗೋ ಹಾಗೆ ಲೀಲೆಯಿಂದ ನೋಡುತ್ತಿರುವನು.

೪೭. ಕರುಣದಿಂದ ಉದಾರವಾಗಿರುವ ವೃತ್ತಿಯುಳ್ಳವನಾಗಿ, ಗಿಡವನ್ನು ಆಶ್ರಯಿಸಿರುವ ಬಳ್ಳಿಯಂತೆ ಧೀರವಾಗಿರುವ ಮನಸ್ಸಿನಿಂದ, ಯಾವುದರಲ್ಲಿಯೂ ಆಸಕ್ತಿಯಿಲ್ಲದವನಾಗಿ, ಬರಿಯ ನೀರಿನಿಂದಲಾದರೂ ತೃಪ್ತಿ ಪಡೆಯುವವನಾಗಿ ಸಾರಭೂತವಾದ (ಸಂತೋಷಮಯವಾದ) ಸ್ಥಿತಿಯುಳ್ಳವನಾಗಿರುವನು.

೪೮. ಲೋಕಸಾಮಾನ್ಯವಾಗಿ, ಯಥಾಪ್ರಾಪ್ತವಾದ ವ್ಯವಹಾರವನ್ನು ಮಾಡುವವನಾಗಿ, ಚರ, ಅಚರ, ಭೂತಗಳಿಗೆಲ್ಲ ಮೇಲೆಯೇ ಇರುವನು.

(ಉಪರಿ ಉತ್ಕರ್ಷೇ ಊರ್ಧ್ವಮೂಲಭೂತೇ ಬ್ರಹ್ಮಣಿವಾ—ತಾ. ಪ್ರ.)

೪೯. ಪ್ರಜ್ಞೆಯೆಂಬ ಪ್ರಾಸಾದವನ್ನೇರಿ, ತಾನು ಅಶೋಚ್ಯನೆಂದು ತಿಳಿದಿದ್ದರೂ ಇತರ ಜನರನ್ನು ನೋಡಿ ಶೋಕಿಸುವನು. ಬೆಟ್ಟದ ಮೇಲಿರುವವನು ನೆಲದಮೇಲಿರುವವರನ್ನು ನೋಡುವಂತೆ, ಪ್ರಾಜ್ಞನು ಎಲ್ಲರನ್ನೂ ನೋಡುವನು.

ಚಿರಂ ಕಲ್ಲೋಲವಲಿತಃ ಸುಮನಾ ಜಲಧೌ ಭ್ರಮೇ ।
ಪರಂ ಪಾರಮುಪಾಗತ್ಯ ಪರಾಂ ವಿಶ್ರಾಂತಿಮೇತಿ ಸಃ ॥೫೦॥

ಹಸನ್ಸ ಶಾಂತಯಾ ವೃತ್ತ್ಯಾ ಪ್ರಾಕ್ತನೀರ್ಜಾಗತೀರ್ಗತೀಃ ।
ಸ್ಮಯಮಾನ ಇವಾಸ್ತೇಂತರ್ಜನತಾಶ್ಚ ಘನಭ್ರಮಾಃ ॥೫೧॥

ಏತಾಃ ಕಾಂತಾರನಿರ್ಮಗ್ನಮಿತಾಃ ಸಂಸಾರದೃಷ್ಟಯಃ ।
ಅಸತ್ಯೋ ಹೃತವತ್ಯೋ ಮಾಮಿತ್ಯಂತರ್ಯಾತಿ ವಿಸ್ಮಯಂ ॥೫೨॥

ದೃಷ್ಟ್ವಾಷ್ಟಗುಣವೈಶ್ವರ್ಯಮನಿಷ್ಟಂ ಮೇ ತೃಣಾಯತೇ ।
ಇತ್ಯುಪೈತ್ಯುಪಶಾಂತತ್ವಾತ್ಸ್ಮಯಮಾನೋಪಿ ನ ಸ್ಮಯಂ ॥೫೩॥

---

೫೦. ಮನಸ್ಸಿನಲ್ಲಿ ಕಾಮಕ್ರೋಧಾದಿಗಳು ಎದ್ದು ಹೊಯ್ದಾಡುವಂತೆ ಇತರರಿಗೆ ತೋರುತ್ತಿದ್ದರೂ ತಾನು ಸುಮನನಾಗಿಯೇ ಇರುವನು. ಭ್ರಮವೆಂಬ ಸಾಗರದ ಪರಮಪಾರವನ್ನು ದಾಟಿ ಪರವಿಶ್ರಾಂತಿಯನ್ನು ಪಡೆದಿರುವನು.

೫೧. ವೃತ್ತಿಯು ಶಾಂತವಾಗಿರಲು, ಹಿಂದೆ ಅನುಭವಿಸಿದ ಜಗತ್ತಿನ ಗತಿಗಳನ್ನೂ ತಾನು ಜನಗಳೊಡನೆ ವ್ಯವಹರಿಸಿದುದನ್ನು, ಆಗ ಘನವಾದ ಭ್ರಾಂತಿಯಿಂದ ಕೂಡಿದ್ದುದನ್ನೂ ನೆನೆದು ನೆನೆದು ನಗುತ್ತಾ, ನಗುತ್ತಾ ಇದ್ದುಕೊಂಡಿರುವನು.

೫೨. ಈ ಸಂಸಾರ ದೃಷ್ಟಿಗಳೆಲ್ಲವೂ ಕಾಡಿನಲ್ಲಿ ದಾರಿತಪ್ಪಿ ತಿರುಗುತ್ತಿರುವ ಅಂಧನಿಗೆ ಸಮನಾದವು. ಅಸತ್ಯಗಳೇ ಆದರೂ ನನ್ನನ್ನು ಹಾರಿಸಿಕೊಂಡು ಹೋಗಿದ್ದುವಲ್ಲಾ ಎಂದು ತನ್ನೊಳಗೇ ನಗುತ್ತಿರುವನು.

೫೩. ಅಷ್ಟೈಶ್ವರ್ಯವೂ ಎದುರಿಗೇ ಇದ್ದರೂ ಅದು ನನಗೆ ತೃಣವು ಅನಿಷ್ಟವು ಎಂಬ ಮಟ್ಟಿಗೆ ಉಪಶಾಂತನಾಗಿ ನಗುತ್ತಿದ್ದರೂ ಗರ್ವಿಷ್ಠನಾಗದೆ ಇರುವನು.

ಕಶ್ಚಿದ್ಗಿರಿಗುಹಾಗೇಹಃ ಕಶ್ಚಿತ್ಪುಣ್ಯಾಶ್ರಮಾಶ್ರಯಃ ।
ಕಶ್ಚಿದ್ಗೃಹಸ್ಥಾಶ್ರಮವಾನ್ಕಶ್ಚಿದ್ಬಹುಪಟಸ್ಸ್ಥಿತಃ ॥೫೪॥

ಕಶ್ಚಿದ್ಭಿಕ್ಷಾಚರಾಚಾರಃ ಕಶ್ಚಿದೇಕಾಂತತಾಪಸಃ ।
ಕಶ್ಚಿನ್ಮೌನವ್ರತಧರಃ ಕಶ್ಚಿದ್ಧ್ಯಾನಪರಾಯಣಃ ॥೫೫॥

ಕಶ್ಚಿದ್ವಿಪಶ್ಚಿದ್ವಿಖ್ಯಾತಃ ಕಶ್ಚಿಚ್ಛ್ರೋತಾ ಶ್ರುತೇಃ ಸ್ಮೃತೇಃ ।
ಕಶ್ಚಿದ್ರಾಜಾ ದ್ವಿಜಃ ಕಶ್ಚಿತ್ಕಶ್ಚಿದಜ್ಞ ಇವ ಸ್ಥಿತಃ ॥೫೬॥

ಗುಟಿಕಾಂಜನಖಡ್ಗಾದಿಸಿದ್ಧಃ ಕಶ್ಚಿನ್ನಭೋಗತಃ ।
ಕಶ್ಚಿಚ್ಛಿಲ್ಪಕಲಾಜೀವೀ ಕಶ್ಚಿತ್ಪಾಮರರೂಪಭೃತ್ ॥೫೭॥

---

೫೪. ಇಂತಹವರಲ್ಲಿ ಒಬ್ಬನು ಗಿರಿಗುಹೆಗಳಲ್ಲಿರುವನು: ಇನ್ನೊಬ್ಬನು ಪುಣ್ಯಾಶ್ರಮಗಳನ್ನು ಆಶ್ರಯಿಸಿರುವನು: ಮತ್ತೊಬ್ಬನು ಗೃಹಸ್ಥಾಶ್ರಮಿಯಾಗಿರುವನು: ಇನ್ನೊಬ್ಬನು ಅಲೆಯುತ್ತಿರುವನು

೫೫. ಒಬ್ಬನು ಭಿಕ್ಷೆಯನ್ನು ಆಚರಿಸುವನು: ಇನ್ನೊಬ್ಬನು ಏಕಾಂತದಲ್ಲಿ ತಪಸ್ಸು ಮಾಡುತ್ತಿರುವನು: ಮತ್ತೊಬ್ಬನು ಮೌನವ್ರತಧರನು. ಮಗದೊಬ್ಬನು ಧ್ಯಾನಪರಾಯಣನಾಗಿರುವನು.

೫೬. ಒಬ್ಬನು ವಿಖ್ಯಾತ ವಿದ್ವಾಂಸನಾಗಿರುವನು: ಮತ್ತೊಬ್ಬನು ಶ್ರುತಿ ಸ್ಮೃತಿಗಳನ್ನು ಶ್ರವಣಮಾಡುವನು: ಇನ್ನೂ ಒಬ್ಬನು ರಾಜನಾಗಿದ್ದರೆ ಮತ್ತೊಬ್ಬನು ದ್ವಿಜನಾಗಿ ಮತ್ತೊಬ್ಬನು ಅಜ್ಞನಂತೆ ಕುಳಿತಿರುವನು.

೫೭. ಒಬ್ಬನು ಘುಟಿಕಾ, ಅಂಜನ, ಖಡ್ಗ, ಆದಿಗಳಲ್ಲಿ ಸಿದ್ಧರಾಗಿ ಆಕಾಶ ಗಮನ ಮಾಡುವವರು ಕೆಲವರು ಶಿಲ್ಪ, ಕಲಾ, ಇವುಗಳಿಂದ ಜೀವನ ಮಾಡುವವರು ಕೆಲವರು. ಪಾಮರರಂತಿರುವವರು ಕೆಲವರು.

ಕಶ್ಚಿತ್ತ್ಯಕ್ತಸಮಾಚಾರಃ ಕಶ್ಚಿಚ್ಛ್ರೋತ್ರಿಯನಾಯಕಃ ।
ಕಶ್ಚಿದುನ್ಮತ್ತಚರಿತಃ ಪ್ರವ್ರಜ್ಯಾಂ ಕಶ್ಚಿದಾಶ್ರಿತಃ ॥೫೮॥

ಪುರುಷೋ ನ ಶರೀರಾದಿ ನಚ ಚಿತ್ತಾದಿ ಕಿಂಚನ ।
ಪುರುಷಶ್ಚೇತನಂ ನಾಮ ನ ಸ ನಶ್ಯತಿ ಕರ್ಹಿಚಿತ್ ॥೫೯॥

ಅಚ್ಛೇದ್ಯೋಽಸಾವದಾಹ್ಯೋಽಸಾವಕ್ಲೇದ್ಯೋಽಶೋಷ್ಯ ಏವ ಚ ।
ನಿತ್ಯಃ ಸರ್ವಗತಃ ಸ್ಥಾಣುರಚಲೋಽಸೌ ಸನಾತನಃ ॥೬೦॥

ಇತಿ ಸಮ್ಯಕ್ಪ್ರಬುದ್ಧೋ ಯಃ ಸ ಯಥಾ ಯತ್ರ ತಿಷ್ಠತಿ ।
ತಥಾ ತಿಷ್ಠತು ತತ್ರಾತ್ರ ಸ್ಥಾನಾಸ್ಥಾನಿಯಮೇನ ಕಿಂ ॥೬೧॥

---

೫೮. ಯಾವ ಸಮಾಚಾರವೂ ಬೇಡದೆ ಇರುವವನೊಬ್ಬ: ಮತ್ತೊಬ್ಬನು ಶ್ರೋತ್ರಿಯ ನಾಯಕನು ಮತ್ತೊಬ್ಬನು ಉನ್ಮತ್ತಚರಿತನು. ಮತ್ತೊಬ್ಬನು ಸನ್ಯಾಸಿಯು.

೫೯. ಪುರುಷನು ಶರೀರಾದಿಗಳಲ್ಲ: ಚಿತ್ತಾದಿಗಳೂ ಅಲ್ಲ: ಪುರುಷನೇ ಚೇತನವು. ಚೇತನವು ಹೇಗೆ ಹೇಗೂ ನಾಶವಾಗುವುದಿಲ್ಲ.

೬೦. ಈ ಚೇತನ ಪುರುಷನು ಅಚ್ಛೇದ್ಯನು: ಅದಾಹ್ಯನು: ಅಕ್ಲೇದ್ಯನು: ಅಶೋಷ್ಯನು: ನಿತ್ಯನು ಸರ್ವಗತನು: ಸ್ಥಾಣುವು: ಅಚಲನು: ಸನಾತನನು.

೬೧. ಹೀಗೆಂದು ಯಾವನು ಚೆನ್ನಾಗಿ ತಿಳಿದಿರುವನೋ ಆತನು ಎಲ್ಲಿ ಹೇಗೆ ಇದ್ದರೆ ಅಲ್ಲಿ ಹಾಗೆ ಇರಲಿ. ಅಂತಹವನ ವಿಚಾರದಲ್ಲಿ ಸ್ಥಾನ, ಅಸ್ಥಾ, ನಿಯಮಾದಿಗಳು ಯಾವವೂ ಇಲ್ಲ.

(ಏತಾವ್ಯತ ಪುರುಷೋತ್ತಮ ತತ್ವ ಪರಿಜ್ಞಾನಾದೇವ ತತ್ತ್ವವಿತ್ಪುರುಷೋತ್ತಮೋ ನ ತು ವರ್ಣಾಶ್ರಮ ಮರ್ಯಾದಾ ಪಾಲನಮಾತ್ರೇಣ । ತದಭಾವೇಽಪಿ ತಸ್ಯ ಪುರುಷೋತ್ತಮತ್ವಾನ ಪಾಯಾದಿತ್ಯಾಶಯೇನಾಹ—ಸ್ಥಾನಂ ವರ್ಣಾಶ್ರಮ ಮರ್ಯಾದಾ ಸ್ಥಿತಿಃ ತದಾ ಸ್ಥಾನಿಯಮೇನ ತಸ್ಯಕಿಂ ಸಾಧ್ಯಮಿತಿ ವಿದ್ಯಾಪ್ರಭಾವೋಕ್ತಿಃ ಅರುನ್ಮುರ್ಖಾಯತೀ ಸಾಲಾವೃಕೇಭ್ಯಃ ಪ್ರಾಯಚ್ಛಮಿತಿವತ್—ತಾ. ಪ್ರ.)

ಪಾತಾಲಮಾವಿಶತು ಯಾತು ನಭೋ ವಿಲಂಘ್ಯ ।
ದಿಙ್ಮಂಡಲಂ ಭ್ರಮತು ಶೋಷಣಮೇತು ಯೇನ ।
ಚಿನ್ಮಾತ್ರಮೇವ ತದಜರಂ ನತು ಯಾತು ನಾಶ।
ಮಾಕಾಶಕೋಶ ಇವ ಶಾಂತಮಜಂ ಶಿವಂ ತತ್ ॥೬೨॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಮರಣಾದ್ಯಭಾವೋಪದೇಶೋ
ನಾಮ ದ್ವ್ಯುತ್ತರಶತತಮಃ ಸರ್ಗಃ

---

೬೨ ಚೇತನ ಪುರುಷನು ಪಾತಾಲಕ್ಕೆ ಹೋಗಲಿ, ಆಕಾಶವನ್ನು ದಾಟಿ ಹೋಗಿ ದಿಙ್ಮಂಡಲಗಳಲ್ಲಿ ತಿರುಗಲಿ ಅಥವಾ ಬೆಟ್ಟಗಳಿಂದ ಪುಡಿಮಾಡಿಸಿಕೊಳ್ಳಲಿ ಏನೇ ಆದರೂ ನಾಶವನ್ನು ಮಾತ್ರ ಹೊಂದುವುದಿಲ್ಲ ಏಕೆಂದರೆ ಈ ಚೇತನವು ಚಿನ್ಮಾತ್ರವು ಅಜರರವು ಆಕಾಶಕೋಶದಂತೆ ಶಾಂತವು ಅಜವು. ಶಿವವು

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಮರಣಾದ್ಯಭಾವೋಪದೇಶ" ಎಂಬ
ನೂರೆರಡನೆಯ ಸರ್ಗವು

# ತ್ರ್ಯಧಿಕಶತತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ—

ಭಾಮಾತ್ರಂ ಭಾನಮಾತ್ರಂ ವಾ ಶಾಂತಂ ಭಾಸತ ಏವ ಚ ।
ಚಿನ್ಮಾತ್ರಂ ಯದನಾದ್ಯಂತಂ ತಸ್ಯ ನಾಶಃ ಕಥಂ ಕದಾ ॥೧॥

ತಾವನ್ಮಾತ್ರಂ ಚ ಪುರುಷಃ ಕದಾಚಿತ್ಸ ನ ನಶ್ಯತಿ ।
ಯದಿ ನಶ್ಯತಿ ಚಿನ್ಮಾತ್ರಂ ಭೂಯೋ ಜಾಯೇತ ಕಿಂ ಕಥಂ ॥೨॥

---

# ನೂರ ಮೂರನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು—

೧. ಪ್ರಕಾಶಮಾತ್ರವಾಗಿ, ಭಾನಮಾತ್ರವಾಗಿ, ಶಾಂತವಾಗಿ ಭಾಸಮಾನವಾಗಿರುವ ಚಿನ್ಮಾತ್ರವು ಅನಾದ್ಯಂತವಾದ್ದರಿಂದ ಅದಕ್ಕೆ ಯಾವಾಗ ಹೇಗೆ ನಾಶವು ಸಂಭವಿಸುವುದು ?

(ತತ್ರ ಚಿತ್ಸಾಮಾನ್ಯಸ್ಯ ಅವಿನಾಶಿತ್ವಂ ಸರ್ವಾನುಭವ ಬಲೇನ ಪ್ರಥಮಂ ಸಾಧಯತಿ । ಜಾಗ್ರತ್ಸ್ವಪ್ನಯೋಃ ಅಂತಃಕರಣ ಸಾಕ್ಷಿತಯಾ ಸುಷುಪ್ತಾವ ಜ್ಞಾನ ಸ್ವಾಪಾದಿ ಸಾಕ್ಷಿತಯಾ ಚ ಪ್ರತ್ಯಗಾತ್ಮ ಭಾಮಾತ್ರಂ ವಿಷಯಾಭಾನಮಾತ್ರಂ ವಾ ಸರ್ವೇಷಾಂ ಭಾಸತ ಏವೇತಿ ಪ್ರತ್ಯಕ್ಷೇಣ ಚಕಾರಾತ್ ವ್ಯವಹಾರ ಸ್ಮೃತ್ಯಾದಿ ಲಿಂಗೇನ ಚ ಯದನಾದ್ಯಂತಂ ಚಿನ್ಮಾತ್ರಂ ತತ್ಸಿದ್ಧಂ ತಸ್ಯಕಥಂ ಕೇನ ನಿಮಿತ್ತೇನ ನಾಶೋ ಭವೇತ್ । ತದಸಾಧಿತಸ್ಯ ನಿಮಿತ್ತಸ್ಯ ಅಪ್ರಸಿದ್ಧೇಃ, ತತ್ಸಾಧಿತಸ್ಯ ಚ ತದುಪಜೀವಕತಯಾ ತನ್ನಾಶ ನಿಮಿತ್ತತ್ವ-ಅಯೋಗಾದೇವಂ ಕದಾವಾನಾಶೋಭವೇತ್ । ತಾದೃಶಕಾಲಸ್ಯಾಪಿ ತದಧೀನ ಸಿದ್ಧಿಕಸ್ಯ ತದುಪಜೀವಕತ್ವಾದಿತಿಭಾವಃ-ತಾ.ಪ್ರ.)

೨. ಪುರುಷನು ತಾವನ್ಮಾತ್ರನು ಎಂದರೆ ಚಿನ್ಮಾತ್ರನು : ಅವನು ಯಾವಾಗಲೂ ನಾಶವಾಗುವುದಿಲ್ಲ : ಚಿನ್ಮಾತ್ರವೂ ನಾಶವಾಗುವುದು ಎನ್ನುವುದಾದರೆ ಅದು ಮತ್ತೆ ಹೇಗೆ ಹುಟ್ಟುವುದು ?

ನ ಚಾಸ್ತ್ಯದನ್ಯಚ್ಚಿನ್ಮಾತ್ರಂ ಕ್ವಚಿತ್ಕಿಂಚನ ಕಸ್ಯಚಿತ್ |
ಸರ್ವಾನುಭವಸಾದೃಶ್ಯೇ ಕೀದೃಶೀ ನಾಮ ಸಾನ್ಯತಾ ||೩||

ಸರ್ವಸ್ಯೈವ ಹಿಮಂ ಶೀತಮುಷ್ಣೋಽಗ್ನಿರ್ಮಧುರಂ ಪಯಃ |
ಚಿನ್ಮಾತ್ರಸ್ಯಾವದಾತಸ್ಯ ಕೀದೃಗನ್ಯತ್ವಮತ್ರ ತು ||೪||

ಶರೀರನಾಶೇ ನಾಶಶ್ಚೇಚ್ಚಿನ್ಮಾತ್ರಸ್ಯ ತದುಚ್ಯತಾಂ |
ಹರ್ಷಸ್ಥಾನೇ ವಿಷಾದಃ ಕಿಂ ಮರಣೇ ಸಂಸೃತಿಕ್ಷಯೇ ||೫||

---

೩. ಎಲ್ಲಿಯೂ, ಯಾವುದೂ, ಯಾರಿಗೂ ಚಿನ್ಮಾತ್ರವಲ್ಲದ ಇನ್ನು ಏನೂ ಇಲ್ಲವೇಇಲ್ಲ. ಚಿನ್ಮಾತ್ರವಲ್ಲದ ಇನ್ನು ಯಾವುದೂ ಇಲ್ಲ ಎಂಬುದು ಸರ್ವಾನುಭವದಲ್ಲಿಯೂ ಒಂದೇರೀತಿಯಾಗಿ ಗೋಚರವಾಗುತ್ತಿರಲು, ಚಿನ್ಮಾತ್ರದಿಂದ ಅನ್ಯವಾದುದು ಉಂಟು ಎನ್ನುವುದು ಹೇಗೆ? ಇರುವುದಾದರೆ ಅದು ಏನು?

(ನನು ಚಿದಂತರಮುತ್ಪತ್ಸ್ಯತೇ ತತಃ ಸರ್ಗಃ ಪ್ರವರ್ತಿಷ್ಯತಿ ತತ್ರಾಹ - ಔತ್ತರಕಾಲಿಕ್ಯಾಃ, ಚಿತಃ, ಪೂರ್ವಚಿತೋಭೇದಃ–ಕಿಂ ಮಧ್ಯೇ ವಿಚ್ಛೇದಾನುಭವಾತ್, ಅನುಭವಸ್ಯೈವ ಚಿತ್ತ್ವಾತ್, ತತ್ಸದ್ಭಾವೇ ವಿಚ್ಛೇದಾಸಿದ್ಧೇಃ | ನಾಪಿ ವೈಲಕ್ಷಣ್ಯಂ ಅಚಿತ್ತ್ವಾಪತ್ತೇಃ|ಸರ್ವಾಂಶೇ ಅನುಭವಸ್ಯ ಪೂರ್ವೋತ್ತರಕಾಲಯೋಃ ಸಾದೃಶ್ಯೇ ಸಾ ಅನ್ಯತಾ ಭಿನ್ನತಾ ಕೀದೃಶೀನಾಮ | ಅಲೀಕಾ–ಇತ್ಯರ್ಥಃ|| ತಾ.ಪ್ರ)

೪. ಎಲ್ಲರಿಗೂ ಹಿಮವು ತಣ್ಣಗೆ, ಬೆಂಕಿಯು ಬೆಚ್ಚಗೆ, ಹಾಲು ಸಿಯ್ಯಾಗಿ, ಇರುವುದು. ಹೀಗಿರಲು, ಪರಿಶುದ್ಧವಾದ ಚಿನ್ಮಾತ್ರವು ಮಾತ್ರ ಒಬ್ಬೊಬ್ಬರಿಗೆ ಒಂದೊಂದಾಗುವುದೇನು?

(ಕಾಲಭೇದಾದಿವ ಪುರುಷಭೇದಾದಪಿ ಚಿತೋ ನ ಭೇದಃ —ತಾ.ಪ್ರ.)

೫. ಶರೀರ ನಾಶವಾದಾಗ ಸರ್ವನಾಶವಾಗುವುದು ಎನ್ನುವುದಾದರೆ, ಆ ನಾಶವನ್ನು ಚಿತ್ತಿಗೇ ಹೇಳಿ. ಹಾಗೆ ಸರ್ವನಾಶವಾಗುವುದಾದರೆ ಮರಣದಲ್ಲಿ ಸಂಸೃತಿಯೂ ನಾಶವಾಗುವುದಾದ್ದರಿಂದ ಹರ್ಷಪಡಬೇಕೇ ಹೊರತು ವಿಷಾದವೇಕೆ?

ನಚ ನಾಮ ಶರೀರಸ್ಯ ನಾಶೇ ನಶ್ಯತಿ ಚಿನ್ನಭಃ ।
ದೇಹೇ ನಷ್ಟೇಽಪಿ ಬಂಧೂನಾಂ ಮ್ಲೇಚ್ಛೈರ್ದೃಷ್ಟಾ ಪಿಶಾಚತಾ ॥೬॥

ಯಾವಚ್ಛರೀರಸತ್ತಾ ಚೇಚ್ಚೇತನಸ್ಯ ತದುಚ್ಯತಾಂ ।
ಶವಃ ಕಸ್ಮಾನ್ನ ಚಲತಿ ಸತ್ಯಖಂಡೇ ಶರೀರಕೇ ॥೭॥

---

(ನನು ಸುಖದುಃಖಾನುಭವ ಲಕ್ಷಣ ವಿಶೇಷಜ್ಞಾನಾತಿರಿಕ್ತಂ ನ ಚಿತ್ಸಾಮಾನ್ಯಮಭ್ಯುಪಗಚ್ಛಾಮಃ । ವಿಶೇಷ ವಿಜ್ಞಾನೇಷು ಚ ಅವಚ್ಛೇದಕತಾ ಸಂಬಂಧೇನ ಶರೀರಂ ಕಾರಣಂ, ತನ್ನಾಶಾಚ್ಚ ಜ್ಞಾನನಾಶ ಇತ್ಯಭ್ಯುಪಗಚ್ಛತಾಂ ॥ ಚಾರ್ವಾಕವೈಶೇಷಿಕಾದೀನಾಂ ಶಂಕಾಮುದ್ಭಾವ್ಯ ನಿರಸ್ಯತಿ -- ದುಃಖ ಪ್ರಾಗಭಾವಾ ಸಮಾನ ಕಾಲಿಕ ದುಃಖಧ್ವಂಸ ಏವಹಿ ವೋ ಮುಕ್ತಿಃ,ಸಾ ಚದೇಹ ನಾಶಾತ್ ಚಿತ್ಸಾಮಾನ್ಯನಾಶೇ ಉತ್ತರತ್ರ ದೇಹ ದುಃಖಾದಿ ಸಾಧಕಾಭಾವಾದೇವ ಸಿದ್ಧ್ಯತಿ । ನಹಿ ಚಿದತಿರಿಕ್ತಂ ತತ್ಸಾಧಕಮಸ್ತಿ । ನಚ ನಿಃಸಾಧಕೋಽಗ್ರಿಮದೇಹಃ ಸಿದ್ಧ್ಯತಿ । ನ ಚ ತಂ ವಿನಾ ತತ್ಸಾಧಿಕಾ ಚಿತ್ಸಿದ್ಧ್ಯತೀತಿ ಮುಕ್ತಿಹೇತೋರ್ಮರಣಾತ್ ಹರ್ಷ ಏವ ಸ್ಯಾನ್ನ ವಿಷಾದ ಇತ್ಯರ್ಥಃ —ತಾ. ಪ್ರ.)

೬. ಆದರೆ, ಶರೀರ ನಾಶವಾದಾಗ ಚಿದಾಕಾಶವೂ ನಾಶವಾಗುವುದು ಎಂಬುದಿಲ್ಲ; ಬಂಧುಗಳ ದೇಹವು ನಷ್ಟವಾದರೂ ಕೂಡ ಅವರು ಪಿಶಾಚವಾಗುವುದನ್ನು ಮ್ಲೇಚ್ಛರು ನೋಡಿರುವರು.

(ಪ್ರಾಯೇಣ ಹಿ ಪಿಶಾಚಾ ಬಂಧೂನೇವ ಬಾಧಂತೇ । ಪ್ರತ್ಯಂತದೇಶೇಷ್ವೇವ ಬಹುಧಾ ಪಿಶಾಚಾ ದೃಶ್ಯಂತೇ – ಇತಿ ದ್ಯೋತನಾಯ ಬಂಧುಮ್ಲೇಚ್ಛಗ್ರಹಣಂ —ತಾ. ಪ್ರ.)

೭. ಶರೀರಕ್ಕೆ ಒಂದು ಸತ್ತಾ ಉಂಟು ಎನ್ನುವುದಾದರೆ ಅದನ್ನು ಚೈತನ್ಯಕ್ಕೇ ಹೇಳಬೇಕು. ಯಾಕೆಂದರೆ, ಶರೀರವು ಅಖಂಡವಾಗಿದ್ದರೂ ಶವವೇಕೆ ಚಲಿಸುವುದಿಲ್ಲ? (ಶರೀರಕ್ಕೇ ಸತ್ತಾ ಇರುವುದಾದರೆ ಶವವೂ ಚಲಿಸಬೇಕಾದೀತು.)

ಪಿಶಾಚಾನುಭವೋ ಜೀವಧರ್ಮಶ್ಚೇತ್ತತ್ಸ ಸರ್ವದಾ ।
ಕಿಂ ನ ಪಶ್ಯತಿ ಕಿಂ ಬಂಧೌ ಮೃತೇ ಪಶ್ಯತಿ ತತ್ತಥಾ ॥೮॥

ಜೀವಧರ್ಮೋ ವಿಶಿಷ್ಟಶ್ಚೇತ್ತಾದೃಶಸ್ತಂ ನರಃ ಕಥಂ ।
ಮಿಥ್ಯಾ ದೇಶಾಂತರಮೃತೇ ಪಿಶಾಚತ್ವಂ ನ ಪಶ್ಯತಿ ॥೯॥

ತಸ್ಮಾತ್ಸರ್ವಾತ್ಮಕಂ ತ್ವೇತಚ್ಚಿನ್ಮಾತ್ರಂ ನ ನಿಯಂತ್ರಿತಂ ।
ಯದ್ಯದ್ಯತ್ರ ಯಥಾ ವೇತ್ತಿ ತತ್ತತ್ತತ್ರಾವಗಚ್ಛತಿ ॥೧೦॥

---

೮. ಪಿಶಾಚವಿದೆಯೆಂದುಕೊಂಡು ತತ್ಸಂಬಂಧವಾದ ಅನುಭವವನ್ನು ಪಡೆಯುವುದು ಜೀವಧರ್ಮವು–ಎಂದರೆ, ಜೀವಂತನಾದವನು ತನ್ನ ಭ್ರಾಂತಿಯಿಂದ ಪಿಶಾಚಾದಿಗಳನ್ನು ಕಂಡಂತೆ ಭ್ರಾಂತಿಪಡುವನು. ಮೃತನಾದವನೊಬ್ಬನು ಪಿಶಾಚ ವಾಗಿ ಬರುವುದಿಲ್ಲ ಎನ್ನುವುದಾದರೆ, ಆ ಪಿಶಾಚವನ್ನು ಯಾರೇ ಆಗಲಿ ಯಾವಾಗಲೂ ನೋಡುತ್ತಿರಬೇಕಾದೀತು. ಹಾಗೆ ಯಾವಾಗಲೂ ನೋಡದೆ, ಬಂಧುಮರಣಾ ನಂತರವೇ ನೋಡುವುದು ಏಕೆ?

೯. ಪಿಶಾಚದರ್ಶನಾದಿಗಳು ಜೀವಧರ್ಮ ಎನ್ನುವುದಾದರೆ, ವ್ಯಕ್ತಿ ಧರ್ಮ ವಿಶಿಷ್ಟವಾದ ಪಿಶಾಚವನ್ನು ಕಾಣುವುದೆಂತು ಸಾಧ್ಯವಾದೀತು? ಅಲ್ಲದೆ, ದೇಶಾಂತರ ದಲ್ಲಿರುವವನು ಮೃತನಾದನು ಎಂದು ಮಿಥ್ಯಾವಾರ್ತೆಯನ್ನು ಕೇಳಿದಾಗ ಮೃತನ ಪಿಶಾಚವೇಕೆ ಕಾಣಬಾರದು?

೧೦. ಅದರಿಂದ (ಶರೀರಸತ್ತಾ ಇಲ್ಲ) ಇರುವ ಸತ್ತೆಯು ಚಿತ್ತಿನದು; ಅದಕ್ಕೆ ಭೇದವಿನಾಶಗಳೆರಡೂ ಇಲ್ಲವಾದ್ದರಿಂದ ಅದಕ್ಕೆ (ವಸ್ತುಕೃತ ಪರಿಚ್ಛೇದವೂ ಇಲ್ಲವಾಗಿ) ಸರ್ವಾತ್ಮಕವು ಅನಿಯಂತ್ರಿತವು. ಅದನ್ನು ಯಾರು ಹೇಗೆ ಹೇಗೆ ಎಂದುಕೊಳ್ಳುವರೋ ಹಾಗೆಹಾಗೆ ಅವರಿಗೆ ಆಗುವುದು.

ಅಬಾಧಿತೈವೈಕಘನಾ ಸಂವಿದ್ಭವತಿ ಯಾದೃಶೀ ।
ತಾದೃಶ್ಯೇವಾನುಭೂತಿರ್ಹಿ ತತ್ಸ್ವಭಾವೋಽತ್ರ ಕಾರಣಂ ॥೧೧॥

ಅನ್ಯನ್ನ ಸಂಭವತ್ಯತ್ರ ಸರ್ಗಾದಾವೇವ ಕಾರಣಂ ।
ಯನ್ನಾಮ ತದಿದಾನೀಂ ಸ್ಯಾತ್ಕಥ್ಯತಾಂ ಕೀದೃಶಂ ಕಥಂ ॥೧೨॥

ಸರ್ಗಾದಾವೇವ ನೋತ್ಪನ್ನಾ ನಚ್ಯೈವಾದ್ಯಾವಭಾಸತೇ ।
ವಿಕಲ್ಪಶ್ರೀರ್ಜಗದ್ಭಾಸಾ ಕೇವಲಂ ಭಾತಿ ಚಿನ್ನಭಃ ॥೧೩॥

ಆಭಾಸಮಾತ್ರಮೇವೇದಂ ದೃಶ್ಯಮಿತ್ಯವಬುಧ್ಯತೇ ।
ದೃಶ್ಯಮಿತ್ಯವಬೋಧೇನ ತದ್ದೃಶೀ ಸ್ಯಾತ್ಕ್ವ ದೃಶ್ಯತಾ ॥೧೪॥

---

೧೧. ಅದರಿಂದ (ಕಾಲಾದಿ) ಬಾಧೆಗಳನ್ನರಿಯದೆ ಏಕಘನವಾಗಿರುವ ಸಂವಿತ್ತು ಸರ್ಗಕಾಲದಲ್ಲಿ ಹೇಗೆ ಆಗುವುದೋ, ಯಾವ ಸಂಕಲ್ಪವನ್ನು ಮಾಡುವುದೋ, ಅದರಂತೆ ಅನುಭವವು ಬರುವುದು. ಹಾಗೆ ಆಗಲು ಅದರ ಸ್ವಭಾವವೇ ಕಾರಣವು.

೧೨. ಸರ್ಗಾದಿಯಲ್ಲಿ ಸಂವಿತ್ತಲ್ಲದ ಮತ್ತೇನೂ ಕಾರಣವಿಲ್ಲ. ಒಂದು ವೇಳೆ ಉಂಟು ಎನ್ನುವುದಾದರೆ, ಅದು (ಕಾರಣವು) ಹೇಗೆ ಕಾರಣ ? ಯಾವರೀತಿ ಯಾದದ್ದು ಎಂಬುದನ್ನು ಹೇಳು.

೧೩. ವಿಕಲ್ಪಶ್ರೀಯು ಸರ್ಗಾದಿಯಲ್ಲಿ ಉತ್ಪನ್ನವಾಗಲಿಲ್ಲ; ಈಗಲೂ ಅದರ ಅವಭಾಸನವಿಲ್ಲ. ಆಗಲೂ ಈಗಲೂ ಚಿದಾಕಾಶವೇ ಜಗತ್ತಾಗಿ ಭಾನವಾಗುತ್ತಿರುವುದು.

೧೪. ಬರಿಯ ಹೊಳಹು (ಆಭಾಸ) ಮಾತ್ರವಾದ ಇದು ದೃಶ್ಯವೆಂದು ಅವಬೋಧವಾಗುವುದು. ದೃಶ್ಯವೆಂದು ಅವಬೋಧನವಾಗುವಿಕೆಯೇ ದೃಶ್ಯದ ದೃಶ್ಯತ್ವವು; ಅದನ್ನು ಬಿಟ್ಟು ಬೇರೆಯಾದ ದೃಶ್ಯತೆಯೇನಾದರೂ ಎಲ್ಲಾದರೂ ಉಂಟೇನು ?

ಸಚಮತ್ಕಾರಚಾತುರ್ಯಂ ಚಾರುಚಿನ್ನಭ ಸಾರಸಾತ್ ।
ಬೋಧೇನ ಬುಧ್ಯತೇ ದೃಶ್ಯಮಿತ್ಯಬೋಧಾನ್ನ ಬುಧ್ಯತೇ ॥೧೫॥

ಬೋಧೋಽಬೋಧಶ್ಚ ತದ್ರೂಪಮೇವಮೇವ ನಿರಾಮಯಂ ।
ಭೇದೋಽತ್ರ ವಾಚಿ ನತ್ವರ್ಥೇ ತಸ್ಮಾನ್ನಾಸ್ತ್ಯೇವ ದೃಶ್ಯತಾ ॥೧೬॥

ಯಾ ಚಾಸೀದ್ದೃಶ್ಯತೈಷಾಂ ತಾಂ ವಿದ್ಧಿ ತ್ವಮವಿಚಾರಣಾಂ ।
ಸಾ ಚೇದಾನೀಂ ವಿಚಾರೇಣ ವಿನಷ್ಟಾತಃ ಕ್ವ ದೃಶ್ಯತೇ ॥೧೭॥

ಅಸ್ಮಿನ್ನೇವ ಧಿಯೋ ಯತ್ನ ಆತ್ಮಜ್ಞಾನವಿಚಾರಣೇ ।
ಯತ್ನೇನ ಪರಮೋಽಭ್ಯಾಸಃ ಸ ಲೋಕದ್ವಯಸಿದ್ಧಿದಃ ॥೧೮॥

---

೧೫. ಚಮತ್ಕಾರ ಚಾತುರ್ಯವುಳ್ಳ ಮನೋಹರವಾದ ಚಿದಾಕಾಶ ಕಮಲದಿಂದ, ದೃಶ್ಯಬೋಧದಿಂದ ದೃಶ್ಯವು ಬುದ್ಧವಾಗುವುದು ; ಅಬೋಧದಿಂದ ಅಬುದ್ಧವಾಗುವುದು.

೧೬. ಬೋಧ-ಅಬೋಧಗಳೆರಡೂ ಚಿತ್ತಿನ ರೂಪಗಳೇ ! ನಿರಾಮಯವಾದ ಚಿತ್ತಿನ ರೂಪಗಳೇ ಈ ಬೋಧ-ಅಬೋಧಗಳು. ಇವೆರಡಕ್ಕೂ ಇರುವ ಭೇದವು ವಾಕ್ಕಿನಲ್ಲಿಯೇ ಹೊರತು ಅರ್ಥದಲ್ಲಿಲ್ಲ. ಆದ್ದರಿಂದ ದೃಶ್ಯತೆಯೇ ಇಲ್ಲ.

(ಜಾಗ್ರತ್ಸ್ವಪ್ನಬೋಧೇನ ಬುಧ್ಯತೇ ಸುಷುಪ್ತೌ ತ್ವಬೋಧಾನ್ನ ಬುಧ್ಯತೇ ।
– –ನಹಿ ಬೋಧಮಂತರೇಣ ಅಬೋಧಸ್ಯರೂಪಂ ಪ್ರಸಿಧ್ಯತಿ।ಸತಿ ಚ ಬೋಧೇ ತತ್ರ ನಭೋಽರ್ಥೋ ದುರ್ಲಭ ಇತಿ ರಾಹೋಃ ಶಿರಃ, ಶಿರಏವ ರಾಹುಃ, ಇತಿವತ್, ವಾಙ್ಮಾತ್ರಕೃತೋಭೇದೋ ನತ್ವರ್ಥೇಽಸ್ತೀತ್ಯರ್ಥಃ —ತಾ. ಪ್ರ.)

೧೭. ಈ ದೃಶ್ಯಗಳ ದೃಶ್ಯತೆ ಏನಿತ್ತೋ ಅದೇ ಅವಿಚಾರದಿಂದ ಇತ್ತು ; ಅದು ವಿಚಾರದಿಂದ ಈಗ ನಷ್ಟವಾಯಿತು. ಹಾಗೆಂದಮೇಲೆ ಅದು ಕಾಣುವುದೆಲ್ಲಿ ?

೧೮. (ಅದರಿಂದ) ಆತ್ಮಜ್ಞಾನವಿಚಾರ ಮಾಡುವುದೆಂಬ ಯತ್ನದಲ್ಲಿಯೇ ಮನಸ್ಸು ಮಾಡಬೇಕು. ಯತ್ನದಿಂದ ಪರಮವಾದ ಅಭ್ಯಾಸವು ಸಿದ್ಧಿಸುವುದು. ಆ ಅಭ್ಯಾಸವೇ ಲೋಕದ್ವಯಗಳಲ್ಲಿಯೂ ಸಿದ್ಧಿಯನ್ನು ಕೊಡುವುದು.

ಅವಿದ್ಯೋಽಪಶಮಸ್ತ್ವೇಷ ಜಾತೋಽಪಿ ಭವತಾಮಿಹ ।
ಅಭ್ಯಾಸೇನ ವಿನಾ ಸಾಧೋ ನ ಸಿದ್ಧಿಮುಪಗಚ್ಛತಿ ॥೧೯॥

ನರೋದ್ವೇಗಂ ಸಂಪರಿತ್ಯಜ್ಯ ಗೃಹೀತ್ವಾನುದಿನಂ ಕ್ಷಣಂ ।
ಲೋಕದ್ವಯಹಿತಂ ಪಥ್ಯಮಿದಂ ಶಾಸ್ತ್ರಂ ವಿಚಾರ್ಯತಾಂ ॥೨೦॥

ವಿಜ್ಞಾತಮಪ್ಯವಿಜ್ಞಾತವದಾತ್ಮಜ್ಞಾನಮಿದಂ ಭವೇತ್ ।
ಭವತಾಂ ಭೂರಿಭಾಗಾನಾಂ ಸಂಭೂಯಾಭ್ಯಸನಂ ವಿನಾ ॥೨೧॥

ಯೋಽಯಮರ್ಥಂ ಪ್ರಾರ್ಥಯತೇ ತದರ್ಥಂ ಯತತೇ ತಥಾ ।
ಸೋಽವಶ್ಯಂ ತಮವಾಪ್ನೋತಿ ನ ಚೇಚ್ಛಾಂತೋ ನಿವರ್ತತೇ ॥೨೨॥

---

(ತಥಾಚ ಸೂತ್ರೇ "ಆವೃತ್ತಿರಸಕೃದುಪದೇಶಾತ್" "ಐಹಿಕಮಪ್ರಸ್ತುತ ಪ್ರತಿಬಂಧೇನ ತದ್ದರ್ಶನಾತ್" ಇತಿ —ತಾ. ಪ್ರ.)

೧೯. ಎಲೈ ಸಾಧುವೆ, ಅವಿದ್ಯೆಯ ಉಪಶಮವು ನಿನಗೆ ಲಭಿಸಿದರೂ ಅಭ್ಯಾಸವಿಲ್ಲದೆ ಸಿದ್ಧಿಯಾಗುವುದಿಲ್ಲ.

೨೦. ಮಾನವನು (ಆಲಸ್ಯ—ಅರತಿ—ಮೊದಲಾದ) ಉದ್ವೇಗಗಳನ್ನು ಬಿಟ್ಟು ಅನುದಿನವೂ ಪ್ರತಿಕ್ಷಣದಲ್ಲಿಯೂ ಲೋಕದ್ವಯಹಿತವಾಗಿರುವ ಈ ಮಹಾರಾಮಾಯಣ ಶಾಸ್ತ್ರವನ್ನು ವಿಚಾರಮಾಡಬೇಕು.

೨೧. ಆತ್ಮಜ್ಞಾನವಿದು ತಿಳಿದರೂ ತಿಳಿಯದಿರುವಂತೆಯೇ! ಅದರಿಂದ ಮಹಾಭಾಗರಾದ ನೀವೆಲ್ಲರೂ ಒಟ್ಟಿಗೆ ಸೇರಿ (ಪರಸ್ಪರಾನುಭವ ಸಂವಾದದಿಂದ) ಅಭ್ಯಾಸಮಾಡುವುದೇ ಉಪಾಯವು.

೨೨. ಯಾವನು ಯಾವುದನ್ನು ಬೇಕು ಎನ್ನುವನೋ ಅದೇ ಅರ್ಥಕ್ಕಾಗಿ ಅವನು ಯತ್ನಮಾಡುವನು. ಅವನು ಶಾಂತಯತ್ನನಾಗಿ ಹಿಂತಿರುಗದೇಹೋದರೆ, ಅವಶ್ಯವಾಗಿ ಅದನ್ನು ಹೊಂದಿಯೇಹೊಂದುವನು.

ತಸ್ಮಾದಸ್ಮಾನ್ನಿವರ್ತಧ್ವಮಸಚ್ಛಾಸ್ತ್ರವಿಚಾರಣಾತ್ ।
ಶಾಂತಿಂ ಪ್ರಾಪ್ಸ್ಯಥ ಸಚ್ಛಾಸ್ತ್ರಾಜ್ಜಯಲಕ್ಷ್ಮೀಂ ಯಥಾ ರಣಾತ್ ॥೨೩॥

ವಿವೇಕೇ ಚಾವಿವೇಕೇ ಚ ವಹತ್ಯೇಷಾ ಮನೋನದೀ ।
ಯತ್ರೈವ ವಾಹ್ಯತೇ ಯತ್ನಾತ್ತತ್ರೈವ ಸ್ಥಿತಿಮೃಚ್ಛತಿ ॥೨೪॥

ಅಸ್ಮಾಚ್ಛಾಸ್ತ್ರಾದೃತೇ ಶ್ರೇಯೋ ನ ಭೂತಂ ನ ಭವಿಷ್ಯತಿ ।
ತತಃ ಪರಮಬೋಧಾರ್ಥಮಿದಮೇವ ವಿಚಾರ್ಯತಾಂ ॥೨೫॥

ಸ್ವಯಮೇವ ವಿಚಾರ್ಯೇದಂ ಪರೋ ಬೋಧೋಽನುಭೂಯತೇ ।
ಸಂಸಾರಾಧ್ವಶ್ರಮಹರೋ ನತ್ವೇತದ್ವರಶಾಪವತ್ ॥೨೬॥

ಯನ್ನ ಪಿತ್ರಾ ನವಾ ಮಾತ್ರಾ ನ ಚಾಪಿ ಸುಕೃತೈಃ ಕೃತಂ ।
ಶ್ರೇಯಸ್ತದ್ವಃ ಪರಿಜ್ಞಾತಮಿದಮಾಶು ಕರಿಷ್ಯತಿ ॥೨೭॥

---

೨೩. ಆದರಿಂದ ಅಸಚ್ಛಾಸ್ತ್ರವಿಚಾರಣದಿಂದ ಹಿಂತಿರುಗಿರಿ; ರಣದಲ್ಲಿ ವಿಜಯಲಕ್ಷ್ಮಿಯನ್ನು ಪಡೆಯುವಂತೆ ಸಚ್ಛಾಸ್ತ್ರದಿಂದ ಶಾಂತಿಯನ್ನು ಹೊಂದಿರಿ.

೨೪. ಈ ಮನೋನದಿಯು ವಿವೇಕದಲ್ಲಿಯೂ ಹರಿಯುವುದು; ಅವಿವೇಕದಲ್ಲಿಯೂ ಹರಿಯುವುದು. ಯತ್ನಪೂರ್ವಕವಾಗಿ ಎಲ್ಲಿ ಹರಿಯಿಸಿದರೆ, ಅಲ್ಲಿಯೇ ತಾನು ಹರಿಯುವುದು.

೨೫. ಈ ಶಾಸ್ತ್ರವನ್ನು ಬಿಟ್ಟು ಇನ್ನು ಯಾವ ಮಾರ್ಗದಿಂದಲೂ ಶ್ರೇಯಸ್ಸು ಯಾರಿಗೂ ಲಭಿಸಲಿಲ್ಲ; ಲಭಿಸುವುದಿಲ್ಲ. ಆದರಿಂದ ಪರಮಬೋಧವು ಲಭಿಸಲೆಂದು ಈ ಶಾಸ್ತ್ರವನ್ನು ವಿಚಾರಮಾಡಿರಿ.

೨೬. ಸ್ವಯಂ ಇದನ್ನು ವಿಚಾರಮಾಡಿರಿ; ಇದರಿಂದ ಪರಮಬೋಧವು ಅನುಭವಕ್ಕೆ ಬರುವುದು. ವರ ಶಾಪಗಳಂತೆ ಇದು ಕಾಲಾಂತರದಲ್ಲಿ ಲಭಿಸುವುದಲ್ಲ; ಕೂಡಲೇ ಸಂಸಾರವೆಂಬ ಹಾದಿ ನಡೆದ ಆಯಾಸವನ್ನು ಪರಿಹರಿಸುವುದು.

೨೭. ತಂದೆ, ತಾಯಿ, ಪೂರ್ವಪುಣ್ಯ, ಇವುಗಳೊಂದೂ ಕೊಡಲಾರದ ಶ್ರೇಯಸ್ಸನ್ನು ಈ ಶಾಸ್ತ್ರವು ತನ್ನನ್ನು ಅರಿತವರಿಗೆ ಕೊಡುವುದು.

ಭವಬಂಧಮಯೀ ಸಾಧೋ ವಿಷಮೇಯಂ ವಿಷೂಚಿಕಾ !
ಆತ್ಮಜ್ಞಾನಾದೃತೇ ದೀರ್ಘಾ ನ ಕದಾಚನ ಶಾಮ್ಯತಿ ॥೨೮॥

ಮಹಾಮೋಹಮಯೀ ಮಾಯಾ ಮಿಥ್ಯೈವಾಹಮಿತಿ ಸ್ಥಿತಾ ।
ಶಾಸ್ತ್ರಾರ್ಥಭಾವನೇನಾಶು ಮುಚ್ಯತಾಂ ಪರಶೋಚ್ಯತಾ ॥೨೯॥

ಯಾತ ಮಾಪಾತಮಧುರಂ ವ್ಯೋಮ ವ್ಯೋಮೈಕರೂಪಿಣೀಂ ।
ಶೂನ್ಯಂ ವಾಯುಂ ಲಿಹಂತೋಽಂತರ್ಲೇಲಿಹಾನಾ ಇವಾಹಯಃ ॥೩೦॥

ಯಾಂತಿ ವೋ ದಿವಸಾಃ ಕಷ್ಟಮವಿಜ್ಞಾತಗಮಾಗಮಾಃ ।
ವ್ಯವಹಾರೇ ಹಿ ತೈರೇವ ಪ್ರತಿಪಾಲಯತಾಂ ಮೃತಿಂ ॥೩೧॥

---

೨೮. ಎಲೈ ಸಾಧುವೆ, ವಿಷಮವಾದ ಈ ಭವವು ಬಂಧಮಯಿಯಾದ ವಿಷೂಚಿಕೆಯು. ಬಹುವಾಗಿ ಹಬ್ಬಿರುವ ಈ ವಿಷೂಚಿಕೆಯು ಆತ್ಮಜ್ಞಾನವನ್ನು ಬಿಟ್ಟು ಇನ್ನು ಯಾವ ಉಪಾಯದಿಂದಲೂ ಶಾಂತವಾಗುವುದಿಲ್ಲ.

೨೯. ಮಾಯೆಯು ಮಹಾಮೋಹಮಯಿಯು. ಮಿಥ್ಯಾಭೂತವಾದರೂ ಅಹಂ ಎಂದು ಕುಳಿತಿರುವುದು. ಇದು ಪರಮ ಶೋಚ್ಯವಾದುದು. ಇದನ್ನು ಶಾಸ್ತ್ರಾರ್ಥಭಾವನೆಯಿಂದ ಆದಷ್ಟುಬೇಗ ಕಳೆದುಕೊಳ್ಳಿರಿ.

೩೦. ಆಪಾತಮಧುರವಾಗಿದ್ದರೂ ಇದು ಶೂನ್ಯವಾದ ಆಕಾಶವೇ ! (ರಸ) ಶೂನ್ಯವಾದ ವಾಯುವನ್ನು ನೆಕ್ಕಿಕೊಳ್ಳುವ ಹಾವುಗಳಹಾಗೆ ಆಕಾಶದಂತೆ ಶೂನ್ಯ ರೂಪುಳ್ಳ ಈ ಸಂಸಾರವನ್ನು (ವಿಷಯಗಳನ್ನು) ಹೊಂದಬೇಡಿರಿ.

೩೧ ಹೇಗೆ ಬಂತು ? ಹೇಗೆ ಹೋಯಿತು ? ಎನ್ನುವುದೇ ತಿಳಿಯದೇ ದಿನ ದಿನಗಳೂ ಬಂದುಬಂದು ಹೋಗುತ್ತಿರುವುವು. ವ್ಯವಹಾರದಲ್ಲಿ ಆ ದಿನಗಳಿಂದಲೆ ಮರಣವು ಸಮೀಪಿಸುತ್ತಿರುವುದು ಎಂಬುದನ್ನು ಲೆಕ್ಕಿಸಿಕೊಳ್ಳುತ್ತಿರಿ.

ತಾವದಾಶ್ವಾಸನೈಷಾಸ್ತಿ ಭವತಾಂ ಭಯಭಾಗಿನಾಂ ।
ದಿನಾನಿ ಕತಿಚಿದ್ಯಾವನ್ನಾಯಾತೋ ಮರಣಾವಧಿಃ ॥೩೨॥

ಆಗಚ್ಛಂತ್ಯಾಂ ಮೃತೌ ಕಷ್ಟಂ ಪರಿತಾಪಮವಾಪ್ಸ್ಯಥ ।
ತಂ ಯತ್ರಾಂಗಾಂಗವಿಚ್ಛೇದಃ ಶೀತಚಂದನಲೇಪನಂ ॥೩೩॥

ಕ್ರೀಣಂತಿ ಪ್ರಾಣಪಣ್ಯೇನ ಧನಂ ಮಾನಂ ಧನಭ್ರಮಾಃ ।
ಯಥಾಶಾಸ್ತ್ರೈಃ ಕಥಂ ಬುದ್ಧ್ಯಾ ನ ಕ್ರೀಣಂತ್ಯಜರಂ ಪದಂ ॥೩೪॥

ಪದಂ ಪರಮಯತ್ನೇನ ಕ್ರಿಯತೇ ಯೈಶ್ಚಿದಂಬರೇ ।
ಕಥಂ ತೈಃ ಸತ್ಯತೇಽಜ್ಞಾನಶತ್ರುಪಾದಃ ಸ್ವಮೂರ್ಧನಿ ॥೩೫॥

---

೩೨. ಭಯಭಾಗಿಗಳಾದವರೆ, ನಿಮಗೆ ಮರಣದ ಅವಧಿಯು ಬರುವುದಕ್ಕೆ ಇನ್ನೂ ಅಷ್ಟು ದಿನಗಳಿರುವುವು ಎನ್ನುವವರೆಗೂ ನಿಮಗೆ ಈ ಆಶ್ವಾಸನವುಂಟು.

೩೩. ಮರಣವು ಸನ್ನಿಹಿತವಾದಾಗ ಪರಿತಾಪದಿಂದ ಕಷ್ಟಪಡುವಿರಿ. ಆಗ ಅಂಗಾಂಗ ವಿಚ್ಛೇದವಾಗುವುದು : ಅದನ್ನೂ ಶೀತಚಂದನ ಲೇಪನದಂತೆ ಅನಿವಾರ್ಯವಾಗಿ ಅನುಭವಿಸಬೇಕಾಗುವುದು.

೩೪. ಪ್ರಾಣವನ್ನಾದರೂ ಪಣವಾಗಿಟ್ಟು ಧನಭ್ರಾಂತಿಯುಳ್ಳವರು ಧನಮಾನಗಳನ್ನು ಕ್ರಯಕ್ಕೆ ಪಡೆಯುವಂತೆ, ಶಾಸ್ತ್ರಗಳಲ್ಲಿ ಹೇಳುವುದನ್ನು ತಿಳಿದು ಆ ಮಾರ್ಗದಿಂದ ಅಜರವಾದ ಪದವಿಯನ್ನೇಕೆ ಬುದ್ಧಿಪೂರ್ವಕವಾಗಿ ಸಂಪಾದಿಸುವುದಿಲ್ಲ ?

೩೫. ಯಾರು ಪರಮಪ್ರಯತ್ನಮಾಡಿ ಚಿದಂಬರದಲ್ಲಿ ನಿಲ್ಲುವರೋ ಅವರು ಅಜ್ಞಾನ ಶತ್ರುಪಾದವನ್ನು ತಲೆಯಲ್ಲಿ ತಳೆಯಬೇಕಾಗಿಲ್ಲ.

(ಪರಂ ಆಯತ್ನೇನ ಸ್ವತತ್ತ್ವ ಜ್ಞಾನಮಾತ್ರೇಣ—ತಾ. ಪ್ರ.)

ನಿರ್ಮಾನಮೋಹಮಾಪನ್ನಾ ಗತಿಂ ಗಚ್ಛತ ಮಾಧವಾಂ ।
ಕ್ರಿಯತೇ ಸ್ವಾತ್ಮಬೋಧೇನ ಮೂಲಕಾಷೋ ಮಹಾಪದಾಂ ॥೩೬॥

ಪ್ರಲಪಾತಮಹೋರಾತ್ರಂ ಯುಷ್ಮದರ್ಥೇನ ಮಾಮಿಮಂ ।
ಯಂ ಪ್ರವೃಶ್ಯೇದವಾಕರ್ಣ್ಯ ಸ್ವಾತ್ಮನ್ಯೈವಾತ್ಮತಾರ್ಪ್ಯತಾಂ ॥೩೭॥

ಅದ್ಯೈವ ನ ಚಿಕಿತ್ಸಾಂ ಯಃ ಕರೋತಿ ಮರಣಾಪದಃ ।
ಸಂಪ್ರಾಪ್ತಾಯಾಂ ಮೃತೌ ಮೂಢಃ ಕರಿಷ್ಯತಿ ಕಿಮಾತುರಃ ॥೩೮॥

ಅಸ್ಮಾದ್ಗ್ರಂಥಾದೃತೇ ಗ್ರಂಥೋ ನಾನ್ಯಃ ಸ್ವಾತ್ಮಾವಬೋಧನೇ ।
ನೂನಮರ್ಥಕರೋ ಗ್ರಾಹ್ಯಸ್ತಿಲಸ್ತೈಲಾರ್ಥಿನಾಮಿವ ॥೩೯॥

---

೩೬. ಮಾನಮೋಹಗಳಿಗೆ ವಶರಾಗದೆ ಸದ್ಗತಿಯನ್ನು ಸಾಧಿಸಿ: ಅಧಮವಾದ ಗತಿಯನ್ನು ತೊರೆಯಿರಿ. ಸ್ವಾತ್ಮಬೋಧವನ್ನು (ಅಥವಾ ನಾವು ಹೇಳುವ ಈ ಶಾಸ್ತ್ರವನ್ನು) ಪಡೆದರೆ ಮಹಾಪದವನ್ನು ಮೂಲಶೋಧದಿಂದ ಕಿತ್ತಿಸೆಯುವಿರಿ.

೩೭. ಅಹೋರಾತ್ರಗಳೆನ್ನದೆ ನಿಮಗಾಗಿ ಅರಿಚಿಕೊಳ್ಳುತ್ತಿರುವ ನನ್ನನ್ನು ನೋಡಿಯಾದರೂ, ನಾನು ಹೇಳುತ್ತಿರುವುದನ್ನು ಕೇಳಿಯಾದರೂ, ಪ್ರಯತ್ನಪಟ್ಟು ಸ್ವಾತ್ಮನಾ, ಆತ್ಮತೆಯನ್ನು ಹೊಂದಿರಿ. (ದೇಹೇಂದ್ರಿಯಾದಿ ಪರಿಚ್ಛಿನ್ನಾತ್ಮವಾದವನ್ನು ಬಿಟ್ಟು, ಯಥಾಭೂತ ಬ್ರಹ್ಮಾತ್ಮವನ್ನು ಪಡೆಯಿರಿ).

೩೮. ಈಗಲೇ ಮರಣವೆಂಬ ಆಪತ್ತಿಗೆ ಯಾವನು ಚಿಕಿತ್ಸೆಯನ್ನು ಮಾಡುವುದಿಲ್ಲವೋ ಅಂತಹ ಮೂಢನು ಮರಣವು ಸಂಪ್ರಾಪ್ತವಾದಾಗ, ಆ ಆತುರದಲ್ಲಿ ಏನುಮಾಡಬಲ್ಲನು ?

೩೯. ಈ ಗ್ರಂಥವನ್ನು ಬಿಟ್ಟರೆ ಇನ್ನು ಯಾವ ಗ್ರಂಥವೂ ಸ್ವಾತ್ಮಾವಬೋಧನದಲ್ಲಿ ಇಷ್ಟು ಸಹಾಯಕವಲ್ಲ : ಆದರಿಂದ ಎಣ್ಣೆ ಬೇಕೆನ್ನುವವರು ಎಳ್ಳನ್ನು ಕೋರುವಂತೆ, ಮುಮುಕ್ಷುಗಳು ಈ ಗ್ರಂಥವನ್ನು ಸಂಗ್ರಹಿಸಬೇಕು.

ಆತ್ಮಜ್ಞಾನಮಿದಂ ಶಾಸ್ತ್ರಂ ಪ್ರಕಾಶಯತಿ ದೀಪವತ್ |
ಪಿತೇವ ಬೋಧಯತ್ಯಾಶು ಕಾಂತೇವ ರಮಯತ್ಯಲಂ ॥೪೦॥

ವಿದ್ಯಮಾನಮಪಿ ಜ್ಞಾನಂ ಜ್ಞಾತಂ ಶಾಸ್ತ್ರಗಣಾನ್ನ ಯತ್ |
ದುರ್ಬೋಧಂ ಮಧುರಂ ತತ್ತು ಜ್ಞಾಸ್ಯಂತೀತೋ ನ ಸಂಶಯಃ ॥೪೧॥

ಇದಮುತ್ತಮಮಾಖ್ಯಾನಂ ಮುಖ್ಯಾನಾಂ ಶಾಸ್ತ್ರದೃಷ್ಟಿಷು ।
ಸುಖೇನ ಬೋಧದಂ ಹೃದ್ಯಮಪೂರ್ವಂ ನತು ಕಿಂಚನ ॥೪೩॥

---

೪೦. ಈ ಶಾಸ್ತ್ರವು ಆತ್ಮಜ್ಞಾನವನ್ನು ದೀಪವಿಟ್ಟು ತೋರಿದಂತೆ ತೋರಿಸಿ ಕೊಡುವುದು: ತಂದೆಯಂತೆ ಆತ್ಮಜ್ಞಾನವನ್ನು ಬೋಧಿಸುವುದು: ಅಷ್ಟೇ ಅಲ್ಲ: ಕಾಂತೆಯಂತೆ ಆತ್ಮಜ್ಞಾನವು ಮನೋಹರವಾಗುವಂತೆ ಮಾಡುವುದು.

೪೧. ನಿತ್ಯ ಸನ್ನಿಹಿತವಾಗಿದ್ದರೂ ಇತರ ಶಾಸ್ತ್ರಗಳಿಂದ (ಸುಲಭವಾಗಿ) ಜ್ಞಾತವಾಗದ ಜ್ಞಾನವನ್ನು, ದುರ್ಬೋಧವಾದರೂ ಮಧುರವಾಗಿ ಇಲ್ಲಿ ಪಡೆಯು ವುದು. ಇದರಲ್ಲಿ ಸಂಶಯವಿಲ್ಲ.

೪೩. ಶಾಸ್ತ್ರದೃಷ್ಟಿಯಿಂದ ಪ್ರಸಿದ್ಧವಾದ ಮುಖ್ಯ ಮುಖ್ಯ ಆಖ್ಯಾನಗಳಲ್ಲಿ ಇದು ಉತ್ತಮೋತ್ತಮವಾದುದು: ಸುಖವಾಗಿ ಹೃದ್ಯವಾಗಿ ಬೋಧವನ್ನು ತಂದು ಕೊಡುವುದು. ಇದರಲ್ಲಿ ಅಪೂರ್ವವು ಎಂದರೆ ಸಂಪ್ರದಾಯವನ್ನು ಬಿಟ್ಟಿದು ಏನೂ ಇಲ್ಲ.

(ಅಪೂರ್ವಂ ಅನಾದಿ ತತ್ತ್ವವಿತ್ ಸಂಪ್ರದಾಯ ಪ್ರಸಿದ್ಧ ವ್ಯತಿರಿಕ್ತಂ ಸ್ವ ಕಪೋಲ ಕಲ್ಪಿತಂ ಕಿಂಚನ ವಸ್ತು ನಾಸ್ತ್ಯೇವ—ತಾ. ಪ್ರ.)

ಹೇಯೋಪಾದೇಯಗಳನ್ನು ತಿರಸ್ಕರಿಸುವ ವೇದಾಂತಿಗಳು ಸಂಪ್ರದಾಯವ ನ್ನೇಕೆ ಇಷ್ಟು ಗೌರವಿಸುವರು? ಸಕಲಶಾಸ್ತ್ರ ವಿದಪಿ ಅಸಂಪ್ರದಾಯವಿತ್ ಮೂಢ ಇವ ಪರಿತ್ಯಾಜ್ಯಃ ಎಂದೇಕೆ ಹೇಳುತ್ತಾರೆ? ಎಂಬುದು ಆಧುನಿಕರ ಪ್ರಬಲಸಂಶಯ. ದಕ್ಕೆ ಉತ್ತರವಿಷ್ಟು.

ಸತ್ಯವು ತ್ರಿಕಾಲಾಬಾಧಿತವು: ಏಕೆಂದರೆ ಕಾಲವು ದೇಶಕಲನಾದಿಗಳಂತೆ ಮಾಯಾಜನ್ಯವು. ಮಾಯೆಯಿಂದ ಶಬಲಿತವಾಗದ ಶುದ್ಧಬ್ರಹ್ಮ: ಮಾಯಾ ಸಂಪರ್ಕದಿಂದ ಚಿತ್ರವಿಚಿತ್ರವಾದ ಶಬಲಬ್ರಹ್ಮ ಎರಡೂ ಸತ್ಯವೇ! ಅಧಿಷ್ಠಾನದೃಷ್ಟಿ ಯಿಂದ ಶುದ್ಧ ಬ್ರಹ್ಮವಾದರೆ, ಅನುಸಂಧಾನ ದೃಷ್ಟಿಯಿಂದ ಶಬಲಬ್ರಹ್ಮ ಎರಡೂ ಮಾಯಾಕಲ್ಪಿತ ದೇಶಕಾಲ ಕಲನಾದಿಗಳಿಂದ ದೂಷ್ಯವಾಗದವು. ಇಂತಹ ಅಬಾ ದಿತ ಸತ್ಯವನ್ನು ಯಾರು ಯಾವಾಗ ಕಂಡರೂ ಒಂದೇ ಆಗಿರಬೇಕು. ಹಾಗಿಲ್ಲದೆ ಗಳಿಗೆಗೊಂದು ಬಣ್ಣವೆಂದಾದರೆ ಅದು ಸತ್ಯವೆಂತಾದೀತು? ಆ ಸತ್ಯವನ್ನು ಕಾಣಲು ನಾನಾ ಮಾರ್ಗಗಳು—ಆ ಮಾರ್ಗಗಳು ಋಜುವಾದಾಗ ಅವು ಅಬಾಧಿತ ಸತ್ಯ ವನ್ನೇ ತೋರುವುವು: ಹಾಗೆ ಅಬಾಧಿತ ಸತ್ಯವನ್ನು ತೋರುವ ಮಾರ್ಗಗಳೆಲ್ಲ ಸಂಪ್ರ ದಾಯಗಳು. ಅವು ರಾಜಮಾರ್ಗಗಳಿದ್ದಂತೆ. ಅದುಬಿಟ್ಟು ಬುದ್ಧಿಗೆ ತೋರಿದಂತೆ ಹೋಗುವುದಾದರೆ ಬುದ್ಧಿಯು ತನ್ನನ್ನು ಮೀರುವೆಡೆಗೆ ಅದೆಂತು ಕರೆದೊಯ್ಯು ವುದು? ಅದರಿಂದ ಬುದ್ಧಿಫಲವಾದ ತರ್ಕವನ್ನು ಹಿಡಿಯುವಾಗಲೂ ಶ್ರುತಿ ಮತ ಸ್ತರ್ಕೋಽನು ಸಂಧೀಯತಾಂ ಎಂದರು. ಹಾಗಿಲ್ಲದೆ ವಿಪರೀತ ತರ್ಕವನ್ನು ಹಿಡಿ ದವರಿಗೆ ತರ್ಕಃ ಅಪ್ರತಿಷ್ಠಾನಾತ್ ಎಂಬ ಸೂತ್ರವು ಉತ್ತರವನ್ನು ಹೇಳಿತು: ಅದ ನ್ನೇ ವಿಸ್ತಾರವಾಗಿ ಉಪನಿಷತ್ತು ಮೊದಲೇ ನೈಷಾ ತರ್ಕೇಣ ಮತಿರಾಪನೇಯಾ ಎಂದು ಹೇಳಿದೆ.

ಜೊತೆಗೆ ಮನೋಬುದ್ಧಿಗಳು ನಿರಸ್ತವಾಗುವವರೆಗೆ ವೇದಾಂತವು ವೇದ್ಯವಾ ಗುವುದಿಲ್ಲ ಎನ್ನುವುದನ್ನೂ ಗಮನಿಸಬೇಕು ಅಖಂಡೈಕರಸ ಬ್ರಹ್ಮವು ವೇದ್ಯವಾ ಯಿತು ಎಂದರೆ ವೇದನ ಸಾಧನಗಳೆಲ್ಲವೂ ಬ್ರಹ್ಮಾಗ್ನೌ ಬ್ರಹ್ಮಾರ್ಪಣವಾಗಿರುವು ವೆಂದೇ ಅರ್ಥ. ಅದರಿಂದ ತಿಳಿದವರು ಸಂಪ್ರದಾಯವನ್ನು ಅಂಗೀಕರಿಸುವರು

ಮತ್ತೆ ಈಗ ಆಧುನಿಕರು ಬಿಡುವುದು, ಸಂಪ್ರದಾಯವನ್ನು ಗೌರವಿಸದಿರು ವುದು ಅಸೂಯೆಯಿಂದ ಎಂಬುದನ್ನು ಮರೆಯಬಾರದು. ಬುದ್ಧಿಯಿಂದ ವಿಷಯ ವನ್ನು ವಿಚಿಂತಿಸುವಾಗ ಬುದ್ಧೇಸ್ತು ಪರತಸ್ತು ತಃ ಎಂಬ ಆದೇಶವನ್ನು ಇಟ್ಟುಕೊಳ್ಳ ದಿದ್ದರೆ, ಅಹಂಕಾರ ವಿಜೃಂಭಣವು ಮರೆಯಾಗುವುದೆಂತು? ಅಹಂಕಾರ ದೂಷ್ಯ ವಾದ ಸಿದ್ಧಾಂತವು ಸಿದ್ಧಾಂತವಾಗುವುದಾದರೂ ಹೇಗೆ? ಅದರಿಂದಲೇ ಬುದ್ಧಿ ಯನ್ನು ಹಿಡಿದವರಿಗೆ ಅನೇಕ ಪ್ರಸ್ಥಾನಗಳು. ಅಂತಹ ಪ್ರಸ್ಥಾನಗಳನ್ನು ಪುರಸ್ಕ ರಿಸುವವರಿಗೆ, ಸುಷುಪ್ತಿಕಾಲೇ ಇತ್ಯಾದಿಯಾಗಿ ಹೇಳುವ ಶ್ರುತಿಮತವು ಉತ್ತರ. ಎಲ್ಲಿಯವರೆಗೆ ಇಂದ್ರಿಯಗಳು ಬಹಿರ್ಮುಖವಾಗಿರುವುವೋ ಅಲ್ಲಿಯವರೆಗೆಜಾಗ್ರತ್ತು.

ನಾನಾಖ್ಯಾನಕಥಾಚಿತ್ರೈರ್ವಿನೋದೇನ ವಿಚಾರಯೇತ್ ।
ಇದಂ ಶಾಸ್ತ್ರಂ ಪರಂ ಯಾತಿ ಧ್ರುವಮಾತ್ಮಾಸ್ತ್ಯತ್ರ ಸಂಶಯಃ ॥೪೩॥

ಯೋ ಹ್ಯದ್ಯಾಪಿ ನ ಸಂಪ್ರಾಪ್ತಃ ಪಂಡಿತೈರವಿಖಂಡಿತೈಃ ।
ಸ ಇತಃ ಪ್ರಾಪ್ಯತೇ ಬೋಧಃ ಸುವರ್ಣಮಿವ ಸೈಕತಾತ್ ॥೪೪॥

---

ಯಾವಾಗ ಅವು ಅಂತರ್ಮುಖವಾಗುವುವೋ ಆಗ ಸ್ವಪ್ನ. ಈ ಎರಡರಲ್ಲೂ ಇಂದ್ರಿಯಗಳೇ ಮುಖ್ಯವಾದ್ದರಿಂದ ಏಕವೇ ಅನೇಕವಾಗಿ ಕಾಣುವುದು. ಬುದ್ಧಿಮನ ಇಂದ್ರಿಯಗಳು ನಿಷ್ಕ್ರಿಯವಾದ ಸುಷುಪ್ತಿಯಲ್ಲಿ ಅದ್ವಿತೀಯವಾದ ಐಕ್ಯವು ಕಾಣುವುದು. ತುರೀಯದಲ್ಲಿ ಸುಷುಪ್ತಿಯಲ್ಲಿದ್ದ ತಮೋಜ್ಞಾನವು ಕರಗಿ ಶುದ್ಧಜ್ಞಾನ ಪರ್ಯವಸಾಯಿಯಾಗುವುದು ಆಗ ದೃಶ್ಯವು ಲಯವಾಗಿ ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣ ಸ್ಥಿತಃ ಎಂಬುದು ಕಾಣಿಸುವುದು: ದೃಶ್ಯಲಯವಾಗಿ ವಿಷ್ಣು ಪದವು ಗೋಚರವಾಗುವುದು ಅಲ್ಲಿ ಆಗ ಸತ್ಯದರ್ಶನವು ಎಂದರೆ ಅರ್ಥಾತ್ ಬ್ರಹ್ಮಪ್ರಾಪ್ತಿಯು ಎಂದರೆ ಪ್ರಜ್ಞಾನ ಘನವು.

ಹೀಗೆ ಆಗುವ ಸನ್ಮಾರ್ಗವೇ ಸಂಪ್ರದಾಯವು. ಅದಕ್ಕಾಗಿಯೇ ಈ ಸಂಪ್ರದಾಯಕರ್ತರು ಪ್ರವಕ್ತ್ರ್ಯವ್ಯನಸೂಯವೇ ಎನ್ನುವುದು. ಅಸೂಯಾಪರರ ಕೈಗೆ ಸಿಕ್ಕಿದರೆ ಸಂಪ್ರದಾಯವು ಹಾದಿತಪ್ಪಿ ದೂಷ್ಯವಾಗಿ ದುಷ್ಟವಾಗಿ ಇಷ್ಟಫಲ ಪ್ರಾಪಕವಲ್ಲದಾಗುವುದು. ಆದರಿಂದ ಅಸೂಯಾರಹಿತರಾದ ಸಾಂಪ್ರದಾಯಕರಿಗೂ ಸಂಪ್ರದಾಯ ಕರ್ತೃಗಳಿಗೂ ನಮೋನಮಃ ಎಂದು ಮುಮುಕ್ಷುಗಳೆಲ್ಲರೂ ಸಮಸ್ಕರಿಸುವುದು ಇತಿ ಶಿವಂ

೪೩. ನಾನಾ ಖ್ಯಾನಗಳನ್ನು ಹೇಳುತ್ತ ಚಿತ್ರವಾಗಿರುವ ಈ ಶಾಸ್ತ್ರವನ್ನು ವಿನೋದದಿಂದಲೇ ಆದರೂ ಯಾರು ವಿಚಾರಮಾಡುವರೋ ಅವರು ಪರಮವಾದ ಆತ್ಮಬೋಧವನ್ನು ಪಡೆಯುವರು. ಇದರಲ್ಲಿ ಸ್ವಲ್ಪವೂ ಸಂಶಯವಿಲ್ಲ.

(ನಾನಾಖ್ಯಾನ ಕಥಾಚಿತ್ರಂ ಮಾಡಿ)

೪೪. ಸರ್ವಶಾಸ್ತ್ರವಿಶಾರದರಾದ ಪಂಡಿತರಿಗೂ ಅದ್ಯಾಪಿ ಲಬ್ಧವಾಗದ ಸದ್ಬೋಧವು ಯಾವುದುಂಟೋ ಅದು, ಮರಳಿನಿಂದ ಸುವರ್ಣವನ್ನು ತೆಗೆಯುವಷ್ಟು ಸುಲಭವಾಗಿ ಈ ಶಾಸ್ತ್ರದಿಂದ ಲಭಿಸುವುದು.

ಶಾಸ್ತ್ರಕರ್ತರಿ ಮಂಕ್ತವ್ಯಂ ನ ಕದಾಚನ ಕುತ್ರಚಿತ್ ।
ಶಾಸ್ತ್ರಾರ್ಥ ಏವ ತನ್ನಿತ್ಯಂ ಯುಕ್ತಿಯುಕ್ತಾನುಭೂತಿದೇ ॥೪೫॥

ಅಜ್ಞಾನಾನ್ಮತ್ಸರಾನ್ಮೋಹಾದವಿಚಾರಿಭಿರೇಕತಾ ।
ಅವಹೇಲಿತಶಾಸ್ತ್ರಾರ್ಥೈಃ ಕರ್ತವ್ಯಾ ನಾತ್ಮಹಂತೃಭಿಃ ॥೪೬॥

ಜಾನಾಮ್ಯೇವ ಯಥೈವೇಮಾ ಯದಹಂತ್ವಂ ಯಥಾ ಧಿಯಃ ।
ತಥಾ ಬೋಧಿತಕಾರುಣ್ಯಾತ್ಸ್ವಭಾವೋಹಿ ಮಮೇದೃಶಃ ॥೪೭॥

---

೪೫. ಯಾವಾಗಲೂ ಎಲ್ಲೂ ಶಾಸ್ತ್ರಕರ್ತೃವಿನಲ್ಲಿ ಅನುಮಾನಪಡಬಾರದು, ಏಕೆಂದರೆ ಈ ಶಾಸ್ತ್ರಾರ್ಥವು ಯಾವಾಗಲೂ ಯುಕ್ತಿಯುಕ್ತವು : ಮತ್ತು ಅನುಭವವನ್ನು ಕೊಡುವುದು

(ನನು ಅಸ್ಮಾತ್ ಶಾಸ್ತ್ರಾದೇವ ಜ್ಞಾನಂ ಚೇತ್, ಏತತ್ ಶಾಸ್ತ್ರಕರ್ತಾ ಕಸ್ಮಾತ್ ಶಾಸ್ತ್ರಾತ್ ಜ್ಞಾತವಾನ್ । ಯತ ಏವ ಸ ಜ್ಞಾತವಾನ್ ತತ ಏವ ವಯಮಪಿ ಜ್ಞಾಸ್ಯಾಮಃ । ಯದ್ಯಜ್ಞಾತ್ವಾ ಏವ ಏತಚ್ಛಾಸ್ತ್ರಂ ಪ್ರಣೀತವಾನ್, ತರ್ಹಿ ಅಸ್ಮಾತ್ ಶಾಸ್ತ್ರಾತ್ ಜ್ಞಾನೋದಯೇ ಕಾ ಪ್ರತ್ಯಾಶಾ ಇತಿ ಶಂಕಮಾನಾನ್ ಪ್ರತ್ಯಾಹ–ಯದ್ಯೇತಚ್ಛಾಸ್ತ್ರಂ ಯುಕ್ತಿಯುಕ್ತ ಮನುಭವ ಪರ್ಯವಸಿತಂ ಚ ನಸ್ಯಾತ್ತದಾ ಏತತ್ಕರ್ತೃಬೋಧಮೂಲಕ ಪ್ರಾಮಾಣ್ಯ ಮೇತಚ್ಛಾಸ್ತ್ರಮಿತಿ ತತ್ಕರ್ತರಿ ಬೋಧಹೇತು ಚಿಂತಯಾ ಮಂಕ್ತವ್ಯಂ ಸ್ಯಾತ್ । ಅಸ್ಮಿಂಸ್ತು ಶಾಸ್ತ್ರೇ ಸ್ವತೋ ಯುಕ್ತಿ ಸಹಸ್ರಯುಕ್ತೇ ಅನುಭೂತಿದೇಚ ಸತಿ ಸ್ವಾನುಭವೇನೈವ ಸರ್ವಶಂಕಾ ನಿವೃತ್ತೇಃ ತತ್ರೈವ ತನ್ಮಜ್ಜನಂ ನಿತ್ಯಂ ಯುಕ್ತಮಿತಿ ನ ಶಾಸ್ತ್ರಕರ್ತರಿ ಬೋಧ ಶಂಕಯಾ ಕದಾಚಿನ್ಮಂಕ್ತವ್ಯಮಿತ್ಯರ್ಥಃ - ತಾ. ಪ್ರ.)

೪೬. ಅಜ್ಞಾನದಿಂದಲೋ ಮಾತ್ಸರ್ಯದಿಂದಲೋ ಮೋಹದಿಂದಲೋ ವಿಚಾರಮಾಡದೆ ಶಾಸ್ತ್ರಗಳನ್ನು ಅವಹೇಲನ ಮಾಡುವ ಆತ್ಮಘಾತಿಗಳೊಡನೆ ಮೈತ್ರಿಯು ಸರಿಯಲ್ಲ.

೪೭. ಕೇಳುತ್ತಿರುವ ಇವರು ಅಧಿಕಾರ ಸಂಪನ್ನರು. ನೀನು ಶ್ರವಣಾಧಿಕಾರ ಸಂಪನ್ನನು. ನಿಮ್ಮ ಬುದ್ಧಿಗಳು ಶ್ರವಣಕ್ಕಾಗಿ ಸಿದ್ಧವಾಗಿವೆ; ಇದಿಷ್ಟನ್ನೂ ನಾನು ಬಲ್ಲೆ. ಜೊತೆಗೆ ನನ್ನ ಸ್ವಭಾವವೂ ಇತರರಿಗೆ ಹೇಳಬೇಕೆಂಬ ಕಾರುಣ್ಯದಿಂದ ಕೂಡಿದುದು. ಆದರಿಂದ ಹೇಳುತ್ತಿರುವೆನು.

ಯುಷ್ಮತ್ಸಂವಿಲ್ಲವಃ ಶುದ್ಧ ಏವಂ ವಕ್ತುಮಿಹ ಸ್ಥಿತಃ |
ಅಹಂ ನರೋ ನ ಗಂಧರ್ವೋ ನಾಮರೋ ನ ಚ ರಾಕ್ಷಸಃ ||೪೮||

ಸಂವಿನ್ಮಾತ್ರಾ ಭವಂತೋ ಹಿ ತದ್ಭಾವೋಽಸ್ತ್ಯತಿನಿರ್ಮಲಃ |
ಸ್ಥಿತೋಽಸ್ಮೀತಿ ಭವತ್ಪುಣ್ಯೈರ್ನಾಸು ನಾಸ್ಮಿ ನ ಚಾಪರಃ ||೪೯||

ಶ್ಯಾಮಾಯಮಾನಾ ನಾಯಾಂತಿ ಯಾವನ್ಮರಣವಾಸರಾಃ |
ಸಾರಃ ಸಂಧ್ರಿಯತಾಂ ತಾವದ್ವೈರಸ್ಯಂ ವಸ್ತುದೃಷ್ಟಿಷು ||೫೦||

ಇಹೈವ ನರಕವ್ಯಾಧೇಶ್ಚಿಕಿತ್ಸಾಂ ನ ಕರೋತಿ ಯಃ |
ಗತ್ವಾ ನಿರೌಷಧಂ ಸ್ಥಾನಂ ಸರುಜಃ ಕಿಂ ಕರಿಷ್ಯತಿ ||೫೧||

---

೪೮. (ಅಥವಾ,) ನಿಮಗೆ ಹೇಳುತ್ತಿರುವ ನಾನು ನರನಲ್ಲ : ಗಂಧರ್ವನಲ್ಲ : ಅಮರನಲ್ಲ: ರಾಕ್ಷಸನಲ್ಲ : ನಿಮ್ಮ ಸಂವಿತ್ತಿನಲ್ಲಿಯೇ ಒಂದು ಭಾಗವು ಶುದ್ಧವಾಗಿ ಇಲ್ಲಿ ಹೇಳುತ್ತ ಕುಳಿತಿರುವುದು.

೪೯. ನೀವೆಲ್ಲರೂ ಸಂವಿನ್ಮಾತ್ರರು : ಆ ಭಾವವು ಅತಿ ನಿರ್ಮಲವಾಗಿಯೇ ಯಾವಾಗಲೂ ಇರುವುದು. ನಿಮ್ಮ ಪುಣ್ಯದಿಂದ ಅದೇ ನಿರ್ಮಲಭಾವವು ನಾನಾಗಿ ಇಲ್ಲಿ ಕುಳಿತಿರುವುದೇ ಹೊರತು, ನಾನು ಎಂಬುದು ಇಲ್ಲ : ಇದ್ದರೂ ಅದು ನಿಮ್ಮಿಂದ ಬೇರೆಯಲ್ಲ.

೫೦. ಆದರಿಂದ, ಕಣ್ಣು ಕತ್ತಲೆ ಹಿಡಿಸುತ್ತ ಮರಣಕಾಲವು ಸನ್ನಿಹಿತವಾಗುವುದಕ್ಕೆ ಮುಂಚೆ, ವಸ್ತುದೃಷ್ಟಿಯಲ್ಲಿ ವೈರಾಗ್ಯವೆಂಬ ಸಾರತಮವಾದ ದೃಷ್ಟಿಯನ್ನು ಸಂಪಾದಿಸಿಕೊಳ್ಳಿರಿ.

(ಅತಃ ಪರಮಾಪ್ತ ತಮೋಽಹಮಿತಿ ಮದುಕ್ತಃ ಪ್ರಥಮಃ ಸಾರಃ ಸರ್ವವಸ್ತು ದೃಷ್ಟಿಷು ವೈರಾಗ್ಯಲಕ್ಷಣಃ ಸಂಧ್ರೀಯತಾಂ ಸಂಗೃಹ್ಯತಾಂ- ತಾ. ಪ್ರ.)

೫೧. ಇಲ್ಲಿರುವಾಗಲೇ ನರಕವ್ಯಾಧಿಗೆ ಬೇಕಾದ ಚಿಕಿತ್ಸೆಯನ್ನು ಯಾವನು ಮಾಡಿಕೊಳ್ಳುವುದಿಲ್ಲವೋ ಅವನು, ನರಕಕ್ಕೆ ಹೋದಾಗ ಔಷಧವೇ ದೊರೆಯದ ಅಲ್ಲಿ, ತಾನು ರೋಗದಿಂದ ನರಳುತ್ತಿರುವಾಗ, ಏನು ತಾನೇ ಮಾಡಬಲ್ಲನು ?

ಸರ್ವಭಾವೇಷು ವೈರಸ್ಯಂ ನ ಯಾವತ್ಸಮುಪಾಗತಂ ।
ಭಾವಾನಾಂ ಭಾವನಾ ತಾವತ್ತಾನವಂ ನೋಪಗಚ್ಛತಿ ॥೫೨॥

ಆತ್ಮಾನಮಲಮುದ್ಧರ್ತುಂ ವಾಸನಾತಾನವಾದೃತೇ ।
ನಾಸ್ತ್ಯುಪಾಯೋ ಮಹಾಬುದ್ಧೇ ಕಶ್ಚನಾಪಿ ಕದಾಚನ ॥೫೩॥

ಭಾವಾಸ್ತು ಯದಿ ವಿದ್ಯಂತೇ ತದ್ಧಿ ತೇ ವಸ್ತುಭಾವನಾ ।
ಕಿಂತ್ವೇತೇ ನೈವ ಸಂತೀಹ ಶಶ ಶೃಂಗಾದಯೋ ಯಥಾ ॥೫೪॥

ಸರ್ವ ಏವ ಜಗದ್ಭಾವಾ ಅವಿಚಾರಿತಚಾರವಃ ।
ಅವಿದ್ಯಮಾನಸದ್ಭಾವಾ ವಿಚಾರಾದ್ವಿಶರಾರವಃ ॥೫೫॥

---

೫೨. ಸರ್ವಭಾವಗಳಲ್ಲಿಯೂ ವೈರಾಗ್ಯವು ಚೆನ್ನಾಗಿ ದೃಢವಾಗುವ ತನಕ ಭಾವಗಳನ್ನು ಕುರಿತ ಭಾವನೆಗಳ (ವಾಸನೆಗಳ) ತಾನವವು ಎಂದಿಗೂ ಲಭಿಸುವುದಿಲ್ಲ.

೫೩. ಆತ್ಮೋದ್ಧಾರಕ್ಕೆ ವಾಸನಾ ತಾನವವೇ ಉಪಾಯವು. ಅದನ್ನು ಬಿಟ್ಟು ಬೇರೆ ಯಾವುದೂ ಯಾವಾಗಲೂ ಇಲ್ಲ. ಮಹಾಬುದ್ಧಿಯಾದ ರಾಮನೆ, (ನಂಬು.)

೫೪. ಭಾವ (ವಸ್ತು) ಗಳು ಸತ್ಯವಾಗಿ ಇರುವುದೇ ಆದರೆ, ಆಗ ವಸ್ತುಭಾವನೆಯೂ ನಿನಗೆ ಇರುವುದು ನ್ಯಾಯವಾದುದು. ಆದರೆ ಯಾವುದನ್ನು ಅವಲಂಬಿಸಿ ನಿನ್ನ ಭಾವನೆಗಳು ಇರಬೇಕೋ ಆ ಭಾವಗಳೇ ಶಶ ಶೃಂಗಾದಿಗಳು ಹೇಗೋ ಹಾಗೆ ಇಲ್ಲವೇ ಇಲ್ಲವಲ್ಲ!

೫೫. ಜಗದ್ಭಾವಗಳೆಲ್ಲವೂ ಈ ಕೊನೆಯಿಂದ ಆ ಕೊನೆಯವರೆಗೆ ಅವಿಚಾರ ದಶೆಯಲ್ಲಿರುವಾಗ ಮಾತ್ರ ಮನೋಹರಗಳಾಗಿರುವುವು. ವಿಚಾರಮಾಡಿ ನೋಡಿದರೆ ಕಳಲಿಹೋಗುವುವು. ಅವುಗಳಿಗೆ ಸದ್ಭಾವವಿಲ್ಲ ಎಂಬುದು ಸ್ಪಷ್ಟವಾಗಿ ತೋರುವುದು.

ಪ್ರಾಮಾಣಿಕವಿಚಾರೇಷು ನ ವಿದ್ಯಂತೇ ಕೃತೇಷು ಯೇ ।
ಕಥಾ ಸಂತಿ ಜಗದ್ಭಾವಾಸ್ತೇ ಕೇ ಸಂತಿ ಸದೈವ ವಾ　　॥೫೬॥

ಸರ್ವ ಏವ ಜಗದ್ಭಾವಾಃ ಕಾರಣಾಭಾವತೋ ಧ್ರುವಂ ।
ಸರ್ಗಾದಾವೇವ ನೋತ್ಪನ್ನಾ ಯಚ್ಚೇದಂ ಭಾತಿ ತತ್ಪರಂ　　॥೫೭॥

ಪದೇ ಸರ್ವೇಂದ್ರಿಯಾತೀತೇ ಮನಃಷಷ್ಠೇಂದ್ರಿಯಾತ್ಮನಾಂ
ಭಾವಾನಾಂ ಕಾರಣಂ ನಾಸ್ತಿ ಮನಃಷಷ್ಠೇಂದ್ರಿಯಾತ್ಮಕಂ　　॥೫೮॥

---

೫೬. ಪ್ರಮಾಣ ಪುರಸ್ಸರವಾಗಿ ವಿಚಾರಮಾಡಿ ನೋಡಿದಲ್ಲಿ ಯಾವುವು ಇಲ್ಲವೇ ಇಲ್ಲವೆಂದು ಸ್ಪಷ್ಟವಾಗುವುದೋ ಆ ಜಗದ್ಭಾವಗಳು ಇರುವುದು ಹೇಗೆ? ಹೋಗಲಿ, ಅವು ಸದಾ ಇರುವಂಥವೇನು?

(ನನ್ವೇತೇ ಭಾವಾ ವೇದಾಂತಿನಾಂ ವಿಚಾರೇಷು ನ ಸಂತಿ ಚೇದಪಿ ಕಾಪಿಲ ಕಾಣಾದಾದಿ ವಿಚಾರೇಷು ಸಂತ್ಯೇವ ಇತಿ ಕುತೋಽಸತ್ತ್ವಾವಧಾರಣಂ ತತ್ರಾಹ-- ಪ್ರಾಮಾಣಿಕ ವಿಚಾರೇಷು ಕೃತೇಷು ಯೇನ ವಿದ್ಯಂತೇ ತೇ ಕೇ ಸಂತಿ ಕಿಂ ಸ್ವರೂಪಾಃ । ಏಕೈಕವಸ್ತುರೂಪಾ ಉತ ಸರ್ವವಸ್ತುರೂಪಾಃ । ಸದೈವ ವಾ ಸಂತ್ಯುತ ಕದಾಚಿದೇವ ವಾ । ಸರ್ವಥಾಪಿ ಪ್ರಾಕ್ ಶತಶಃ ಖಂಡಿತಮೇವೇತ್ಯರ್ಥಃ ॥—ತಾ. ಪ್ರ)

೫೭ ಜಗದ್ಭಾವಗಳು ಯಾವ ಯಾವವು ಉಂಟೋ ಅವೆಲ್ಲ ಕಾರಣಾಭಾವದ ದೆಸೆಯಿಂದ ಸರ್ಗಾದಿಯಲ್ಲಿ ಉತ್ಪನ್ನಗಳಲ್ಲ ಎನ್ನಬೇಕು. ಹೀಗಿರಲು ಸರ್ಗವು ಬಂದಮೇಲೆ ಕಾಣಿಸುವ ಜಗತ್ತಿನ ವಿಚಾರವಾಗಿ ಏನು ಹೇಳಬೇಕು?

೫೮. ಮನಸ್ಸು ಆರನೆಯ ಇಂದ್ರಿಯ ಎನ್ನಿಸಿಕೊಳ್ಳುವುದು. ಆ ಮನಸ್ಸೂ ಸೇರಿದ ಆರು ಇಂದ್ರಿಯಗಳಿಂದಲೇ ಭಾವನೆಗಳು ಊರ್ಜಿತವಾಗಿರುವುದು. ಆ ಮನಃಷಷ್ಠೇಂದ್ರಿಯಗಳೂ ಭಾವನೆಗಳಿಗೆ ಕಾರಣವಲ್ಲ: ಅಷ್ಟೇ ಅಲ್ಲ: ಸರ್ವೇಂದ್ರಿಯಾತೀತವಾದ ಪರಮಪದದಲ್ಲಿಯಂತೂ ಈ ಭಾವಗಳಿಗೆ ಕಾರಣವೇ ಇಲ್ಲ.

ಭಾವಾನಾಂ ವಿವಿಧಾಖ್ಯಾನಾಮನಾಖ್ಯಂ ಕಾರಣಂ ಕುತಃ ।
ಕುತೋ ವಸ್ತುನ್ಯವಸ್ತುತ್ವಂ ವ್ಯೋಮನ್ಯವ್ಯೋಮತಾ ಕುತಃ ॥೫೯॥

ಸಾಕಾರಸ್ಯ ಹಿ ಸಾಕಾರಂ ವಟಧಾನಾದಿವದ್ಭವೇತ್ ।
ಬೀಜಂ ತದ್ವಸ್ತು ಸಾಕಾರಂ ಜಾಯತೇಽನ್ಯತ್ಕುತೋಽನ್ಯಥಾ ॥೬೦॥

ನ ಕಿಂಚಿದಪಿ ಯತ್ರಾಸ್ತಿ ಬೀಜಮಾಕೃತಿಮನ್ಮನಾಕ್ ।
ತತ ಆಕೃತಿಮದ್ವಿಶ್ವಂ ಭವತೀತಿ ವಿಡಂಬನಂ ॥೬೧॥

---

(ನಹಿ ಇಂದ್ರಿಯಾವೇದ್ಯೇ ಸ್ವಪ್ರಕಾಶ ಚಿದೇಕರಸೇ ಬ್ರಹ್ಮಣಿ ಇಂದ್ರಿಯ ವೇದ್ಯಾ: ಪ್ರಲಯಕಾಲೇ ಸಂಭಾವಯಿತುಮಪಿ ಶಕ್ಯಾ ಇತಿ ಭಾವಃ—ತಾ. ಪ್ರ.)

೫೯. ವಿವಿಧವಾದ ನಾಮ ರೂಪುಗಳುಳ್ಳ ಭಾವಗಳಿಗೆ ಅನಾಖ್ಯ (ನಾಮ ರೂಪರಹಿತ)ವಾದುದು ಕಾರಣವೆಂತಾದೀತು ? ವಸ್ತುವಿನಲ್ಲಿ ಅವಸ್ತುತ್ವವೂ ವ್ಯೋಮ ದಲ್ಲಿ ಅವ್ಯೋಮತೆಯೂ ಎಲ್ಲಿಂದ ಬಂದೀತು ?

(ಸನಾಮರೂಪಕಸ್ಯ ಜಗತಃ ಅನಾಮರೂಪಕಂ ಕಾರಣಂ ನ ಸಂಭವತೀತಿ ಯುಕ್ತ್ಯಂತರಮಾಹ—ತಾ. ಪ್ರ.)

೬೦. "ಸಾಕಾರವಾಗಿರುವ ಕಾರಣದಿಂದ ಸಾಕಾರವಾಗಿರುವ ಕಾರ್ಯವು ಆಯಿತು : ವಟಬೀಜದಿಂದ ವಟವೃಕ್ಷವು ಆಯಿತು. ಬೀಜವು ಸಾಕಾರವಸ್ತುವು: ಆದರಿಂದ ಸಾಕಾರವೃಕ್ಷವಾಯಿತು" ಎಂಬುದು ಸರಿ. ಆದಕ್ಕೆ ವಿರುದ್ಧವಾಗಿ ನಿರಾ ಕಾರದಿಂದ ಸಾಕಾರವು ಬಂತು ಎನ್ನುವುದು ಹೇಗೆ ಸರಿಯಾದೀತು ?

೬೧. ಆಕೃತಿಯುಳ್ಳ ಬೀಜವು ಇಲ್ಲದೆಯೇ ಇರಲು, ಅಂತಹ ನಿರಾಕೃತಿ ಯಾದ ನಿರ್ಬೀಜದಿಂದ ಆಕೃತಿಮತ್ತಾದ ವಿಶ್ವವು ಆಯಿತು ಎನ್ನುವುದು ಕೇವಲ ವಿಡಂಬನವು (ಅರ್ಥಶೂನ್ಯವು.)

ಕಾರ್ಯಕಾರಣಭಾವಾದಿ ತಸ್ಮಿನ್ನಹಿ ಪರೇ ಪದೇ ।
ವಾಚಾಲತ್ವೇನ ಯನ್ನಾಮ ಕಲ್ಪ್ಯತೇ ಮೌರ್ಖ್ಯಮೇವ ತತ್ ॥೬೨॥

ಸಹಕಾರಿನಿಮಿತ್ತಾನಾಮಭಾವೇ ಹಿ ನ ಕಾರಣಾತ್ ।
ಕಾರ್ಯಂ ಭವೇದನ್ಯದೇತಿ ಬಾಲೈರಪ್ಯನುಭೂಯತೇ ॥೬೩॥

ತನ್ಮಾತ್ರವೇದನಂ ಭೂಯಃ ಪೃಥ್ವ್ಯಾದೀನಾಂ ಚ ಕಾರಣಂ ।
ಕಿಮಸ್ತಿ ಕಥ್ಯತಾಂ ಛಾಯಾ ತಥಮಾಸ್ತೇ ವದಾತಪೇ ॥೬೪॥

ಪರಮಾಣುಸಮೂಹಾ ಯೇ ಜಗದಿತ್ಯಪ್ಯವಾಸ್ತವಂ ।
ಶಶಶೃಂಗಂ ಧನುಃಪ್ರಖ್ಯಮಜ್ಞಾನಾದಭಿಧೀಯತೇ ॥೬೫॥

---

೬೨. ಪರಮಪದದಲ್ಲಿ ಕಾರ್ಯಕಾರಣಭಾವಾದಿಗಳು ಒಂದೂ ಇಲ್ಲ : ವಾಚಾಲತ್ವದಿಂದ ಕಲ್ಪಿತವಾಗುವುದು ಎಂದರೆ ಅದನ್ನು ಅಂಗೀಕರಿಸುವುದೇ ಒಂದು ಮೌರ್ಖ್ಯವು.

೬೩. ಸಹಕಾರಿ ಕಾರಣಗಳು ಇಲ್ಲದಿರಲು ಕಾರಣವೊಂದೇ ಉಳಿಯುವುದು: ಆದರಿಂದ ಭಿನ್ನವಾದ ಕಾರ್ಯವು ಸಂಭವಿಸುವುದಿಲ್ಲ ಎಂಬುದು ಬಾಲಕರಿಗೆ ಕೂಡ ಅನುಭವಗೋಚರವಾಗಿರುವುದು.

೬೪. ತನ್ಮಾತ್ರಗಳ ವೇದನವು ಯಾವುದುಂಟೋ ಅದೇ ಪೃಥಿವ್ಯಾದಿಗಳ ಕಾರಣವು. ಹೀಗಿರಲು, ಚಿತ್ತಿನಲ್ಲಿ ಚಿತ್ತಲ್ಲದ ಇನ್ನೇನಾದರೂ ಹೇಗೆ ಇರಬಲ್ಲುದು ಹೇಳು. ಬಿಸಿಲಿನಲ್ಲಿ ಛಾಯೆಯುಂಟೇನು ?

೬೫. ಪರಮಾಣು ಸಮೂಹಗಳುಂಟು ; ಅವೇ ಜಗತ್ತು ಆಗುವುದು ಎಂದು ಯಾರು ಹೇಳುವರೋ ಅವರೂ ಅ ವಾಸ್ತವವನ್ನೇ ಹೇಳುವರು. ಶಶಶೃಂಗ, ಧನುಃಪ್ರಖ್ಯ, ಎಂದು ಅಜ್ಞಾನದಿಂದ ಹೇಳುವವರಂತೆ ಇದು.

ಪರಮಾಣುಸಮೂಹಶ್ಚೇತ್ಸಂಭೂಯ ಕುರುತೇ ಜಗತ್ ।
ಯದೃಚ್ಛಯೈವ ತಮಸಿ ಶೀರ್ಯತೇ ಚ ಯದೃಚ್ಛಯಾ ॥೬೬॥

ತದಾಗಮಿಂಗತೇ ನಿತ್ಯಂ ದೇಶೇ ದೇಶೇ ಗೃಹೇ ಗೃಹೇ।
ಅಪೂರ್ವಾತ್ಮರಜಃ ಶೃಂಗಂ ಖ್ಯಾತಂ ವಾ ಸ್ಯಾದ್ದಿನೇದಿನೇ ॥೬೭॥

ನಚ ತದ್ದೃಶ್ಯತೇ ಕಿಂಚಿತ್ಕಸ್ಯ ತತ್ಕರ್ಮ ತಾದೃಶಂ ।
ಭವೇದ್ವ್ಯರ್ಥಮಭವ್ಯಸ್ಯ ಜಡಾಸ್ತು ಪರಮಾಣವಃ ॥೬೮॥

---

(ಅತ ಏವ ಪರಮಾಣುಕಾರಣವಾದಿನೋ ಬೌದ್ಧಾದಯೋಽಪ್ಯಪಾಸ್ತಾಃ) ಅತೀಂದ್ರಿಯ ಸಮೂಹಸ್ಯ-ಇಂದ್ರಿಯಕತ್ವಾದರ್ಶನಾತ್.ಇತ್ಯಾಶಯೇನಾಹ-ತಾ.ಪ್ರ)

೬೬. ಪರಮಾಣು ಸಮೂಹವು ಒಟ್ಟುಸೇರಿ ಜಗತ್ತನ್ನು ಮಾಡುವುದು ಎನ್ನುವುದಾದರೆ, ಹುಟ್ಟಿದಂತೆಯೇ ಯಾದೃಚ್ಛಿಕವಾಗಿಯೇ, ಕಾರಣವಿಲ್ಲದೆಯೇ, ಜಗತ್ತು ಕತ್ತಲಿನಲ್ಲಿ ಶಿಥಿಲವಾಗಿಯೂ ಹೋಗಬಹುದಲ್ಲವೆ ?

೬೭. ಹಾಗೆ ಪರಮಾಣು ಸಮೂಹವು ಜಗತ್ತನ್ನು ಮಾಡುವುದಾದರೆ ಜಗತ್ತನ್ನು ಮಾಡುವ ಆ ಪರಮಾಣುಗಳು ದೇಶ ದೇಶದಲ್ಲಿಯೇ ಗೃಹಗೃಹದಲ್ಲಿಯೂ ದಿವದಿವದಲ್ಲಿಯೇ ಸೇರುತ್ತಿದ್ದು ಅಪೂರ್ವವಾದ ರಜಶ್ಶೃಂಗವನ್ನು ಮಾಡಬೇಕಾಗಿತ್ತು.

೬೮. ಆದರೆ ಅಂತಹ ರಜಶ್ಶೃಂಗಗಳು ಯಾವವೂ ಎಲ್ಲೂ ಕಾಣುವುದಿಲ್ಲ. ಅದರಿಂದ ಆಗುವ ಕಾರ್ಯವೂ ಕಾಣುವುದಿಲ್ಲ. ಪರಮಾಣುಗಳು ಜಡಗಳಾದ್ದರಿಂದ ಈ ವಾದವು ಅಭವ್ಯವು : ಅಸಂಭವವು : ಆದ್ದರಿಂದ ವ್ಯರ್ಥವು.

ನಾಬುದ್ಧಿಪೂರ್ವಂ ತತ್ಕರ್ಮ ಸಂಭವತ್ಯಂಗ ಕಸ್ಯಚಿತ್ ।
ಬುದ್ಧಿಪೂರ್ವಂ ತು ಯದ್ವ್ಯರ್ಥಂ ಕುರ್ಯಾದುನ್ಮತ್ತಕೋ ಹಿ ತತ್ ॥೭೯॥

ಜಡಸ್ಯ ಬುದ್ಧಿಪೂರ್ವೇಹಾ ಮರುತೋ ನಾಸ್ತಿ ತಾಂ ವಿನಾ ।
ನ ಸಂಭವತ್ಯಣುಚಯೋ ನಾಸ್ತ್ಯತಃ ಕರ್ತೋಽಜಡಪ್ರಭುಃ ॥೮೦॥

---

(ನಚ ಪರಮಾಣ್ವಾಖ್ಯಂ ನಿರವಯವಂ ಕಿಂಚಿದ್ದ್ರವ್ಯಂ ಕೇನಚಿದ್ದೃಶ್ಯತೇ । ಜಾಲಾಂತರ ಮರೀಚಿಷು ಸಾವಯವಾನಾಮೇವ ರಜಸಾಂ ದರ್ಶನಾತ್ । ತದವಯವ ಪರಂಪರಾವಧಿಃ ನಿರವಯವೋಽನುಮೀಯತ ಇತಿ ಚೇನ್ನ । ತಸ್ಯ ಸಂಯೋಗಾನರ್ಹತ್ವೇನ ಅದ್ರವ್ಯತ್ವಪ್ರಸಕ್ತೇಃ । ನಹಿ ನಿರವಯವೋಽನ್ಯೇನ ಸಂಯೋಗಮರ್ಹತಿ । ಸಂಯೋಗಸ್ಯ ಏಕದೇಶಾವಚ್ಛಿನ್ನ ವೃತ್ತಿಕತ್ವನಿಯಮಾತ್ । ನಚ ತದಭಾವೇ ದ್ವ್ಯಣುಕಾದಿ ಸಿದ್ಧಿರಿತಿ ವ್ಯಾಘಾತಃ । ಕಿಂಚ ಅತೀಂದ್ರಿಯಾಣಾಂ ಖಪುಷ್ಪಕಲ್ಪಾನಾಂ ಪರಮಾಣೂನಾಂ ಸಂಯೋಜನೇನ ಜಗದ್ರಚನಂ ಕಸ್ಯ ಕರ್ಮ । ಪರಂ ಕಿಮು ಸಂಸಾರಿಣಃ, ಉತ ಸಂಸಾರಿಣಃ । ತತ್ರ ಸಂಸಾರಿಣಃ ತಾವತ್ ಪರಮಾಣುಭಿಃ ಜಗನ್ನಿರ್ಮಾಣೇ ಅಸಾಮರ್ಥ್ಯಂ ಸ್ಪಷ್ಟಮೇವೇತಿ ಅಭವ್ಯಸ್ಯ ಭವಾನರ್ಹಸ್ಯ ಈಶ್ವರಸ್ಯ ಜಡಸ್ಯ ವಾ ತದ್ವಾಚ್ಯಂ । ತತ್ರ ಅನ್ಯಸ್ಯ ವ್ಯರ್ಥಂ ನಿಷ್ಪ್ರಯೋಜನಂ ಜಗದ್ರಚನಂ ಭವೇತ್ । ನಹಿ ನಿತ್ಯಮುಕ್ತಸ್ಯ ಈಶ್ವರಸ್ಯ ಪ್ರಯೋಜನಾಪೇಕ್ಷಾ ಪ್ರಯೋಜನಂ ವಾ ಸರ್ಗಸ್ಯ ಉಪಪಾದಯಿತುಂ ಶಕ್ಯತೇ । ನಚ ಜಡಾಃ ಪರಮಾಣವಃ ಸ್ವತಃ ಸರ್ಗೇ ಪ್ರವರ್ತಿತುಂ ಶಕ್ನುವಂತೀತ್ಯರ್ಥಃ—ತಾ. ಪ್ರ.)

೭೯. ಅಬುದ್ಧಿಪೂರ್ವಕವಾಗಿ ಪ್ರಯೋಜನಾಪೇಕ್ಷೆಯಿಲ್ಲದೆ, ಯಾರಿಗೂ ರಚನ ಕರ್ಮವು ಸಂಭವಿಸುವುದಿಲ್ಲವಲ್ಲವೆ? ಯಾವನು ಬುದ್ಧಿಪೂರ್ವಕವಾಗಿಯೂ ವ್ಯರ್ಥವಾದ ಕರ್ಮವನ್ನು ಮಾಡುವನೋ ಅವನು ಹುಚ್ಚನಲ್ಲವೆ ಮತ್ತೇನು?

೮೦. (ಗಾಳಿಯು ಹಾಗೆ ಮಾಡುವುದುಂಟು ಎಂದರೆ) ಜಡವಾದ ಗಾಳಿಗೆ ಬುದ್ಧಿಪೂರ್ವವಾದ ಸಂಕಲ್ಪದಿಂದ ಆಗುವ ವ್ಯಾಪಾರವೆಂತು ಸಾಧ್ಯವು? ಅಂತಹ ಬುದ್ಧಿಪೂರ್ವ ವ್ಯಾಪಾರವಿಲ್ಲದೆ ಆದ ಅಣುಚಯವು ಜಗತ್ತಾಗುವುದಿಲ್ಲ. ಆದರಿಂದ ಅಜಡನಾದ ಕರ್ತೃವು ಒಬ್ಬನಿಲ್ಲ ಎಂದಾಯಿತು.

ವಯಮಾತ್ಮಾನ ಏವೇಮೇ ಖಾತ್ಮಾನಃ ಖಾತ್ಮಕಾ ಜನಾಃ
ತಥಾ ಸ್ಥಿತಾ ಯಥಾ ಸ್ವಪ್ನೇ ಭವತಾಂ ಸ್ವಪ್ನಮಾನವಾಃ ||೭೧||

ತಸ್ಮಾನ್ನ ಜಾಯತೇ ಕಿಂಚಿದ್ವಿಶ್ವಂ ನಾಪಿ ಚ ವಿದ್ಯತೇ |
ಇತ್ಥಂ ಚಿನ್ನಭ ಏವಾಚ್ಛಂ ಪ್ರಕಚತ್ಯಾತ್ಮನಾತ್ಮನಿ ||೭೨||

ವಿಶ್ವಾಕಾಶಂ ಚಿದಾಕಾಶೇ ವಿಷ್ವಗ್ವಿಶ್ರಾಂತಿಮಾಗತಂ |
ಸ್ಪಂದೋ ದ್ರವತ್ವಂ ಶೂನ್ಯತ್ವಮನಿಲೇಽಂಭಸಿ ಖೇ ಯಥಾ ||೭೩||

---

(ಜಡ ಸರ್ವಜ್ಞಾಭ್ಯಾಂ ಅನ್ಯಜ್ಜೀವಜಾತಂ ತು ಪ್ರಲಯೇ ದೇಹಾದ್ಯಭಾವಾತ್ ಅಸಮರ್ಥ ಮೇವೇತಿ ನ ಸರ್ಗಾದೌ ಕಶ್ಚಿತ್ ಕರ್ತಾ ಉಪಪದ್ಯತ ಇತಿ ಉಪಸಂಹಾರಃ—ತಾ. ಪ್ರ.)

೭೧. (ಆದರಿಂದ ಜಗತ್ತು ಉತ್ಪನ್ನವಾಗುವುದಿಲ್ಲವಾಗಿ) ಈ ಜಗತ್ತೂ ಈ ಜಗತ್ತಿನಲ್ಲಿರುವ ನಾವೂ ಆಕಾಶಾತ್ಮಕರು : ಇತರ ಜನರೂ ಆಕಾಶಾತ್ಮಕರು : ನಿಮ್ಮ ಸ್ವಪ್ನದಲ್ಲಿರುವಂತೆ ಜಾಗ್ರತ್ತಿನಲ್ಲಿಯೂ ಮಾನವರು ಇರುವರು : ಜಾಗ್ರನ್ಮಾನವರಿಗೂ ಸ್ವಪ್ನಮಾನವರಿಗೂ ವ್ಯತ್ಯಾಸವಿಲ್ಲ.

೭೨. ಆದರಿಂದ ವಿಶ್ವವೆನ್ನುವುದು ಪ್ರತ್ಯೇಕವಾಗಿ ಹುಟ್ಟಲಿಲ್ಲ : ಪ್ರತ್ಯೇಕವಾಗಿ ಇಲ್ಲವೂ ಇಲ್ಲ. ಹೀಗೆ ಇದಂ ರೂಪವಾಗಿ ಕಾಣಿಸುತ್ತಿರುವುದೆಲ್ಲ ಚಿದಾಕಾಶವೇ ! ಸ್ವಯಂ ತನ್ನಲ್ಲಿಯೇ ಅದು ಕಚನವಾದಾಗ ಜಗತ್ತಾಗಿ ಕಾಣುವುದು.

(ಇತ್ಥಂ ಸರ್ವೋಪಪತ್ತೇಃ ಬ್ರಹ್ಮಾದ್ವೈತ ಸಿದ್ಧಾಂತಃ ನಿಷ್ಪ್ರತ್ಯೂಹ ಇತ್ಯಾಹ—ತಾ. ಪ್ರ.)

೭೩. ವಿಶ್ವಾಕಾಶವೆನ್ನುವುದು ಚಿದಾಕಾಶದಲ್ಲಿ ಸಂಪೂರ್ಣವಾಗಿ ವಿಶ್ರಾಂತಿಯನ್ನು ಹೊಂದುವುದರಿಂದ, ಅದನ್ನು ವಾಯುವಿನ ಸ್ಪಂದದಂತೆ, ಜಲದ ದ್ರವತ್ವದಂತೆ, ಆಕಾಶದ ಶೂನ್ಯತ್ವದಂತೆ, ಚಿದಾಕಾಶದ ಕಚನವೆನ್ನಬೇಕು.

ದೇಶಾದ್ದೇಶಾಂತರಪ್ರಾಪ್ತೌ ನಿಮೇಷೇಣಾತಿದೂರತಃ ।
ಸಂವಿದೋ ಯದ್ವಪುರ್ಮಧ್ಯೇ ಚಿದ್ವ್ಯೋಮ್ನೋ ವಿದ್ಧಿ ತದ್ವಪುಃ ॥೭೪॥

ಸ ಸ್ವಭಾವೋ ಹಿ ಸರ್ವೇಷಾಮರ್ಥಾನಾಂ ತೇ ಚ ತನ್ಮಯಾಃ ।
ತಾದೃಶಾಸ್ತನ್ನಭೋರೂಪಾಸ್ತೇನ ವಿಶ್ವಮತೋ ನಭಃ ॥೭೫॥

ಸ್ವಭಾವಸ್ಯ ಪರಾ ವೃತ್ತಿರ್ಮನಾಗೇವಾಸ್ತು ತಸ್ಯ ಸಾ ।
ಸ್ವಭಾವಾದವಿಭಿನ್ನೈವ ಸೇದಂ ಜಗದಿತಿ ಸ್ಥಿತಾ ॥೭೬॥

ಜಗಚ್ಚಿನ್ನಭಸೋಸ್ತಸ್ಮಾನ್ನ ಕದಾಚನ ಭಿನ್ನತಾ ।
ಏಕಮೇವ ದ್ವಯೋ ರೂಪಂ ಪವನಸ್ಪಂದಯೋರಿವ ॥೭೭॥

---

೭೪. (ಆ ಚಿದಾಕಾಶವು ಹೇಗಿರುವುದು ಎಂದರೆ) ಒಂದೇ ಒಂದೇ ನಿಮಿಷ ದಲ್ಲಿ ಅತಿ ದೂರದಲ್ಲಿರುವ ದೇಶದಿಂದ ದೇಶಾಂತರವನ್ನು ಸೇರುವ ಸಂವಿತ್ತಿನ ಯಾವ ರೂಪವುಂಟೋ ಅದೇ ಚಿದಾಕಾಶದ ರೂಪವೆಂದು ತಿಳಿ.

೭೫. ಸರ್ವ ಪದಾರ್ಥಗಳ ಸ್ವರೂಪವೂ ಹೀಗೆಯೇ ಚಿದಾಕಾಶವು. ಸರ್ವವೂ ಚಿನ್ಮಯವು. ಎಲ್ಲವೂ ಚಿತ್ತೇ! ಚಿದಾಕಾಶರೂಪವೇ! ಅದರಿಂದ ವಿಶ್ವವೂ ಚಿದಾಕಾಶವೇ!

೭೬. ಸ್ವ–ಭಾವವೇ ಹೀಗೆ ಆಕಾಶವಾಗಿರುವಾಗ, ಆ ಚಿದಾಕಾಶದಿಂದ ಅಭಿನ್ನವಾಗಿ ವಿವರ್ತವಾಗಿ ಕಾಣುವ ಆ ಚಿದಾಕಾಶದ ಯಾವ ಪರಾವೃತ್ತಿಯುಂಟೋ ಅದೇ ಜಗತ್ತು : ಆದರಿಂದ ಈ ಜಗತ್ತು ಚಿತ್ತಿನಿಂದ ಭಿನ್ನವಾದುದಲ್ಲ.

೭೭. ಆದರಿಂದ ಜಗತ್ತು ಚಿದಾಕಾಶಗಳಿಗೆ ಭಿನ್ನತೆಯಿಲ್ಲ. ಎರಡರ ರೂಪವೂ ಒಂದೇ! ಪವನ ಸ್ಪಂದಗಳಂತೆ ಇವು.

ದೇಶಾದ್ದೇಶಾಂತರಪ್ರಾಪ್ತೌ ವಿದೋ ಮಧ್ಯೇ ಹಿ ಯದ್ವಪುಃ ।
ಶಾಂತಾಶೇಷವಿಶೇಷಾತ್ಮ ತನ್ಮುಖ್ಯಂ ನೇತರದ್ವಿದುಃ ॥೭೮॥

ಸ್ವಸ್ವಭಾವೋಽಂಗ ಭೂತಾನಾಂ ತತ್ರ ತಿಷ್ಠಂತಿ ಪಂಡಿತಾಃ।
ತಸ್ಮಾನ್ನ ವಿಚಲಂತ್ಯೇತೇ ನಿತ್ಯಧ್ಯಾನಾದ್ಧರಾದಯಃ ॥೭೯॥

ಆಭಾಸಾಕಾಶಮೇವೇದಂ ಭಾಮಾತ್ರಮವಭಾಸನಂ ।
ವಿಶ್ವಮಾಕಾರರಹಿತಂ ಸ್ವಭಾವಂ ವಿದುರವ್ಯಯಂ ॥೮೦॥

ನ ಜಾಯತೇ ನ ಮ್ರಿಯತೇ ನ ಭೂತ್ವಾ ಭಾವಿ ಕುತ್ರಚಿತ್ ।
ಅನನ್ಯದೇವ ಚಿದ್ವ್ಯೋಮ್ನಃ ಶೂನ್ಯತ್ವಮಿವ ಖಾಜ್ಜಗತ್ ॥೮೧॥

---

೭೮. ಒಂದು ಕಡೆಯಿಂದ ಇನ್ನೊಂದು ಕಡೆಗೆ ಸೇರಿದ ಸಂವಿತ್ತಿನ ರೂಪವು ಆ ಎರಡು ಕಡೆಗಳ ನಡುವೆ ಹೇಗಿರುವುದೋ, ಆ ಅಶೇಷ ವಿಶೇಷಗಳೂ ಶಾಂತವಾಗಿರುವ ರೂಪವೇ ಚಿದಾಕಾಶವು. ಅದೇ ಮುಖ್ಯವು. ಇನ್ನು ಏನೂ ಅಲ್ಲ : ಇಲ್ಲ.

(ತನ್ಮುಖ್ಯಂ ಅನುಭವಸ್ಯ ಸಂಪನ್ನಂ ನಿದರ್ಶನಂ ನೇತರತ್-ತಾ. ಪ್ರ.)

೭೯. ಅದೇ ಆ ಚಿದಾಕಾಶವೇ ಸರ್ವಭೂತಗಳ ಸ್ವಭಾವವು. ಅದೇ ಪಂಡಿತರ ಗಮ್ಯಸ್ಥಾನವು. ಅಲ್ಲಿಂದ ಪಂಡಿತರು ಜಾರುವುದಿಲ್ಲ : ಹರಿಹರಾದಿಗಳು ಅದನ್ನು ಯಾವಾಗಲೂ ಧ್ಯಾನಮಾಡುತ್ತ ಅದರಲ್ಲಿಯೇ ಇದ್ದುಬಿಡುವರು

೮೦. ಆ-ಭಾಸವಾಗಿರುವ ಆಕಾಶವೇ ಈ ವಿಶ್ವವು. ಇದು ಕೇವಲ ಭಾಮಾತ್ರವು : ಅವಭಾಸನವು. ಆದರಿಂದ ವಿಶ್ವವು ಆಕಾರರಹಿತವು. ಇದು ಸ್ವಭಾವವಾದ್ದರಿಂದ ಅವ್ಯಯವು

೮೧. ಈ ವಿಶ್ವವು ಹುಟ್ಟುವುದಿಲ್ಲ : ಸಾಯುವುದಿಲ್ಲ. ಅದು ಆಯಿತು, ಇನ್ನೆಲ್ಲಿಯೋ ಆಗುತ್ತದೆ ಎನ್ನುವುದಿಲ್ಲ. ಅದು ಅನನ್ಯವಾದ ಚಿದಾಕಾಶವು. ಆಕಾಶದ ಶೂನ್ಯತ್ವದಂತೆ ಚಿದಾಕಾಶಕ್ಕೂ ಜಗತ್ತಿಗೂ ಸಂಬಂಧವು.

ನ ವಿಶ್ವಮಸ್ತಿ ನೈವಾಸೀನ್ನ ಚ ನಾಮ ಭವಿಷ್ಯತಿ ।
ಇದಮಾಭಾಸತೇ ಶಾಂತಂ ಚಿದ್ವ್ಯೋಮ ಪರಮಾತ್ಮನಿ ॥೮೩॥

ಚಿನ್ಮಾತ್ರಮೇವ ಕಚತಿ ಸ್ವಪ್ನೇ ಪುರತಯಾ ಯಥಾ ।
ತಥೈವ ಜಾಗ್ರದಾಖ್ಯೇಽಸ್ಮಿನ್ಸ್ವಪ್ನೇ ಕಚತಿ ಸ್ವಯಂ ॥೮೩॥

ಸರ್ಗಾದಾವೇವ ಭಾವಾನಾಮಸತ್ತ್ವೇಽಸ್ತಿ ದೇಹಕಃ ।
ಕುತಸ್ತಸ್ಮಾಚ್ಛರೀರತ್ವಂ ಸ್ವಪ್ನ ಏವ ನಭಶ್ಚಿತೇಃ ॥೮೪॥

ಸ್ವಯಂಭ್ವಾಖ್ಯಂ ಶರೀರಂ ಸ್ವಂ ಪೂರ್ವಂ ಸ್ವಪ್ನೋ ಮಹಾಚಿತೇಃ ।
ಇತ ಉತ್ಥಾನಾಸ್ತದನು ಸ್ವಪ್ನಾತ್ಸ್ವಪ್ನಾಂತರಂ ವಯಂ ॥೮೫॥

---

೮೨ ವಿಶ್ವವು ಇಲ್ಲ: ಇರಲಿಲ್ಲ: ಆಗುವುದೂ ಇಲ್ಲ. ಚಿದಾಕಾಶವು ಚಿದಾತ್ಮನಲ್ಲಿ ಶಾಂತವಾಗಿ ಆಭಾಸವಾಗುವುದು ಯಾವುದೋ ಅದೇ ವಿಶ್ವವು.

೮೩. ಸ್ವಪ್ನದಲ್ಲಿ ಪುರವಾಗಿ ತೋರುವ ಚಿತ್ತೇ ಕಚನವಾದಾಗ ಜಾಗ್ರತ್ತಿನಲ್ಲಿ ವಿಶ್ವವಾಗಿ ತೋರುವುದು.

೮೪. ಸರ್ಗಾದಿಯಲ್ಲಿ ಭಾವಗಳು ಯಾವವೂ ಇರಲಿಲ್ಲ. ಆದರಿಂದ ಈ ದೇಹವು ಹೇಗೆ ಬಂತು? ಎಲ್ಲಿಂದ ಬಂದೀತು? ಚಿದಾಕಾಶನೇ ಸ್ವಪ್ನದಲ್ಲಿ ಕಂಡಂತೆ ಶರೀರವೂ ಆಗಿ ಕಾಣುವುದು.

(ಸರ್ಗಾದೌ ಪೃಥಿವ್ಯಾದಿ ಭಾವಾನಾಮೇವ ಅಸತ್ತ್ವಾ ಇತಿ ಹೇತೋಃ ಅಯಂ ಪಾರ್ಥಿವಾದಿ ದೇಹಕಃ ಕುತಃ ಅಸ್ತಿ ತಸ್ಮಾದಿದಂ ಭಾಸಮಾನಂ ಶರೀರತ್ವಂ ನಭೋರೂಪಸ್ಯ ಚಿತೇಃ ಸ್ವಪ್ನಏವ— ತಾ. ಪ್ರ.)

೮೫. ಮಹಾಚಿತಿಯ ಮೊದಲನೆಯ ಸ್ವಪ್ನವೇ ಸ್ವಯಂಭೂ ಎಂದು ಹೆಸರುಳ್ಳ ಮೊದಲನೆಯ ಶರೀರವು. ಸ್ವಪ್ನದಲ್ಲಿ ಕಾಣುವ ಸ್ವಪ್ನಗಳಂತೆ, ಆ ಸ್ವಯಂಭುವಿನಿಂದ ಹುಟ್ಟಿದವರು ನಾವೆಲ್ಲ.

ಗಂಡಸ್ಯೋಪರಿ ಜಾತಾನಾಂ ಸ್ಫೋಟಾನಾಮತ ಏವ ಸಃ ।
ಪರಮೇಣ ಪ್ರಯತ್ನೇನ ನ ಮನೋ ನಾಮ ಯಾಸ್ಯತಿ ॥೮೬॥

ಬ್ರಹ್ಮೈವಾಸತ್ಯಪುರುಷಃ ಸತ್ಯವಚ್ಚಾನುಭೂಯತೇ ।
ಸ್ಥಿತಂ ತತಃ ಪ್ರಭೃತ್ಯೇವ ನತ್ವಲೀಕಮಿದಂ ತತಂ ।೮೭॥

ಆಬ್ರಹ್ಮಸ್ತಂಭಪರ್ಯಂತಮಲೀಕಂ ಜಾಯತೇ ಜಗತ್ ।
ಯಥಾ ಸ್ವಪ್ನೇ ತಥಾಲೀಕಮೇವಮಾಶು ವಿನಶ್ಯತಿ ॥೮೮॥

ಚಿದ್ವ್ಯೋಮ್ನೈವೈತ್ಯ ವಿಶ್ವತ್ವಂ ಯಥಾ ಸ್ವಪ್ನೇ ವಿನಶ್ಯತಿ ।
ಅನುದಿತ್ವೈವ ವಿಶ್ವತ್ವಂ ಜಾಗ್ರದಾಖ್ಯೇ ತಥೈವಚ ॥೮೯॥

---

೮೬. ಗಂಡಸ್ಥಾನದಲ್ಲಿ ಬೊಕ್ಕೆಯಾದಾಗ ಬೊಕ್ಕೆಯನ್ನುಬಿಟ್ಟು ಗಂಡಸ್ಥಾನವನ್ನು ಕುರಿತುಹೋಗದ ಮನಸ್ಸಿನಂತೆ, ನಾವು ಏನೇ ಮಾಡಿದರೂ ಪರಮ ಪ್ರಯತ್ನದಿಂದಲೂ ಮನಸ್ಸು ಸ್ವಪ್ನರೂಪವಾದ ಜಗತ್ತನ್ನು ಬಿಟ್ಟು ಸ್ವಪ್ನಕಾಣುವ ಚಿತ್ತಿನ ಕಡೆಗೆ ಹೋಗುವುದಿಲ್ಲ.

೮೭. ಬ್ರಹ್ಮವೇ ವಿಶ್ವವಾಗಿರಲು, ಅಸತ್ಯಪುರುಷನಾದ ಜಗತ್ತು ಸತ್ಯವೇ ಆಗಿರುವಂತೆ ಅನುಭವಕ್ಕೆ ಬರುವುದು. (ಗಂಡಸ್ಥಾನವೇ ತಾನು ಗಂಡಸ್ಥಾನವೂ ಆಗಿ ಸ್ಫೋಟಸ್ಥಾನವೂ ಆದಾಗ ಮನಸ್ಸು ಗಂಡವನ್ನು ಬಿಟ್ಟು ಸ್ಫೋಟವನ್ನೇ ಸತ್ಯವೆನ್ನುವಂತೆ) ಬ್ರಹ್ಮವೇ ವಿರಾಟ್ ಆಗಿರಲು ಮನಸ್ಸು ವಿರಾಟ್ಟನ್ನೇ ಸತ್ಯವೆಂದುಕೊಳ್ಳುವುದು. ಯಾವಾಗ ಬ್ರಹ್ಮವು ವ್ಯಷ್ಟಿ ಸಮಷ್ಟಿರೂಪವನ್ನು ಹೊಂದಿತೋ ಅಂದಿನಿಂದಲೂ ಅಲೀಕವಾದ ಈ ಜಗತ್ತು ಇರುವುದು.

೮೮. ಆಸ್ತಂಬ ಬ್ರಹ್ಮ ಪರ್ಯಂತವಾಗಿರುವ ಈ ಜಗತ್ತೆಲ್ಲ ಅಲೀಕವೇ! ಸ್ವಪ್ನದಲ್ಲಿ ಕಂಡ ವಸ್ತುಗಳಂತೆ ಅಲೀಕವು—ಅದರಿಂದಲೇ ಸ್ವಪ್ನವಸ್ತುಗಳಂತೆಯೇ ನಾಶವೂ ಆಗುವುದು.

೮೯. ಚಿದಾಕಾಶವೇ ವಿಶ್ವತ್ವವನ್ನು ಪಡೆದು ಸ್ವಪ್ನದಂತೆ ಇದ್ದು ವಿನಾಶವಾಗುವುದು. ಹಾಗೆಯೇ ಅನುದಿತವಾಗಿಯೇ ಇದ್ದ ಜಾಗ್ರತ್ತಿನಲ್ಲಿ ವಿಶ್ವವಾಗಿ ತೋರಿ ಮಾಯವಾಗುವುದು.

ಅನುಭೂತಮಲೀಕಂ ಚಾಪ್ಯಲೀಕಂ ಸತ್ಯವತ್ಸ್ಥಿತಂ ।
ಸಂವಿದೇವ ಯಥಾ ಸ್ವಪ್ನೇ ನಗರಾದಿತಯೋದಿತಾ ॥೯೦॥

ಸಾಕಾರೇವ ನಿರಾಕಾರಾ ಸ್ಥಿತಾ ತದ್ವಜ್ಜಗತ್ತಯಾ ।
ಸಂವಿದಾಕಾಶಮಾಕಾಶದಣು ಮೇರೋರಣುರ್ಯಥಾ ॥೯೧॥

ಕಿಲ ಯತ್ತಸ್ಯ ನಾಮ ಸ್ಯಾದಾಕಾಶಾದಣುತಾಂ ಕುತಃ ।
ಕಾರಣಾಭಾವತೋಽನ್ಯಸ್ಯ ನಾಕಾರ ಉಪಪದ್ಯತೇ ॥೯೨॥

ಸರ್ಗಾದಾವೇವ ಯೋಽಜಾತೋ ಜಾತೋಽಯಂ ಜಗತಃ ಕುತಃ ।
ಯದೇವ ವೇದನಾಕಾಶೇ ಪುರಂ ಸ್ವಪ್ನೇ ತದೇವ ನಃ ॥೯೩॥

---

೯೦. ಅಲೀಕವೇ ಆದರೂ ಅನುಭೂತವಾಗಿ, ಅಲೀಕವಾದರೂ ಸತ್ಯವತ್ ಸ್ಥಿತವಾಗಿ ಇರುವ ವಿಶ್ವವು ಸಂವಿತ್ತಲ್ಲದೆ ಇನ್ನೇನೂ ಅಲ್ಲ. ಆ ಸಂವಿತ್ತು ಸ್ವಪ್ನದಲ್ಲಿ ಹೇಗೆ ನಗರಾದಿಗಳಾಗಿ ತೋರುವುದೋ ಹಾಗೆಯೇ (ಜಾಗ್ರತ್ತಿನಲ್ಲಿ ವಿಶ್ವವಾಗಿ ತೋರುವುದು)

೯೧. ನಿರಾಕಾರವೇ ಆದರೂ ಸಾಕಾರದಂತೆ ಆಗಿ ಸಂವಿತ್ತೇ ಜಗತ್ತು ಆಗಿ ಇರುವುದು. ನಿರಾಕಾರಕ್ಕೆ ಹೋಲಿಸಿದರೆ ಸಾಕಾರವು ಮೇರುವಿಗೆ ಹೋಲಿಸಿದ ಅಣುವಿನಂತಿರುವುದು.

೯೨. ಆಕಾಶಕ್ಕಿಂತಲೂ ಸೂಕ್ಷ್ಮವಾದ ಸಂವಿತ್ತಿಗೆ ಆಕಾರವು ಎಲ್ಲಿಯದು? ಹೀಗಿರಲು, ಸಂವಿತ್ತಿಲ್ಲದ ಮತ್ತೆ ಯಾವುದೂ ಕಾರಣವಿಲ್ಲದ ಜಗತ್ತಿಗೆ ಆಕಾರವು ಉಂಟು ಎನ್ನುವುದು ಹೇಗೆ?

೯೩. ಸರ್ಗಾದಿಯಲ್ಲಿ ಯಾವುದು ಹುಟ್ಟಲಿಲ್ಲವೋ ಅದು ಜಗತ್ತಿನಿಂದ ಹುಟ್ಟುವುದು ಹೇಗೆ? ಜಾಗ್ರತ್ ಎಂದು ವೇದನವಾಗುವ ಆಕಾಶದಲ್ಲಿ ಮೊದಲಿನ ಸ್ವಪ್ನದಲ್ಲಿ ಏನು ಕಂಡಿತೋ ಅದೇ ಕಾಣುವುದು.

ಭೇದಃ ಸ್ವಪ್ನಾದ್ರಿಚಿದ್ವ್ಯೋಮ್ನೋರ್ನ ಶೂನ್ಯಾಂಬರಯೋರಿವ ।
ಯದೇವ ಚಿನ್ನಭೋ ನಾಮ ತದೇವ ಸ್ವಪ್ನಪತ್ತನಂ ॥೯೪॥

ಯದೇವ ಸ್ಪಂದನಂ ನಾಮ ಸ ಏವ ಪವನೋ ಯಥಾ ।
ಸ್ಪಂದಾಸ್ಪಂದ್ಯೈಕರೂಪಾತ್ಮಾ ವಾಯುರ್ವ್ಯೋಮೋಪಮೋ ಯಥಾ ॥೯೫॥

ತಸ್ಮಾಚ್ಚಿನ್ನಭ ಏವೇದಂ ಜಗದಾಕೃತಿ ಲಕ್ಷ್ಯತೇ ।
ಸರ್ವಂ ಶೂನ್ಯಂ ನಿರಾಲಂಬಂ ಭಾಸನಂ ಚಿದ್ವಿವಸ್ವತಃ ॥೯೬॥

ಶಾಂತಮೇವೇದಮಖಿಲಂ ನಿರಸ್ತಾಸ್ತಮಯೋದಯಂ ।
ಸಕೃದ್ವಿಭಾತಮಮಲಂ ಧ್ಯಾನಸ್ಥಮನಾಮಯಂ ॥೯೭॥

---

೯೪. ಸ್ವಪ್ನಪರ್ವತಕ್ಕೂ ಚಿದಾಕಾಶಕ್ಕೂ ಏನೂ ಭೇದವಿಲ್ಲ ಶೂನ್ಯತೆಗೂ ಆಕಾಶಕ್ಕೂ ಭೇದವುಂಟೇನು ? ಚಿದಾಕಾಶವೆನ್ನುವುದು ಯಾವುದೋ ಅದೇ ಸ್ವಪ್ನ ಪತ್ತನವು.

೯೫. ಸ್ಪಂದವೇ ಪವನ ಎನ್ನುವಂತೆ, ಸ್ಪಂದಾಸ್ಪಂದಗಳೆರಡರಲ್ಲಿಯೂ ವಾಯು ಆಕಾಶದಂತೆ ಏಕರೂಪನಾಗಿರುವುದು ಹೇಗೋ ಹಾಗೆ, ಚಿತ್ತು ಜಗತ್ತುಗಳೆರಡೂ ಒಂದೇ !

೯೬. ಅದರಿಂದ ಚಿದಾಕಾಶವೇ ಜಗದಾಕೃತಿಯನ್ನು ತಳೆದು ಕಾಣಿಸಿಕೊಳ್ಳುವುದು. ಅದರಿಂದ ಸರ್ವವೂ ಶೂನ್ಯವೇ ! ನಿರಾಲಂಬವೇ ! ಎಲ್ಲವೂ ಚಿತ್ಸೂರ್ಯನ ಬೆಳಗುವಿಕೆಯೇ !

೯೭. ಅದರಿಂದ ಇದೆಲ್ಲವೂ ಅಸ್ತಮಯ ಉದಯಗಳಿಲ್ಲದೆ ಶಾಂತವಾಗಿರುವ ಚಿದಾಕಾಶವೇ ! ಯಾವಾಗಲೋ ಒಮ್ಮೆ ತಾನು ಶುದ್ಧವಾಗಿಯೇ ಇದ್ದುಕೊಂಡು ಅನಾಮಯವಾಗಿ, ಧ್ಯಾನಸ್ಥದಲ್ಲಿದ್ದರೂ ವಿಭಾತವಾಗಿ ಜಗತ್ತಾಗಿ ತೋರುತ್ತಿರುವುದು.

ತಸ್ಮಾದ್ವದ ಕಥಂ ಭಾವಾಃ ಕುತೋ ಭಾವಾಃ ಕ್ವ ಭಾವಧೀಃ ।
ಕ್ವ ದ್ವೈತಂ ಕ್ವೈಕತಾ ಕ್ವಾಹಂ ಕ್ವ ಭಾವಾಃ ಕ್ವ ಚ ಭಾವನಾಃ ॥೯೮॥

ನಿತ್ಯೋದಿತೋ ವ್ಯವಹರನ್ನಪಿ ನಿರ್ವಿಕಾರೋ ।
ದ್ವಿತ್ವೈಕ್ಯಮುಕ್ತಮತಿರುತ್ತಮಶೀತಲೋಽಂತಃ ।
ನಿರ್ವಾಣ ಆಸ್ಸ್ವ ವಿಗತಾಮಯಶುದ್ಧಬೋಧ ।
ಬೋಧೈಕತಾಮುಪಗತೋಽಂಗ ನ ಸಂತಿ ಭಾವಾಃ ॥೯೯॥

ಇತ್ಯಾರ್ಷೇ ವಾಸಿಷ್ಠಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ "ಸಕಲಭಾವಾಭಾವೋಪದೇಶೇನ ಪರಮಾರ್ಥೈಕತಾಪ್ರತಿಪಾದನಂ" ನಾಮ ತ್ರ್ಯಧಿಕಶತತಮಃ ಸರ್ಗಃ

---

೯೮. ಹೀಗಿರಲು, ಹೇಳು. ಭಾವಗಳುಂಟು ಎನ್ನುವುದು ಹೇಗೆ? ಆ ಭಾವಗಳು ಎಲ್ಲಿಂದ ಬಂದುವು? ಭಾವದೃಷ್ಟಿಯು ಎಲ್ಲಿಯದು? ದ್ವೈತವೆಲ್ಲಿ? ಐಕ್ಯವೆಲ್ಲಿ? ನಾನು ಎನ್ನುವುದೆಲ್ಲಿ? ಭಾವಗಳೆಲ್ಲಿ? ಭಾವನೆಗಳೆಲ್ಲಿ?

೯೯. ಆದರಿಂದ ಭಾವಗಳು ಇಲ್ಲ. ಆದರಿಂದ ನೀನು ವ್ಯವಹಾರ ಮಾಡುತ್ತಿದ್ದರೂ ನಿರ್ವಿಕಾರನಾಗಿ ನಿತ್ಯೋದಿತನಾಗಿರು. ದ್ವಿತ್ವ, ಐಕ್ಯ, ಎಂಬ ಮತಿಯು ನಿನ್ನನ್ನು ಸೋಕದಿರಲಿ. ನಿನ್ನ ಅಂತರಂಗವು ಯಾವಾಗಲೂ ಶೀತಲವೂ ಉತ್ತಮವೂ ಆಗಿರಲಿ. ನಿರ್ವಾಣದಲ್ಲಿ, ನಿರಾಮಯನಾಗಿ, ಶುದ್ಧಬೋಧ ಸಂಪನ್ನನಾಗಿ, ಬೋಧೈಕ್ಯವನ್ನು ಹೊಂದಿ ಸುಖವಾಗಿರು.

ಇಂತು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ "ಪರಮಾರ್ಥೈಕತಾ ಪ್ರತಿಪಾದನ" ಎಂಬ ನೂರ ಮೂರನೆಯ ಸರ್ಗವು

# ಚತುರಧಿಕಶತತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ—

ಆಕಾಶಃ ಶಬ್ದತನ್ಮಾತ್ರಂ ಸ್ಪರ್ಶತನ್ಮಾತ್ರಕೋಽನಿಲಃ |
ತತ್ಸಂಗೋತ್ಕರ್ಷಜಂ ತೇಜಸ್ತಚ್ಛಾಂತಿಶ್ಶೈತ್ಯಪಾಂ ಸ್ಥಿತಿಃ ||೧||

---

# ನೂರ ನಾಲ್ಕನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧. ಆಕಾಶವು ಶಬ್ದತನ್ಮಾತ್ರವು. ವಾಯುವು ಸ್ಪರ್ಶತನ್ಮಾತ್ರಕವು. ಇವೆರಡ ಸಮಾಗಮದಿಂದ ಆದುದು ತೇಜವು. ಅದು ಶಾಂತವಾಗುವಿಕೆಯೇ ಆಪವು.

(ಚಿನ್ಮಾತ್ರಮೇವ ಜಗದಾಕಾರೇಣ ಸ್ವಪ್ನ ದ್ಭಾತೀತಿ ಯದುಕ್ತಂ ತದೇವಾನುಭವಾಲಂಬನೇ ಪ್ರಮಾಣತಃ ಪದಾರ್ಥತತ್ತ್ವಂ ಜಿಜ್ಞಾಸಮಾನೈಃ ಸರ್ವೈಃ ಆಕಾಶಾದಿ ಕ್ರಮಸೃಷ್ಟಿ ಕಲ್ಪನಾ ಪರಂಪರಾಭಿಃ ಸುದೂರಮಪಿ ಗತ್ವಾ ಅಂತತಃ ಶರಣೀಕರಣೀಯಮಿತಿ ವರ್ಣಯಿಷ್ಯನ್ನಾಕಾಶಾದೀನಾಂ ತೈರ್ಥಿಕ ಪ್ರಸಿದ್ಧಾಂ ಸ್ವರೂಪಸ್ಥಿತಿಮಾಹ — — ತಯೋಃ ಯಃ ಸಂಗೋತ್ಕರ್ಷಃ ಸಂಘರ್ಷಾತಿಶಯಃ ತಸ್ಮಾಜ್ಜಾತಂ ರೂಪತನ್ಮಾತ್ರಂ ತೇಜಃ, ತಸ್ಯ ತೇಜಸಃ ಶಾಂತಿಃ ಔಷ್ಣ್ಯ ರೌಕ್ಷ್ಯ ಪ್ರಶಮನೇನ ಶೈತ್ಯದ್ರವತ್ವಾವಲಂಬನ ಲಕ್ಷಣಂ ರಸತನ್ಮಾತ್ರ ಮಿತ್ಯಪಾಂಸ್ವಭಾವಸ್ಥಿತಿ ರಿತ್ಯರ್ಥಃ — ತಾ. ಪ್ರ.)

ಭೂರೇಷಾಂ ಸಂಘಃ ಸ್ವಪ್ನಾಭೇ ಜಗದ್ಭಾನೇ ಕ್ರಮಸ್ತ್ವತಿ ।
ಕಥಂ ನಾಮ ಕಿಲಾಮೂರ್ತಾದ್ವ್ಯೋಮ್ನೋ ಮೂರ್ತಿಃ ಪ್ರವರ್ತತೇ ॥೩॥

---

೩. ಇವುಗಳೆಲ್ಲದರ ಸಂಘನೇ ಭೂಮಿಯು. ಸ್ವಪ್ನ ಸದೃಶವಾದ ಜಗದ್ವಿಕಾಸದಲ್ಲಿ ಇದು ಕ್ರಮವು. ಹೀಗಿರಲು ಅಮೂರ್ತವಾದ ಆಕಾಶದಿಂದ ಮೂರ್ತರೂಪವಾದ ಜಗತ್ತು ಹೇಗೆ ಪ್ರವರ್ತಿಸೀತು ?

(ಭೂಸ್ತು ಏಷಾಂ ಸಂಹಂತೀತಿ ಸಂಘಃ, ನೀಲನೇ ಘನೀಭಾವ ಹೇತುಃ ಗಂಧ ತನ್ಮಾತ್ರಮಿತಿ ಚಿತ ಏವ ಸ್ವಪ್ನಾಭೇ ಜಗದ್ಭಾನೇ ಇಯಂ ಕ್ರಮಸ್ಥಿತಿಃ। ತತ್ರೇವಂ ಪೃಚ್ಛಾಮಃ। ಅಮೂರ್ತಾತ್ ವ್ಯೋಮ್ನಃ ಪೃಥಿವ್ಯಂತಾಮೂರ್ತಿಃ ಕಥಂ ಪ್ರವರ್ತತೇ ಇತಿ ? ಯದಿ ಕಶ್ಚಿತ್ ಬ್ರೂಯಾತ್ ವಾಯುರೇವ ಪ್ರಥಮಮಾಕಾಶಾತ್ ಕ್ರಿಯಾ ಸ್ಪರ್ಶಪ್ರಧಾನ ಉತ್ಪದ್ಯತೇ ಸ ಚ ರೂಪಾಭಾವಾತ್ ಕಿಂಚಿದಾಕಾಶವತ್ ಸ್ಪರ್ಶಕ್ರಿಯಾ ಶಾಲಿತ್ವಾತ್ ಕಿಂಚಿನ್ಮೂರ್ತವದಸೀತಿ, ರೂಪ ತನ್ಮಾತ್ರ ಪ್ರಧಾನಂ ಮೂರ್ತಂ ತೇಜಃ ಜನಯಿಷ್ಯತೀತಿ ತನ್ನ। ನಿರವಯವ ಕೂಟಸ್ಥೇನ ಆಕಾಶೇನ ವಾಯೋರೇವಾಸಿದ್ಧೇಃ ನಹ್ಯವ್ಯಾಪ್ರಿಯಮಾಣಂ ನಿರವಯವಂ ಚ ಕಿಂಚಿದಾರಬ್ಧುಂ ವಿಕರ್ತುಂ ವಾ ಶಕ್ನೋತಿ। ಕಿಂಚ ಯದಿ ಸ್ವಸ್ಥಾನಂ ವಿಕ್ರಿಯೇತ ತರ್ಹಿ ಆಕಾಶಭಾವಾತ್ ನಿರವಕಾಶಾ ವಾಯ್ವಾದಯಃ ಸ್ಯುಃ। ಯದ್ಯರ್ಥಂ ತತೋಽಲ್ಪಂ ವಾ ತರ್ಹ್ಯಾಕಾಶಸ್ಯಾಪಿ ಸಾವಯವತ್ವ ಪ್ರಸಂಗಃ। ಅಸ್ತು ಸಾವಯವಮಪೀತಿ ಚೇತ್ ತದೇವ ಸ್ಪರ್ಶವತ್ ಕ್ರಿಯಾವತ್ ಚ ಸ್ಯಾದಿತಿ ವಾಯ್ವಾದಿ ಜನನ ವೈಯರ್ಥ್ಯಂ ನಿರವಕಾಶತಾ ಚ ತಸ್ಯ ತದವಯವಾನಾಂಚ ಸ್ಯಾತ್। ಏವಂ ವಾಯೋರಪಿ ನೀರೂಪಾತ್ ರೂಪತನ್ಮಾತ್ರೋತ್ಪತ್ತಿರಾರಂಭೇಣ ಪರಿಣಾಮೇನ ವಾ ದುರ್ನಿರೂಪೈವ ಕಾರಣಗುಣಾ ಹಿ ಕಾರ್ಯಗುಣಾನಾರಂಭಂತೇ। ನಚ ರೂಪಂ ವಾಯಾವಸ್ತಿ ಪರಿಪಾಕೇನ ಹಿ ಪರಿಣಾಮಃ ಸ್ಯಾನ್ನಚ ವಿನಾ ತೇಜಃ ಪರಿಪಾಕೋಽಸ್ತಿ। ಏವ ಮುತ್ತರತ ಭೂತಯೋರಪ್ಯೂಹ್ಯಮಿತಿ–ತಾ. ಪ್ರ.)

ಗತ್ವಾ ಸು ದೂರಮಪ್ಯೇತ ಜ್ಞಪ್ತೇಃ ಶ್ವೈ್ೕತ್ಪರಿ ಕಲ್ಪ್ಯತೇ ।
ತದಾದಾವೇವ ಸತ್ಯಾರ್ಥೇ ದೋಷೋsಸ್ಮಿನ್ಕ ಇವಾಮಲೇ ॥೩॥

ಜ್ಞಪ್ತಿರೇವಾತಿ ವಿಮಲಾ ಸ್ವರೂಪಾತ್ಮನಿ ಭಾತಿಯತ್ ।
ತದೇವ ಜಗದಿತ್ಯುಕ್ತಂ ಸತ್ಯಮಿತ್ಯೇವ ಸತ್ಯತಃ ॥೪॥

---

೩. ಬಹುದೂರ ಹಿಂದೆ ಹೋಗಿ ಈ ಪಂಚಭೂತಗಳನ್ನೂ ಕಲ್ಪನೆಯನ್ನೂ ಬೇರೆ ರೀತಿಯಲ್ಲಿ ಹೇಳುವೆವು ಎಂದರೆ, ಸತ್ಯವೂ ಅರ್ಥವೂ ಆಗಿ ವಿಮಲವಾಗಿರುವ ಬ್ರಹ್ಮದಿಂದಲೇ ಎಲ್ಲಾ ಎನ್ನುವ ಸಿದ್ಧಾಂತವನ್ನೇಕೆ ಅಂಗೀಕರಿಸಬಾರದು ?

(ನನ್ವನುಭವ ಬಲಾದೇವ ಕೂಟಸ್ಥಾದ ಪ್ಯಾಕಾಶಾಚ್ಚಲನಾತ್ಮಕಂ ವಾಯುಂ ನೀರೂಪಾಚ್ಚ ವಾಯೋಃ ರೂಪವತ್ತೇಜೋ ನೀರಸಾಚ್ಚ ತಸ್ಮಾದ್ರಸಾತ್ಮಕಂ ವಾರಿ ಅಗಂಧಾಚ್ಚ ತಸ್ಮಾದ್ಗಂಧವತೀಂ ಪೃಥಿವೀ ಮುತ್ಪನ್ನಾಂ ಕಲ್ಪಯಿಷ್ಯಾಮಃ । ಅನು ಭವಾತ್ಮಿಕಾಜ್ಞಪ್ತಿರೇವ ಭಗವತೀ ನಃ ಸರ್ವಃ ವಿರೋಧಮುತ್ಸಾರ್ಯ ಯಥಾನುಭವ ಮರ್ಥಾನ್ ಸಮರ್ಥಯಿಷ್ಯತೀತಿ ಚೇತ್ತತ್ರಾಹ-ಯದಿ ಸುದೂರಮಪಿಗತ್ವಾ ಜ್ಞಪ್ತಿ ರೇವ ಶರಣೀಕ್ರಿಯತೇ ತರ್ಹಿ ಸೈವ ಸ್ವಪ್ನಾದಾವಿವ ವಿವರ್ತಮಾತ್ರೇಣ ಸರ್ವಂ ಜಗ ದ್ವೇಷಂ ನಿರ್ವಹಿಷ್ಯತೀತಿ ಆದೌ ಬ್ರಹ್ಮಣ್ಯೇವ ಸರ್ವಾರ್ಥ ಸ್ವರೂಪೇ ಸತಿ ಅಮಲೇ ಸರ್ವದೋಷ ನಿರ್ಮುಕ್ತೇ ಸಿದ್ಧಾಂತೇ ಕೋ ದೋಷ ಇತ್ಯರ್ಥಂ—ತಾ. ಪ್ರ )

೪. ಅತಿ ನಿರ್ಮಲವಾದ ಜ್ಞಪ್ತಿಯು ಸ್ವರೂಪಾತ್ಮದಲ್ಲಿ ಭಾಸವಾಗುವುದೆಂಬುದು ಯಾವುದುಂಟೋ ಅದೇ ಜಗತ್ತು ಎನ್ನಿಸಿಕೊಳ್ಳುವುದು. ಅದೇ ಸತ್ಯವು.

(ತದೇವ ಜಗದಿತಿ ಸತ್ಯತಃ ಪರಮಾರ್ಥ ಸತ್ಯಾಧಿಷ್ಠಾನ ಬಲಾತ್ಸರ್ವಂ ಖಲ್ವಿದಂ ಬ್ರಹ್ಮೇತ್ಯಾದಿ ಯಥಾರ್ಥವಾದಿ ಶ್ರುತಿಬಲಾಚ್ಚ ಸತ್ಯಮಿತ್ಯೇವ ಸಿದ್ಧಾಂತರಹಸ್ಯ ಮುಕ್ತ ಮಿತ್ಯರ್ಥಃ— ತಾ. ಪ್ರ )

ನ ಕ್ವಚಿತ್ಸಂತಿ ಭೂತಾನಿ ಪಂಚ ಕುಡ್ಯಾದಯೋ ನ ವಾ ।
ಅಸಂತ್ಯಪ್ಯನುಭೂತಾನಿ ನನು ಸ್ವಪ್ನದಶಾಸ್ವಿವ ॥೫॥

ಸ್ವಭಾವ ಏವ ವಿಮಲೋ ಯಥಾ ಸ್ವಪ್ನೇ ಪುರಾದಿವತ್ ।
ಕಚತ್ಯೇವಂ ಜಾಗ್ರತೀವಂ ಜಗದ್ವದ್ವಸ್ತು ತತ್ಸುಖಂ ॥೬॥

ಚೇತನಾಕಾಶ ಏವಾಹಂ ತದೇವೇದಂ ಜಗತ್ಸ್ಥಿತಂ ।
ಇತ್ಯಹಂ ಜಗದಿತ್ಯೇಕಂ ಖಮೇವೈಕಂ ಶಿಲಾಘನಂ ॥೭॥

ಯದಾದಿಸರ್ಗಜನನಂ ಯತ್ಕಲ್ಪಾಂತವಿವರ್ತನಂ ।
ಯದ್ವಾ ಭುವನಸಂಸ್ಥಾನಂ ತದ್ಧಿ ವ್ಯೋಮ ನಿರಾಕೃತಿ ॥೮॥

---

೫. (ಅವರಿಂದ) ಪಂಚಭೂತಗಳು (ಪ್ರತ್ಯೇಕವಾಗಿ) ಎಲ್ಲಿಯೂ ಇಲ್ಲ; ಅವುಗಳಿಂದ ಆದ ಕುಡ್ಯಾದಿಗಳೂ ಯಾವವೂ ಇಲ್ಲ. ಇವೆಲ್ಲ ಇರುವುದು ನಮ್ಮ ಅನುಭವದಲ್ಲಿದೆಯಲ್ಲಾ ಎಂದರೂ ಇದ್ದರೂ ಅವು ಅಸತ್‌ಗಳು. ಸ್ವಪ್ನದಲ್ಲಿ ಕಂಡಂತೆಯೇ ಅವು.

೬. ನಿರ್ಮಲವಾದ ಸ್ವಭಾವವೇ ಸ್ವಪ್ನದಲ್ಲಿ ಪುರಾದಿಗಳಾಗಿ ಕಾಣುವಂತೆ, ಜಾಗ್ರತ್ತಿನಲ್ಲಿ ಈ ಜಗತ್ತಿನಹಾಗೆ (ನಿರಾಯಾಸವಾಗಿ) ಕಚನವಾಗುವುದು.

೭. ನಾನು ಎಂಬುದು ಯಾವುದುಂಟೋ ಅದು ಚೇತನಾಕಾಶವು; ಅದೇ ಜಗತ್ತಾಗಿ ಎದುರಿಗೆ ಇರುವುದು. ಹೀಗಿರುವುದರಿಂದ ನಾನೂ ಜಗತ್ತೂ ಎರಡೂ ಶಿಲಾಘನವಾದ ಆಕಾಶವೇ!

೮. ಆದಿಸರ್ಗ ಜನನವೆಂಬುದೂ ಕಲ್ಪಾಂತವಾಗಿ ಹೊರಳುವುದೆಂಬುದೂ ಭುವನರೂಪದಲ್ಲಿ ಇರುವುದೆಂಬುದೂ ಎಲ್ಲವೂ ನಿರಾಕೃತಿಯಾದ ವ್ಯೋಮವೇ ಎಂದು ತಿಳಿ.

ಸತಿ ವಾऽಸತಿ ವಾ ದೇಹೇ ।
ನಿರ್ದುಃಖಸುಖತ್ವಮಕ್ಷಯಂ ಮೋಕ್ಷಃ ।
ಬದ್ಧೇಮಲೇ ಸ್ವಭಾವೇ ।
ನಿರ್ಭರವಿಶ್ರಾಂತಿರಸ್ತು ಸರ್ವೇಹ ॥೯॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ "ಜಗದಸತ್ತಾ ಪ್ರತಿಪಾದನಂ" ನಾಮ ಚತುರಧಿಕಶತತಮಃ ಸರ್ಗಃ

---

೯. ದೇಹವು ಇದ್ದಾಗ ಪಡೆಯುವ ಜೀವನ್ಮುಕ್ತಿಯಾಗಲಿ, ದೇಹಾನಂತರ ದೊರೆಯುವ ವಿದೇಹಮುಕ್ತಿಯಾಗಲಿ, ಮೋಕ್ಷವು ನಿರ್ದುಃಖಸುಖವು; ಅದೇ ಭೂಮಾನಂದವಾದ ಅಕ್ಷಯವು. ಅಮಲವಾದ ಸ್ವಭಾವವನ್ನು ಅರಿತಮೇಲೆ ಸರ್ವೇಚ್ಛೆಗಳೂ ನಿರ್ಭರ ವಿಶ್ರಾಂತಿಯನ್ನು ಪಡೆಯುವುವು.

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ "ಜಗದಸತ್ತಾ ಪ್ರತಿಪಾದನ" ಎಂಬ ನೂರ ನಾಲ್ಕನೆಯ ಸರ್ಗವು

---

# ಪಂಚಾಧಿಕಶತತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ—

ಸ್ವಭಾವಂ ಜಗದಾಕಾರಂ ಚಿದ್ಭಾವೋಽನುಭವನ್ಸ್ಥಿತಃ ।
ಸ್ವತಃ ಸ್ವಪ್ನಮಿವಾನನ್ಯಮಾತ್ಮನಃ ಕಲ್ಪನಾಭಿಧಂ ॥೧

ಜಾಗ್ರತ್ಸುಷುಪ್ತಮೇವೇದಂ ಶಿಲಾಜಠರಮೇವ ವಾ ।
ಆಕಾಶಮೇವ ವಾ ಶೂನ್ಯಂ ಜಗತ್ತ್ವೇನ ಚ ನೋಜ್ಝಿತಂ ॥೨॥

ಸ್ವಪ್ನ ಏವಾತ್ರ ದೃಷ್ಟಾಂತಃ ಪುರಮಂಡಲಮಂಡಿತಃ ।
ಸ್ವಪ್ನೇ ಜಗನ್ನ ಕಿಂಚಿತ್ಸದಿತ್ಥಮಾಭಾತಿ ಭಾಸುರಂ ॥೩॥

---

# ನೂರೈದನೆಯ ಸರ್ಗವು

ಶ್ರೀವಸಿಷ್ಠನು ಹೇಳಿದನು—

೧. ಚಿದ್ಭಾವವು ಸ್ವಭಾವವನ್ನೇ ಜಗದಾಕಾರವಾಗಿ ಅನುಭವಿಸುತ್ತಾ ತಾನಾಗಿಯೇ ತನ್ನ ಕಲ್ಪನೆಯೆಂಬ ಸ್ವಪ್ನವನ್ನು ಅನನ್ಯವಾಗಿ ನೋಡಿಕೊಳ್ಳುತ್ತಾ ಇರುವುದು.

೨. ಜಾಗ್ರತ್ತೆಂಬುದೂ ಸುಷುಪ್ತವೇ! ಅದು ಘನವಾದ ಶಿಲಾಜಠರವಾಗಲಿ ಶೂನ್ಯವಾದ ಆಕಾಶವಾಗಲಿ ಅದರಲ್ಲಿ ಜಗತ್ತ್ವವು ಉಂಟೇಉಂಟು.

೩. ಇದು ಸರಿಯೆನ್ನುವುದಕ್ಕೆ ಸ್ವಪ್ನವೇ ದೃಷ್ಟಾಂತವು. ಪುರ, ದೇಶಗಳಿಂದ ಕೂಡಿದ್ದರೂ ಸ್ವಪ್ನದಲ್ಲಿ ಜಗತ್ತು ಏನೂ ಅಲ್ಲ. ಹಾಗೆಯೇ ಸತ್ ಎನ್ನುವುದು ಈ ಜಗದ್ರೂಪವಾಗಿ ಭಾಸುರವಾಗಿ ಆಭಾತವಾಗುವುದು.

ತ್ರೈಲೋಕ್ಯಮಸದೇವೇದಂ ಯಥಾ ಸ್ವಪ್ನೇಽವಭಾಸತೇ ।
ಜಾಗ್ರತ್ಯಸ್ಮಿಂಸ್ತಥೈವೇದಂ ಮನಾಗಪ್ಯತ್ರ ನಾನ್ಯಥಾ ॥೪॥

ನ ಜಾಗ್ರತಿ ನ ಚ ಸ್ವಪ್ನೇ ಜಗಚ್ಛಬ್ದಾರ್ಥಸಂಭವಃ ।
ಸ್ವಂ ವಸ್ತುತಸ್ತು ಚಿದ್ವ್ಯೋಮ್ನೋ ಭಾನಂ ಬುದ್ಧಂ ಜಗತ್ತಯಾ ॥೫॥

ಚಿದ್ವ್ಯೋಮ್ನಾ ಸ್ವಚಮತ್ಕಾರೋ ವ್ಯೋಮನ್ಯದ್ರ್ಯಾದಿರೂಪಭೃತ್ ।
ಜಗದಿತ್ಯೇವ ಬುದ್ಧೋಽಂತರ್ಜಾಗ್ರತ್ಸ್ವಪ್ನೇ ಸ್ವಯಂಭುವಾ ॥೬॥

ಜಗನ್ನ ಕಿಂಚಿದೇವೇದಂ ಚಿದ್ರೂಪಂ ಚ ನ ಕಿಂಚನ ।
ಏತೇ ಕಿಂಚಿದಿವಾಭಾತೋ ನಭಶ್ಚಿಜ್ಜಗತೀ ಮುಧಾ ॥೭॥

---

೪. ಈ ತ್ರೈಲೋಕ್ಯವೂ ಸ್ವಪ್ನಜಗತ್ತಿನಂತೆಯೇ ಅಸತ್! ಸ್ವಪ್ನದಲ್ಲಿ ಕಾಣುವಂತೆಯೇ ಜಾಗ್ರತ್ತಿನಲ್ಲಿಯೂ ಕಾಣುತ್ತಿರುವುದು. ಆದರೂ ಕೊಂಚವೂ ಬೇರೆಯಲ್ಲ.

೫. ಜಾಗ್ರತ್ತಿನಲ್ಲಾಗಲಿ, ಸ್ವಪ್ನದಲ್ಲಾಗಲಿ, ಜಗತ್ತು ಎಂಬ ಶಬ್ದದ ಅರ್ಥವಾಗಿ ಪ್ರತ್ಯೇಕ ವಸ್ತುವೊಂದಿರುವುದು ಎಂಬುದು ಸಂಭವವಿಲ್ಲ. ಚಿದಾಕಾಶವು ತಾನಾಗಿ ಭಾನವಾಗುವುದನ್ನು ಜಗತ್ತಾಗಿ ಕಾಣುವುದು ಎಂಬುದೇ ವಾಸ್ತವ್ಯವು

೬. ಚಿದಾಕಾಶವು ಸ್ವಯಂಭುವು. ಅದು ತನ್ನಲ್ಲಿಯೇ ಜಾಗ್ರತ್ಸ್ವಪ್ನಗಳನ್ನು ಕಾಣುವುದು ಅದು ಅದರ ಚಮತ್ಕಾರವು. ಆಗ ತನ್ನಲ್ಲಿಯೇ ಪರ್ವತಾದಿ ರೂಪಗಳನ್ನು ತಳೆಯುವುದು. ಅದನ್ನೇ ಜಗತ್ತು ಎಂದುಕೊಳ್ಳುವುದು.

೭. ಜಗತ್ತು ಎಂಬುದು ಏನೂ ಅಲ್ಲ; ಚಿದ್ರೂಪವೇ! ಅದೂ ಆಕಾಶವಲ್ಲದೆ ಇನ್ನೇನೂ ಅಲ್ಲ. ಚಿತ್ತು ಜಗತ್ತು ಎಂಬಿವೆರಡೂ ಆಭಾಸದಿಂದ ಕಾಣುವುವು.

(ಭಾಷ್ಯ ಜಗತಃ ಶೂನ್ಯತ್ವೇ ಚಿತಸ್ತದ್ಭಾಸಕಂ ರೂಪಂ ಚ ನ ಕಿಂಚನ । ನಭಃ ಅತ್ಯಂತಾಸತೀ ಏತೇ ಚಿಜ್ಜಗತೀ ಗ್ರಾಹ್ಯಗ್ರಾಹಕರೂಪೇ ಬ್ರಹ್ಮಣಿ ಮುಧಾ ಭಾತಃ ॥ —ತಾ. ಪ್ರ.)

ಆಭಾತಮೇವ ತ್ರೈಲೋಕ್ಯಂ ಯಥಾ ಸ್ವಪ್ನೇ ನ ಕಿಂಚನ ।
ಶೂನ್ಯಮೇವ ಭವೇದೇವಮೇವಂ ಜಾಗ್ರತಿ ನಿರ್ವಪುಃ ॥೮॥

ಸ್ವಪ್ನೇ ಕಿಲ ಮಹಾಬುದ್ಧೇ ನಾನಾನಿರ್ಮಾಣಶಾಲಿನಿ ।
ಆರಂಭಾ ಏವ ನಾರಂಭಾ ಅಸತ್ಸದಿವ ಜಾತಕಂ ॥೯॥

ಅವ್ಯೋಮ್ನೈವಾತಿವಿತತಂ ವ್ಯೋಮಾಂತಪರಿವರ್ಜಿತಂ ।
ವ್ಯೋಮ್ನೈವಾಚಲಸಂಘಾತೋ ನಾನಾಪುರಗಣೋತ್ಕರಃ ॥೧೦॥

ಅಪ್ಯಬ್ದಾಬ್ಧ್ಯದ್ರಿನಿರ್ಘೋಷೋ ಮೌನಮೇವ ಯಥಾ ತಥಾ ।
ನ ಶೃಣೋತ್ಯೇವ ಪಾರ್ಶ್ವಸ್ಥಃ ಸಂಪ್ರಬುಧ್ಯಾಪಿ ಕಿಂಚನ ॥೧೧॥

---

೮. ಸ್ವಪ್ನದಲ್ಲಿ ಹೇಗೋ ಹಾಗೆ ಆಭಾತವಾದ ಈ ತ್ರೈಲೋಕ್ಯವೂ ವಾಸ್ತವವಾಗಿ ಏನೂ ಅಲ್ಲ. ಹಾಗೆಯೇ ಜಾಗ್ರತ್ತಿನಲ್ಲಿಯೂ ಜಗತ್ತಾಗಿ ಭಾತವಾದರೂ ಅದೂ ನಿರಾಕಾರವಾದ ಶೂನ್ಯವಲ್ಲದೆ ಮತ್ತೇನಾದೀತು ?

೯. ಎಲೈ ಮಹಾಬುದ್ಧಿಯೇ, ನಾನಾ ನಿರ್ಮಾಣಗಳನ್ನು ಮಾಡಬಲ್ಲ ಸ್ವಪ್ನದಲ್ಲಿ ಕಾರ್ಯಗಳೆಲ್ಲವೂ ಅಸತ್ತಾದರೂ ಸತ್ ಇದ್ದಂತೆ ತೋರುವುವು. ಹಾಗಿದ್ದರೂ ಅವು ಕಾರ್ಯಗಳೇ ಅಲ್ಲ. ಅಲ್ಲವೇನು ?

೧೦. ಆಕಾಶದ ಆಚೆಯ ಬ್ರಹ್ಮವೇ ಅಂತವಿಲ್ಲದ ಅನಂತವಾದ ವ್ಯೋಮವಾಗಿ ಹರಡಿರುವುದು. ಆ ವ್ಯೋಮವು ನಾನಾ ಪುರಗಣಗಳಿಂದ ರಂಜಿಸುವ ಪರ್ವತಗಳಿಂದ ಕೂಡಿರುವ ಜಗತ್ತಾಗುವುದು (ಆಗಿ ಕಾಣುವುದು )

(ಅವ್ಯೋಮ ಬ್ರಹ್ಮೈವ ಅತಿವಿತತಂ ಶೂನ್ಯಾತ್ಮಕಂ ವ್ಯೋಮ ಪ್ರಥಮಂ ಸಂಪನ್ನಂ । ವ್ಯೋಮ್ನೈವ ಚ ವಾಯ್ವಾದಿ ಕ್ರಮೇಣ ಅಚಲಸಂಘಾತೋ ನಾನಾಪುರಗಣೋತ್ಕರಶ್ಚ ಸಂಪನ್ನಂ ಇತ್ಯುಭಯಮಪ್ಯಾಶ್ಚರ್ಯಮಿತ್ಯರ್ಥಃ । ಅಥವಾ ಅವ್ಯೋಮ ಗಿರಿಮಹೀಪುರಾದಿ ವ್ಯೋಮ ಭವತಿ ಏವಂ ವ್ಯೋಮ್ನೈವ ಅಚಲಸಂಘಾತಾದಿ ಭವತೀತಿ ಯಥಾಶ್ರುತಂ ಪ್ರತಿಜ್ಞಾಪರಂ —ತಾ. ಪ್ರ.)

೧೧. ಒಬ್ಬನು ಸ್ವಪ್ನದಲ್ಲಿ ಅನುಭವಿಸುತ್ತಿರುವ ಗುಡುಗು, ಸಮುದ್ರದ ಮೊರೆತ, ಅದ್ರಿನಿರ್ಘೋಷ, ಇವು ಮಗ್ಗುಲಲ್ಲಿರುವ ಎಚ್ಚೆತ್ತಿರುವವನಿಗೆ ಮೌನವೇ ಆಗಿರುವಂತೆ, ಅವನು ಏನೂ ಸದ್ದನ್ನೇ ಕೇಳದಿರುವಂತೆ, (ಈ ಜಗತ್ತು ಶೂನ್ಯವು.)

ಪ್ರಜಾಯತೇ ವಾ ಜಾತೋಽಪಿ ವಂಧ್ಯಾಯಾಸ್ತನಯೋ ಯಥಾ ।
ಜಾತೋಽಪ್ಯಜಾತ ಏವಾಸ್ತೇ ಯಥಾತ್ಮಸ್ಮೃತಿವಿಸ್ಮೃತೌ ॥೧೨॥

ಸದಸದ್ಭವತಿ ಕ್ಷಿಪ್ರಂ ಭೂತೋಽನನುಭವೋ ಯಥಾ ।
ವಿಪರ್ಯಸ್ಯತಿ ಸರ್ವಂ ಚ ರಾತ್ರಿರೇವ ಯಥಾ ದಿನಂ ॥೧೩॥

ಅಸದ್ಯತ್ಸಂಭವತ್ಯಾಶು ದಿನಮೇವ ಯಥಾ ನಿಶಾ ।
ಅಸಂಭವಃ ಸಂಭವತಿ ಯಥಾ ಸ್ವಸ್ಮೃತಿದರ್ಶನಂ ॥೧೪॥

ಅಸಂಭವಃ ಸಂಭವತಿ ಜಗದ್ಭಾನವಿವಾಂಬರೇ ।
ತಮ ಏವ ಮಹಾಲೋಕೋ ಯಃ ಸನಿದ್ರಃ ಸವಾಸರಃ ॥೧೫॥

ಆಲೋಕ ಏವೈತಿ ತಮೋ ಯನ್ನಿದ್ರಾಸ್ವಪ್ನವಾಸರಾಃ ।
ವಸುಧೈವ ಭವೇದ್ವ್ಯೋಮ ಶ್ವಭ್ರಾದಿಪತನೇ ಯಥಾ ॥೧೬॥

---

೧೨. ವಂಧ್ಯಾಪುತ್ರನು ಜಾಗ್ರತ್ತಿನಲ್ಲಿ ಇಲ್ಲವೇ ಇಲ್ಲವಾದರೂ ಸ್ವಪ್ನದಲ್ಲಿ ಹುಟ್ಟುವನು. ಹಾಗೆಯೇ ಪುರುಷನು ತಾನು ಜಾತನೇ ಆಗಿದ್ದರೂ ಆತ್ಮಸ್ಮೃತಿ ವಿಸ್ಮೃತಿಗಳನ್ನು ಕನಸಿನಲ್ಲಿ ಕಂಡು ತಾನು ಅಜಾತನೆಂದುಕೊಳ್ಳುವನು.

೧೩. ಹಾಗೆಯೇ ಸತ್ ಅಸತ್ ಆಗುವುದು. ಭೂತವು ಅಭೂತವಾಗುವುದು. ರಾತ್ರಿಯು ಹಗಲಾದಂತೆ ಎಲ್ಲವೂ ವಿಪರ್ಯಾಸವನ್ನು ಹೊಂದುವುದು.

೧೪. ಹಗಲು ರಾತ್ರಿಯಾಗುವಂತೆ ಅಸತ್ ಆದುದೂ ಸಂಭವಿಸುವುದು; ಅಸಂಭವವು ಸಂಭವವಾಗುವುದು. ಅದು ಹೇಗೆ ಎಂದರೆ ಆತ್ಮಸ್ಮೃತಿದರ್ಶನದಂತೆ.

೧೫. ಅಸಂಭವವು ಸಂಭವವಾಗುವುದು ಹೇಗೆಂದರೆ ಜಗತ್ತು ಆಕಾಶದಲ್ಲಿ ಕಾಣುವಂತೆ; ಚೆನ್ನಾಗಿ ಬೆಳಗುತ್ತಿರುವಾಗಲೂ ಕತ್ತಲನ್ನೇ ಕಾಣುವ (ಉಲೂಕಾದಿಗಳಂತೆ); ಹಗಲಲ್ಲಿ ನಿದ್ದೆಮಾಡುವವರಂತೆ.

೧೬. ನಿದ್ದೆಯಲ್ಲಿ ಕನಸು ಕಾಣುವಾಗ ಬೆಳಕು ತಮಸ್ಸಾಗಬಹುದು; ಹಳ್ಳದಲ್ಲಿ ಬೀಳುವಾಗ ಆಗುವಂತೆ ವಸುಧೆಯು ಆಕಾಶವಾಗಬಹುದು.

ಅಸತ್ಯರೂಪಮೇವೇತಿ ಭಾತಿ ಸ್ವಪ್ನೇ ಜಗದ್ಯಥಾ ।
ತಥೈವ ಜಾಗ್ರದಾಭಾತಿ ಮನಾಗಪ್ಯತ್ರ ನಾನ್ಯಥಾ ॥೧೭॥

ಯಥಾ ದ್ವೌ ಸದೃಶೌ ಸೂರ್ಯೌ ಯಥಾ ದ್ವೌ ಸದೃಶೌ ನರೌ ।
ಜಾಗ್ರತ್ಸ್ವಪ್ನೌ ತಥೈವೈತೌ ಮನಾಗಪ್ಯತ್ರ ನಾನ್ಯಥಾ ॥೧೮॥

ಶ್ರೀರಾಮ ಉವಾಚ:—

ನೈತದೇವಮಪಿ ಕ್ಷಿಪ್ರಾತ್ಪ್ರತ್ಯಯೋ ಯತ್ರ ಬಾಧಕಃ ।
ಸ್ವಪ್ನೇ ತದ್ದರ್ಶನೇನಾಂತಃ ಕಥಂ ಜಾಗ್ರತ್ಸಮಂ ಭವೇತ್ ॥೧೯॥

ಶ್ರೀ ವಸಿಷ್ಠ ಉವಾಚ:—

ವಿಹೃತ್ಯ ಸ್ವಪ್ನಜಗತಿ ಸ್ವಪ್ನಬಂಧುಜನೈಃ ಸಮಂ ।
ಮೃತಿಮಾಪ್ನೋತಿ ತತ್ರಾಸೌ ದ್ರಷ್ಟಾ ಸ್ವಪ್ನಸ್ಯ ರಾಘವ ॥೨೦॥

೧೭. ಅಸತ್ಯವಾದ ರೂಪಗಳೇ ಕನಸಿನಲ್ಲಿ ಕಾಣುವಂತೆ, (ಅಸತ್ಯವಾದ) ಜಗತ್ತು ಜಾಗ್ರತ್ತಿನಲ್ಲಿ ಆಭಾತವಾಗುವುದು. ಅವೆರಡಕ್ಕೂ ಎಳ್ಳಷ್ಟೂ ವ್ಯತ್ಯಾಸವಿಲ್ಲ.

೧೮. ಪರಸ್ಪರ ಸದೃಶರಾದ ಇಬ್ಬರು ಸೂರ್ಯರಂತೆ, ಒಬ್ಬರನ್ನೊಬ್ಬರು ಹೋಲುವ ಇಬ್ಬರು ಮನುಷ್ಯರಂತೆ ಜಾಗ್ರತ್ಸ್ವಪ್ನಗಳು ಒಂದನ್ನೊಂದು ಹೋಲುವುವು; ಆದರೂ ಅವು ಬೇರೆಬೇರೆಯಲ್ಲ.

ಶ್ರೀರಾಮನು ಕೇಳಿದನು—

೧೯. ಹೀಗಿರಲಾರದು. ಏಕೆಂದರೆ ಸ್ವಪ್ನವು ಮುಗಿಯುತ್ತಿದ್ದ ಹಾಗೆಯೇ ಅದನ್ನು ಬಾಧಿಸಿ ಜಾಗ್ರತ್ಪ್ರತ್ಯಯವು ಬರುತ್ತದೆ. ಹೀಗೆ ಪರಸ್ಪರ ಬಾಧಕಗಳಾದ ಜಾಗ್ರತ್ಸ್ವಪ್ನಗಳು ಒಂದಕ್ಕೊಂದು ಸದೃಶವೆನ್ನುವುದು ಹೇಗೆ?

ಶ್ರೀ ವಸಿಷ್ಠನು ಹೇಳಿದನು—

೨೦. ಸ್ವಪ್ನಜಗತ್ತಿನಲ್ಲಿ ಸ್ವಪ್ನ ಬಂಧುಜನಗಳೊಡನೆ ವಿಹಾರಮಾಡಿ, ಆ ಸ್ವಪ್ನವನ್ನು ಕಂಡವನು, ರಾಘವ, ಆ ಸ್ವಪ್ನದಲ್ಲಿಯೇ ಸಾಯುವನು.

ಮೃತಃ ಸನ್ಸ್ವಪ್ನಜಗತಿ ಸ್ವಪ್ನಜಂತುವಿಯೋಗವಾನ್ ।
ಇಹ ಪ್ರಬುಧ್ಯತೇ ಜಂತುರ್ನಿದ್ರಾಮುಕ್ತಶ್ಚ ಕಥ್ಯತೇ ॥೨೧॥

ಸುಖದುಃಖದಶಾಮೋಹಾನ್ದಿನರಾತ್ರಿವಿಪರ್ಯಯಾನ್ ।
ಅನುಭೂಯ ಬಹೂನ್ದ್ರಷ್ಟಾ ಮ್ರಿಯತೇ ಸ್ವಪ್ನಸಂಸೃತೌ ॥೨೨॥

ಗತನಿದ್ರತಯಾ ಪಶ್ಚಾನ್ನಿದ್ರಾಂತ ಇಹ ಜಾಯತೇ ।
ನ ಸತ್ಯಮೇತದಿತ್ಯೇವಂ ತತಃ ಪ್ರತ್ಯಯವಾನ್ಭವೇತ್ ॥೨೩॥

ಸ್ವಪ್ನದ್ರಷ್ಟಾ ಯಥಾ ಸ್ವಪ್ನಸಂಸಾರೇ ಮೃತಿಮಾಪ್ತವಾನ್ ।
ಅಸ್ಯಂ ಜಾಗ್ರತ್ಸ್ವಯಂ ಸ್ವಪ್ನಂ ದ್ರಷ್ಟುಂ ಭೂಯಃ ಪ್ರಜಾಯತೇ ॥೨೪॥

---

(ನೈತಾವತಾ ವೈಷಮ್ಯಸಿದ್ಧಿಃ ಭಿನ್ನದೇಶಸ್ಯ ಜಾಗ್ರತ್ಪ್ರತ್ಯಯಸ್ಯ ಸ್ವಾಪ್ನ ಪ್ರತ್ಯಯ ಬಾಧಕತ್ವಾಸಿದ್ಧೇಃ । ಸ್ವಪ್ನದೇಶೇ ಹಿ ಸನಿದ್ರಃ ಸ್ವಪ್ನದೇಹಸ್ಥೋ ದ್ರಷ್ಟಾ ಸ್ವಾಪ್ನಬಂಧ್ವಾದೀನ್ ಪಶ್ಯತಿ । ಅಪಗತಸ್ವಪ್ನದೇಹೋ ವಿನಿದ್ರೋ ಜಾಗ್ರದ್ದೇಹ ಸ್ಥಶ್ಚ ಸ್ವಪ್ನದೃಷ್ಟ ಬಂಧ್ವಾದ್ಯಸತ್ವಂ ಪಶ್ಯತಿ । ನ ಚ ದೇಶಾಂತರೇ ದೇಹಾಂತರ ದೃಷ್ಟಾನಾಂ ದೇಹಾಂತರೇ ದೇಶಾಂತರೇ ಚಾನ್ಯದರ್ಶನೇ ತದದರ್ಶನಂ ತದ್ಬಾಧಃ । ಪೂರ್ವಜನ್ಮಬಂಧ್ವಾದೀನಾಮಿಹಜನ್ಮನ್ಯದರ್ಶನಸ್ಯಾಪಿ ತದ್ಬಾಧತ್ವಾಪತ್ತೇರಿತಿ ಸಾಮ್ಯಾನಪಾಯಾದಿತ್ಯಾಶಯೇನ ವಸಿಷ್ಠಃ ಸಮಾಧತ್ತೇ – ಮೃತಿಂ ಸ್ವಪ್ನ ದೇಹಾಪಗಮಂ —ತಾ. ಪ್ರ.)

೨೧. ಸ್ವಪ್ನಜಗತ್ತಿನಲ್ಲಿ ಮೃತನಾಗಿ ಸ್ವಪ್ನಜಂತು (ಬಂಧು) ವಿಯೋಗವನ್ನು ಹೊಂದಿ ಎಚ್ಚರಗೊಳ್ಳುವನು. ಆಗ ನಿದ್ರಾಮುಕ್ತನೆನಿಸಿಕೊಳ್ಳುವನು.

೨೨. ಸುಖದುಃಖದಶೆಗಳಿಂದ ಆಗುವ ಮೋಹವನ್ನೂ ದಿನರಾತ್ರಿ ವಿಪರ್ಯಾಸ ಗಳನ್ನೂ ಬಹುವಾಗಿ ಸ್ವಪ್ನಸಂಸಾರದಲ್ಲಿ ಅನುಭವಿಸಿ, ಆ ದ್ರಷ್ಟೃವು ಮರಣವನ್ನು ಹೊಂದುವನು.

೨೩. ನಿದ್ರೆಯು ಕಳೆಯಿತೆಂದು, ನಿದ್ರಾಂತವು ಬರುವುದು. ಅನಂತರದಲ್ಲಿ (ನಿದ್ರೆಯಿಲ್ಲದಿರುವಾಗ) ಇದು ಸತ್ಯವಲ್ಲ ಎಂದು ಪ್ರತ್ಯಯಾಂತರವುಳ್ಳವನಾಗುವನು.

೨೪. ಸ್ವಪ್ನದ್ರಷ್ಟೃವು ಹೇಗೆ ಸ್ವಪ್ನದ ಸಂಸಾರದಲ್ಲಿ ಮೃತಿಯನ್ನು ಹೊಂದಿ ದನೋ ಹಾಗೆಯೇ ಮತ್ತೊಂದು ಜಾಗ್ರತ್ಸ್ವಪ್ನವನ್ನು ನೋಡಲು ಮತ್ತೆ ಹುಟ್ಟುವನು.

ಜಾಗ್ರದ್ದೃಷ್ಟ್ವಾ ತಥಾ ಜಾಗ್ರತ್ಸಂಸಾರೇ ವೃತಿಮಾತ್ರವಾನ್ ।
ಅನ್ಯಂ ಜಾಗ್ರನ್ಮಯಂ ಸ್ವಪ್ನಂ ದ್ರಷ್ಟುಂ ಭೂಯಃ ಸ ಜಾಯತೇ ॥೨೫॥

ನ ಸ್ವಪ್ನಮಸದಿತ್ಯೇವಂ ಪೂರ್ವಸ್ಮಿನ್ ಜಾಗ್ರದಾತ್ಮನಿ ।
ಪುನಃ ಪ್ರತ್ಯಯಮಾದತ್ತೇ ಸ್ವಪ್ನಾತ್ಸ್ವಪ್ನಾಂತರಂ ಗತಃ ॥೨೬॥

ಸ ಜಾಗ್ರತ್ಪ್ರತ್ಯಯಂ ತತ್ರ ಪುನರ್ಗೃಹ್ಣಾತಿ ಮುಗ್ಧಧೀಃ ।
ಸ್ವಪ್ನಸಂದರ್ಶನಂ ತ್ವಸ್ಮಿತ್ರತ್ರಾಪ್ಯನುಭವತ್ಯಥ ॥೨೭॥

---

೨೫. ಜಾಗ್ರತ್ತನ್ನು ಕಾಣುತ್ತಿದ್ದವನು ಜಾಗ್ರತ್ತಿನ ಸಂಸಾರದಲ್ಲಿ ವೃತಿಯನ್ನು ಹೊಂದಿ ಮತ್ತೊಂದು ಜಾಗ್ರನ್ಮಯವಾದ ಸ್ವಪ್ನವನ್ನು ಕಾಣಲು ಮತ್ತೆ ಹುಟ್ಟುವನು.

೨೬. ಮೊದಲು ಜಾಗ್ರತ್ತು ಬಂದಾಗ ನಾನು ಕಂಡ ಸ್ವಪ್ನವು ಸುಳ್ಳು ಎಂದು ಪಡೆದಿದ್ದ ಪ್ರತ್ಯಯವು ಸ್ವಪ್ನದಿಂದ ಸ್ವಪ್ನಕ್ಕೆ ಹೋದಾಗಲೂ ಬರುವುದೇನು ?

(ಜಾಗ್ರತಿ ಮೃತ್ವಾ ಜಾಗ್ರದಂತರೇ ಜಾತಸ್ಸ । ಪೂರ್ವಸ್ಮಿನ್ ಜಾಗ್ರದಾತ್ಮನಿ ಪ್ರಪಂಚೇನ ಸ್ವಪ್ನಮಸದಿತ್ಯೇವಂ ಪುನಃ ಪ್ರತ್ಯಯಂ ಯಥಾ ಆದತ್ತೇ ತಥಾ ಸ್ವಪ್ನಾತ್ ಸ್ವಪ್ನಾಂತರಂ ಗತ ಉತ್ತರಸ್ವಪ್ನೇ ಜಾಗ್ರತ್ಪ್ರತ್ಯಯಂ ಪುನರ್ಗೃಹ್ಣಾತಿ । ತತ ಉತ್ತರಸ್ವಪ್ನೇ ಜಾಗ್ರತ್ಪ್ರತ್ಯಯೋ ಯಥಾ ಮುಗ್ಧತಾ ಪ್ರಯುಕ್ತಃ ತದ್ವತ್ ಪೂರ್ವಜಾಗ್ರತಿ ಸ್ವಪ್ನತ್ವಾಸತ್ಯಯೋರಗ್ರಹಣಮಪಿ ಮುಗ್ಧತಾಪ್ರಯುಕ್ತಮೇವೇತಿ ಭಾವಃ ॥ —ತಾ. ಪ್ರ.)

೨೭. ಮೂಢಬುದ್ಧಿಯಾದವನು ಉತ್ತರಸ್ವಪ್ನದಲ್ಲಿಯೂ ಮತ್ತೆ ಜಾಗ್ರತ್ಪ್ರತ್ಯಯವನ್ನೇ ಗ್ರಹಣಮಾಡುವನು ; ಹಿಂದಿನಂತೆಯೇ ಈ ಸ್ವಪ್ನಸಂದರ್ಶನವನ್ನೂ ಅನುಭವಿಸುವನು.

ಸ್ವಪ್ನಂ ಜಾಗ್ರತ್ತಯಾ ಜಾಗ್ರತ್ಸ್ವಪ್ನತ್ವಂ ಚೇತಿ ನಾತ್ಮನಿ ।
ನ ಜಾಯತೇ ನ ಮ್ರಿಯತೇ ಜಾಯತೇ ಮ್ರಿಯತೇಽಪಿ ಚ ॥೨೮॥

ಸ್ವಪ್ನದ್ರಷ್ಟಾ ಸ್ವಪ್ನಮೃತಃ ಪ್ರಬುದ್ಧ ಇಹ ಕಥ್ಯತೇ ।
ಇಹ ಜಾಗ್ರನ್ಮೃತೋ ಜಂತುಃ ಪ್ರಬುದ್ಧೋಽನ್ಯತ್ರ ಕಥ್ಯತೇ ॥೨೯॥

ಸ್ವಪ್ನಾತ್ಸ್ವಪ್ನಸ್ಥಿತೌ ಜಾಗ್ರಜ್ಜಾಗ್ರತ್ಸ್ವಪ್ನಪ್ರದರ್ಶನಂ ।
ಮೃತ್ವಾನ್ಯತ್ರ ಪ್ರಬುದ್ಧಸ್ಯ ಜಾಗ್ರತ್ಸ್ವಪ್ನೋ ಭವತ್ಯಲಂ ॥೩೦॥

೨೮. ಆ ಎರಡನೆಯ ಸ್ವಪ್ನವು ಸ್ವಪ್ನಾನಂತರ ಬಂದುದರಿಂದ ಅದನ್ನೂ ಜಾಗ್ರತ್ತೆಂದೇ ಅನುಭವಿಸುವನು. ಅದರಿಂದ, ಜಾಗ್ರತ್ತು ಸ್ವಪ್ನಗಳು ಹುಟ್ಟಿದರೂ ಹೋದರೂ ಹುಟ್ಟಲೂ ಇಲ್ಲ; ಹೋಗಲೂ ಇಲ್ಲ.

(ಅಥ ತತ್ರಾಪಿ ಸ್ವಪ್ನೇ ಸ್ವಪ್ನಸಂದರ್ಶನಾನಂತರಯನುಭವತ್ ಸ್ವಪ್ನಮೇವ ಜಾಗ್ರತ್ತಯಾ ಅನುಭವತೀತಿ ಪೂರ್ವೇಣಾನ್ವಯಃ । ಏವಂ ರೀತ್ಯಾ ಜಾಗ್ರತ್ಸ್ವಪ್ನಾತ್ವಂ ಚೇತ್ಯೇವಂ ನಾಮನಿ ಅವಸ್ಥಾದ್ವಯೇಽಯಂ ಜೀವಃ ಸ್ವತೋ ನ ಜಾಯತೇ ನ ಮ್ರಿಯತೇ । ತತ್ತದ್ದೇಹಾಭಿಮಾನೋಪಾದಾನ ತ್ಯಾಗಾಭ್ಯಾಂತು ಜಾಯತೇ ಮ್ರಿಯತೇಽಪಿ ಚ ॥ —ತಾ. ಪ್ರ.)

೨೯. ಸ್ವಪ್ನವನ್ನು ಕಾಣುತ್ತಿದ್ದವನು ಸ್ವಪ್ನಮೃತನಾದರೆ (ಸ್ವಪ್ನವನ್ನು ಬಿಟ್ಟು ಎದ್ದರೆ) ಪ್ರಬುದ್ಧನಾದನು ಎನ್ನುವರು. ಹಾಗೆಯೇ ಇಲ್ಲಿ ಜಾಗ್ರತ್ತನ್ನು ಬಿಟ್ಟವನು ಇನ್ನೆಲ್ಲಿಯೋ ಪ್ರಬುದ್ಧನಾದನು ಎನ್ನುವರು (ಎನ್ನಬೇಕು)

೩೦. ಸ್ವಪ್ನದಿಂದ ಸ್ವಪ್ನಕ್ಕೆ ಬರುವುದು ಜಾಗ್ರತ್ತು; ಜಾಗ್ರತ್ತಿನಿಂದ ಸ್ವಪ್ನ ದರ್ಶನ; ಅದರಂತೆಯೇ ಮೃತನಾಗಿ ಪ್ರಬುದ್ಧನಾದವನಿಗೂ ಜಾಗ್ರತ್ತು ಸ್ವಪ್ನವಾಗುವುದು.

(ಏವಂಚ, ಸ್ವಪ್ನಾತ್ ಸ್ವಪ್ನಾಂತರಸ್ಥಿತೌ, ದ್ವಿತೀಯಂ ಸ್ವಪ್ನರೂಪಮೇವ ಪೂರ್ವಾಪೇಕ್ಷಯಾ ವರ್ತಮಾನತ್ವಾತ್ ಪ್ರಕೃಷ್ಟಂ ದರ್ಶನಂ ಜಾಗ್ರದ್ಭವತಿ । ಏವಂ ಜಾಗ್ರತಿ ಮೃತ್ವಾ ಅನ್ಯತ್ ಸ್ವಪ್ನೇ ಜಾಗ್ರದಂತರೇವಾ ಪ್ರಬುದ್ಧಸ್ಯ ಪುಂಸಃ ಪೂರ್ವ ಜಾಗ್ರತ್ ಸ್ವಪ್ನ ಏವ ಅಲಂ ಅವಶ್ಯಂ ಭವತಿ —ತಾ. ಪ್ರ.)

ಇತಿಹಾಸಮಯಾವೇವ ಜಾಗ್ರತ್ಸ್ವಪ್ನಾವುಭಾವಪಿ
ಪರಸ್ಪರಂ ಗತಾವೇತಾವುಪಮಾನೋಪಮೇಯತಾಂ ॥೩೧॥

ಸ್ವಪ್ನೋ ಜಾಗ್ರದಿವಾಭಾತಿ ಜಾಗ್ರತ್ಸ್ವಪ್ನವಿವೋದಿತಂ ।
ವಸ್ತುತಸ್ತು ದ್ವಯಮಸಚ್ಚಿತ್ಖಂ ಕಚತಿ ಕೇವಲಂ ॥೩೨॥

ಸ್ಥಾವರಂ ಜಂಗಮಂ ಚೈವ ಭೂತಜಾತಮಶೇಷತಃ ।
ಚಿನ್ಮಾತ್ರವ್ಯತಿರೇಕೇಣ ಕಿಮನ್ಯದುಪಪದ್ಯತೇ ॥೩೩॥

ವೃನ್ಮಯಂ ತು ಯಥಾ ಭಾಂಡಂ ಮೃದ್ವ್ಯತಿರೇಕೇಣ ನೋಪಲಭ್ಯತೇ ।
ಚಿಚ್ಚಮತ್ಕಾರಮಾತ್ರಾತ್ಮಾ ತಥಾ ಕಾಷ್ಠೋಪಲಾದ್ಯಪಿ ॥೩೪॥

---

೩೧. ಇತಿಹಾಸಮಯಗಳಾದ ಜಾಗ್ರತ್‌ಸ್ವಪ್ನಗಳು ಎರಡೂ ಹೀಗೆ ಪರಸ್ಪರವಾಗಿ ಉಪಮಾನ-ಉಪಮೇಯತೆಯನ್ನು ಹೊಂದಿರುವುವು

(ಇತಿಹಾಸಃ ಕೀರ್ತ್ಯಮಾನ ಪೂರ್ವವೃತ್ತ ಕಥಾರ್ಥಃ ತನ್ಮಯೌ ತತ್ಸದೃಶಾಯೇವ ನಯಥಾರ್ಥೌ ಇತಿಹೇತೋಃ ಪರಸ್ಪರಮುಪಮಾನೋಪಮೇಯತಾಂಗತೌ ಇತ್ಯರ್ಥಃ ॥ —ತಾ. ಪ್ರ.)

(ಇತಿಹಾಸನ್ಮಯೌ ಇತಿ ಪಾಠಃ ಸಾಧುಃ —ತಾ. ಪ್ರ.)

೩೨ ಸ್ವಪ್ನವು ಜಾಗ್ರತ್ತಿನಂತೆ ಇರುವುದು; ಜಾಗ್ರತ್ತು ಸ್ವಪ್ನದಂತೆಯೇ ಉದಿಸುವುದು. ವಸ್ತುತಃ ಎರಡೂ ಅಸತ್ತು. ಚಿದಾಕಾಶದ ಕಚನದಿಂದಲೇ ಎರಡೂ ಬರುವುದು.

೩೩. ಸ್ಥಾವರವಾಗಲಿ, ಜಂಗಮವಾಗಲಿ, ಅಶೇಷವಾದ ಭೂತಜಾತವೆಲ್ಲವೂ ಚಿನ್ಮಾತ್ರವಲ್ಲದೆ ಇನ್ನು ಏನುತಾನೇ ಆದೀತು ?

೩೪. ಮಣ್ಣಿನಿಂದಾದ ಮಡಕೆಯು ಮಣ್ಣಿಲ್ಲದೆ ಹೇಗೆ ಇರಲಾರದೋ ಹಾಗೆ ಚಿಚ್ಚಮತ್ಕಾರಮಾತ್ರವಾದ ಆತ್ಮವುಳ್ಳ ಕಾಷ್ಠ ಉಪಲಾದಿಗಳೂ ಚಿತ್ತಿಲ್ಲದೆ ಇಲ್ಲವೇ ಇಲ್ಲ.

ವಸ್ತುಜಾತಮಿದಂ ಸ್ವಪ್ನೇ ಜಾಗ್ರತ್ಯಪಿ ತಥೈವ ನಃ ।
ದೃಷ್ಟೋ ಯ ಉಪಲಃ ಸ್ವಪ್ನೇ ಚಿಚ್ಚಮತ್ಕರಣಾದೃತೇ ॥೩೫॥

ಕಿಮನ್ಯತ್ಸಂವದ ಪ್ರಾಜ್ಞ ಕಿಲಾವಶ್ಯಂ ಚಿದೇವ ಸಾ ।
ನನು ಯಾದೃಗ್ವಪುಃ ಸ್ವಪ್ನೇ ಜಾಗ್ರತ್ತಾದೃಗಖಂಡಿತಂ ॥೩೬॥

ಜಗಜ್ಜಾತಮತಃ ಸರ್ವಂ ಚಿನ್ಮಾತ್ರಂ ಬ್ರಹ್ಮಖಂಡಿತಂ ।
ಜಗಜ್ಜಾತಮತಃ ಸರ್ವಂ ಚಿನ್ಮಾತ್ರಂ ಬ್ರಹ್ಮ ಕುಟ್ಟಿಮಂ ॥೩೭॥

ಮೃನ್ಮಯಂ ತು ಯಥಾ ಭಾಂಡಂ ಮೃಚ್ಛೂನ್ಯಂ ನೋಪಲಭ್ಯತೇ ।
ಚಿನ್ಮಯಂ ತು ತಥಾ ಚೇತ್ಯಂ ಚಿಚ್ಛೂನ್ಯಂ ನೋಪಲಭ್ಯತೇ ॥೩೮॥

---

೩೫. ವಸ್ತುಜಾತವೆಲ್ಲವೂ ಕನಸಿನಲ್ಲಾಗಲಿ ಜಾಗ್ರತ್ತಿನಲ್ಲಾಗಲಿ ನಮಗೆ ಒಂದೇಸ. ಕನಸಿನಲ್ಲಿ ಯಾವುದನ್ನು ಕಲ್ಲಾಗಿ ಕಾಣುವೆಯೋ ಅದು ಚಿಚ್ಚಮತ್ಕಾರವಲ್ಲದೆ

೩೬. ಇನ್ನೇನಾಗಿರಬಹುದು ಎಂಬುದನ್ನು ಇತರರೊಡನೆ ಪರ್ಯಾಲೋಚನ ಮಾಡಿ ಹೇಳು. ಪ್ರಾಜ್ಞನಾದ ರಾಮನೆ, ಅವಶ್ಯವಾಗಿ ಅದು ಚಿತ್ತೆ! ಸ್ವಪ್ನದಲ್ಲಿ ಯಾವ ರೂಪದಲ್ಲಿ ಕಾಣುವುದೋ ಅದೇ ರೂಪದಲ್ಲಿಯೇ ಅಖಂಡವಾಗಿ ಜಾಗ್ರತ್ತಿನಲ್ಲಿಯೂ ಕಾಣುವುದು.

೩೭. ಆದರಿಂದ ಜಗಜ್ಜಾತವೆಲ್ಲವೂ ಚಿನ್ಮಯವೇ! ಅಖಂಡವಾದಂತೆ ತೋರುವ ಬ್ರಹ್ಮವು! ಆದರಿಂದ ಜಗಜ್ಜಾತವೆಲ್ಲವೂ ಚಿನ್ಮಾತ್ರವಾದ ಬ್ರಹ್ಮಕುಟ್ಟಿಮ (ಮಂದಿರ) ವು.

೩೮. ಮಣ್ಣಿನಿಂದಾದ ಮಡಕೆಯು ಮಣ್ಣಿಲ್ಲದೆ ಹೇಗೆ ಇಲ್ಲವೋ ಹಾಗೆಯೇ ಚಿನ್ಮಯವಾದ ಚೇತ್ಯವು ಚಿಚ್ಛೂನ್ಯವಾಗಿ ಇರಲೇಲಾರದು.

ಶೈಲಾತ್ಮಕಂ ಯಥಾ ಭಾಂಡಂ ಶೈಲಶೂನ್ಯಂ ನ ಲಭ್ಯತೇ ।
ಚಿನ್ಮಯಂ ತು ತಥಾ ಚೇತ್ಯಂ ಚಿಚ್ಛೂನ್ಯಂ ನೋಽಪಲಭ್ಯತೇ ॥೩೯॥

ದ್ರವರೂಪಂ ಯಥಾ ವಾರಿ ದ್ರವರಿಕ್ತಂ ನ ಲಭ್ಯತೇ ।
ಚಿನ್ಮಯಂ ತು ತಥಾ ಚೇತ್ಯಂ ಚಿಚ್ಛೂನ್ಯಂ ನೋಽಪಲಭ್ಯತೇ ॥೪೦॥

ಊಷ್ಮರೂಪೋ ಯಥಾ ವಹ್ನಿರ್ನಿರೂಷ್ಮಾ ನೋಽಪಲಭ್ಯತೇ ।
ಚಿನ್ಮಯಂ ತು ತಥಾ ಚೇತ್ಯಂ ಚಿಚ್ಛೂನ್ಯಂ ನೋಽಪಲಭ್ಯತೇ ॥೪೧॥

ಯಥಾ ಸ್ಪಂದಮಯೋ ವಾಯುರಸ್ಪಂದೋ ನೋಽಪಲಭ್ಯತೇ ।
ಚಿನ್ಮಯಂ ತು ತಥಾ ಚೇತ್ಯಂ ಚಿಚ್ಛೂನ್ಯಂ ನೋಽಪಲಭ್ಯತೇ ॥೪೨॥

ಯದ್ಯನ್ಮಯಂ ತದ್ವಿನಾ ತು ತತ್ಕಥಂ ಕಿಲ ಲಭ್ಯತೇ ।
ಕ್ವಾಶೂನ್ಯಂ ಲಭ್ಯತೇ ವ್ಯೋಮ ಕ್ವಾಘನಾ ಲಭ್ಯತೇ ಮಹೀ ॥೪೩॥

---

೩೯. ಶಿಲಾಖಂಡದಿಂದ ಆದ ಭಾಂಡವು ಶಿಲಾಶೂನ್ಯವಾಗಿ ಹೇಗೆ ಇಲ್ಲವೇ ಇಲ್ಲವೋ, ಹಾಗೆಯೇ ಚಿನ್ಮಯವಾದ ಚೇತ್ಯವು ಚಿಚ್ಛೂನ್ಯವಾಗಿ ಇಲ್ಲವೇಇಲ್ಲ.

೪೦. ದ್ರವರೂಪವಾದ ನೀರು ದ್ರವವಿಲ್ಲದೆ ಹೇಗೆ ಇಲ್ಲವೋ ಚಿನ್ಮಯವಾದ ಚೇತ್ಯವು ಹಾಗೆ ಚಿಚ್ಛೂನ್ಯವಾಗಿ ಇಲ್ಲವೇಇಲ್ಲ.

೪೧. ಊಷ್ಮರೂಪವಾದ ಅಗ್ನಿಯು ನಿರೂಷ್ಮವಾಗಿ ಹೇಗೆ ದೊರೆಯುವುದಿಲ್ಲವೋ ಹಾಗೆಯೇ ಚಿನ್ಮಯವಾದ ಚೇತ್ಯವು ಚಿಚ್ಛೂನ್ಯವಾಗಿ ದೊರೆಯುವುದಿಲ್ಲ

೪೨. ಸ್ಪಂದಮಯವಾದ ವಾಯುವು ಸ್ಪಂದರಹಿತವಾಗಿ ಹೇಗೆ ದೊರೆಯುವುದಿಲ್ಲವೋ ಹಾಗೆಯೇ ಚಿನ್ಮಯವಾದ ಚೇತ್ಯವು ಚಿಚ್ಛೂನ್ಯವಾಗಿ ದೊರೆಯುವುದಿಲ್ಲ.

೪೩. ಯಾವುದು ಯಾವುದರಿಂದ ಆಗಿದೆಯೋ ಅದಲ್ಲದೆ ಆ ಪದಾರ್ಥವು ಇರುವುದಾದರೂ ಎಂತು ? ಅಶೂನ್ಯವಾದ ಆಕಾಶವು ಎಲ್ಲುಂಟು ? ಅಘನವಾದ ಮಹಿಯೆಲ್ಲುಂಟು ?

ಚಿದ್ವ್ಯೋಮಮಯಮೇವೇದಂ ಯಥಾ ಘಟಪಟಾದಿಕಂ ।
ಸ್ವಪ್ನೇ ತಥೇದಂ ಶೈಲಾದಿ ಚಿದ್ವ್ಯೋಮಾಭಾಸಮಾತ್ರಕಂ ॥೪೪॥

ಸ್ವಪ್ನೇ ಯಥಾ ಗಗನಮೇವ ಪುರಾಚಲಾದಿ ।
ಸಂವಿನ್ಮಯಂ ಸುಭಗ ಜಾಗ್ರತಿ ತದ್ವದೇವ ॥
ಸ್ವಪ್ನೋಽಥ ಜಾಗ್ರದಿತಿ ಶಾಂತಮನಂತಮೇಕಂ ।
ಚಿನ್ಮಾತ್ರಮತ್ರ ನನು ನಾಮ ವಿನಾಸ್ತು ವಾದಃ ॥೪೫॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ "ಜಗತ್ಸ್ವಪ್ನೈಕ್ಯ
ಪ್ರತಿಪಾದನಂ" ನಾಮ ಪಂಚೋತ್ತರಶತತಮಃ ಸರ್ಗಃ

---

೪೪ ಚಿದಾಕಾಶಮಯವಾದ ಈ ಸರ್ವವೂ, ಘಟಪಟಾದಿಕವಾದ ಸಮಸ್ತವೂ, ಸ್ವಪ್ನದಲ್ಲಿ ಕಾಣುವ ಶೈಲಾದಿಗಳಂತೆಯೇ ಚಿದಾಕಾಶದ ಆಭಾಸಮಾತ್ರವು

೪೫ ಸ್ವಪ್ನದಲ್ಲಿ ಕಾಣುವ ಆಕಾಶ, ಪುರ, ಪರ್ವತಗಳೆಲ್ಲವೂ ಸಂವಿನ್ಮಯವೇ ಆಗಿರುವಂತೆ, ಎಲೈ ಸುಭಗನೇ, ಜಾಗ್ರತ್ತಿನಲ್ಲಿಯೂ ಸಂವಿನ್ಮಯವೇ ಎಂದುಕೋ, ಸ್ವಪ್ನಜಾಗ್ರತ್ತುಗಳೆರಡೂ ಶಾಂತವೂ ಅನಂದವೂ ಆದ ಏಕವೇ! ಅದು ಚಿನ್ಮಾತ್ರವು ಅದರಿಂದ ವಾದವು ಇಲ್ಲಿಗೆ ಸಾಕು.

ಇಂತು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಜಾಗ್ರತ್ಸ್ವಪ್ನೈಕ್ಯಪ್ರತಿಪಾದನ" ಎಂಬ
ನೂರೈದನೆಯ ಸರ್ಗವು

# ಷಡಧಿಕಶತತಮಃ ಸರ್ಗಃ

ಶ್ರೀರಾಮ ಉವಾಚ:—

ಕೀದೃಶಂ ಸ್ಯಾಚ್ಚಿದಾಕಾಶಂ ತದ್ಬ್ರಹ್ಮಸ್ಪ್ರಹ್ಮ ಯತ್ಪರಂ ।
ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಂ ॥೧॥

ಶ್ರೀ ವಸಿಷ್ಠ ಉವಾಚ—

ಸಮಯೋರ್ಯಮಯೋರ್ಭ್ರಾತ್ರೋರ್ವ್ಯವಹಾರಾಯ ನಾಮನಿ ।
ಯದ್ವತ್ಕ್ರಿಯೇತೇ ದ್ವೇ ತದ್ವಜ್ಜಾಗ್ರತ್ಸ್ವಪ್ನಶಿಲಾಮಯೀ ॥೨॥

ವಸ್ತುತಸ್ತ್ವನಯೋರ್ಭೇದೋ ನ ದ್ವಯೋಃ ಪಯಸೋರಿವ ।
ದ್ವಯಮಪ್ಯೇಕಮೇವೈತಚ್ಚಿನ್ಮಾತ್ರಂ ವ್ಯೋಮ ನಿರ್ಮಲಂ ॥೩॥

---

# ನೂರಾರನೆಯ ಸರ್ಗವು

ಶ್ರೀರಾಮನು ಕೇಳಿದನು—

೧. ನೀನು ಹೇಳುವ ಚಿದಾಕಾಶವು ಎಂಥದು? ಅದರಿಂದ ಆಚಿನ ಬ್ರಹ್ಮವು ಎಂಥದು? ಎಲೈ ಬ್ರಹ್ಮನೆ, ಮತ್ತೆ ಈ ವಿಷಯವನ್ನು ಹೇಳು. ಅಮೃತವನ್ನು ಕೇಳುತ್ತಿರುವ ನನಗೆ ತೃಪ್ತಿಯೇ ಆಗುವುದಿಲ್ಲ.

ಶ್ರೀ ವಸಿಷ್ಠನು ಹೇಳಿದನು—

೨. ಸಮಸಮವಾಗಿರುವ ಯಮಳಸೋದರರಿಗೆ ವ್ಯವಹಾರಾರ್ಥವಾಗಿ ಎರಡು ಹೆಸರಿಡುವಂತೆ, ಜಾಗ್ರತ್ತು ಸ್ವಪ್ನವೆಂದು ಸ್ಫಟಿಕಶಿಲಾಮಯವಾದ ಎರಡು ಪ್ರತಿಬಿಂಬಗಳು ಎಂದುಕೋ!

(ಜಾಗ್ರತ್ಸ್ವಪ್ನಲಕ್ಷಣಾಖಂಡ ಚಿತ್ಸ್ಫಟಿಕಶಿಲಾಮಯೀ ತತ್ಪ್ರತಿಬಿಂಬಪ್ರಾಯೇ ಸದೃಶೇ ಪ್ರಪಂಚದ್ವಯೇ ದ್ವೇನಾಮನಿ ಕ್ರಿಯೇತೇ ಇತ್ಯರ್ಥಃ —ತಾ. ಪ್ರ.)

೩. ಎರಡು ನೀರುಗಳಿಗೆ ಹೇಗೆ ಏನೂ ವ್ಯತ್ಯಾಸವಿಲ್ಲವೋ ಹಾಗೆಯೇ ಇವೆರಡಕ್ಕೂ ಏನೂ ವ್ಯತ್ಯಾಸವಿಲ್ಲ. ಇವು ಎರಡಾದರೂ ಒಂದೇ! ಇವೆರಡೂ ಚಿನ್ಮಾತ್ರವಾದ ಶುದ್ಧ ಆಕಾಶವೇ!

ದೇಶಾದ್ದೇಶಾಂತರಂ ದೂರಂ ಪ್ರಾಪ್ತಾಯಾಃ ಸಂವಿದೋ ವಪುಃ ।
ನಿಮಿಷೇಣೈವ ತನ್ಮಧ್ಯೇ ಚಿದಾಕಾಶಂ ತಮುಚ್ಯತೇ ॥೪॥

ಯಾದೃಶಸ್ತಿಷ್ಠತಃ ಸ್ವಚ್ಛಂ ರಸಮಾಕರ್ಷತಸ್ತರೋಃ ।
ಭವೇದ್ಭಾವೋ ನಭಃಸ್ವಚ್ಛಸ್ತಾದೃಶಂ ಚಿನ್ನಭಃ ಸ್ಮೃತಂ ॥೫॥

ವಿನಿವೃತ್ತಾಖಿಲೇಚ್ಛಸ್ಯ ಪುಂಸಃ ಸಂಶಾಂತಚೇತಸಃ ।
ಯಾದೃಶಃ ಸ್ಯಾತ್ಸಮೋ ಭಾವಸ್ತಾದೃಶಂ ಚಿನ್ನಭಃ ಸ್ಮೃತಂ ॥೬॥

ಅನಾಗತಾಯಾಂ ನಿದ್ರಾಯಾಂ ಮನೋವಿಷಯಸಂಕ್ಷಯೇ ।
ಪುಂಸಃ ಸ್ವಸ್ಥಸ್ಯ ಯೋ ಭಾವಃ ಸ ಚಿದಾಕಾಶ ಉಚ್ಯತೇ ॥೭॥

---

೪. ಒಂದೇನಿಮಿಷದಲ್ಲಿ ದೇಶದಿಂದ ದೇಶಕ್ಕೆ ಹೋಗುವ ಸಂವಿತ್ತಿನ ರೂಪವು ಆ ಎರಡು ದೇಶಗಳ ನಡುವೆ ಹೇಗಿರುವುದೋ ಅದೇ ಚಿದಾಕಾಶವು.

(ಯನ್ನಿರ್ವಿಷಯಂ ಸಂವಿದೋವಪುಃ ಪ್ರಸಿದ್ಧಂ ತದಿತ್ಯರ್ಥಃ —ತಾ.ಪ್ರ.)

೫. ಭೂಮಿಯಿಂದ ಸ್ವಚ್ಛರಸವನ್ನು ಆಕರ್ಷಣಮಾಡುತ್ತ ಕುಳಿತಿರುವ ವೃಕ್ಷದ ಆಕಾಶನಿರ್ಮಲವಾದ ಭಾವವು ಯಾವುದುಂಟೋ ಅದೇ ಚಿದಾಕಾಶದ ಸ್ವರೂಪವೆನ್ನುವರು.

೬. ವಿನಿವೃತ್ತವಾದ ಸಕಲೇಚ್ಛೆಗಳುಳ್ಳ (ಯಾವ ಇಚ್ಛೆಯೂ ಇಲ್ಲದೆ ನಿರೀಹನಾದ) ಸಂಶಾಂತಮನಸ್ಕನಾದ ಪುರುಷನ ಸಮಭಾವವು ಹೇಗಿರುವುದೋ ಅದೇ ಚಿದಾಕಾಶದ ಸ್ವರೂಪವೆನ್ನುವರು.

(ಸಮಃ ಸರ್ವವೈಷಮ್ಯ ಶೂನ್ಯೋಭಾವಃ ಸಹಜ ಸುಖಸ್ವರೂಪಾನುಭವಃ । ನಿರ್ವಿಕ್ಷೇಪದಶಾಯಾಂ ಅಹಂ ಸುಖಂತಿಷ್ಠಾಮೀತಿ ಸರ್ವಾನುಭವಾತ್—ತಾ. ಪ್ರ.)

೭. ಮನೋವಿಷಯಗಳೆಲ್ಲ ಚೆನ್ನಾಗಿ ಬರಿದಾದಮೇಲೆ ನಿದ್ದೆಯು ಬರುವುದಕ್ಕಿಂತ ಮುಂಚೆ, ಸ್ವಸ್ಥನಾಗಿರುವ ಪುರುಷನಿಗೆ ಯಾವ ಭಾವವಿರುವುದೋ ಅದೇ ಚಿದಾಕಾಶವೆನ್ನುವರು.

(ಯಥಾಹುಃ "ನಿದ್ರಾದೌ ಜಾಗರಸ್ಯಾಂತೇಯೋ ಭಾವ ಉಪಜಾಯತೇ । ತಂ ಭಾವಂಧಾರಯನ್ ಯೋಗೀ ನದುಃಖೈರಭಿಭೂಯತೇ " ಇತಿ—ತಾ. ಪ್ರ.)

ತೃಣಗುಲ್ಮಲತಾದೀನಾಂ ವೃದ್ಧಿಮಾಗಚ್ಛತಾಮೃತೌ ।
ಯಃ ಸ್ಯಾಮಸ್ಮಮತೋ ಭಾವಃ ಸ ಚಿದಾಕಾಶ ಉಚ್ಯತೇ ॥೮॥

ರೂಪಾಲೋಕಮನಸ್ಕಾರವಿಮುಕ್ತಸ್ಯಾವ್ಯಕ್ತಸ್ಯ ಯಃ ।
ಭಾವಃ ಪುಂಸಃ ಶರದ್ವ್ಯೋಮವಿಶದಸ್ತಚ್ಚಿದಂಬರಂ ॥೯॥

ಯದೇತದಾಸನಂ ಸ್ಪಷ್ಟಂ ಕಾಷ್ಠಪಾಷಾಣಭೂಭೃತಾಂ ।
ಚೇತನಾನಾಂ ಚ ಸತ್ತಾತ್ಮ ಚಿದಾಕಾಶಃ ಉಚ್ಯತೇ ॥೧೦॥

ದ್ರಷ್ಟೃದರ್ಶನದೃಶ್ಯಾನಾಂ ತ್ರಯಾಣಾಮುದಯೋ ಯತಃ ।
ಯತ್ರ ವಾಸ್ತಮುಪಸ್ಥಿತಂ ತದ್ವಿದ್ಧಿ ವಿಗತಾಮಯಂ ॥೧೧॥

೮. ಋತುಕಾಲದಲ್ಲಿ ವೃದ್ಧಿಗೊಳ್ಳುತ್ತಿರುವ ತೃಣಗುಲ್ಮ ಲತಾದಿಗಳ ಮಮತೆಯನ್ನು ಮೀರಿದ ಭಾವವು ಯಾವುದುಂಟೋ ಅದೇ ಚಿದಾಕಾಶವೆನ್ನುವರು.

೯. ರೂಪಾಲೋಕ ಮನಸ್ಕಾರಗಳನ್ನು ದಾಟಿ ಅವ್ಯಕ್ತನಾಗಿರುವ ಮಹಾಪುರುಷನ ಶರದಾಕಾಶವಿಶುದ್ಧವಾದ ಭಾವವು ಯಾವುದುಂಟೋ ಅದೇ ಚಿದಾಕಾಶವು.

೧೦ ಕಾಷ್ಠ, ಪಾಷಾಣ, ಭೂಧರಗಳಿಗೆಲ್ಲ ಆಸನವಾಗಿರುವುದು ಯಾವುದೋ, ಅದೇ ಚಿದಾಕಾಶ ಎನ್ನುವರು.

(ಆಸನಂ ನಿಷ್ಕ್ರಿಯಮವಸ್ಥಾನಂ,--- ಚೇತನಾನಾಂ ಜೀವಾನಾಂ ಸತ್ತಾತ್ಮಸ್ಥಿತಿ ಸ್ವರೂಪಂ-- ಸ ಚಿದಾಕಾಶ)

೧೧. ದೃಷ್ಟೃ ದರ್ಶನ ದೃಶ್ಯ ಎಂಬ ಮೂರೂ ಎಲ್ಲಿಂದ ಉದಯಿಸುವವೋ, ಎಲ್ಲಿ ಅವು ಅಸ್ತಮಯವಾಗುವವೋ, ಅದನ್ನು ವಿಗತಾಮಯವಾದ ಚಿದಾಕಾಶವೆಂದು ತಿಳಿ.

ಯತ ಉದ್ಯಂತಿ ಯಸ್ಮಿಂಶ್ಚ ಚಿತ್ರಾಃ ಪರಿಣಮಂತ್ಯಲಂ ।
ಪದಾರ್ಥಾನುಭವಾಃ ಸರ್ವೇ ಚಿದಾಕಾಶಃ ಸ ಉಚ್ಯತೇ ॥೧೨॥

ಯಸ್ಮಿನ್ಸರ್ವಂ ಯತಃ ಸರ್ವಂ ಯಃ ಸರ್ವಂ ಸರ್ವತಶ್ಚ ಯಃ ।
ಯಶ್ಚ ಸರ್ವಮಯೋ ನಿತ್ಯಂ ಸ ಚಿದಾಕಾಶ ಉಚ್ಯತೇ ॥೧೩॥

ದಿವಿ ಭೂಮೌ ಬಹಿಶ್ಚಾಂತಸ್ತಥಾನ್ಯಸ್ಯ ಸಮಾಭಿಧಃ ।
ಯೋಽವಿಭಾತ್ಯವಭಾಸಾತ್ಮಾ ಚಿದಾಕಾಶಃ ಸ ಉಚ್ಯತೇ ॥೧೪॥

---

(ಯತೋ! ಯಸ್ಮಾತ್ ಸುಷುಪ್ತಿ ಸಾಕ್ಷಿಣಃ ಸ್ವಪ್ನಜಾಗರಯೋಃ ದ್ರಷ್ಟ್ರಾದಿ ತ್ರಿಪುಟ್ಯಾ ಉದಯೋ ಯಸ್ಮಿನ್ನೇವ ಚಾಸ್ತಮಯಃ–ತಾ ಪ್ರ.)

೧೨. ಚಿತ್ರವಿಚಿತ್ರಗಳಾದ ಪದಾರ್ಥಾನುಭವಗಳೆಲ್ಲ ಎಲ್ಲಿಂದ ಉದಯಿಸುವುವೋ (ಆಲೋಚನ, ವಿಮರ್ಶನ, ಅಧ್ಯವಸಾಯ, ಹಾಗ ಉಪಾದಾನಾದಿ ಭಾವಗಳಿಂದ) ಉತ್ತರೋತ್ತರವಾಗಿ ಪರಿಣಾಮವನ್ನು ಹೊಂದುವುವೋ ಅದು ಚಿದಾಕಾಶವೆನ್ನಿಸಿಕೊಳ್ಳುವುದು.

(ಯತಃ ಪ್ರವೃತ್ತಿ ರ್ಭೂತಾನಾಂ ಯೇನ ಸರ್ವಮಿದಂ ತತಂ । ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ಎಂಬ ಗೀತಾ ಶ್ಲೋಕವನ್ನುಸ್ಮರಿಸಿ.)

೧೩. ಯಾವುದರಲ್ಲಿ ಎಲ್ಲವೂ ಇರುವುದೋ, ಯಾವುದರಿಂದ ಎಲ್ಲವೂ ಹುಟ್ಟಿ ಬರುವುದೋ ಯಾವುದು ತಾನೇ ಎಲ್ಲವೂ ಆಗಿರುವುದೋ, ಎಲ್ಲಾ ಕಡೆಗಳಲ್ಲಿಯೂ ಯಾವುದು ಇರುವುದೋ ಯಾವುದು ನಿತ್ಯವೂ ಸರ್ವಮಯವಾಗಿರುವುದೋ ಅದು ಚಿದಾಕಾಶವೆನ್ನಿಸಿಕೊಳ್ಳುವುದು.

೧೪ ಭೂಮ್ಯಂತರಿಕ್ಷಗಳಲ್ಲಿ, ಅಂತರ್ಬಹಿಶ್ಚ, ತಾನು ಸಮವಾಗಿದ್ದುಕೊಂಡು ಯಾವುದು ಅವಭಾಸಾತ್ಮ (ಪ್ರಕಾಶ) ವಾಗಿ ಎಲ್ಲವನ್ನೂ ಬೆಳಗುವುದೋ, ಅದು ಚಿದಾಕಾಶವು.

ಯಸ್ಮಿನ್ನಿತ್ಯೇ ತತೇ ತಂತೌ ದೃಢೇ ಸ್ರಗಿವ ತಿಷ್ಠತಿ ।
ಸದಸದುತ್ಥಿತಂ ವಿಶ್ವಂ ವಿಶ್ವಾಂಗೇ ತಚ್ಚಿದಂಬರಂ ॥೧೫॥

ಯಸ್ಮಾತ್ಸರ್ವಾಃ ಪ್ರಸೂಯಂತೇ ಸರ್ಗಪ್ರಲಯವಿಕ್ರಿಯಾಃ ।
ಯಸ್ಮಿಂಶ್ಚೈವ ಪ್ರಲೀಯಂತೇ ಯನ್ಮಯಾಸ್ತಚ್ಚಿದಂಬರಂ ॥೧೬॥

ನಿದ್ರಾಯಾಂ ವಿನಿವೃತ್ತಾಯಾಂ ಯತೋ ವಿಶ್ವಂ ಪ್ರವರ್ತತೇ ।
ನಿವರ್ತತೇ ಚ ಯಚ್ಛಾಂತೌ ತಚ್ಚಿದಂಬರಮುಚ್ಯತೇ ॥೧೭॥

---

(ಸಮಃ ಸರ್ವಸ್ಯೈಷಸ್ಯ ಶೂನ್ಯೋಭಾವಃ ಸಹಜ ಸುಖ ಸ್ವರೂಪಾನುಭವಃ— ತಾ. ಪ್ರ.)

೧೫. ತಂತುವನ್ನು ಅವಲಂಬಿಸಿರುವ ಮಾಲೆಯಂತೆ, ಎಲ್ಲವೂ ಯಾವುದು ನಿತ್ಯವಾಗಿ ತತವಾಗಿರುವುದರಿಂದ ಇರುವುದೋ ವಿಶ್ವವನ್ನೇ ಅಂಗವಾಗುಳ್ಳ ಯಾವುದರಲ್ಲಿ ಸದಸದಾತ್ಮಕವಾದ ವಿಶ್ವವು ಉದಯಿಸುವುದೋ ಅದು ಚಿದಾಕಾಶವು.

೧೬. ಸರ್ಗ, ಪ್ರಲಯ, ವಿಕ್ರಿಯೆಗಳೆಲ್ಲವೂ ಯಾವುದರಿಂದ ಪ್ರಸೂತವಾಗುವುವೋ, ಯಾವುದರಲ್ಲಿ ಎಲ್ಲವೂ ಪ್ರಲಯವನ್ನು ಹೊಂದುವುವೋ, ಎಲ್ಲವೂ ಯಾವುದರಿಂದ ತುಂಬಿಹೋಗಿರುವುವೋ ಅದು ಚಿದಾಕಾಶವು.

(“ಯತೋ ವಾ ಇಮಾನಿ ಭೂತಾನಿ ಜಾಯಂತೇ” ಇತಿ ಶ್ರುತ್ಯುಕ್ತಂ ತಟಸ್ಥ ಲಕ್ಷಣಮಾಹ—ತಾ. ಪ್ರ.)

೧೭. ನಿದ್ರೆಯು ಮುಗಿದಮೇಲೆ, ಯಾವುದರಿಂದ ವಿಶ್ವವು ಪ್ರವರ್ತಿಸುವುದೋ, ಯಾವುದು ಶಾಂತವಾದರೆ ಎಲ್ಲವೂ ಶಾಂತವಾಗುವುದೋ ಅದು ಚಿದಾಕಾಶವು.

(ಸುಷುಪ್ತಿ ಪ್ರಲಯ ಲಕ್ಷಣಾಯಾಂ ನಿದ್ರಾಯಾಂ ವಿನಿವೃತ್ತಾಯಾಂ ಸತ್ಯಾಂ ಯತೋ ಯಸ್ಮಾತ್ಪ್ರತೀಚೋ ವಿಕ್ಷೇಪಶಕ್ತಿ ವಶಾಜ್ಜಾಗ್ರತ್ಸ್ವಪ್ನ ಲಕ್ಷಣಂ ವಿಯದಾದಿ ಲಕ್ಷಣಂ ಚ ವಿಶ್ವಂ ಪ್ರವರ್ತತೇ ಆವಿರ್ಭವತಿ । ಯಸ್ಯ ಶಾಂತೌ ವಿಕ್ಷೇಪ ಶಕ್ತಿ ಶಾಂತೌ ನಿವರ್ತತೇ— ತಾ. ಪ್ರ.)

ಯಸ್ಯೋನ್ಮೇಷ ನಿಮೇಷಾಭ್ಯಾಂ ಜಗತ್ಸತ್ತಾ ಲಯೋದಯೌ ।
ಸ್ವಾನುಭೂತ್ಯಾತ್ಮಕಂ ಸ್ವಾಂತಃ ಸ್ಥಿತಂ ತದ್ವಿದ್ಧಿ ಚಿನ್ನಭಃ ॥೧೮॥

ನೇವಂ ನೇದಂ ತದಿತ್ಯೇವಂ ಸರ್ವಂ ನಿರ್ಣೀಯ ಸರ್ವಥಾ ।
ಯನ್ನ ಕಿಂಚಿತ್ಸದಾ ಸರ್ವಂ ತಚ್ಚಿದ್ವ್ಯೋಮೇತಿ ಕಥ್ಯತೇ ॥೧೯॥

ದೇಶಾದ್ದೇಶಾಂತರಪ್ರಾಪ್ತೌ ಯನ್ಮಧ್ಯೇ ಸಂವಿದೋ ವಪುಃ ।
ದೂರತೋರ್ಧನಿಮೇಷೇಣ ತಚ್ಚಿನ್ಮಾತ್ರವಪುಃ ಸ್ಮೃತಂ ॥೨೦॥

---

೧೮. ಯಾವುದರ ಉನ್ಮೇಷ ನಿಮೇಷಗಳಿಂದ ಜಗತ್ಸತ್ತೆಯು ಲಯ-ಉದಯಗಳಾಗುವುವೋ, ಯಾವುದು ಸ್ವಾನುಭೂತ್ಯಾತ್ಮಕವಾಗಿ ಎಲ್ಲರೊಳಗೂ ಇರುವುದೋ ಅದೇ ಚಿದಾಕಾಶವು.

(ಉನ್ಮೇಷಶ್ಚರಮ ಸಾಕ್ಷಾತ್ಕಾರ ವೃತ್ತ್ಯಾವಾವಿರ್ಭಾವ ಸ್ತೇನ ಜಗತ್ಸತ್ತಾಯಾ ಲಯಃ । ನಿಮೇಷಃ ಸ್ವರೂಪಾವರಣಂ ತೇನ ಚ ಉದಯಃ—ತಾ. ಪ್ರ)

೧೯. ನೇದಂ, ನೇದಂ, ಇದಲ್ಲ, ಇದಲ್ಲ, ಅದೇ ಎಂದು ಎಲ್ಲವನ್ನೂ ಎಲ್ಲಾ ವಿಧದಲ್ಲೂ ನಿರ್ಣಯಿಸಿಕೊಂಡರೂ. ಯಾವುದು ಯಾವುದೂ ಅಲ್ಲವೋ, ಯಾವುದೂ ಯಾವಾಗಲೂ ಎಲ್ಲವೂ ಆಗಿರುವುದೋ ಅದು ಚಿದಾಕಾಶವು.

೨೦. ದೇಶದಿಂದ ದೇಶಕ್ಕೆ ಬರುವಾಗ (ವಿಷಯದಿಂದ ವಿಷಯಕ್ಕೆ ಹೋಗುವಾಗ) ಆ ಎರಡರ ನಡುವೆ ಕಾಣುವ ಸಂವಿದ್ರೂಪವು ಯಾವುದೋ, ಅರ್ಧ ನಿಮಿಷದಲ್ಲಿ ದೂರಕ್ಕೆ ಯಾವುದು ಹೋಗಬಲ್ಲುದೋ ಅದು ಚಿದಾಕಾಶವು.

(ಅರ್ಧ ನಿಮೇಷೇಣ ಅವಿಲಂಬೇನ ದೇಶಾಂತರಪ್ರಾಪ್ತೌ । ವಿಲಂಬೇ ಹಿ ವೃತ್ತಿ ವಿಚ್ಛೇದಾದ್ವಿಷಯಾಂತರಾನು ಪ್ರವೇಶಾದ್ವಾ ನ ಶುದ್ಧ ಚಿದಂಬರಂ ಪರಿಚೇತುಂ ಶಕ್ಯಮಿತಿ । ಉಪ ಕ್ರಮೋಕ್ತಸ್ಯ ಪುನಃ ಕೀರ್ತನಮುಪಸಂಹಾರ ದ್ಯೋತನಾರ್ಥಂ-ತಾ.ಪ್ರ.)

ವಿಶ್ವಂ ಚಿನ್ಮಾತ್ರಮೇವೇದಂ ಯಥಾ ಭೂತಂ ಯಥಾ ಸ್ಥಿತಂ ।
ರೂಪಾಲೋಕಮನಸ್ಕಾರೈರ್ಯುಕ್ತಮಪ್ಯೇವಮಾತ್ಮಕಂ ॥೩೧॥

ಈಷದುನ್ಮೇಷಣಾದೇತದನ್ಯತಾಮಿವ ಗಚ್ಛತಿ ।
ಅನನ್ಯರೂಪಮಪಿ ಸಚ್ಚಿದ್ವ್ಯೋಮ ವಿಮಲಾಕೃತಿ ॥೩೨॥

ಪಶ್ಯನ್ನೇವೇಂದ್ರಿಯೈರರ್ಥಾನಸ್ವಸ್ಥಂ ನಿರ್ವಾಸನಾಶಯಃ
ಪ್ರಬುದ್ಧ ಏವೈಕಘನಃ ಸುಷುಪ್ತವತ್ಸ್ಥಿತೋ ಭವ ॥೩೩॥

ನಿರ್ವಾಸನಃ ಶಾಂತಮನಾ ವದ ವ್ರಜ ಪಿಬಾಹರ ।
ಪಾಷಾಣ ಇವ ಸಂಜೀವೋ ನಿತ್ಯಂ ಸುಘನಮೌನವಾನ್ ॥೩೪॥

---

೩೧ ಹಿಂದೆ ಇದ್ದಂತೆ ಈಗ ಇರುವಂತೆ, ವಿಶ್ವವೆಲ್ಲವೂ ಚಿನ್ಮಯವಾಗಿರುವುದು. ರೂಪಾಲೋಕ, ಮನಸ್ಕಾರಗಳಿಂದ ಯುಕ್ತವಾಗಿದ್ದರೂ ಜಗತ್ತು ಚಿನ್ಮಯವಾಗಿಯೇ ಇರುವುದು.

೩೨ ಈಷದುನ್ಮೇಷಣದಿಂದಲೇ ಇದು ಅನ್ಯತೆಯನ್ನು ಹೊಂದಿದಂತಾಗುವುದು. ಸತ್ತಾದ ಚಿದಾಕಾಶವು ವಿಮಲವಾಗಿ ಅನನ್ಯರೂಪವಾಗಿದ್ದರೂ ಹೀಗೆ ಆಗುವುದು.

೩೩. ಆದರಿಂದ ಇಂದ್ರಿಯಗಳಿಂದ ಅರ್ಥಗಳನ್ನು ಭೋಗಿಸುತ್ತಿದ್ದರೂ ನಿರ್ವಾಸನ ಹೃದಯನಾಗಿ ಪ್ರಬುದ್ಧನಾಗು. ಏಕಘನನಾಗು. ಸುಷುಪ್ತಿಯಲ್ಲಿರುವಂತೆ ಇರು.

(ಸೇಯ ಮನ್ಯತಾ ಭ್ರಾಂತಿರ್ವಾಸನಾವ ಶಾದೇವೇತಿ ನ ನಿರ್ವಾಸನಸ್ಯೇತಿ— ತಾ. ಪ್ರ.)

೩೪. ನಿರ್ವಾಸನನಾಗಿ, ಶಾಂತಮನನಾಗಿ, ನುಡಿ, ನಡೆ, ಕುಡಿ, ಹಿಡಿ. ಕಲ್ಲಿನ ಬೊಂಬೆಯಂತಿರುತ್ತಾ ಘನಮೌನವುಳ್ಳವನಾಗಿ ಬದುಕುವವನಾಗು.

ಇದಂ ನ ಸಂಭವತ್ಯೇವ ದೃಶ್ಯಂ ಪಶ್ಯಸಿ ಯತ್ಪುರಃ ।
ಮೃಗತೃಷ್ಣಾಜಲಮಿವ ದ್ವೈತಮಿಂದಾವಿವೋದಿತಂ ॥೨೫॥

ಇದಮಾದಾವನುತ್ಪನ್ನಂ ಕಾರಣಾಭಾವತಃ ಕಿಲ ।
ಕಾರಣೇನ ವಿನಾ ಕಾರ್ಯಂ ನ ಹಿ ನಾಮೋಪಪದ್ಯತೇ ॥೨೬॥

ಯದ್ಯಪ್ಯುಪಪದ್ಯತೇ ಕಿಂಚಿತ್ತದಕಾರಣಕೋದ್ಭವಂ ।
ಯಥಾಸ್ಥಿತಂ ಪರಂ ರೂಪಮುದ್ಭೂತಮಿವ ಲಕ್ಷ್ಯತೇ ॥೨೭॥

ತದ್ಯಥಾಸ್ಥಿತಮೇವಾಂಗ ಪೂರ್ವರೂಪಮವಸ್ಥಿತಂ ।
ಭವತ್ಯದ್ವಮೇವಾಚ್ಛಂ ದ್ವಯೇನಾಪ್ಯುಪಲಕ್ಷಿತಂ ॥೨೮॥

---

೨೫. ನೀನು ಕಣ್ಣೆದುರು ನೋಡುತ್ತಿರುವ ಯಾವ ವಿಶ್ವವುಂಟೋ ಅದು ಸಂಭವಿಸುವುದೇ ಇಲ್ಲ. ಅದು ಇರುವುದು ಮೃಗತೃಷ್ಣಾ ಜಲದಂತೆ, ದ್ವಿಚಂದ್ರ ದರ್ಶನದಂತೆ ದೋಷದಿಂದ ಆದುದು

೨೬. ಇದು ಆದಿಯಲ್ಲಿಯೇ ಅನುತ್ಪನ್ನವು : ಏಕೆಂದರೆ ಇದರಲ್ಲಿ ಉತ್ಪತ್ತಿಗೆ ಬೇಕಾದ ಕಾರಣವಿಲ್ಲ : ಕಾರಣವಿಲ್ಲವೆ ಕಾರ್ಯವಾಗುವುದು ಎಂಬುದು ಅಸಂಭವವು

೨೭. ಅಕಾರಣವಾಗಿ ಯಾವುದಾದರೂ ಉದ್ಭವಿಸುವುದುಂಟು ಎಂದಾದರೆ, ಅದು ಯಥಾಸ್ಥಿತವಾಗಿರುವ ಪರಮದಲ್ಲಿ ಒಂದು ರೂಪವು ಹುಟ್ಟಿದಂತೆ ಕಾಣಿಸುವುದು ಎನ್ನಬೇಕು.

೨೮. ಅಲ್ಲಿ ರೂಪವೊಂದಿದ್ದಂತೆ ಕಂಡರೂ ಅದರ ಪೂರ್ವ ರೂಪವು ಯಥಾಸ್ಥಿತವಾಗಿಯೇ ಇರುವುದು. ದ್ವಯವಾಗಿದ್ದಂತೆ ಕಂಡರೂ ಅದು ಅಚ್ಛವಾಗಿ ಅದ್ವಯವಾಗಿಯೇ ಇರುವುದು.

ತತ್ರೇದಂಪ್ರತ್ಯಯಃ ಪ್ರೌಢೋ ಭವತ್ಯನುಭವೋ ಹಿ ಯಃ ।
ಸಮಾಯಾತಮಿದಂ ಭ್ರಾಂತಂ ತತ್ಸ್ವಪ್ನಸ್ತ್ರೀಸಮಂ ವಿದುಃ ॥೨೯॥

ತಸ್ಮಾದ್ದೃಶ್ಯಂ ನ ಚೋತ್ಪನ್ನಂ ನೈವಾಸ್ತಿ ನ ಭವಿಷ್ಯತಿ ।
ನಚ ನಶ್ಯತಿ ಯನ್ನಾಸ್ತಿ ತಸ್ಯ ಕಿಂ ನಾಮ ನಶ್ಯತಿ ॥೩೦॥

ತತ್ತದೇವ ಪರಂ ಶಾಂತಂ ಚಿದ್ವ್ಯೋಮೈವ ತಥಾ ಸ್ಥಿತಂ ।
ಸ್ವರೂಪಾದಚ್ಯುತಂ ಸ್ವಸ್ಥಂ ಸೌಮ್ಯಂ ಜಗದಿವೋದಿತಂ ॥೩೧॥

ನಹೀದಮಗ್ರೇ ಯದ್ದೃಷ್ಟಂ ದೃಶ್ಯಂ ತತ್ಸತ್ಕದಾಚನ ।
ನ ಚಾಪಿ ದ್ರಷ್ಟಾ ದೃಷ್ಟಾರ್ಥಾಭಾವೇ ಕ್ವ ದ್ರಷ್ಟೃತಾ ಕಿಲ ॥೩೨॥

---

೨೯. ಅಲ್ಲಿ ಅನುಭವವು ಪ್ರೌಢವಾದಾಗ ಇದಂಪ್ರತ್ಯಯವು ಬರುವುದು ಯಾವುದೋ ಅದು ಭ್ರಾಂತಿಯಿಂದ ಬಂದುದು: ಸ್ವಪ್ನಸ್ತ್ರೀಯಂತೆ ಎಂದು ಬಲ್ಲವರು ಹೇಳುವರು.

೩೦. ಅದರಿಂದ ದೃಶ್ಯವು ಉತ್ಪನ್ನವಾಗಲಿಲ್ಲ: ಈಗ ಇಲ್ಲ. ಮುಂದೆ ಹುಟ್ಟುವುದಿಲ್ಲ: ನಾಶವಾಗುವುದಿಲ್ಲ. ಇಲ್ಲದ್ದು ನಾಶವಾಗುವುದೆಂತು?

೩೧. ಆ ಪ್ರಸಿದ್ಧವಾದ ಪರಮಶಾಂತವಾದ ಚಿದಾಕಾಶವು ಹಾಗೆಯೇ ಇದ್ದ ಹಾಗೆಯೇ ಇರುವುದು. ಸ್ವರೂಪದಿಂದ ಅಚ್ಯುತವಾಗಿ ಸ್ವಸ್ಥವಾಗಿ ಸೌಮ್ಯವಾಗಿ ಇದ್ದುಕೊಂಡೇ ಜಗತ್ತಿನಸಾಗೆ ಉದಯವಾಗಿರುವುದು.

೩೨. ಇದಂ ಎನ್ನಿಸಿಕೊಂಡು ಎದುರಿಗೆ ಕಾಣುತ್ತಿರುವ ದೃಶ್ಯವು ಅದು ಯಾವಾಗಲೂ ಸತ್ ಅಲ್ಲ. ಅದರಂತೆಯೇ ದ್ರಷ್ಟೃವೂ ಅಲ್ಲ: ದೃಷ್ಟವಾದ ಅರ್ಥವೇ ಇಲ್ಲದಿರಲು ದ್ರಷ್ಟೃತೆಯು ಎಲ್ಲಿ ಬಂತು?

ಶ್ರೀರಾಮ ಉವಾಚ:—

ಏವಂ ಚೇತ್ತದ್ವದ ಬ್ರಹ್ಮನ್ದ್ರಷ್ಟೃದೃಶ್ಯಾವಭಾಸನಂ ।
ಕಿಮಿದಂ ಕಥಮಾಭಾತಿ ಭೂಯೋಽಪಿ ವದತಾಂವರ ॥೩೩॥

ಶ್ರೀವಸಿಷ್ಠ ಉವಾಚ:—

ಅಸದ್ರೂಪಸ್ಯ ದೃಶ್ಯಸ್ಯ ಕಾರಣಾಭಾವತಃ ಸದಾ ।
ದೃಶ್ಯತಾಸ್ತೀತ್ಯಪಿ ಪ್ರೌಢಿನಿರ್ದೇಶಸ್ಯಾತ್ಯಸಂಭವಾತ್ ॥೩೪॥

ಯದಿದಂ ಭಾಸತೇ ಕಿಂಚಿದ್ದ್ರಷ್ಟೃದೃಶ್ಯಭ್ರಮಾತ್ಮಕಂ ।
ಜಗದಾದಿ ಪರಂ ರೂಪಂ ತದ್ವಿದ್ಧಿ ಪರಮಾತ್ಮನಃ ॥೩೫॥

---

ಶ್ರೀರಾಮನು ಕೇಳಿದನು:—

೩೩. ಹಾಗಾದರೆ ಎಲೈ ಬ್ರಹ್ಮನೇ, ದ್ರಷ್ಟೃ ದೃಶ್ಯಗಳು ತೋರುವುದು ಹೇಗೆ? ಅವು ಏನು? ಅದನ್ನು ಮತ್ತೆ, ಹೇಳುವವರಲ್ಲಿ ಶ್ರೇಷ್ಠನೆ, ಮತ್ತೆ ಹೇಳು.

ಶ್ರೀ ವಸಿಷ್ಠನು ಹೇಳಿದನು:—

೩೪. ದೃಶ್ಯವು ಅಸದ್ರೂಪವು: ಅದಕ್ಕೆ ಪ್ರತ್ಯೇಕವಾದ ಕಾರಣವಿಲ್ಲವು: ದೃಶ್ಯವೊಂದುಂಟು: ದೃಶ್ಯತೆಯುಂಟು ಎನ್ನುವುದು ಪ್ರೌಢಿ ವಾದವು: ಏಕೆಂದರೆ ದೃಶ್ಯವು ಸಂಪೂರ್ಣವಾಗಿ ಅಸಂಭವವು.

(ತತ್ರ ಅಸತೋಭಾನಾಸಂಭವಂ ಪ್ರಥಮ ಶ್ಲೋಕೇನ ಅಭ್ಯುಪೇತ್ಯ ಅತ ಏವ ಸತಃ ಪರಮಾತ್ಮನ ಏವ ಮಾಯಯಾ ತಥಾ ಭಾನಮಿತ್ಯುತ್ತರಂ ದ್ವಿತೀಯೇ ನಾಹ—ಕಾರಣಾ ಭಾವತಃ ಅಸದ್ರೂಪ ಸೋತ್ಪತ್ತೇ ರೇವ ಅಸಂಭವಾದಸ್ಯ ದೃಶ್ಯ ತಾಪೀತಿ ಪ್ರೌಢ್ಯಾ ನಿರ್ದೇಶಃ ಪ್ರೌಢಿವಾದಸ್ತಸ್ಯ ಅತ್ಯಸಂಭವಾತ್ ಸುತರಾಮ ಸಂಭವಾತ್ —ತಾ. ಪ್ರ.)

೩೫. ಜಗದಾದಿಯಾದ ದ್ರಷ್ಟೃದೃಶ್ಯ ಎಂಬ ಭ್ರಮಾರೂಪವಾಗಿ ಯಾವುದು ಭಾಸವಾಗುತ್ತಿರುವುದೋ ಅದು ಪರಮಾತ್ಮನ ಪರರೂಪವೆಂದೇ ತಿಳಿ.

ಸ್ವಪ್ನೇ ಚಿನ್ಮಾತ್ರ ಏವಾಸ್ತೇ ಯಥಾ ಗಗನಕಾನನಂ ।
ತಥಾ ಜಗತ್ತಯಾ ಭಾತಿ ಸ್ವಯಂ ಚಿನ್ಮಾತ್ರಮಾತ್ಮನಿ ॥೩೬॥

ಇಹಾದಿಸರ್ಗಾತ್ಪ್ರಭೃತಿ ನಾಸ್ತ್ಯುಪಾದಾನಕಾರಣಂ ।
ಕಿಂಚನಾಪಿ ಕ್ವಚಿದಪಿ ಭಾತೀತ್ಥಂ ಬ್ರಹ್ಮ ಕೇವಲಂ ॥೩೭॥

ಯಚ್ಚಿದಾಕಾಶಕಚನಂ ಸ್ವಯಮಾತ್ಮನಿ ಜೃಂಭತೇ ।
ತದಿದಂ ಭಾತಿ ತಸ್ಯೈವ ಜಗದಿತ್ಯುದಿತಂ ವಪುಃ ॥೩೮॥

ಯಥಾ ಭಾವಸ್ಯ ಭಾವತ್ವಂ ಯಥಾ ಶೂನ್ಯಸ್ಯ ಶೂನ್ಯತಾ ।
ಅಕಾರಿಣೋ ಯಥಾಕಾರಸ್ತಥಾ ಚಿನ್ನಭಸೋ ಜಗತ್ ॥೩೯॥

---

೩೬. ಚಿನ್ಮಾತ್ರವೇ ಗಗನದಲ್ಲಿ ಹೇಗೆ ಗಗನಕಾನನ ಆಗಿ ಕಾಣುವುದೋ ಹಾಗೆಯೇ ಆ ಚಿನ್ಮಾತ್ರವೇ ತನ್ನಲ್ಲಿಯೇ ಜಗತ್ತು ಆಗಿ ಭಾಸವಾಗುವುದು.

೩೭. ಇಲ್ಲಿ ಆದಿಸರ್ಗದಿಂದ ನೋಡಿದರೂ ಪೃಥಕ್ಕಾದ ಉಪಾದಾನ ಕಾರಣವು ಎಳ್ಳಷ್ಟೂ ಎಲ್ಲಿಯೂ ಇಲ್ಲ. (ಆದರಿಂದ) ಬ್ರಹ್ಮವೇ ಈ ರೂಪವಾಗಿ ಭಾಸವಾಗುವುದು ಎನ್ನಬೇಕು.

(ಸ್ವಪ್ನಸಾಮ್ಯ ಮಸ್ಯ ಕುತ ಇತಿ ಚೇತ್ ಸರ್ವಕಾರಣ ಕಲಾಪ ಶೂನ್ಯ ಸುಷುಪ್ತಿ ಸನ್ನಿಕರ್ಷಾತ್ ಪ್ರಲಯಮಧ್ಯೋತ್ಥತ್ವಾದಿತ್ಯಾಶಯೇನಾಹ-ತಾ. ಪ್ರ)

೩೮. ಚಿದಾಕಾಶದ ಕಚನವು ಯಾವುದು ಸ್ವಯಂ ತನ್ನಲ್ಲಿಯೇ ಜೃಂಭಣ ಮಾಡುವುದು. ಆಗ ಚಿದಾಕಾಶದ ಶರೀರವೇ ಜಗತ್ತು ಎಂದು ಉದಿತವಾದಂತೆ ತೋರುವುದು.

೩೯. ಭಾವದ ಭಾವತ್ವದಂತೆ, ಶೂನ್ಯದ ಶೂನ್ಯತೆಯಂತೆ, ಅಕಾರಿಯ ಆಕಾರದಂತೆ, ಚಿದಾಕಾಶಕ್ಕೆ ಜಗತ್ತು.

ಇದಂ ವಿದ್ಧಿ ಚಿದಾಭಾಸಂ ಪರಮಾರ್ಥಘನಂ ಘನಂ
ಇತ್ಥಂ ಸ್ಥಿತಂ ಸ್ವಯಂ ಭಾತಂ ದ್ರಷ್ಟೃದೃಶ್ಯದೃಗಾತ್ಮಕಾ ॥೪೦॥

ವಸ್ತುತಸ್ತು ದ್ವಯಾಭಾವನ್ನಾಭಾಸಿ ನ ಚ ಭಾಸನಾ ।
ಕಿಮಪೀದಮನಿರ್ದೇಶ್ಯಂ ಸದ್ವಾಸದ್ವೇತಿ ವೇತ್ತಿ ಕಃ ॥೪೧॥

ಶ್ರೀರಾಮ ಉವಾಚ:—

ಏವಂ ಚೇದ್ವದ ಬ್ರಹ್ಮನ್ಕಾರ್ಯಕಾರಣತಾದಿತಃ ।
ಕಥಂ ಭೇದಃ ಕಿಮಾಯಾತಃ ಕಥಂ ಸತ್ಯತ್ವಮಾಗತಃ ॥೪೨॥

---

೪೦. ಚಿದಾಭಾಸವಾದ ಈ ಜಗತ್ತೂ ಪರಮಾರ್ಥ ಘನವಾದ ಘನವೆಂದು ತಿಳಿ. ಹೀಗಿರುವ ಇದೆಲ್ಲವೂ ದ್ರಷ್ಟೃದೃಶ್ಯ ದೃಗಾತ್ಮಕವಾಗಿ ಚಿದಾಕಾಶವೇ ಕಾಣುತ್ತಿರುವುದು.

೪೧. ಆದರೂ ವಾಸ್ತವ್ಯವಾಗಿ ಎರಡು ಇಲ್ಲವಾದ್ದರಿಂದ, ಇರುವುದೆಲ್ಲವೂ ಚಿತ್ತೇ ಆದ್ದರಿಂದ, ಆಭಾಸಿಯೂ ಇಲ್ಲ : ಆಭಾಸನವೂ ಇಲ್ಲ : ಹಾಗಾದರೆ ಇದು ಇದೆಯಲ್ಲ ಎಂದರೆ ಇದು ಅನಿರ್ದೇಶ್ಯವು : ಸತ್–ಅಸತ್‌ಗಳಲ್ಲಿ ಇದು ಯಾವುದೋ ಯಾರು ಬಲ್ಲರು ?

(ಮಾಯಾ ತ್ಯಾಗೇತು ದ್ವಯಾ ಭಾವಾತ್ ಸದ್ವಾ ಅಸದ್ವಾ ಇತಿ ಕೋ ವೇತ್ತಿ ಬಾಧಿ ತಸ್ಯ ವಿಮರ್ಶಾಯೋಗ್ಯತ್ವಾದಿತಿ—ತಾ. ಪ್ರ.)

ಶ್ರೀರಾಮನು ಕೇಳಿದನು:—

೪೨. ಹಾಗಾದರೆ, ಎಲೈ ಬ್ರಹ್ಮನೆ, ಕಾರ್ಯಕಾರಣತಾದಿಯು ಬೇರೆ ಬೇರೆಯಾದುದು ಹೇಗೆ ? ಅದು ಸತ್ಯತ್ವವನ್ನು ಪಡೆದುದು ಹೇಗೆ ?

(ಏವಂ 'ನಾಭಾಸಿ ನಚ ಭಾಸನಂ' ಇತಿ ತ್ವದುಕ್ತರೀತ್ಯಾ ದ್ರಷ್ಟೃದೃಶ್ಯೋಭಯ ಶೂನ್ಯಂ ಚೇತ್ ಪರಮಾರ್ಥತತ್ವಂ ತರ್ಹಿ ಕಾರ್ಯಕಾರಣತಾದಿಕೋ ಭೇದಃ ಕಥಂ । ನಹ್ಯದ್ರಷ್ಟೃಕಂ ಕಶ್ಚಿತ್ ಸೇದ್ಧುಮರ್ಹತಿ ಕಸ್ಮಾದುಪಾದಾನಾನ್ನಿಮಿತ್ತಾದ್ವಾ ಆಯಾತಃ । ಯದ್ಯಸತ್ಯ ಏವೇತಿ ಬ್ರೂಷೇ ತರ್ಹಿ ಕಥಂ ಭ್ರಾಂತಿರಿತ್ಯರ್ಥಃ— ತಾ. ಪ್ರ.)

ಶ್ರೀ ವಸಿಷ್ಠ ಉವಾಚ –

ಚಿತ್ರಕಾರೋ ಯಥಾ ಭಾವಂ ಯದಾ ಭಾವಯತಿ ಸ್ವಯಂ ।
ಸ್ವಾತ್ಮಾ ತಥಾ ತದೈವಾಶು ಪಶ್ಯತೀತ್ಯಪಿ ದೃಷ್ಟವಾನ್ ॥೪೩॥

ಚಿದ್ವ್ಯೋಮೈವ ಮಯಾಕಾರಂ ಸ್ವೇ ವ್ಯೋಮ್ನ್ಯೇವ ನ ಮುಹ್ಯತಿ ।
ಸ್ವಪ್ನಮೋಹ ಯಥಾ ಸ್ವಪ್ನೇ ಕೋಽಸ್ಯ ಪರ್ಯನುಯೋಗಕೃತ್ ॥೪೪॥

ಭಾವಾದ್ಭಾವಾಂತರ ಪ್ರಾಪ್ತೌ ಮಧ್ಯೇ ಯತ್ಸಂವಿದೋ ವಪುಃ ।
ತಚ್ಚಿದ್ವ್ಯೋಮ ಪರಂ ಪದಂ ಸರ್ವಂ ಚ ಸ್ಥಿತಿ ನೇತರತ್ ॥೪೫॥

ಕಾರ್ಯಕಾರಣಭಾವಾದಿ ದೃಷ್ಟಯೋಽವಿದ್ಯಾವಿಜೃಂಭಿತಾಃ ।
ಜಗದ್ವತ್ಕಲ್ಪಿತಾಸ್ತೇನ ಕೋಽಸ್ಯ ಪರ್ಯನುಯೋಗಕೃತ್ ॥೪೬॥

---

ವಸಿಷ್ಠನು ಹೇಳಿದನು: —

೪೩. ಚಿತ್ರಕಾರನು ಯಾವಾಗ ಭಾವವು ಬಂದಂತೆ, ಏನೇನನ್ನು ಸ್ವಯಂ ಭಾವಿಸಿಕೊಳ್ಳುವುದೋ, ಹಾಗೆ ಹಾಗೆಯೇ ಆ ಕೂಡಲೇ ಅದನ್ನೇ ನೋಡುವುದು ಎಂಬುದನ್ನಂತೂ ಕಂಡಿದ್ದೆಯಲ್ಲ.

೪೪. ಚಿದಾಕಾಶವೇ ಈ ಆಕಾರಗಳನ್ನೆಲ್ಲ ಪಡೆದಿರುವುದು: ಅದಕ್ಕೆ ತಾನೇ ಕಾರಣವು ಎಂದು ತಿಳಿದವನು ಮೋಹಗೊಳ್ಳುವುದಿಲ್ಲ: ಸ್ವಪ್ನಕಾಲದಲ್ಲಿ ಬಂದಿರುವ ಮೋಹವು ತಾನಾಗಿ ಕಳೆಯುವಂತೆ ಇದು. ಹಾಗಾದರೆ ಪರಮಾತ್ಮನು ಜೀವನಾಗಿ ಮೋಹಗೊಳ್ಳುವುದೇಕೆ ಎಂದರೆ, ಈ ಆಕ್ಷೇಪವನ್ನು ಯಾರು ಎತ್ತಬಲ್ಲರು ?

೪೫. ಭಾವದಿಂದ ಭಾವಕ್ಕೆ ಹೋಗುವಾಗ ಆ ಎರಡು ಭಾವದ ನಡುವೆ ಯಾವ ಸಂವಿದ್ರೂಪವಿದೆಯೋ ಅದೇ ಚಿದಾಕಾಶವು. ಅದೇ ಎಲ್ಲ ಸ್ಥಿತಿಯೂ ಆಗಿರುವುದು. ಇನ್ನೇನೂ ಇಲ್ಲ.

೪೬. ಕಾರ್ಯಕಾರಣ ಭಾವಾದಿ ದೃಷ್ಟಿಗಳೆಲ್ಲವೂ ಅವಿದ್ಯಾ ವಿಜೃಂಭಣಗಳು. ಜಗತ್ತಿನಂತೆ ಅವೂ ಕಲ್ಪಿತವಾದವು. ಹೀಗಿರಲು, ಹೀಗೇಕೆ ಎಂಬ ಆಕ್ಷೇಪವನ್ನು ಎತ್ತಬಲ್ಲವರು ಯಾರು ?

ದ್ರಷ್ಟಾ ಭೋಕ್ತಾಥ ಕರ್ತಾ ವಾ ಕಶ್ಚಿತ್ಸ್ಯಾದಿತರೋ ಯದಿ ।
ತತ್ಕಥಂ ಕಿಮಿದಂ ದೃಶ್ಯಮಿತಿ ಯುಜ್ಯೇತ ನಾನ್ಯಥಾ ॥೪೭॥

ಯತ್ರ ಸ್ವಪ್ನೇ ನಿರಾಭಾಸಂ ಚಿದ್ವ್ಯೋಮ್ನೈವ ವಿರಾಜತೇ ।
ಶುದ್ಧಮೇಕಮನೇಕಾತ್ಮ ತತ್ರ ಕಿಂ ಕ್ವ ವಿಕಲ್ಪ್ಯತೇ ॥೪೮॥

ಆಸ್ವಯಂಭುವ ಏವೇಯಂ ಚಿನ್ಮಾತ್ರೇ ಭಾತಿ ಸರ್ಗಭಾಃ ।
ಪರಿಜ್ಞಾತಾ ಸತೀ ಸಾ ತು ಬ್ರಹ್ಮೈವ ಭವತಿ ಕ್ಷಣಾತ್ ॥೪೯॥

ಏಷೈವ ತ್ವಪರಿಜ್ಞಾತಾ ಭ್ರಾಂತಿರ್ಮಾಯೇತಿ ಕಥ್ಯತೇ ।
ಜಗದಿತ್ಯುಚ್ಯತೇ ವಿದ್ಯಾ ದೃಶ್ಯಮಿತ್ಯುಪವರ್ಣ್ಯತೇ ॥೫೦॥

೪೭. ದ್ರಷ್ಟಾ, ಭೋಕ್ತಾ, ಕರ್ತಾ, ಇವರಲ್ಲಿ ಯಾರಾದರೂ ಒಬ್ಬರು ಅನ್ಯರಾದರೆ, ಆಗ ಇದು ಹೇಗೆ? ಅದು ಏನು? ಎಂದು ಕೇಳಲು ಆದೀತು!

೪೮. ನಿರಾಭಾಸವಾದ ಚಿದಾಕಾಶವು ಸ್ವಪ್ನದಲ್ಲಿ ಒಂದೇ ಆದ ತಾನು ಹಲವಾಗಿ ವಿರಾಜಿಸುವುದಲ್ಲವೆ? ಆಗ ಏನೆಂದು ಎಲ್ಲಿಂದು ವಿಕಲ್ಪಿಸುವುದು?

೪೯. ಸ್ವಯಂಭುವಿನಿಂದ ಹಿಡಿದು ಹಬ್ಬಿರುವ ಈ ಸರ್ಗದೃಷ್ಟಿಯು ಚಿದಾಕಾಶದಲ್ಲಿಯೇ ಇರುವುದು ಎಂದು ತಿಳಿದುದಾದರೆ, ಆ ಕ್ಷಣವೇ ಸರ್ಗವು ಬ್ರಹ್ಮವಾಗುವುದು.

(ಸ್ವಯಂಭುವಃ ಆ ಸ್ವಯಂಭುವ ಮಭಿವ್ಯಾಪ್ಯೈವ ಸರ್ಗಭಾಃ ಸರ್ಗಭ್ರಾಂತಿರ್ಭಾತಿ ತತ್ತ್ವ ಪರಿಜ್ಞಾನಾದಿತಿ—ತಾ॰ ಪ್ರ.)

೫೦. ಇದೇ ಅಪರಿಜ್ಞಾತವಾಗಿರುವಾಗ ಭ್ರಾಂತಿ, ಮಾಯಾ ಎನ್ನಿಸಿಕೊಳ್ಳುವುದು. (ಶಾಸ್ತ್ರದಲ್ಲಿ): ಲೋಕದಲ್ಲಿ ಜಗತ್ತು ಎನ್ನಿಸಿಕೊಳ್ಳುವುದು. ಅಜ್ಞರ ವಿಷಯದಲ್ಲಿ ಅವಿದ್ಯಾ ಎನ್ನಿಸಿಕೊಳ್ಳುವುದು: ವೃಕ್ಕನ್ನು ಬಲ್ಲ ವಿವೇಕಿಗಳಿಂದ ದೃಶ್ಯವೆನ್ನಿಸಿಕೊಳ್ಳುವುದು.

ಚಿದಾಕಾಶಪ್ರಕಾಶೇನ ಚಿತ್ತಾ ದೃಶ್ಯಪಿಶಾಚಕಃ ।
ವೇತಾಲೋ ಬಾಲಕೇನೇವ ಬುದ್ಧ್ಯೋಽಸನ್ನೇವ ಸನ್ನಿವ ॥೫೧॥

ಜಗತ್ತ್ವಾತ್ಮನ್ಯಸತ್ಯಾಪಿ ಚಿದ್ವ್ಯೋಮ್ನ್ಯನುಭೂಯತೇ ।
ಸತ್ಯೇವ ಸಾಂಗಲೇಖೇವ ಸ್ವಪ್ನೇಽದ್ರಿಪುರತಾ ಯಥಾ ॥೫೨॥

ಅಹಮದ್ರಿರಹಂ ರುದ್ರಃ ಸಮುದ್ರೋಽಹಮಹಂ ವಿರಾಟ್ ।
ಚೇತ್ಯತೇ ಖೇ ಚಿತ್ಯೈವೇತಿ ಸ್ವಪ್ನೇಽದ್ರಿಪುರತಾ ಯಥಾ ॥೫೩॥

ಅಕಾರಿ ಕಾರಣಾಭಾವಾಜ್ಜಾತಂ ಕಾರ್ಯಂ ನ ಕಿಂಚನ ।
ಮಹಾಪ್ರಲಯಚಿದ್ವ್ಯೋಮ್ನಿ ಚಿತ್ಸ್ಥಿತೇತ್ಥಮಿದಂತಯಾ ॥೫೪॥

೫೧. ಚಿದಾಕಾಶ ಪ್ರಕಾಶದಿಂದ ಚಿತ್‌ಗೆ ದೃಶ್ಯ ಪಿಶಾಚವು, ಮಕ್ಕಳ ಕಣ್ಣಿಗೆ ಕಾಣುವ ಪಿಶಾಚಿಕೆಯಂತೆ, ಅಸತ್ತಾದರೂ ಸತ್ ಎನ್ನುವಂತೆ ಕಾಣಿಸಿಕೊಳ್ಳುವುದು.

೫೨. ತನ್ನಲ್ಲಿ ಜಗತ್ತು ಇಲ್ಲದಿದ್ದರೂ ಚಿದಾಕಾಶವು ಅದನ್ನು ಇದ್ದಂತೆಯೇ ಅನುಭವಿಸುವುದು. ಸ್ವಪ್ನದಲ್ಲಿ ಅದ್ರಿಪುರಗಳನ್ನು ಕಾಣುವಂತೆಯೇ ಇದು.

೫೩. ನಾನು ಅದ್ರಿಯು, ನಾನು ರುದ್ರನು, ನಾನು ಸಮುದ್ರನು, ನಾನು ವಿರಾಟ್, ಎಂದು ಚಿತ್ತೇ ತನ್ನ ಆಕಾಶದಲ್ಲಿಯೇ, ಕನಸಿನ ಬೆಟ್ಟ ಪಟ್ಟಣಗಳಂತೆ, ಅನುಭವಿಸುವುದು.

೫೪. ಕಾರಣವೇ ಇಲ್ಲವಾಗಿ, ಆಕಾರಿಯಾದ ಕಾರ್ಯವು ಯಾವುದೂ ಹುಟ್ಟಲಿಲ್ಲ. ಮಹಾಪ್ರಲಯದ ಚಿದಾಕಾಶದಲ್ಲಿ ಈ ರೂಪವಾಗಿ ಚಿತ್ತೇ ಇರುವುದು.

ಅಕಾರಣಕಮೇವೇದಂ ವ್ಯೋಮ ವ್ಯೋಮ್ನಾನುಭೂಯತೇ ।
ಜಗದಿತ್ಯೇವ ಶೂನ್ಯಾಂಗಂ ಚಿನ್ಮಾತ್ರಾತ್ಮ ಚಿದಾತ್ಮನಿ ॥೫೫॥

ಸರ್ವ ಏವ ಜಡಾ ಜೀರ್ಣಾ ದರ್ಪಣಾ ಇವ ಜಂತವಃ ।
ಸವಿಪ್ರಾಪಗತ ಏವಾಂತಃ ಕುರ್ವತಸ್ತು ವಿಚಾರಣಂ ॥೫೬॥

ತತ್ತತ್ಸ್ವರೂಪಮುತ್ಸೃಜ್ಯ ಬುದ್ಧ್ವಾ ಚಿನ್ಮಾತ್ರಖಂ ಜಗತ್ ।
ಅಶ್ಮನಾ ಚೇತನೇನೈವ ಸ್ಥೇಯಂ ನಾಸ್ಥೇತರೋತ್ತಮಾ ॥೫೭॥

ಯಥಾಸ್ತೇ ಚಲಯದ್ದೇಹಂ ವಾರ್ಯಾವರ್ತಜಗದ್ದ್ರವಃ ।
ಚೇತತೀತಿ ತಥಾ ಚಿತ್ತ್ವಂ ಸ್ಥಿತಾ ಚಿತ್ತಜ್ಜಗದ್ದೃಶಾ ॥೫೮॥

---

೫೫. ಕಾರಣರಹಿತವಾಗಿ ಆಕಾಶವು ಆಕಾಶದಿಂದಲೇ ಅನುಭೂತವಾಗುವುದು. ಚಿದಾತ್ಮದಲ್ಲಿ ಚಿನ್ಮಾತ್ರ ಸ್ವರೂಪವಾದ ಜಗತ್ತೆಂಬ ಇದು ಶೂನ್ಯಾಂಗವು. (ನಿರವಯವವು.)

೫೬. ಸರ್ವಪ್ರಾಣಿಗಳೂ ದರ್ಪಣದಂತೆ (ಸ್ವಾಂತಃ ಪರಿಕಲ್ಪಿತ ಜಗದ್ಭೇದವುಳ್ಳವರಾಗಿ, ವಿಚಾರಾಭಾವದಿಂದ ಸ್ವರೂಪದರ್ಶನ ಪಡೆಯಲಾರದೆ) ಜಡರಾಗಿರುವರು. ಹೀಗಾಗಿ ವೃಥಾ ಜೀರ್ಣವಾಗುವರು. ವಿಚಾರಪರನಾದವನಿಗೆ ಪರಮಪುರುಷಾರ್ಥವು ತನ್ನೊಳಗೇ ಇದ್ದು ಪರಮ ಸಮೀಪದಲ್ಲಿರುವುದು.

೫೭. ಕಣ್ಣಿಗೆ ಕಾಣುವ ಬೇರೆಬೇರೆ ರೂಪವನ್ನು ಬಿಟ್ಟು ಜಗತ್ತೆಲ್ಲವೂ ಚಿದಾಕಾಶ ಮಾತ್ರವೇ ಎಂದು ತಿಳಿದು, ಬಂಡೆಯಂತೆ ಅಚಲವಾದ ಚೇತನರೂಪವಾದ ಚಿದೇಕ ಘನವಾಗಿ ನಿಲ್ಲತಕ್ಕದು. ಹಾಗಿಲ್ಲದೆ ಬೇರೆಯಾದ (ದೇಹಾದಿಗಳಲ್ಲಿ ಆಸ್ಥೆಯು) ವಿಹಿತವಲ್ಲ.

೫೮ ನೀರು ತನ್ನಲ್ಲಿ ತಾನೇ ತನ್ನ ದೇಹವನ್ನು ಚಲಿಸುತ್ತಾ ಆವರ್ತವಾಗಿ ಕಾಣುವಂತೆ, ವ್ಯಾಪಾರ ರೂಪವಾದ ಚಿತ್ತು ಜಗತ್ತಾಗಿ ಕಾಣುತ್ತ ಇರುವುದು.

ಯಥಾ ಕಲ್ಪದ್ರುಮೋಽಭೀಷ್ಟಂ ಕುರ್ಯಾಚ್ಚಿಂತಾಮಣಿರ್ಯಥಾ ।
ತಥಾ ಯದ್ಭಾವಿತಂ ಸ್ವಾಂತಸ್ತತ್ಸ್ಫಾರಯತಿ ಚಿತ್ಸ್ವಕಾತ್ ॥೫೯॥

ಚಿಚ್ಚಿಂತಾಮಣಿರಿವ ಕಲ್ಪದ್ರುಮ ಇವೇಪ್ಸಿತಂ ।
ಇದಂ ಸಂಪಾದಯತ್ಯಂತರಾತ್ಮನಾತ್ಮನಿ ಚಾತ್ಮನಾ ॥೬೦॥

ದೇಶಾದ್ದೇಶಾಂತರಪ್ರಾಪ್ತೌ ಮಧ್ಯೇ ಯಚ್ಚೇತಸೋ ವಪುಃ ।
ಯತ್ತನ್ಮಯಮಿದಂ ದೃಶ್ಯಂ ಕುತೋ ದ್ವೈತೈಕ್ಯವಿಭ್ರಮಃ ॥೬೧॥

ಚಿಚ್ಛಾಯೈವಂ ಕಚತ್ಯಚ್ಛಮನಂತಾ ಭಾಸ್ವರೋದರಾ ।
ಅಂಗರಿಕ್ತಾಪಿ ದೃಶ್ಯಾಂತಃ ಶೂನ್ಯತಾ ನೀಲತೇವ ಖೇ ॥೬೨॥

---

೫೯. ಕಲ್ಪವೃಕ್ಷವೂ ಚಿಂತಾಮಣಿಯೂ ಅಭೀಷ್ಟವನ್ನು ಕೊಡುವಂತೆಯೇ ಚಿತ್ತೂ ತನ್ನಲ್ಲಿ ಏನನ್ನು ಭಾವಿಸಿಕೊಂಡರೆ ಅದು ಆ ಕೂಡಲೇ ಆಗುವುದು.

೬೦. ಆಕಾಶರೂಪವಾಗಿರುವ ಚಿತಿಯು ಚಿಂತಾಮಣಿಯಂತೆ ಕಲ್ಪವೃಕ್ಷದಂತೆ ತನಗೆ ಬೇಕಾದುದನ್ನು ಆ ಕೂಡಲೇ ತನ್ನಲ್ಲಿಯೇ ತನ್ನಿಂದಲೇ ಸಂಪಾದಿಸಿಕೊಳ್ಳುವುದು.

೬೧. ದೇಶದಿಂದ ದೇಶಕ್ಕೆ ಹೋದಾಗ ನಡುವಿನ ದೇಶದಲ್ಲಿ ಕಾಣುವ ನಿರ್ವಿಷಯತ್ವವೇ ಚಿದ್ರೂಪವು. ದೃಶ್ಯವೆಲ್ಲ ಆ ಚಿತ್ತಿನಿಂದ ಪೂರ್ಣವಾಗಿರುವುದು. ಹೀಗಿರಲು ದ್ವೈತ, ಐಕ್ಯ, ಎಂಬ ವಿಭ್ರಮಕ್ಕೆ ಅವಕಾಶವೆಲ್ಲಿ?

೬೨. ಚಿತ್ತಿನ ಛಾಯೆಯು ಈ ರೀತಿಯಾಗಿ ಕಚಿಸುತ್ತಿರುವುದು. ಆ ಛಾಯೆಯೂ ಅಚ್ಛವಾಗಿ ಅನಂತವಾಗಿ ಪ್ರಕಾಶಗರ್ಭವಾಗಿರುವುದು. ಅದಕ್ಕೆ ಅಂಗವಿಲ್ಲವಾದರೂ, ಅಂತಶ್ಶೂನ್ಯವಾದ ಆಕಾಶವು ನೀಲವಾಗಿರುವಂತೆ, ದೃಶ್ಯವನ್ನು ತೋರುವುದು.

ವಿಸದೃಶಕಾರ್ಯಾನುಭವೋ ನ ಭವತಿ ಸಹಕಾರಿಕಾರಣಾಭಾವಾತ್ ।
ಸರ್ಗಾದಾವತ ಆದ್ಯಾ ಚಿದೇವ ದೃಶ್ಯಂ ಯಥಾ ಸ್ವಪ್ನೇ ॥೬೩॥

ಇತ್ಯಾರ್ಷೇ ವಾಸಿಷ್ಠಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ "ಕಾರ್ಯಕಾರಣನಿರಾಸೋ"
ನಾಮ ಷಡಧಿಕಶತತಮಃ ಸರ್ಗಃ

---

೬೩. ಸಹಕಾರಿ ಕಾರಣಗಳು ಇಲ್ಲವಾದ್ದರಿಂದ ಚೇತನವಾದ ಚಿತ್ತು ಸರ್ಗಾದಿಯಲ್ಲಿ ತನ್ನಿಂದ ಬೇರೆಯಾದ ಜಡವಾದ ಕಾರ್ಯವೊಂದನ್ನು ಅನುಭವಿಸುವಂತಿಲ್ಲ. ಆದರಿಂದ ಆದ್ಯವಾದ ಚಿತ್ತೇ ಸ್ವಪ್ನದಲ್ಲಿ ಹೇಗೋ ಹಾಗೆ ದೃಶ್ಯವಾಗುವುದು (ಎನ್ನಬೇಕು)

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಕಾರ್ಯಕಾರಣನಿರಾಸ" ಎಂಬ
ನೂರಾರನೆಯ ಸರ್ಗವು



## ಸಪ್ತಾಧಿಕಶತತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ—

ಅಚೇತ್ಯಚಿನ್ಮಯಂ ವಿಶ್ವಂ ವಿಶ್ವಗಾಭಾತಿ ಚಿನ್ನಭಃ ।
ಅತ್ರ ಚಿಚ್ಚೇತನಂ ಚೇದಂ ಚೇತ್ಯಮಪ್ಯೇವಮಾತ್ಮಕಂ ॥೧॥

ಅತೋ ಜೀವನ್ನಪಿ ಮೃತ ಇವ ಸರ್ವೋಽವತಿಷ್ಠತೇ ।
ಅಸಾವಹಂ ಚ ತ್ವಂ ಚೇತಿ ಜೀವಂತೋಽಪಿ ಮೃತಾ ಇವ ॥೨॥

---

## ನೂರೇಳನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧ ವಿಶ್ವವು ಚೇತ್ಯವಲ್ಲದ ಚಿತ್ತಿನಿಂದ ಆದುದು. ಚಿದಾಕಾಶವೇ ಎಲ್ಲೆಲ್ಲೂ ಆಭಾತವಾಗುತ್ತಿರುವುದು. ಇಲ್ಲಿ ಚಿತ್ತೇ ಚೇತನವು. ಇದೇ ಚೇತ್ಯವೂ ಆಗುವುದು ಎಲ್ಲವೂ ಚಿದಾತ್ಮಕವೇ !

(ವಿಶ್ವಸ್ಯ ಚೇತ್ಯಭಾವಮಪಲಪ್ಯ ಚಿನ್ಮಾತ್ರ ಭಾವಂ ಪರಿಶೇಷಯಿತುಂ ಪ್ರತಿ ಜಾನೀತೇ–ಯತಶ್ಚಿನ್ನಭ ಏವ ವಿಶ್ವಗಾಭಾತಿ । ತಥಾಚ ಚಿನ್ನಭೋ ಮಾತ್ರಾಧೀನ ಸಿದ್ಧಿಕತ್ವಾದಿತ್ಯನುಮಾನಂ ದರ್ಶಿತಂ । ಅತ್ರ ಚೇತಯತೀತಿ ಚಿತ್ ಚೇತನಂ ಕ್ರಿಯಾ ಚೇತ್ಯಂ ಚೇತಿ ತ್ರಿಪುಟೀ ಚಿನ್ಮಯೀತಿ ಪ್ರತಿಜ್ಞಾರ್ಥ ಇತ್ಯಾಹ— ಅತ್ರಾಸ್ಯಾಂ ಪ್ರತಿ ಜ್ಞಾಯಾಮೇವ ಮಾತ್ಮಕಂ ಶುದ್ಧ ಚಿದಾತ್ಮಕಂ ಪ್ರತಿಜ್ಞಾರ್ಥತ್ವೇನ ಅಭಿಪ್ರೇತಮಿತಿ ಶೇಷಃ—ತಾ. ಪ್ರ.)

೨. ಆದರಿಂದ ಎಲ್ಲವೂ ಜೀವಂತವಾಗಿದ್ದರೂ ಮೃತ್ಯವಾದಂತೆಯೇ ಇರು ವುದು. ಇವನು, ನಾನು, ನೀನು, ಸರ್ವರೂ ಬದುಕಿದ್ದರೂ ಮೃತರಾದಂತೆಯೇ !

ಕಾಷ್ಠಮೌನವ್ರತಾ ಏವ ವ್ಯವಹಾರಗತಾ ಅಪಿ।
ಖಗಮಾ ಏವ ವಾ ಸರ್ವೇ ಭಾವಾಃ ಸ್ಥಾವರಜಂಗಮಾಃ ॥೩॥

ಆಕಾಶಕಾಚಕಚ್ಯಾತ್ಮ ಯದಿದಂ ಕಿಂಚಿದುತ್ಥಿತಂ।
ನ ಕಿಂಚಿದೇವ ತದ್ವಿದ್ಧಿ ಕಿಂಚಿದ್ವ್ಯೋಮ್ನಿ ಕುತೋ ಭವೇತ್ ॥೪॥

ಕೇಶೋಂಡ್ರಕನದೀವಾಹಧೂಮಾಲೀಮೌಕ್ತಿಕಾದಿವತ್।
ಯತ್ಖಂ ಕಚತಿ ತತ್ರಾಸ್ತಿ ನಾನುಭೂತೇಽಪಿ ವಸ್ತುತಾ ॥೫॥

(ಪ್ರತಿಜ್ಞಾ ಸಿದ್ಧೇಃ ಫಲದ್ವಯಂ। ಸ್ಥಿತಸ್ಯೈವ ಜಗತೋ ಜಗದ್ಭಾವನಿವೃತ್ತಿಃ ಜೀವತಾಮೇವ ಅಸ್ಮಾಕಂ ಜೀವಭಾವನಿವೃತ್ತಿಶ್ಚ-ತಾ. ಪ್ರ.)

೩. ವ್ಯವಹಾರದಲ್ಲಿದ್ದರೂ ಕಾಷ್ಠಮೌನವನ್ನು ಹೊಂದಿದವರೇ ಆಗಿರಲು, ಸ್ಥಾವರಜಂಗಮ ಭಾವಗಳೆಲ್ಲ ಆಕಾಶದಲ್ಲಿ ಹಾರಿಹೋಗುವುವು.

(ಸರ್ವ ಭಾವಾನಾಂ ಕೌಟಸ್ಥ್ಯ ಅಮೂರ್ತತಾ ಸಿದ್ಧಿರ್ವಾ ತತ್ಫಲಮಿತ್ಯಾಹ- ಕಾಷ್ಠಮೌನ ಮಾತ್ಯಂತಿಕ ನಿಷ್ಕ್ರಿಯತಾ ಲಕ್ಷಣಂ ಕೌಟಸ್ಥ್ಯಂ ವ್ರತಾಃ ಪ್ರಾಪ್ತಾಃ ಖೇ ಗಮನಂ ಗಮಃ ಆತ್ಯಂತಿಕಾ ಮೂರ್ತಭಾವ ಪ್ರಾಪ್ತಿರ್ಯೇಷಾಂ — ತಾ. ಪ್ರ.)

೪. ದೃಶ್ಯವಾಗಿ ಹರಡಿರುವುದು ಯಾವುದುಂಟೋ ಅದು ಎಲ್ಲವೂ ಆಕಾಶದ ಕಾಚಕಚ್ಯವು. ಇನ್ನೇನೂ ಅಲ್ಲ ಎಂದು ತಿಳಿ, ಆಕಾಶದಲ್ಲಿ ಏನು ಎಲ್ಲಿಂದ ಬಂದೀತು ?

೫. ಆಕಾಶದಲ್ಲಿ ಕಾಣುವ ಕೇಶೋಂಡ್ರಕಗಳಂತೆ, ನದಿಯಲ್ಲಿ ಬರುವ ಪ್ರವಾಹದಂತೆ, ಧೂಮವು ಹರಡುವಿಕೆಯಂತೆ, ಮೌಕ್ತಿಕಾದಿಗಳಂತೆ, ವಸ್ತುತೆಯು ಅನುಭೂತವಾದರೂ ಅದು ಆಕಾಶದ ಕಚನವೇ ಹೊರತು ಇನ್ನೇನೂ ಇಲ್ಲ.

ತದೈವಾಸ್ಮಿನ್ ಜಗನ್ನಾಮ್ನಿ ಚಿದ್ವ್ಯೋಮ್ನಿ ಕಚನೇ ಚಿತೇಃ ।
ಅನುಭೂತೇಽಪಿ ನಿಃಶೂನ್ಯೇ ಕಾಸ್ಥಾಸ್ಥಾಭಾವಕಸ್ತು ಕಃ ॥೬॥

ಚಿದ್ಬಾಲಕಲ್ಪನಾಜಾಲೇ ಶೂನ್ಯಾತ್ಮನಿ ನಿರರ್ಥಕೇ ।
ಅವಸ್ತುಭೂತೇ ಪೃಥ್ವ್ಯಾದೌ ಭ್ರಾಂತಿಮಾತ್ರಾಂಬರೋದಯೇ ॥೭॥

ಕಿಮಾಸ್ಥಾ ಬಾಲಕಾ ಬ್ರೂತ ಮಮೇದಮಹಮಿತ್ಯಲಂ ।
ಆ ಜ್ಞಾತಂ ರಮತೇ ಬಾಲಸಂಕಲ್ಪೇ ಬಾಲ ಏವ ಚ ॥೮॥

ಪೃಥ್ವ್ಯಾದ್ಯಸದ್ವಿಚಾರೈರ್ವಾ ವ್ಯರ್ಥಂ ಯಾಸ್ಯತಿ ಜೀವಿತಂ ।
ಕಿಂಚಿಜ್ಜ್ಞ ನ ಜ್ಞಾಸ್ಯತಿ ಭೋ ಆಕಾಶಕ್ಷಾಲನೋದ್ಯತಃ ॥೯॥

೬. ಹೀಗೆ, ಜಗತ್ತಾಗಿ ತೋರುವ ಈ ಚಿದಾಕಾಶದಲ್ಲಿ ಚಿತ್ ಕಚನವು ಅನುಭೂತವಾದರೂ ಸಂಪೂರ್ಣವಾಗಿ ಶೂನ್ಯವಾಗಿರುವ ಜಗತ್ತಿನಲ್ಲಿ ಏನು ಆಸ್ಥೆ ? ಆಸ್ಥೆಯನ್ನುಂಟುಮಾಡುವ ವಸ್ತುವಾದರೂ ಯಾವುದು ?

೭. ಚಿತ್ತೆಂಬ ಬಾಲಕನು ಕಲ್ಪಿಸಿಕೊಂಡಿರುವ ಈ ಜಾಲದಲ್ಲಿ, ಶುದ್ಧವಾಗಿ ನಿರರ್ಥವಾಗಿರುವ ಶೂನ್ಯಾತ್ಮಕವಾಗಿ ಅವಸ್ತು ಭೂತವಾಗಿರುವ ಪೃಥಿವ್ಯಾದಿಗಳಲ್ಲಿ, ಭ್ರಾಂತಿಮಾತ್ರವಾಗಿರುವ ಆಕಾಶದಲ್ಲಿ,

೮. ಅಯ್ಯೋ ಬಾಲಕರಿರಾ ! ಮಮ, ಇದಂ ಅಹಂ, ಎಂಬ ಈ ಆಸ್ಥೆಯನ್ನು ಕಡಿಮೆಮಾಡಿರಿ, ಆ ! ತಿಳಿಯಿತು. ಬಾಲಸಂಕಲ್ಪದಲ್ಲಿ ಬಾಲಕನೇ ರಮಿಸುತ್ತಿರುವನು.

೯. ಪೃಥಿವ್ಯಾದಿ ಅಸದ್ವಿಚಾರಗಳಲ್ಲಿ ಜೀವಿತವು ವ್ಯರ್ಥವಾಗಿ ಹೋಗುತ್ತಿರುವುದು. ಭೋಃ ! ಆಕಾಶವನ್ನು ತೊಳೆಯಬೇಕೆಂದು ಕೊಂಡವನಿಗೆ ಏನಾದರೂ ತಿಳಿವಳಿಕೆಯುಂಟೇ ?

ಸಹಕಾರ್ಯಾದಿಪೂರ್ವಾಣಾಂ ಕಾರಣಾನಾಮಭಾವತಃ ।
ಯದಾದಾವೇವ ನೋತ್ಪನ್ನಂ ತನ್ನಾಮಾದ್ಯ ಭವೇತ್ಕುತಃ ॥೧೦॥

ಅಜಾತೇನಾಸತಾರ್ಥೇನ ಖೇ ನ ವ್ಯವಹರಂತಿ ಯೇ ।
ಮೂಢಾ ಮೃತಮಜಾತಂ ವಾ ತನಯಂ ಪಾಲಯಂತಿ ತೇ ॥೧೧॥

ಕುತಃ ಪೃಥ್ವ್ಯಾದಯಃ ಕೇನ ಕೇ ನಾಮ ಕಥಮುತ್ಥಿತಾಃ ।
ಚಿದ್ವ್ಯೋಮೇತ್ಥಮಿದಂ ಶಾಂತಂ ಪ್ರಕಚತ್ಯಾತ್ಮನಾತ್ಮನಿ ॥೧೨॥

ಕಾರ್ಯಕಾರಣಕಾಲಾದಿಕಲ್ಪನಾಕುಲಚೇತಸಾಂ ।
ಏವಂ ಪೃಥ್ವ್ಯಾದಯಃ ಸಂತಿ ತೈರ್ಬಾಲೈರಲಮಸ್ತು ನಃ ॥೧೩॥

---

೧೦. ಸಹಕಾರಿ ಮೊದಲಾದ, ಮೊದಲಿರಬೇಕಾದ ಕಾರಣಗಳು ಇಲ್ಲದಿರಲು ಮೊದಲಲ್ಲೇ ಕಾರ್ಯವಾಗಿ ಕಾಣದ್ದು ಈಗ ಎಲ್ಲಿಂದ ಬಂದೀತು ?

೧೧. ಅಜಾತವಾಗಿ ಅಸತ್ತಾಗಿರುವ ಅರ್ಥವಾಗಿರುವ ಆಕಾಶದಿಂದ ಯಾರು ವ್ಯವಹಾರ ಮಾಡುವರೋ ಅವರು ಮೃತನೋ ಅಜಾತನೋ ಆದ ತನಯನನ್ನು ಪಾಲಿಸುವನೆನ್ನುವ ಮೂಢರು.

೧೨. ಪೃಥಿವ್ಯಾದಯಗಳು ಎಲ್ಲಿಂದ, ಯಾರಿಂದ, ಏನಾಗಿ, ಹೇಗೆ ಬಂದುವು ? ಶಾಂತವಾಗಿರುವ ಚಿದಾಕಾಶವೇ ಆತ್ಮನಾ ಆತ್ಮನಿ ಹೀಗೆ ಕಚನಮಾಡಿತು

೧೩. ಕಾರ್ಯಕಾರಣ ಕಾಲಾದಿ ಕಲ್ಪನೆಗಳಿಂದ ಆಕುಲವಾದ ಮನಸ್ಸುಳ್ಳವರಿಗೆ ಈ ಪೃಥಿವ್ಯಾದಿಗಳೆಲ್ಲ ಉಂಟು. ಅಂತಹ ಬಾಲಬುದ್ಧಿಯವರಿಂದ ನಮಗೆ ಆಗಬೇಕಾದುದೇನು ?

ಅಪೃಥ್ವ್ಯಾದಿ ಜಗನ್ನಾಮ ಸಪೃಥ್ವ್ಯಾದಿ ಚ ಖಾತ್ಮಕಂ ।
ಕಚತೀತ್ಥಂ ನಭೋರೂಪಂ ಸ್ವಪ್ನಾದಿಷ್ವಿವ ಚಿನ್ಮಯಃ ॥೧೪॥

ಅಂಗಂ ಯದೇತಸ್ಯ ಚಿದಂಬರಸ್ಯ ನಿರಾಕೃತಿ ಸ್ವಾನುಭವಾನುಮಾನಂ ।
ತದೇತದಾಭಾತಿ ಮಹೀತಲಾದಿ ರೂಪೇಣ ವೇದ್ಯೇತಿ ಕೃತಾಭಿಧಾನಂ ॥೧೫॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ "ಅವಿದ್ಯಾಭಾವಪ್ರತಿಪಾದನಂ" ನಾಮ ಸಪ್ತಾಧಿಕಶತತಮಃ ಸರ್ಗಃ

---

೧೪. ಅಪೃಥಿವ್ಯಾದಿಗಳೇ ಜಗತ್ತೆಂದು ಪ್ರಸಿದ್ಧವಾದವು. ಸಪೃಥಿವ್ಯಾದಿಗಳೆಲ್ಲವೂ ಕೇವಲ ಚಿದಾಕಾಶವು ಆಕಾಶವೇ ರೂಪವಾಗುಳ್ಳ ಚಿನ್ಮಣಿಯು ಕನಸಿನಲ್ಲಿ ಹೇಗೋ ಹಾಗೆ ಜಗದ್ರೂಪವಾಗಿ ಕಚನಮಾಡುವುದು

೧೫. ಈ ಚಿದಾಕಾಶದ ಅಂಗವು ನಿರಾಕೃತಿಯು, ತನ್ನ ಅನುಭವವನ್ನೇ ಪ್ರಮಾಣವಾಗಿ ಉಳ್ಳದು. ಅದೇ ಮಹೀತಲಾದಿಯಾಗಿ ಆಭಾತವಾಗುವುದು. ಆಗ ಅದಕ್ಕೆ ವೇದ್ಯವೆಂಬ ಹೆಸರು ಬರುವುದು

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ "ಅವಿದ್ಯಾಭಾವ ಪ್ರತಿಪಾದನ" ಎಂಬ ನೂರೇಳನೆಯ ಸರ್ಗವು

## ಅಷ್ಟಾಧಿಕಶತತಮಃ ಸರ್ಗಃ

ಶ್ರೀರಾಮ ಉವಾಚ —

ಅವಿದ್ಯಾ ದೃಶ್ಯರೂಪೇಯಂ ಕಚಂತೀ ಯಸ್ಯ ವಿದ್ಯತೇ ।
ಚಿನ್ನಭಃಸ್ವಪ್ನನಗರೀ ದೃಶ್ಯಮಾನಾಪಿ ಶೂನ್ಯಕಾ ॥೧॥

ತಸ್ಯಾಜ್ಞಸ್ಯ ಕಿಯತ್ಕಾಲಂ ಕಿಂರೂಪಾ ಸ್ಯಾತ್ಕಿಮಾತ್ಮಿಕಾ ।
ಕಿಯತೀ ಸಾ ಚ ವೇತ್ಸ್ಯೇವಂ ಮುನೇ ಮೇ ಕಥ್ಯತಾಂ ಪುನಃ ॥೨॥

---

## ನೂರೆಂಟನೆಯ ಸರ್ಗವು

ಶ್ರೀರಾಮನು ಕೇಳಿದನು —

೧ ಚಿದಾಕಾಶದ ಸಪ್ನನಗರಿಯಂತೆ ದೃಶ್ಯಮಾನವಾಗಿದ್ದರೂ ಶೂನ್ಯಕವಾಗಿರುವ ದೃಶ್ಯರೂಪವಾಗಿ ಕಚನಮಾಡುತ್ತಿರುವ ಈ ಅವಿದ್ಯೆಯು ಯಾವನಿಗೆ ಉಂಟೋ,

೨. ಅಂತಹ ಅಜ್ಞನಿಗೆ ಆ ಅವಿದ್ಯೆಯು ಎಷ್ಟುಕಾಲ ಇರುವುದು? ಏನಾಗಿ ಇರುವುದು? ಅದು ಎಷ್ಟರದಾಗಿ ಇರುವುದು? ಇದೆಲ್ಲವನ್ನೂ, ಎಲೈ ಮುನೀಂದ್ರನೇ, ನನಗೆ ಮತ್ತೆ ಹೇಳು

(ವರ್ಣಿತಾಯಾಃ ಸಂಸೃತಿರೂಪಾಯಾಃ ಅವಿದ್ಯಾಯಾಃ ತತ್ವಜ್ಞಾನೇನ ತ್ರೈಕಾಲಿಕಾ ಸತ್ತಾನಿವೃತ್ತಿ ಲಕ್ಷಣಂ ಬಾಧಂ ವಿನಾಪಿ ದೇಶತಃ ಕಾಲತೋ ವಾ ಅಂತಃ ಸಂಭವತಿ ನವೇತಿ ಸಂದಿಹಾನೋ ರಾಮಃ ಪೃಚ್ಛತಿ—ತಾ ಪ್ರ)

ಶ್ರೀ ವಸಿಷ್ಠ ಉವಾಚ:—

ಅವಿದ್ಯಾ ವಿದ್ಯತೇ ಯೇಷಾಮಜ್ಞಾನಾಂ ಭೂತಲಾದಿಕಾ ।
ತೇಷಾಮಸ್ಯಾಂ ಬ್ರಹ್ಮಣೀವ ನಾಸ್ತ್ಯಂಶೋಽತ್ರ ಕಥಾಂ ಶೃಣು ॥೩॥

ಸದೃಶಂ ಜಗತೋಽಸ್ಯಾಸ್ತಿ ಕ್ವಚಿದಂಬರಕೋಣಕೇ ।
ಕಸ್ಮಿಂಶ್ಚಿತ್ರಿಜಗತ್ಕಾಂಚಿದನಯೈವ ವ್ಯವಸ್ಥಯಾ ॥೪॥

ಅಸ್ತಿ ಕಶ್ಚಿನ್ಮಹೋ ಭಾಗೋ ಭೂಷಣಾಂ ತತ್ರ ಭೂಸ್ಥಿತೇಃ ।
ಪುರೀ ತತವಿರ್ಗತಿನಾಮ್ನಾ ಸುವ್ಯಕ್ತಕಲನಾವನಾ ॥೫॥

ತತ್ರಾಸೀತ್ಪಾರ್ಥಿವಃ ಕಶ್ಚಿದ್ವಿಪಶ್ಚಿದಿತಿ ವಿಶ್ರುತಃ ।
ಯಃ ಸಭಾಯಾಂ ಸುಸಭ್ಯಾಯಾಂ ವಿಪಶ್ಚಿತ್ತ್ವಾದ್ವಿರಾಜತೇ ॥೬॥

---

ವಸಿಷ್ಠನು ಹೇಳಿದನು:

೩. ಯಾವ ಅಜ್ಞರಿಗೆ ಭೂತಲಾದಿಗಳುಂಟೆಂಬ ಅವಿದ್ಯೆಯು ಇರುವುದೋ ಅವರಿಗೆ ಬ್ರಹ್ಮಕ್ಕೆ ಹೇಗೋ ಹಾಗೇ ಅವಿದ್ಯಾಂಶವಿಲ್ಲ: ಈ ವಿಷಯಕವಾದ ಕಥೆಯನ್ನು ಕೇಳು.

(ಬ್ರಹ್ಮಣಿ ಯಥಾ ದೇಶತಃ ಕಾಲತೋವಾ ಅಂಶೋ ನಾಸ್ತಿ ತದ್ವದಸ್ಯಾಮಪಿ—ತಾ. ಪ್ರ.)

೪. ಈ ಜಗತ್ತಿಗೆ ಸದೃಶವಾದ ಜಗತ್ತೊಂದು ಒಂದಾನೊಂದು ಆಕಾಶದ ಮೂಲೆಯಲ್ಲಿ ಇಲ್ಲಿರುವ ವ್ಯವಸ್ಥೆಯಿಂದಲೇ ಕೂಡಿ ಇರುವುದು.

೫. ಆ ಭೂಮಂಡಲಕ್ಕೆ ಭೂಷಣವಾಗಿರುವ ಒಂದು ಭೂಭಾಗದಲ್ಲಿ ಚೆನ್ನಾಗಿರುವ ಒಂದುಕಡೆ ತತಮಿತಿ ಎಂಬ ಹೆಸರಿನ ನಗರವಿರುವುದು.

೬. ಅಲ್ಲಿ ವಿಪಶ್ಚಿತ್ ಎಂದು ಪ್ರಸಿದ್ಧನಾದ ರಾಜನೊಬ್ಬನಿದ್ದನು. ಆತನು ಯೋಗ್ಯರಾದ ಸಭಿಕರುಳ್ಳ ತನ್ನ ರಾಜಸಭೆಯಲ್ಲಿ ವಿದ್ವಾಂಸನೆಂದು ವಿರಾಜಿಸುವನು.

ರಾಜಹಂಸ ಇವಾಬ್ಜಿನ್ಯಾವೃಕ್ಷಚಕ್ರ ಇವೋಡುರಾಟ್ ।
ಸುಮೇರುರಿವ ಶೈಲೌಘೇ ಯಃ ಸಭಾಯಾಮರಾಜತ ॥೭॥

ನಿವರ್ತಕೇ ಯತೋ ಶಕ್ತ್ಯಾ ವಚಸಾಂ ಗುಣವರ್ಣನಾತ್ ।
ಕವೀನಾಮಚಲಾಕಾರಾ ಭವೇದ್ವಾ ಭೂಧರೋ ಯಥಾ ॥೮॥

ಪ್ರಾತಃಪ್ರಾತರ್ವಿಕಸಿತಾತ್ಸರ್ವಾಶಾಭಾಸನೋದ್ಯತಾತ್ ।
ಯತಃ ಪ್ರತಾಪಜನಿತಶ್ರೀರುದೇತ್ಯಂಬುಜಾದಿವ ॥೯॥

ಸ ಬ್ರಹ್ಮಣ್ಯಮತಿರ್ಮಾನೀ ವಹ್ನಿಮೇವಾಧಿದೈವತಂ ।
ಅಪೂಜಯತ್ಸಮಂ ಭಕ್ತ್ಯಾ ದೇವಂ ವೇತ್ತಿ ಸ್ಮ ನೇತರಂ ॥೧೦॥

---

೭. ಕಮಲಷಂಡಗಳಲ್ಲಿರುವ ರಾಜಹಂಸನಂತೆ, ನಕ್ಷತ್ರ ಚಕ್ರದಲ್ಲಿರುವ ತಾರಾಪತಿಯಂತೆ, ಪರ್ವತಗಳಲ್ಲಿ ಸುಮೇರುವಿನಂತೆ, ಆತನು ಸಭೆಯಲ್ಲಿ ವಿರಾಜಿಸುತ್ತಿದ್ದನು.

೮. ಆತನ ಸುಗುಣಗಳನ್ನು ವರ್ಣಿಸಲು ಶಕ್ತಿ ಸಾಲದೆ, ಕವಿವಾಕ್ಯೋ ಹಿಂತಿರುಗುವನು ಮೇರು ಪರ್ವತವು (ತನ್ನನ್ನು ಆಶ್ರಯಿಸಿದವರನ್ನು ತನ್ನ ಸ್ಥಿರಕಾಂತಿಯಿಂದ ಸ್ವರ್ಣೀಕರಣ ಮಾಡುವಂತೆ) ಹೇಗೋ ಹಾಗೆ ತನ್ನ ಆಶ್ರಿತರನ್ನು ಸುವರ್ಣದಾನದಿಂದ ಸಂತೋಷಪಡಿಸುವನು.

೯. ದಿನದಿನವೂ ಅರಳುತ್ತಿರುವ, ಎಲ್ಲಾ ದಿಕ್ಕುಗಳನ್ನೂ ಬೆಳಗುತ್ತಿರುವ ಆತನ ಪ್ರತಾಪದಿಂದ ಲಕ್ಷ್ಮಿಯು ಕಮಲದಿಂದ ಎದ್ದುಬಂದಂತೆ ಬರುತ್ತಿರುವಳು.

೧೦. ಆತನು ಬ್ರಾಹ್ಮಣಹಿತವಾದ ಮತಿಯುಳ್ಳವನು. ಅಗ್ನಿಯನ್ನೇ ದೈವವನ್ನಾಗಿ ಒಪ್ಪಿಕೊಂಡು ಆತನನ್ನು ಭಕ್ತಿಯಿಂದ ಆರಾಧಿಸುತ್ತಿದ್ದನು. ಇನ್ನು ಯಾರನ್ನೂ ದೈವವೆಂದು ಅಂಗೀಕರಿಸಿರಲಿಲ್ಲ.

(ಬ್ರಹ್ಮಣ್ಯಾ ಬ್ರಾಹ್ಮಣಹಿತಾ ಮತಿರ್ಯಸ್ಯ ಅತ ಏವ ದೇವೇಷು ವಹ್ನೇ ಬ್ರಾಹ್ಮಣತ್ವಾತ್ ವಹ್ನಿಮೇವಾಧಿ ದೈವತಂ ದೇವೇಷು ಅಪೂಜ ಯತ್, ತಥಾಚ ಅಗ್ನ್ಯುಪಸ್ಥಾನೇ ಮಂತ್ರಃ "ತ್ವಂ ದೇವೇಷು ಬ್ರಾಹ್ಮಣೋಽಸ್ಮ್ಯಹಂ ಮನುಷ್ಯೇಷು ಬ್ರಾಹ್ಮಣೋ ಹಿ ಬ್ರಾಹ್ಮಣಮುಪಧಾವತಿ–ಉಪತ್ವಾಧಾವಾಮಿ–ಇತಿ" ತದಗ್ನಿ ನೈವ ದೇವೇಷು ಬ್ರಹ್ಮಾಭವತ್, ಇತಿ ಚ ವಾಜಸನೇಯಕೇ–ತಾ. ಪ್ರ.)

ದೇವದೋರ್ದ್ರುಮವಿಶ್ರಾಂತಧರಾಗೋಬಂಧನಾಚ್ಯುತ ।
ಶ್ರೂಯತಾಂ ಮನ್ಮುಖಾತ್ಪಶ್ಚಾದ್ಯಥಾಪ್ರಾಪ್ತಂ ವಿಧೀಯತಾಂ ॥೧೫॥

ಪೂರ್ವದಿಙ್ಮುಖಸಾಮಂತೋ ಜ್ವರೇಣಾಸ್ತಮುಪಾಗತಃ ।
ಮನ್ಯೇ ಜೇತುಂ ಯಮಂ ಯಾತಸ್ತ್ವಯಾರಬ್ಧೋ ಜಿತಾರಿಣಾ ॥೧೬॥

ತಸ್ಮಿನ್ಸ್ವಂತತತೋ ಜೇತುಂ ದಕ್ಷಿಣಾಪಥನಾಯಕಃ ।
ಪೂರ್ವಾಪರಾಭ್ಯಾಮಾಕ್ರಮ್ಯ ಬಲಾಭ್ಯಾಮರಿಣಾ ಹತಃ ॥೧೭॥

ತಸ್ಮಿನ್ಮೃತೇ ಸಮಾಗಮ್ಯ ಯಾವದ್ವಾರುಣದಿಕ್ಪತಿಃ ।
ಬಲೇನಾಯಾತಿ ಕಕುಭೌ ತೇ ಸಮಾದಾತುಮಾದೃತಃ ॥೧೮॥

---

೧೫. ಕಲ್ಪವೃಕ್ಷದಂತಿರುವ ಬಾಹುಗಳಲ್ಲಿ ವಿಶ್ರಾಂತವಾದ ಅವನಿಯುಳ್ಳ ಅಚ್ಯುತನಾದ ಮಹಾರಾಜನೇ, ನಾನು ಹೇಳುವುದನ್ನು ಕೇಳಿ, ಏನುಮಾಡಬೇಕೆಂಬುದನ್ನು ವಿಧಾಯಕಮಾಡು.

೧೬. ಪೂರ್ವದಿಕ್ಕಿನಲ್ಲಿ ನಿನ್ನ ಸಾಮಂತನಾಗಿದ್ದವನು ಜ್ವರದಿಂದ ಅಸ್ತಂಗತನಾದನು. ಶತ್ರುಂಜಯನಾದ ನೀನು ಆರಂಭಿಸಿದ ಕಾರ್ಯವನ್ನು ಮುಗಿಸಲು ಯಮನನ್ನು ಗೆಲ್ಲುವುದಕ್ಕೇನಾದರೂ ಹೋದನೋ ಏನೋ ?

೧೭. ದಕ್ಷಿಣಾಪಥನಾಯಕನು ರಾಜ್ಯವನ್ನೆಲ್ಲಾ ಗೆಲ್ಲುವುದಕ್ಕೆ ಹೋಗಿ ಪೂರ್ವಪಶ್ಚಿಮ ದಿಕ್ಕುಗಳಿಂದ ಬಂದ ಸೇನೆಗೆ ಸಿಕ್ಕಿ ಹತನಾದನು.

೧೮. ಅವನು ಹಾಗೆ ಮೃತನಾಗಲು, ಪಶ್ಚಿಮ ದಿಕ್ಪತಿಯು ಆ ಎರಡು ದಿಕ್ಕುಗಳನ್ನೂ ತೆಗೆದುಕೊಳ್ಳಲು ಸೇನೆಯೊಡನೆ ಬಂದನು.

ಪೂರ್ವದೇಶನೃಪೈಃ ಸಾರ್ಧಂ ದಕ್ಷಿಣಾಪಥಪಾರ್ಥಿವೈಃ ।
ತಾವದೇವಾಂಭಿರಸಾವರ್ಧಮಾರ್ಗೇ ರಣೇ ಹತಃ ॥೨೯

ಶ್ರೀ ವಸಿಷ್ಠ ಉವಾಚ:—
ಅಥಾಸ್ಮಿನ್ಕಥಯತ್ಯೇವಂ ತ್ವರಾತುರಮಪರಸ್ಸರಃ ।
ಜಲಪ್ಲವೋ ಜಡೋತ್ಕ್ರೀಡ ಇವ ಹರ್ಮ್ಯಂ ವಿವೇಶ ಹ ॥೩೦

ಚರ ಉವಾಚ:—
ಉತ್ತರಾಶಾಬಲಾಧ್ಯಕ್ಷೋ ದೇವಾರಿಭಿರುಪದ್ರುತಃ ।
ಇತ ಆಯಾತಿ ಸಬಲೋ ಭಗ್ನಸೇತ್ವಂಬುಪೂರವತ್ ॥೩೧॥

ಶ್ರೀ ವಸಿಷ್ಠ ಉವಾಚ:—
ಇತಿ ಶ್ರುತ್ವಾ ಮಹೀಪಾಲಃ ಕಾಲಕ್ಷೇಪಸಮುತ್ತಮಂ ।
ಪ್ರಸ್ಥಾನ ಉವಾಚೇದಂ ನಿರ್ಗಚ್ಛನ್ಸ್ವರಮಂದಿರಾತ್ ॥೩೨॥

---

೨೯. ಪೂರ್ವ ದಿಕ್ಕಿನ ನೃಪತಿಗಳೂ ದಕ್ಷಿಣ ದಿಕ್ಕಿನ ನೃಪತಿಗಳೂ ಸೇರಿ ತಮ್ಮ ಮೇಲೆ ದಂಡೆತ್ತಿ ಬಂದ ಪಶ್ಚಿಮ ದಿಕ್ಸಾಮಂತನನ್ನು ಅರ್ಧ ಮಾರ್ಗದಲ್ಲಿಯೇ ಯುದ್ಧ ಮಾಡಿ ಕೊಂದರು.

೩೦. ಅವನು ಹೀಗೆ ಹೇಳುತ್ತಿರಲು, ಅರಸನು ಆತುರದಿಂದ ಕೇಳುತ್ತಿರಲು, ಇನ್ನೊಬ್ಬ ಚರನು ಪ್ರಲಯಕಾಲದ ಜಲ ಪ್ರವಾಹದ ಹಾಗೆ ಅರಮನೆಯನ್ನು ಹೊಕ್ಕನು.

ಚರನು ಹೇಳಿದನು:—

೩೧. ಉತ್ತರ ದಿಕ್ಕಿನ ಅಧ್ಯಕ್ಷನು, ಎಲೈ ದೇವನೆ, ಶತ್ರುಗಳಿಂದ ಓಡಿಸಲ್ಪಟ್ಟು ತನ್ನ ಸೈನ್ಯದೊಡನೆ, ಕಟ್ಟೆ ಯೊಡೆದ ನುಗ್ಗಿದ ನೀರಿನಂತೆ ಬರುತ್ತಿರುವನು.

ಶ್ರೀ ವಸಿಷ್ಠನು ಹೇಳಿದನು:—

೩೨. ಅರಸನು ಹೀಗೆ ಹೇಳಿದ ಅವರ ಮಾತುಗಳನ್ನು ಕೇಳಿ ಅದನ್ನು ಸುಳ್ಳೆಂದು ಕೊಂಡು ಅರಮನೆಯಿಂದ ಹೊರಡುತ್ತ ಹೀಗೆ ಹೇಳಿದನು:—

ರಾಜ್ಞಃ ಸಸ್ನಹ್ಯ ಸಾಮಂತಾನಾನೀಯಂತಾಂ ಚ ಮಂತ್ರಿಣಃ ।
ಉದ್ಘಾಟ್ಯಂತಾಂ ಹೇತಿಶಾಲಾ ದೀಯಂತಾಂ ಘೋರಹೇತಯಃ ।೩೩॥

ಶ್ಲೇಷ್ಯಂತಾಂ ಕಂಕಟಾ ದೇಹೇಷ್ವಾಗಚ್ಛಂತು ಪದಾತಯಃ।
ಗಣ್ಯಂತಾಮಾಶು ಸೈನ್ಯಾನಿ ಕ್ರಿಯಂತಾಂ ವರಕಲ್ಪನಾಃ ।೩೪॥

ಕಲ್ಪ್ಯಂತಾಂ ಚ ಬಲಾಧ್ಯಕ್ಷಾಃ ಪ್ರೇಷ್ಯಂತಾಮುಚಿತಶ್ಚರಾಃ ।
ವದತ್ಯೇವಂ ತ್ವರಾಯುಕ್ತಂ ಸಂರಂಭವತಿ ರಾಜನಿ ॥೩೫॥

ಪ್ರತೀಹಾರ ಉಪಾಜೇದಂ ಪ್ರವಿಶ್ಯಾಕುಲಮಾನತಃ । ॥೩೬॥

ಪ್ರತಿಹಾರ ಉವಾಚ:—

ಉತ್ತರಾಶಾಬಲಾಧ್ಯಕ್ಷೋ ದೇವ ದ್ವಾರ್ಯವತಿಷ್ಠತಿ ।
ಕಾಂಕ್ಷತ್ಯಬ್ಜಮಿವಾರ್ಕಸ್ಯ ದೇವದೇವಸ್ಯ ದರ್ಶನಂ ॥೩೭॥

---

೩೩. ಸಾಮಂತ ನರಪತಿಗಳನ್ನು ಕರೆಯಿಸಿರಿ. ಆಯುಧ ಶಾಲೆಯನ್ನು ತೆಗೆಯಿರಿ. ಘೋರವಾದ ಆಯುಧಗಳನ್ನು ಕೊಡಿರಿ. ಸಿದ್ಧರಾಗಿರಿ.

೩೪. ದೇಹಗಳಲ್ಲಿ ಕಂಕಟ (ಕವಚ)ಗಳನ್ನು ತೊಡಿರಿ. ಪದಾತಿಗಳು ಬರಲಿ. ಸೈನ್ಯಗಳನ್ನು ಕೂಡಲೆ ಗಣಿಸಿರಿ. ವರಕಲ್ಪನೆಗಳು ಆಗಲಿ.

೩೫. (ಏನೇನು ಆಗಬೇಕೋ ಆಗಲಿ.) ಬಲಾಧ್ಯಕ್ಷರನ್ನು ನಿಯಮಿಸಿರಿ. ಮುಂದೆ ಚರರು ನಡೆಯಲಿ.

೩೬. ಹೀಗೆ ತ್ವರೆಯಿಂದ ರಾಜನು ಕಾರ್ಯ ತತ್ಪರನಾಗಿ ಹೇಳುತ್ತಿರಲು, ಪ್ರತೀಹಾರನು ಬಂದು ವ್ಯಾಕುಲ ಪಡುತ್ತಾ ಹೀಗೆ ಹೇಳಿದನು.

ಪ್ರತೀಹಾರನು ಹೇಳಿದನು:—

೩೭. ಉತ್ತರದಿಕ್ಪಾಲಕನು, ದೇವ, ಬಾಗಿಲಲ್ಲಿರುವನು. ಕಮಲವು ಸೂರ್ಯ ದರ್ಶನವನ್ನು ಬಯಸುವಂತೆ ದೇವದೇವರಾದ ತಮ್ಮ ದರ್ಶನವನ್ನು ಬಯಸುತ್ತಿರುವನು.

ರಾಜೋವಾಚ —

ಗಚ್ಛಾವಿಲಂಬಿತಂ ತಂ ಮಮಾಸನ್ನಮೇವ ಪ್ರವೇಶಯ ।
ಜಾನೀಮಸ್ತಂ ದಿಗಂತೇಷು ವೃತ್ತಾಂ ವೃತ್ತಾಂತ ಸಂಕ್ರಮಾತ್ ॥೩೮॥

ಶ್ರೀ ವಸಿಷ್ಠ ಉವಾಚ —

ಇತ್ಯುಕ್ತ ಉತ್ತರಾಶೇಶಂ ಪ್ರತೀಹಾರಃ ಪ್ರವೇಶಿತಂ ।
ಪ್ರಣಾಮಪರಮಗ್ರೇಽಸೌ ರಾಜಾ ಪಶ್ಯದ್ದಿಗಾಧಿಪಂ ॥೩೯॥

ಕ್ಷತವಿಕ್ಷತಸರ್ವಾಂಗಮಸುಂ ವಮಂಗೇಷು ಸಂತತಂ ।
ಶ್ವಾಸಾಕುಲಂ ವಮದ್ರಕ್ತಂ ಛಿನ್ನಯೋಧಮಿವ ನಿರ್ಜಿತಂ ॥೪೦॥

ಸ ಪ್ರಣಮ್ಯ ತ್ವರಾಯುಕ್ತಮುವಾಚೇದಮುಪಕ್ರಮಂ ।
ಸಂಸ್ತಭ್ಯಾಂಗವ್ಯಥಾವಾತಂ ಸಂತತೋಚ್ಛ್ವಾಸಮುಚ್ಛ್ವಸನ್ ॥೪೧॥

---

ರಾಜನು ಹೇಳಿದನು: —

೩೮ ಕೂಡಲೇ ಹೋಗಿ ಆತನನ್ನು ಕರೆದುಕೊಂಡು ಬಾ. ದಿಗಂತಗಳಲ್ಲಿ ಏನೇನಾಗಿವೆ ಎಂಬುದನ್ನು ಆತನಿಂದಲೇ ಕೇಳೋಣ.

೩೯. ಹೀಗೆ ಅವನು ಹೇಳಿ ಉತ್ತರ ದಿಕ್ಪಾಲನನ್ನು ಕರೆಸಿದನು. ಅವನು ಪ್ರಣಾಮ ಮಾಡುತ್ತ ಬಂದನು. ಅವನನ್ನು ದೊರೆಯು ನೋಡಿದನು.

೪೦. ಆ ಉತ್ತರ ದಿಕ್ಪಾಲಕನು ಅಂಗಾಂಗಗಳಲ್ಲೆಲ್ಲಾ ಬಾಣಗಳ ಏಟಿನಿಂದ ಕ್ಷತವಿಕ್ಷತನಾಗಿ ಹೋಗಿದ್ದನು. ಕಷ್ಟಪಟ್ಟು ಉಸಿರಾಡುತ್ತಿದ್ದನು. ರಕ್ತವನ್ನು ವಮನ ಮಾಡುತ್ತಿದ್ದನು. ಸೋತು ಹೋಗಿದ್ದನು.

೪೧. ಅವನು ದೊರೆಗೆ ನಮಸ್ಕಾರವಮಾಡಿ, ತನಗೆ ಆಗುತ್ತಿರುವ ಅಂಗವ್ಯಥೆಯನ್ನೂ ನಿಟ್ಟುಸಿರು ಕಟ್ಟುಸಿರುಗಳನ್ನೂ ತಡೆದುಕೊಂಡು ಹೀಗೆ ಹೇಳಿದನು :

ಬಲಾಧ್ಯಕ್ಷ ಉವಾಚ:—

ದೇವ ತ್ರಯೋಽಪಿ ದಿಕ್ಪಾಲಾ ಬಲೇನ ಬಹುನಾ ಸಹ।
ತ್ವದಾಜ್ಞಯೇವ ನಿರ್ಜೇತುಂ ಯಮಂ ಯಮಪುರಂ ಗತಾ: ॥೩೨॥

ತದ್ದೇಶಪಾಲಸಾಧ್ಯರ್ಥಮಶಕ್ತಂ ಮಾಮಿಮಂ ತತಃ।
ಅನುದ್ರವಂತೋ ಬಹವೋ ಭೂಪಾಃ ಪ್ರಾಪ್ತಾ ಬಲಾದಿಪ ॥೩೩॥

ಮಹತ್ಪರಬಲಂ ಪ್ರಾಪ್ತಮಿದಂ ದೇವಸ್ಯ ಮಂಡಲಂ।
ವಿಧೀಯತಾಂ ತಥಾ ಪ್ರಾಪ್ತಂ ನ ದೇವಸ್ಯಾಸ್ತಿ ದುರ್ಜಯಂ ॥೩೪॥

ಶ್ರೀ ವಸಿಷ್ಠ ಉವಾಚ—

ಅಥ ತಸ್ಮಿನ್ವದತ್ಯೇವಮಾರ್ತಿಮತ್ಯಾಜಿ ವಿಕ್ಷತೇ।
ಸಹಸೈವಾಭ್ಯುವಾಚೇದಂ ಪ್ರವಿಶ್ಯ ಪುರುಷೋಽಪರಃ ॥೩೫॥

---

ಬಲಾಧ್ಯಕ್ಷನು ಹೇಳಿದನು:—

೩೨. ದೇವ, ಮೂವರು ದಿಕ್ಪಾಲರೂ ಬಹು ಬಲಯುತರಾಗಿದ್ದರೂ, ತಮ್ಮ ಅಪ್ಪಣೆಯನ್ನು ನೆರವೇರಿಸಬೇಕೋ ಎನ್ನುವಂತೆ ಯಮನನ್ನು ಗೆಲ್ಲಲು ಯಮಪುರಿಗೆ ಹೋದರು.

೩೩. ಆ ದೇಶಗಳನ್ನು ಪಾಲನ ಮಾಡಲು ಅಶಕ್ತನಾದ ನನ್ನನ್ನು ಬಹುಜನ ಭೂಪಾಲಕರು ಓಡಿಸಿಕೊಂಡು ಬಂದು ಬಲವಂತವಾಗಿ ಹಿಡಿದುಕೊಂಡರು.

೩೪. ದೇವರಾದ ತಮ್ಮ ರಾಜ್ಯವನ್ನು ಮಹತ್ತಾದ ಪರಬಲವು ಬಂದು ಮುತ್ತಿರುವುದು. ಏನು ಮಾಡಬೇಕೆಂದು ಅಪ್ಪಣೆಯಾಗಲಿ, ದೇವರಿಗೆ ದುರ್ಜಯ ವೆನ್ನುವುದು ಇಲ್ಲವಷ್ಟೇ!

ಶ್ರೀ ವಸಿಷ್ಠನು ಹೇಳಿದನು:—

೩೫. ಯುದ್ಧದಲ್ಲಿ ವಿಕ್ಷತನಾಗಿ ವ್ಯಥೆಪಡುತ್ತಿರುವ ಆ ಬಲಾಧ್ಯಕ್ಷನು ಹೀಗೆ ಹೇಳುತ್ತಿರಲು, ಇನ್ನೊಬ್ಬ ರಾಜಪುರುಷನು ಥಟ್ಟನೆ ಪ್ರವೇಶಿಸಿ ಹೀಗೆ ಹೇಳಿದನು —

ಪುರುಷಾ ಮಂದಭಸ್ತ್ರಾಸ್ಯಾ ವಿಪ್ಲುತಾ ದಲಲೀಲಯಾ ।
ಸ್ಥಿತಾನ್ಯರಿಬಲಾನ್ಯತ್ರ ಚತುರ್ದಿಕ್ಕಂ ನರೇಶ್ವರ ॥೩೬॥

ಕಚಚ್ಚಕ್ರಗದಾಪ್ರಾಸಕುಂತಕಾನನಕಾಂತಿಭಿಃ ।
ವಲಿತಾ ನೋಽರಿಭಿರ್ಗಾವೋ ಲೋಕಾಲೋಕತಟೈರಿವ ॥೩೭॥

ಪತಾಕಾಯುಧಯೋಧಾಂಗಾಶ್ಚಲತ್ಪರಿಕರಾಕುಲಾಃ ।
ವಿಸರಂತಿ ರಥಾಸ್ತತ್ರ ಪ್ರೋಡ್ಡೀನತ್ರಿಪುರೌಘವತ್ ॥೩೮॥

ಕರಾನುನ್ನಾಮಯಂತಃ ಖೇ ಮಾಂಸವೃಕ್ಷವನೋಪಮಾಃ ।
ಬೃಂಹಂತಿ ವಾರಣವ್ರಾತಾ ವರ್ಷಾವಾರಿದವೃಂದವತ್ ॥೩೯॥

---

೩೬. ಈ ದೇಶದ ಜನರೆಲ್ಲ ಅಶ್ವತ್ಥದ ಎಲೆಗಳಂತೆ ಹಾರಿಹೋದರು. ಎಲೈ ನರೇಶ್ವರನೆ, ಶತ್ರುಬಲವು ನಾಲ್ಕು ದಿಕ್ಕುಗಳಲ್ಲಿಯೂ ಬಲವಾಗಿರುವುದು.

೩೭. ಚಕ್ರಗದಾಪ್ರಾಸ ಕುಂತಾದಿ ಆಯುಧಗಳು ಕಾನನಗಳಂತೆ ಹೊಳೆಯುತ್ತಿರಲು, ಭೂಮಿಯನ್ನು ಬಳಸಿದ ಲೋಕಾಲೋಕ ಪರ್ವತದಂತೆ ಅರಿಗಳು ನಮ್ಮ ದೇಶವನ್ನು ಆಕ್ರಮಿಸಿಕೊಂಡಿರುವರು

೩೮. ಪತಾಕೆಗಳೆಂಬ ಆಯುಧಗಳೂ ಯೋಧ್ಯಗಳೆಂಬ ಅಂಗಗಳೂ ಉಳ್ಳವಾಗಿ ಚಲಿಸುತ್ತಿರುವ ಪರಿಕರಗಳಿಂದ ನಡೆಯುವಂತೆ ತೋರುತ್ತ ರಥಗಳು ಹಾರುತ್ತಿರುವ ತ್ರಿಪುರ ಸಮೂಹಗಳಂತೆ ಇರುವುವು.

೩೯. ಸೊಂಡಿಲುಗಳನ್ನು ಮೇಲಕ್ಕೆತ್ತಿಕೊಂಡು, ಮಾಂಸವೃಕ್ಷಗಳ ವನಗಳಂತೆ, ಆಕಾಶದಲ್ಲಿ ಹಾರುವ ಮಳೆಗಾಲದ ಮೋಡಗಳಂತೆ, ಆನೆಗಳ ಗುಂಪುಗಳು ಅಬ್ಬರಿಸುತ್ತಿರುವುವು.

ಸಕ್ತೋನ್ನತಾನಿ ಕುರ್ವಂತಃ ಸ್ಪಂದೇನೋರ್ವೀನತೋನ್ನತೈಃ ।
ಹೇಷಂತೇ ಹಯಸಂಘಾತಾ ವಾತಸ್ಪಂದಮಹಾಬ್ಧಿವತ್ ॥೪೦॥

ರಸಂತಿ ತುರಗಾಪೂರಾಃ ಫೇನಿಲಾವರ್ತಪಾತಿನಃ ।
ಸರ್ವತೋ ವಲಯಾಕಾರಾ ಲವಣಾರ್ಣವ ವಾರಿವತ್ ॥೪೧॥

ಆಕಾಶಕಾಂತಿಸನ್ನಾಹೈರ್ದಿಶಂ ಪ್ರತಿ ಬಲಂ ಬಲಂ।
ಉದೇತ್ಯಲಘುಕಲ್ಲೋಲೈಃ ಪ್ರಲಯಾರ್ಣವಪೂರವತ್ ॥೪೨॥

ಶರಾಸ್ತ್ರಶಸ್ತ್ರಸನ್ನಾಹಮುಕುಟಾಭರಣತ್ವಿಷಃ ।
ಕಚಂತಿ ತ್ವತ್ಪ್ರತಾಪಾಗ್ನೇರ್ಜ್ವಾಲಾ ಇವ ತದಂಗಗಾಃ ॥೪೩॥

---

೪೦. ಕುದುರೆಗಳ ಗುಂಪುಗಳು ಭೂಮಿಯ ಹಳ್ಳತಿಟ್ಟುಗಳಲ್ಲಿ ನಡೆಯುತ್ತ ಗಾಳಿಯಲ್ಲಿ ಆಲ್ಲೋಲ ಕಲ್ಲೋಲವಾಗಿರುವ ಮಹಾಂಬುಧಿಯಂತೆ, ಹೇಷಾರವ ಮಾಡುತ್ತಿರುವುವು.

೪೧. ಫೇನದಿಂದ ಕೂಡಿದ ಮಹಾವರ್ತಗಳಂತೆ ತಿರುಗುತ್ತ, ಲವಣಾರ್ಣವ ವಾರಿಯಂತೆ ಎತ್ತೆತ್ತಲೂ ವಲಯಾಕಾರಗಳಾಗಿ ಸುತ್ತುತ್ತ ಕುದುರೆಗಳು ಕೆನೆಯುತ್ತಿರುವುವು.

೪೨. ಆಕಾಶದಂತೆ ಸ್ವಚ್ಛವಾದ ಕಾಂತಿಯುಳ್ಳ ಸನ್ನಾಹಗಳಿಂದ ಕೂಡಿದ ಸೈನ್ಯವು ದಿಕ್ಕುದಿಕ್ಕುಗಳಲ್ಲಿಯೂ ಕಾಣಿಸುತ್ತಿರುವುದು. ಪ್ರಲಯ ಕಾಲದ ಸಮುದ್ರದಂತೆ, ಮಹಾ ಪ್ರವಾಹದಂತೆ, ಮಹತ್ತಾದ ಕಲ್ಲೋಲಗಳಿಂದ ಮೆರೆಯುತ್ತಿರುವುದು.

೪೩. ಶರ, ಅಸ್ತ್ರ, ಶಸ್ತ್ರ, ಸನ್ನಾಹ, ಮುಕುಟಾಭರಣ ಇವುಗಳ ಕಾಂತಿಯು, ನಿನ್ನ ಪ್ರತಾಪಾಗ್ನಿಯ ಜ್ವಾಲೆಗಳು ಅವರ ಅಂಗಗಳಲ್ಲಿ ಕಾಣಿಸುತ್ತಿದೆಯೋ ಎಂಬಂತೆ ಹೊಳೆಯುತ್ತಿರುವುದು.

ಸಮತ್ಸ್ಯಮಕರವ್ಯೂಹಾಃ ಸಚಕ್ರಾವರ್ತವೃತ್ತಯಃ ।
ಉದ್ಯಾಂತಿ ಸೈನ್ಯಸಂಘಟ್ಟೈಃ ಕಲ್ಲೋಲಾ ಜಲಧೇರಿವ ॥೪೪॥

ಪರಸ್ಪರಪರಾಮರ್ಶಾತ್ಕುಂತಾದ್ಯಾಯುಧಪಂಕ್ತಯಃ ।
ಕೋಪಾದಿವೋಗ್ರಹುಂಕಾರೈರ್ಜ್ವಲಂತಿ ವಿರಟಂತಿ ಚ ॥೪೫॥

ಇತಿ ಕರ್ತವ್ಯಮಹಂ ದೇವ ವಿಜ್ಞಪ್ತಿಂ ಸ್ವಾಮಿನೇರಿತಃ ।
ತಸ್ಮಾನ್ಮಂಡಲಸೀಮಾಂತಗುಲ್ಮಾದ್ಯುದ್ಧಾಯ ಗಚ್ಛತಾ ॥೪೬॥

ತಮಹಂ ದೇವ ಗಚ್ಛಾಮಿ ಶಕ್ತ್ಯೃಷ್ಟಿಶರಸಂಗತಃ ।
ಮಯೇದಮಾವೇದಿತಂ ಸರ್ವಂ ದೇವೋ ಜಾನಾತ್ಯತಃ ಪರಂ ॥೪೭॥

---

೪೪. ಮತ್ಸ್ಯಮಕರಗಳ ವ್ಯೂಹಗಳುಳ್ಳ, ಚಕ್ರದಂತೆ ಸುತ್ತುತ್ತಿರುವ ಆವರ್ತಗಳುಳ್ಳ ಜಲಧಿಯಂತೆ ಸೈನ್ಯ ಸಮೂಹಗಳ ಸಂಘಟ್ಟನದಿಂದ ಹುಟ್ಟಿದ ಕಲ್ಲೋಲಗಳು ಮೆರೆಯುತ್ತಿರುವುವು.

೪೫. ಕುಂತಾದಿ ಆಯುಧ ಪಂಕ್ತಿಗಳು ಪರಸ್ಪರ ಪರಾಮರ್ಶದಿಂದ ಕೋಪಗೊಂಡಂತೆ ಉಗ್ರ ಹುಂಕಾರ ಪೂರ್ವಕವಾಗಿ ಜ್ವಲಿಸುತ್ತ ವಿಶೇಷವಾಗಿ ಧ್ವನಿಮಾಡುತ್ತಿರುವುವು.

೪೬. ಹೀಗೆಂದು ವಿಜ್ಞಾಪಿಸು ಎಂದು ಎಲೈ ಪ್ರಭುವೆ, ನಮ್ಮ ದೇಶದ ಗಡಿನಾಡಿನಿಂದ ಯುದ್ಧಕ್ಕೆ ಹೋಗುತ್ತಿರುವ ನಮ್ಮ ಸ್ವಾಮಿಯು ನನಗೆ ಅಪ್ಪಣೆ ಮಾಡಿದನು.

೪೭. ಈಗ ನಾನು ಶಕ್ತಿ, ಋಷ್ಟಿ, ಶರಗಳನ್ನು ತೆಗೆದುಕೊಂಡು ಆತನ ಬಳಿಗೆ ಹೋಗುವೆನು. ನಾನು ಹೇಳಿದುದನ್ನೆಲ್ಲ ಕೇಳಿದಿರಿ. ಇನ್ನು ಮುಂದೆ ಏನು ಮಾಡಬೇಕು ಎಂಬುದು ಸ್ವಾಮಿಗೆ ತಿಳಿದಿದೆ.

ಶ್ರೀ ವಸಿಷ್ಠ ಉವಾಚಃ—

ಇತ್ಯುಕ್ತ್ವಾಥ ಪ್ರಣಾಮಂ ಚ ಸ ಕೃತ್ವಾ ತ್ವರಯಾ ಯಯೌ ।
ಕೃತ್ವಾ ಗುಲುಗುಲಾರಾವಂ ಶಾಂತೋ ವೀಚಿರಿವಾಂಬುಧೇಃ ॥೪೮॥

ಸಭ್ರಾಂತಮಂತ್ರಿನೃಪಯೋಧ ನಿಯೋಗಿನಾಗ ।
ನಾರೀರಥಾಶ್ವಪರಿಚಾರಕನಾಗರೌಘಂ ।
ರಾಜ್ಞೋ ಗೃಹಂ ಸ್ವಭಯು ತೋಲಿತ ಹೇತಿ ಸಾರ್ಥಂ ।
ಚಂಡಾಸಿಲಾಕುಲ ಮಹಾವನತುಲ್ಯಮಾಸೀತ್ ॥೪೯॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ "ಅವಿದ್ಯೋಪಾಖ್ಯಾನಾಂತರ್ಗತ
ವಿಪಶ್ಚಿದುಪಾಖ್ಯಾನೇ ಅವಿದ್ಯಾಕ್ಷೇಪಣೇ ಪಾರ್ಥಿವಸಂರಂಭ ವರ್ಣನಂ"
ನಾಮೋನ್ನತ್ತರ ಶತತಮಃ ಸರ್ಗಃ

---

ಶ್ರೀ ವಸಿಷ್ಠನು ಹೇಳಿದನು:—

೪೮. ಕಡಲಿನ ಅಲೆಗಳು ಗುಲಾಗುಲಾರಾವವನ್ನು ಮಾಡಿ ಶಾಂತವಾಗುವಂತೆ, ಹೀಗೆ ಹೇಳಿ, ಪ್ರಣಾಮ ಮಾಡಿ, ಆತುರವಾಗಿ ಹೊರಟು ಹೋದನು.

೪೯ ಸಂಭ್ರಾಂತರಾದ ಮಂತ್ರಿ, ನೃಪ, ಯೋಧ, ನಿಯೋಗಿ, ಗಜ, ರಥ, ಅಶ್ವ, ನಾರೀ, ಪರಿಚಾರಕ, ನಾಗರಿಕ, ಸಮೂಹಗಳು, ಭಯಪಟ್ಟು ಆಯುಧಗಳನ್ನು ಹಿಡಿದು ಅರಮನೆಯಲ್ಲಿ ತಿರುಗುತ್ತಿರಲು, ಅರಮನೆಯು ಚಂಡಾಸಿಲದಿಂದ ಆಕುಲವಾದ ಮಹಾವನದಂತಿತ್ತು.

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಪಾರ್ಥಿವಸಂರಂಭವರ್ಣನ" ಎಂಬ
ನೂರೆಂಟನೆಯ ಸರ್ಗವು



## ನವಾಧಿಕಶತತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ—

ಏತಸ್ಮಿನ್ನಂತರೇ ಸರ್ವೇ ಮಂತ್ರಿಣೋ ನೃಪಮಾಯಯುಃ ।
ಮುನಯೋ ವಾಸವಮಿವ ದೈತ್ಯಾಕ್ರಾಂತ ನಭೋಭುವಂ ॥೧॥

ಮಂತ್ರಿಣ ಊಚುಃ:—

ದೇವ ನಿರ್ಣೀತಮಸ್ಮಾಭಿರ್ಯಾವನ್ನ ವಿಷಯೋಽರಯಃ ।
ತ್ರಯಾಣಾಮಪ್ಯುಪ ಯಾನಾಂ ದಂಡಸ್ತೇಷು ವಿಧೀಯತಾಂ ॥೨॥

ಪ್ರಣಯೋಽನುಪ್ರವೇಶೋ ವಾ ನ ಕದಾಚನ ಯಃ ಕೃತಃ ।
ಅಧುನಾ ತೇಷು ತಂ ದೇವ ಕುರ್ಯಾತ್ತೇಷು ಕಥೈವ ಕಾ ॥೩॥

---

## ನೂರೊಂಭತ್ತನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು: —

೧. ಇಷ್ಟರೊಳಗಾಗಿ ಮಂತ್ರಿಗಳೆಲ್ಲರೂ, ಆಕಾಶವನ್ನೂ ಭೂಮಿಯನ್ನೂ ದೈತ್ಯರು ಆಕ್ರಮಿಸಿದಾಗ ಮುನಿಗಳೆಲ್ಲರೂ ವಾಸವನನ್ನು ಕುರಿತು ಬರುವಂತೆ, ನೃಪನ ಬಳಿಗೆ ಬಂದರು.

ಮಂತ್ರಿಗಳು ಹೇಳಿದರು:—

೨. ದೇವ, ಆಗಲೇ ನಾವು ಆಲೋಚಿಸಿ ಈ ಶತ್ರುಗಳು ಸಾಮ ದಾನ ಭೇದಗಳೆಂಬ ಮೂರು ಉಪಾಯಗಳಿಗೂ ಬಗ್ಗುವರಲ್ಲ: (ಇವರಿಗೆ ದಂಡವೇ ಸರಿಯೆಂದು ಗೊತ್ತುಮಾಡಿದೆವು.) ಆದರಿಂದ ಇವರಿಗೆ ದಂಡವನ್ನೇ ವಿಧಿಸೋಣವಾಗಲಿ.

೩. (ದಾನಮಾನಾದಿಗಳಿಂದ) ಸ್ನೇಹವನ್ನೂ ಅನುಪ್ರವೇಶವನ್ನೂ ಇದುವರೆಗೂ ಮಾಡದ ನಾವು ಈ ಶತ್ರುಗಳಲ್ಲಿ ಈಗ ಅವನ್ನು ಮಾಡಬೇಕಾಗಿಲ್ಲ.

ಪಾಪಾ ಮ್ಲೇಚ್ಛಾ ಧನಾಢ್ಯಾಶ್ಚ ನಾನಾದೇಶ್ಯಾಃ ಸುಸಂಹತಾಃ ।
ಬಹವೋ ಲಬ್ಧರಂಧ್ರಾಶ್ಚ ಸಾಮನಾದೇರ್ನಾಸ್ಪದಂ ದ್ವಿಷಃ ॥೪॥

ತತ್ಸುಸಾಹಸಮೇವೇದಂ ವರ್ಜಯಿತ್ವಾ ಪ್ರತಿಕ್ರಿಯಾ ।
ನಾನ್ಯಾಸ್ತಿ ಶೀಘ್ರಮೇವಾತೋ ರಣೋದ್ಯೋಗೋ ವಿಧೀಯಂತಾಂ ॥೫॥

ವೀರಾಣಾಂ ದೀಯತಾಮಾಜ್ಞಾ ಪೂಜ್ಯಂತಾಮಿಷ್ಟದೇವತಾಃ ।
ಆಹೂಯಂತಾಂ ಚ ಸಾಮಂತಾ ಹನ್ಯತಾಂ ರಣದುಂದುಭಿಃ ॥೬॥

ಸನ್ನಹ್ಯಂತಾಮಶೇಷೇಣ ನಿರ್ಗಚ್ಛಂತು ರಣೇ ಭಟಾ ।
ಕ್ರಿಯತಾಂ ಕಾಲಕಲ್ಪಾಭ್ರಮೇದುರಾರಾಜಿತಾ ದಿಶಃ ॥೭॥

---

(ಅಸುಪ್ರವೇಶಃ ಸ್ವಪಕ್ಷೀಯಾಣಾಮೇವ ಕೇಷಾಂಚಿತ್ ಶರಣಾಗತಿಚ್ಛಲೇನ ಕಾಕೋಲೂಕ ನ್ಯಾಯೇನ ತದ್ವಧಾಯಾಂತಃ ಪ್ರವೇಶಃ—ತಾ. ಪ್ರ.)

೪. ಈಗ ಬಂದಿರುವ ಈ ಶತ್ರುಗಳು ಪಾಪರು ಮ್ಲೇಚ್ಛರು. ಧನಾಢ್ಯರು, ನಾನಾ ದೇಶಗಳವರು, ಚೆನ್ನಾಗಿ ಒಟ್ಟುಗೂಡಿರುವರು, ಅನೇಕರಾಗಿರುವರು, ನಮ್ಮ ರಂಧ್ರಗಳನ್ನು ಬಲ್ಲವರು, ಅದರಿಂದ, ಇವರು ಸಾಮಾದಿಗಳಿಗೆ ಅರ್ಹರಲ್ಲ.

(ಇದು ಈ ಗ್ರಂಥದ ಕಾಲನಿರ್ಣಯಕ್ಕೆ ಸಾಧಕವಾದೀತೋ ?)

೫. ಅದರಿಂದ ಒಳ್ಳೆಯ ಸಾಹಸಮಾಡಿ ಇವರನ್ನು ಗೆಲ್ಲಬೇಕು. ಇದನ್ನು ಬಿಟ್ಟು ಬೇರೆಯಾದ ಪ್ರತಿಕ್ರಿಯೆಯು ಯಾವುದೂ ಇಲ್ಲ. ಅದರಿಂದ ಆದಷ್ಟು ಬೇಗ ರಣೋದ್ಯೋಗಕ್ಕೆ ಅಪ್ಪಣೆಯಾಗಲಿ.

೬. ವೀರರಿಗೆ ಅಪ್ಪಣೆಯಾಗಲಿ. ಇಷ್ಟದೇವತೆಗಳ ಪೂಜೆಯಾಗಲಿ. ಸಾಮಂತರಿಗೆ ಕರೆಯು ಹೋಗಲಿ. ರಣದುಂದುಭಿಯು ಮೊಳಗಲಿ.

೭. ಭಟರೆಲ್ಲರೂ ಸನ್ನದ್ಧರಾಗಿ ರಣಾಂಗಣಕ್ಕೆ ನಡೆಯಲಿ. ದಿಕ್ಕುಗಳೆಲ್ಲವೂ ಪ್ರಲಯಕಾಲದ ಮೇಘಗಳಿಂದ ತುಂಬಿದಂತೆ ಸೈನ್ಯಗಳಿಂದ ತುಂಬಿಹೋಗಲಿ.

ಆಸ್ಫಾಲ್ಯಂತಾಂ ಧನೂಂಷ್ಯುಚ್ಚೈಃ ಕ್ವಣಂತು ಗುಣಪಂಕ್ತಯಃ ।
ಭವಂತು ಜಲದಶ್ಯಾಮಾಃ ಕಕುಭಃ ಖಂಡಮಂಡಲೈಃ ॥೮॥

ಸ್ಫುರಜ್ಜ್ಯಾವಿದ್ಯುತಃ ಶೂರವಾರಿದಾ ಘನಗರ್ಜಿತಾಃ ।
ನಾರಾಚಧಾರಾ ಮುಚ್ಯಂತು ಕಚತ್ಕೋದಂಡಕುಂಡಲಾಃ ॥೯॥

ರಾಜೋವಾಚಃ—

ಗಮ್ಯತಾಂ ಸಂಗರಾಯಾಶು ಸಂವಿಧಾನಂ ವಿಧೀಯತಾಂ ।
ಸ್ನಾತ್ವಾಹಂ ಪೂಜಯಿತ್ವಾಗ್ನಿಂ ನಿರ್ಗಚ್ಛಾಮಿ ರಣಾಜಿರಂ ॥೧೦॥

ಇತ್ಯುಕ್ತ್ವಾ ನೃಪತಿಃ ಸ್ನಾತೋ ಮಹಾರಂಭೋಽಪಿ ಸ ಕ್ಷಣಾತ್ ।
ಪ್ರಾವೃಷೀವ ನವೋದ್ಯಾನಂ ಗಂಗಾಜಲಧರೈರ್ಘಟೈಃ ॥೧೧॥

---

೮. ಧನಸ್ಸುಗಳು ಮೊಳಗಲಿ. ಅವುಗಳ ಹಗ್ಗಗಳು ಗಟ್ಟಿಯಾಗಿ ಝುಂಯ್ ಎನ್ನಲಿ, ಅರ್ಧಮಂಡಲಗಳಾದ ಧನಸ್ಸುಗಳಿಂದ ದಿಕ್ಕುಗಳೆಲ್ಲವೂ ಜಲದ ಶ್ಯಾಮಗಳಾಗಲಿ.

೯. ಹೊಳೆಯುವ ಬಿಲ್ಲಿನ ಹಗ್ಗಗಳೆಂಬ ವಿದ್ಯುತ್ತುಳ್ಳ ಶೂರರೆಂಬ ಮೋಡಗಳು, ಘನವಾಗಿ ಗರ್ಜಿಸುತ್ತ ಹೊಳೆಯುವ ಕೋದಂಡ ಕುಂಡಲಗಳುಳ್ಳವರಾಗಿ ನಾರಾಚ ಧಾರೆಗಳನ್ನು ಬಿಡಲಿ.

ರಾಜನು ಹೇಳಿದನುಃ—

೧೦. ಯುದ್ಧಕ್ಕೆ ಹೊರಡಿರಿ. ಸಂವಿಧಾನವು ಸಿದ್ಧವಾಗಲಿ. ನಾನು ಸ್ನಾನ ಮಾಡಿ ಇಷ್ಟದೈವವಾದ ಅಗ್ನಿಯನ್ನು ಅರ್ಚಿಸಿ ರಣರಂಗಕ್ಕೆ ಬರುವೆನು.

(ಸಂವಿದಾನಂ ನಗರಗುಪ್ತಿ ವ್ಯೂಹರಚನಾದಿ — ತಾ. ಪ್ರ.)

೧೧ ಹೀಗೆ ಹೇಳಿ ಅರಸನು, ತನಗೆ ಬೇಕಾದಷ್ಟು ಕೆಲಸವಿದ್ದರೂ ಒಂದು ಕ್ಷಣದೊಳಗೆ ಮಳೆಗಾಲದಲ್ಲಿ ನವೋದ್ಯಾನವು ಹೇಗೋ ಹಾಗೆ, ಗಂಗಾಜಲದಿಂದ ತುಂಬಿದ ಘಟಗಳಿಂದ ಸ್ನಾನಮಾಡಿದನು.

ಅಥ ಪ್ರವಿಷ್ಟೋಽಗ್ನಿಗೃಹಂ ಪೂಜಯಿತ್ವಾ ಹುತಾಶನಂ ।
ಆದರೇಣ ಯಥಾಶಾಸ್ತ್ರಂ ಚಿಂತಯಾಮಾಸ ಭೂಮಿಪಃ ॥೧೨॥

ನೀತಮಾಯುರನಾಯಾಸ ವಿಲಾಸ ವಿಭವ ಶ್ರಿಯಾ ।
ಪ್ರಜಾಭ್ಯೋ ದತ್ತಮಭಯಮಾಸಮುದ್ರ ಸಮುದ್ರಿತಂ ॥೧೩॥

ಆಕ್ರಾಂತ ವಸುಧಾಪೀಠಾಃ ಪಾದಪೀಠೇ ಕೃತಾ ದ್ವಿಷಃ ।
ಲತಾಃ ಫಲಭರೇಣೇವ ನಮಿತಾಃ ಕಕುಭೋ ದಶ ॥೧೪॥

ಪ್ರಜಾಚಿತ್ತೇಂದು ಬಿಂಬೇಷು ಲಿಖಿತಂ ಧವಲಂ ಯಶಃ ।
ಭೂವಾಪಾರೋಪಿತಾ ಕೀರ್ತಿಲತಾ ತ್ರಿಪಥಗಾಮಿನೀ ॥೧೫॥

---

೧೨. ಅನಂತರ ಅರಸನು ಅಗ್ನಿಗೃಹಕ್ಕೆ ಹೋಗಿ, ಅಗ್ನಿದೇವನನ್ನು ಯಥಾ ಶಾಸ್ತ್ರವಾಗಿ ಆದರದಿಂದ ಪೂಜೆಮಾಡಿ ಯೋಚಿಸಿದನು.

೧೩. ಅನಾಯಾಸವಾಗಿ ಲಭಿಸಿದ ವಿಲಾಸ ವಿಭವ ಸಂಪನ್ನವಾದ ಸೌಭಾಗ್ಯ ದಿಂದ ಆಯುಸ್ಸು ಕಳೆಯಿತು. ಆ ಸಮುದ್ರ ಮುದ್ರಿತವಾದ ಭೂಮಂಡಲದ ಪ್ರಜೆ ಗಳಿಗೆಲ್ಲಾ ಅಭಯವನ್ನು ಕೊಟ್ಟಾಯಿತು

೧೪. ವಸುಧಾ ಪೀಠವನ್ನು ಆಕ್ರಮಿಸಿ, ಶತ್ರುಗಳನ್ನೆಲ್ಲ ಪಾದಪೀಠದಲ್ಲಿ ಬಗ್ಗುವ ಹಾಗೆ ಮಾಡಿ ಆಯಿತು ಹತ್ತು ದಿಕ್ಕುಗಳೂ ಫಲಭಾರದಿಂದ ಬಗ್ಗಿದ ಲತೆ ಗಳಂತೆ ಆದುವು.

೧೫. ಪ್ರಜಾಚಿತ್ತವೆಂಬ ಇಂದು ಬಿಂಬಗಳಲ್ಲಿ ಧವಳ ಯಶಸ್ಸನ್ನು ಲಿಖಿತ ಮಾಡಿಯಾಯಿತು. ತ್ರಿಪಥಗಾಮಿನಿಯಾಗಿ ಮೂರು ಲೋಕಗಳಲ್ಲೂ ಹಬ್ಬುವ ಕೀರ್ತಿಯೆಂಬ ಲತೆಯನ್ನು ಭೂಮಿಯಲ್ಲಿ ನೆಟ್ಟದಾಯಿತು.

ಕೋಶವದ್ಭರಿತಾ ರತ್ನೈಃ ಸುಹೃನ್ಮಿತ್ರಾರ್ಯಬಾಂಧವಾಃ ।
ನಿಪೀತೋऽರ್ಣವತೀರೇಷು ನಾಲಿಕೇರರಸಾಸವಃ ॥೧೬॥

ದ್ವಿಷಾಮಾಕಂಪಿತಾಭೇಕಗಲಾಂಗತ್ವಗಿವಾಸವಃ ।
ಮಚ್ಛಾಸನಾಂಕಿತಾ ಜಾತಾ ದ್ವೀಪಾಂತರಕುಲಾಚಲಾಃ ॥೧೭॥

ವಿಶ್ರುತಂ ಸಿದ್ಧಸೇನಾಸು ದಿಗಂತವನಭೂಮಿಷು ।
ಭೂಮ್ಯಂತಭೂಭೃತಾಂ ಮೂರ್ಧ್ನಿ ವಿಶ್ರಾಂತಂ ಮೇಘಲೀಲಯಾ ॥೧೮॥

ಧಿಯೇವೋಚ್ಚೈಃಪದೇ ಜ್ಞಾನಪೂರ್ಣಯೈಕಾಂತಶೀಲಯಾ ।
ವಿಲಬ್ಧಾನ್ಯವಿನಷ್ಟಾನಿ ರಾಷ್ಟ್ರಾಣೀಷ್ಟಾರ್ಥಕಾರಿಣಾ ॥೧೯॥

---

೧೬. ಸುಹೃತ್ತು, ಮಿತ್ರ, ಆರ್ಯ, ಬಾಂಧವರು ಭಂಡಾರದಂತೆ ರತ್ನಭರಿತರಾದರು. ಸಮುದ್ರ ತೀರಗಳಲ್ಲಿ ನಾಲಿಕೇರ ರಸಾಸವವನ್ನು ಆಸ್ವಾದಿಸಿಯಾಯಿತು.

೧೭. ಶತ್ರುಗಳ ಪ್ರಾಣಗಳು ಕೂಗುತ್ತಿರುವ ಕಪ್ಪೆಗಳ ಕಂಠಚರ್ಮದಂತೆ ಅಲ್ಲಾಡಿಹೋದುವು. ದ್ವೀಪಾಂತರಗಳಲ್ಲಿರುವ ಕುಲಾಚಲಗಳು ಕೂಡಾ ನನ್ನ ಶಾಸನಾಂಕಿತಗಳಾದುವು.

೧೮. ಸಿದ್ಧಸೇನೆಗಳಲ್ಲಿ, ದಿಗಂತ ವನಭೂಮಿಗಳಲ್ಲಿ, ಭೂಮಿಯ ಕೊನೆಯಲ್ಲಿರುವ ಪರ್ವತಗಳ ನೆತ್ತಿಯಲ್ಲಿ ಮೇಘಲೀಲೆಯಿಂದ ವಿಶ್ರಾಂತಿ ಪಡೆದುದಾಯಿತು.

೧೯. ಜ್ಞಾನಪೂರ್ಣವಾಗಿ ಏಕಾಂತ ಶೀಲವಾಗಿರುವ ಮನೋವೃತ್ತಿಯು ಉಚ್ಚೈಃ ಪದವಾದ ಬ್ರಹ್ಮದಲ್ಲಿ ನಿಲ್ಲುವಂತೆ, ಪ್ರಜಾವರ್ಗದ ಇಷ್ಟಾರ್ಥವನ್ನು ಸಾಧಿಸುವ ನಾನು ರಾಷ್ಟ್ರಗಳನ್ನು ಸಂಪಾದಿಸಿ ಅವು ನನ್ನ ಕೈಬಿಡದಂತೆ ನೋಡಿಕೊಂಡೆನು.

ರಕ್ಷಾಂಸ್ಯಪ್ಯವಿನೀತಾನಿ ಬದ್ಧಾನಿ ನಿಗಡೈರ್ಘನೈಃ ।
ಧರ್ಮಾರ್ಥಕಾಮೈರನ್ಯೋನ್ಯಂ ಚಯಾಪಚಯವರ್ಜಿತೈಃ
ಅಖಂಡಿತೈರ್ಮಯಾನೀತಂ ಪೀತಾತಿಯಶಸಾ ವಯಃ । ॥೨೦॥

ಇದಾನೀಂ ಶಷ್ಪವಿಶ್ರಾಂತಪ್ರಾಲೇಯಭರಭಾಸುರಂ
ಆಗತಂ ವಾರ್ಧಕಂ ಸರ್ವಭೋಗಸಂರಂಭಮಾರ್ಜನಂ । ॥೨೧॥

ತಸ್ಯೋಪರ್ಯರಯೋ ರೌದ್ರಾ ಬಲವಂತೋ ರಣೈಷಿಣಃ
ಸಂಭೂಯ ಸರ್ವತಃ ಪ್ರಾಪ್ತಾಃ ಸಂದಿಗ್ಧೋ ವರ್ತತೆ ಜಯಃ ॥೨೨॥

ತದಿಹೈವಾನಲಾಯಾಸ್ಮೈ ದೇವಾಯ ಜಯದಾಯಿನೇ ।
ಮಸ್ತಕಾಹುತಿವೇಮಾಂ ಸಮುದ್ಯಮ್ಯ ದದಾಮಿ ವೈ । ॥೨೩॥

---

೨೦. ಅವಿನೀತರು ರಾಕ್ಷಸರಾಗಿದ್ದರೂ ಅವರನ್ನು ಘನವಾದ ಸಂಕಲೆಗಳಿಂದ ಕಟ್ಟಿದೆನು. ಉಪಚಯ ಅಪಚಯಗಳಿಂದ ಹೆಚ್ಚು ಕಡಿಮೆಯಿಲ್ಲದೆ ಸಮವಾಗಿರುವ ಅಖಂಡಿತವಾಗಿ ಅನೋನ್ಯವಾಗಿರುವ ಧರ್ಮ ಅರ್ಥ ಕಾಮಗಳಿಂದ, ಬಹು ಯಶಸ್ಸ ಸಂಪಾದಿಸಿ ವಯಸ್ಸನ್ನು ಕಳೆದೆನು.

೨೧. ಈಗ ಹುಲ್ಲಿನ ಕೊನೆಯಲ್ಲಿ ನಿಂತಿರುವ ಹಿಮದ ಹನಿಗಳಂತೆ ಭಾಸುರ ವಾದ, ಸರ್ವಭೋಗ ಸಂರಂಭಗಳನ್ನೂ ಕೊನೆಗಾಣಿಸುವ ವಾರ್ಧಕವು ಬಂತು.

೨೨. ಇದರ ಮೇಲೆ ಶತ್ರುಗಳು ರೌದ್ರರು : ಬಲವಂತರು : ಯುದ್ಧಕಾಮಿ ಗಳು : ಒಟ್ಟು ಸೇರಿ ಬಂದಿರುವರು : ಜಯವೂ ಸಂದಿಗ್ಧವಾಗಿರುವುದು.

೨೩. ಆದರಿಂದ, ಜಯಪ್ರದನಾದ ಈ ಅನಲದೇವನಿಗೆ ಇಲ್ಲಿಯೇ, ಈ ಮಸ್ತಕಾಹುತಿಯನ್ನು ಒಪ್ಪಿಸುವೆನು.

ರಾಜೋವಾಚ:—

ಕೃಶಾನೋ ದೇವ ಮೂರ್ಧಾಯಂ ಶುಭ್ರಮಾಹುತಿತಾಂ ಗತಃ ।
ಮಯಾ ಪೂರ್ವಂ ಪುರೋಡಾಶ ಇವ ದೇವೇಶ ದೀಯತೇ ॥೩೪॥

ಯದಿ ತುಷ್ಟೋಽಸಿ ಭಗವಂಸ್ತದನೇನ ಕೃತೇನ ಮೇ ।
ಚತ್ವಾರೋ ಭವತಃ ಕುಂಡಾತ್ಸ್ವದೇಹಾಃ ಸ್ಫ್ರೋದ್ಭವಂತು ಮೇ ।   ॥೩೫॥

ಬಲವಂತಃ ಶ್ರಿಯಾ ದೀಪ್ತಾ ನಾರಾಯಣಭುಜಾ ಇವ ।
ತೈಶ್ಚತುರ್ದಿಕ್ಕಮೇವಾರೀನ್ವಧ್ಯಾಮಹಮವಿಘ್ನತಃ ।   ॥೩೬॥

ಶ್ರೀ ವಸಿಷ್ಠ ಉವಾಚ:—

ತ್ವಯಾ ಚ ದರ್ಶನಂ ದೇಯಂ ಮಹ್ಯಂ ಮತಿಮತೇ ವಿಭೋ ।
ಇತ್ಯುಕ್ತ್ವಾ ಸ ಮಹೀಪಾಲಃ ಖಡ್ಗಮಾದಾಯ ಚಿಚ್ಛಿದೇ ।
ಶಿರಃ ಕಮಲಮಾಲೋಲಂ ಲೀಲಯೇವಾಶು ಬಾಲಕಃ   ॥೩೭॥

---

ರಾಜನು ಹೇಳಿದನು :—

೩೪. ಕೃಶಾನು ದೇವನೇ, ಈ ಶಿರಸ್ಸು ನಿನಗೆ ಆಹುತಿಯಾಗಲಿ, ಮೊದಲು ಪುರೋಡಾಶವನ್ನು ಒಪ್ಪಿಸುತ್ತಿದ್ದಂತೆ, ದೇವೇಶ, ಈಗ ಶಿರಸ್ಸನ್ನು ಒಪ್ಪಿಸುವೆನು.

೩೫. ಈ ನಾನು ಮಾಡಿದ ಕರ್ಮದಿಂದ ನೀನು ತೃಪ್ತನಾಗಿರುವುದಾದರೆ ಈ ಕುಂಡದಿಂದ ನನಗೆ ನಾಲ್ಕು ದೇಹಗಳು ಲಭಿಸಲಿ.

೩೬. ಬಲವಂತವಾಗಿ, ವೀರಶ್ರೀಯಿಂದ ವಿರಾಜಿಸುವ ಶ್ರೀಮನ್ನಾರಾಯಣನ ಮಹಾ ಬಾಹುಗಳಂತೆ, (ಮೆರೆಯುವ ಆ ನಾಲ್ಕು ದೇಹಗಳಿಂದ) ನಾಲ್ಕುದಿಕ್ಕುಗಳಲ್ಲಿಯೂ ಶತ್ರುಗಳನ್ನು ನಿರ್ವಿಘ್ನವಾಗಿ ವಧಿಸುವಂತಾಗಲಿ.

೩೭. "(ಶಾಸ್ತ್ರ) ಜ್ಞಾನವುಳ್ಳ ನನಗೆ, ಎಲೈ ವಿಭುವೇ, ನೀನು ದರ್ಶನವನ್ನು" ದಯಪಾಲಿಸಬೇಕು. ಹೀಗೆಂದು ಹೇಳಿ, ಆ ಅರಸನು ಖಡ್ಗವನ್ನು ತೆಗೆದುಕೊಂಡು, ಆ ಲೋಲವಾದ ಕಮಲವನ್ನು ಲೀಲೆಯಿಂದ ಬಾಲಕನು ಕತ್ತರಿಸುವಂತೆ, ತನ್ನ ಶಿರಸ್ಸನ್ನು ಕತ್ತರಿಸಿದನು.

ಭಿನ್ನಮೇವ ಶಿರೋ ಯಾವಜ್ಜುಹೋತ್ಯಸಿತವರ್ತ್ಮನೇ ।
ತಾವಚ್ಛರೀರೇಣ ಸಹ ಪಪಾತಾಗ್ನೌ ಸ ಪಾರ್ಥಿವಃ ॥೨೮॥

ಭುಕ್ತ್ವಾಥ ವಹ್ನಿಸ್ತಂ ದೇಹಂ ದದಾವಸ್ಮೈ ಚತುರ್ಗುಣಂ ।
ಮಹತಾಮುಪಯುಕ್ತಂ ಹಿ ಸದ್ಯ ಏವಾಭಿವರ್ಧತೇ ॥೨೯॥

ಚತುರ್ಮೂರ್ತಿರಥೋತ್ತಸ್ಥೌ ಪಾವಕಾದ್ವಸುಧಾಧಿಪಃ ।
ಪ್ರಜ್ವಲಂಸ್ತೇಜಸಾಂ ಪುಂಜೈರ್ನಾರಾಯಣ ಇವಾರ್ಣವಾತ್ ॥೩೦॥

ತೇ ದೇಹಾಸ್ತಸ್ಯ ಚತ್ವಾರೋ ವಿರೇಜುರ್ಭಾಸ್ವರತ್ವಿಷಃ ।
ಸಹಜಾತೋತ್ತಮೋತ್ತಂಸಭೂಷಣಾಯುಧ ವಾಸಸಃ ॥೩೧॥

---

೨೮. ಅಗ್ನಿಯಲ್ಲಿ ಛಿನ್ನ ಶಿರವು ಬಿತ್ತೋ ಇಲ್ಲವೋ, ಅಷ್ಟರೊಳಗಾಗಿ ಆ ಪಾರ್ಥಿವನು ಶಿರಮೊಡನೆ ಬೆಂಕಿಯಲ್ಲಿ ಬಿದ್ದನು.

೨೯. ಆ ದೇಹವನ್ನು ಅಗ್ನಿಯು ಭೋಜನಮಾಡಿ, ಅದಕ್ಕೆ ನಾಲ್ಕರಷ್ಟು ಅವನಿಗೆ ಫಲವನ್ನು ಕೊಟ್ಟನು. ಮಹಾತ್ಮರು ಉಪಯೋಗಿಸಿದರೆ, ಅದು ಆ ಕೂಡಲೇ ಅಭಿವರ್ಧಿಸುವುದು.

೩೦. ಅರ್ಣವದಿಂದ ನಾರಾಯಣನು ತೇಜಃಪುಂಜನಾಗಿ ಪ್ರಜ್ವಲಿಸುತ್ತ ಮೇಲಕ್ಕೇಳುವಂತೆ ಆ ವಸುಧೇಶ್ವರನೂ ಚತುರ್ಮೂರ್ತಿಯಾಗಿ ಅಗ್ನಿಯಿಂದ ಮೇಲಕ್ಕೆದ್ದನು.

೩೧. ಆ ರಾಜನ ಆ ನಾಲ್ಕು ದೇಹಗಳೂ ಕಾಂತಿಯುಕ್ತವಾಗಿ ವಿರಾಜಿಸಿದುವು. ಆ ದೇಹಗಳು ಹುಟ್ಟಿ ಬರುತ್ತಿದ್ದ ಹಾಗೆಯೇ ಉತ್ತಮವಾದ ಕಿರೀಟ, ಭೂಷಣ, ಆಯುಧ, ವಸ್ತ್ರಗಳಿಂದ ಕೂಡಿತ್ತು.

ಸಸಂಕಟಶಿರಸ್ತ್ರಾಣಾಃ ಸಮೌಲಿಕಟಕಾಂಗದಾಃ ।
ಸಹಾರಕುಂಡಲಾಭೋಗಾಃ ಸರ್ವಾಃ ಸರ್ವೇ ಮಹಾಶಯಾಃ ॥೩೨॥

ಸರ್ವ ಏವ ಸಮಾಕಾರಾಃ ಸಗೃಹಾವಯವಾನ್ವಿತಾಃ ।
ಚಂಚಲೋಚ್ಚೈಃ ಶ್ರವಃಪೃಷ್ಠಂ ಹಯರತ್ನಮವಸ್ಥಿತಾಃ ॥೩೩॥

ಸಸುವರ್ಣಶರಾಪೂರ್ಣತೂಣೀರಾಃ ಸುಮಹಾಶಯಾಃ ।
ಸಮಾನಗುಣಕೋದಂಡಾಃ ಸಮಾನವಪುಷಃ ಶುಭಾಃ ॥೩೪॥

ಸಮಾರೋಹಂತಿ ತೇ ಯಸ್ಮಿನ್ಸ್ಪಂಸಿ ನಾಗೇ ರಥೇ ಹಯೇ ।
ಸರ್ವೇಷಾಮರಿದೋಷಾಣಾಂ ನೈವ ಗಮ್ಯೋ ಭವತ್ಯಸೌ ॥೩೫॥

---

೩೨. ಕವಚ ಶಿರಸ್ತ್ರಾಣಗಳೂ, ತಲೆ, ತೋಳು, ಮುಂಗೈಗಳ ಆಭರಣಗಳೂ, ಹಾರ ಕುಂಡಲ ಆಭೋಗಗಳೂ ಉಳ್ಳ ಆ ಮಹಾಶಯರೂ ಎಲ್ಲರೂ ಅಖಂಡ ಭೂಮಂಡಲ ಪಾಲನ ದಕ್ಷರಾಗಿದ್ದರು.

೩೩. ಎಲ್ಲರೂ ಒಂದೇ ಸಮನಾದ ಆಕಾರವುಳ್ಳವರು. ಸಮಾನವಾದ ಅಂಗಗಳಿಂದ ಕೂಡಿದವರು. ಎಲ್ಲರೂ ಚಂಚಲವಾಗಿ ಉಚ್ಚೈಃಶ್ರವ ಸಮವಾದ ಹಯರತ್ನಗಳನ್ನು ಏರಿದ್ದವರು.

೩೪. ಚಿನ್ನದ ಬಾಣಗಳು ತುಂಬಿರುವ ತೂಣೀರವುಳ್ಳವರಾಗಿ, ಸುಮಹಾಶಯರಾಗಿ, ಸಮಾನವಾದ ಗುಣವುಳ್ಳ ಕೋದಂಡವನ್ನು ಹಿಡಿದವರಾಗಿ, ಸಮಾನ ದೇಹಿಗಳಾಗಿ ಶುಭರಾಗಿದ್ದರು.

೩೫. ಅವರು ನಾಲ್ವರೂ ಯಾವ ಯಾವ ಆನೆ, ರಥ, ಕುದುರೆಗಳನ್ನು ಹತ್ತುವರೋ ಅವೆಲ್ಲವೂ (ಅರಿಪ್ರಯುಕ್ತ ಮಂತ್ರ ತಂತ್ರ ಕೃತ್ಯಾಶಸ್ತ್ರ ಅಸ್ತ್ರಾದಿ) ಅರಿದೋಷಗಳೆಲ್ಲಕ್ಕೂ ಅಗಮ್ಯಗಳಾಗುವುವು.

ಪೀತ್ವಾ ಧೃತ್ವಾ ಚಿರಂ ಕಾಲಂ ಗರ್ಭೇ ಪುರುಷತಾಪಿತಾಃ ।
ವೇದ್ಯಾಮಿವ ಪಿತಾಸ್ತತ್ರ ಸಾಗರಾ ವಡವಾರ್ಚಿಷಾ ॥೩೬॥

ರತ್ನಾಶ್ವದೇಹಕುಸುಮೋತ್ಕರ ಪೂರ್ಣದೇಹಾ ।
ಸ್ಫೀತತ್ವಾರ ಇಂದುಹಸಿತೈರವಭಾಸಯಂತಃ ।
ಸನ್ಮೂರ್ತಯೋ ಹರಯ ಏವ ಯಥಾಬ್ಧಯೋ ವಾ ।
ವೇದಾ ಇವಾಹುತಿಹುತಾದನಲಾತ್ಪ್ರಸಸ್ರುಃ ॥೩೭॥

ಇತ್ಯಾರ್ಷೇ ವಾಸಿಷ್ಠಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ "ಅವಿದ್ಯೋಪಾಖ್ಯಾನಾಂತರ್ಗತ
ವಿಪಶ್ಚಿದುಪಾಖ್ಯಾನೇ ಅಗ್ನಿಪ್ರವೇಶದ್ದೇಹಲಾಭೋ ನಾಮ
ಸಪ್ತಾಧಿಕಶತತಮಃ ಸರ್ಗಃ

---

೩೬. ಬಾಡವ ಜ್ವಾಲೆಯು ಕುಡಿದು, ಗರ್ಭದಲ್ಲಿ ಚಿರಕಾಲ ಧರಿಸಿದ್ದು, ಪುರುಷಾಕಾರವನ್ನು ಕೊಟ್ಟು ವೇದಿಯಲ್ಲಿ ಇರಿಸಿದ ಸಾಗರಗಳೋ ಎಂಬಂತೆ ಆ ನಾಲ್ವರಿದ್ದರು.

೩೭. ರತ್ನಭೂಷಿತಗಳಾದ ಅಶ್ವದೇಹಗಳಲ್ಲಿ ಕುಸುಮ ಮಾಲೆಗಳಿಂದ ಪೂರ್ಣವಾದ ದೇಹವುಳ್ಳವರಾಗಿ ಆ ನಾಲ್ವರೂ, ಚಂದ್ರನನ್ನು ಅಪಹಾಸ್ಯ ಮಾಡುವ ಕಾಂತಿಯಿಂದ ಮೆರೆಯುತ್ತ, ನಾಲ್ಕು ರೂಪಾಂತ ಹರಿಯೋ, ಅಬ್ಧಿಗಳೋ, ವೇದಗಳೋ ಎನ್ನುವಂತೆ ಆಹುತಿದಾನದಿಂದ ಸಂತುಷ್ಟನಾದ ಅಗ್ನಿದೇವನಿಂದ ಎದ್ದು ಬಂದರು.

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಅಗ್ನಿಪ್ರವೇಶಾದ್ದೇಹಲಾಭ" ಎಂಬ
ನೂರೊಂಭತ್ತನೆಯ ಸರ್ಗವು



# ದಶಾಧಿಕಶತತಮಃ ಸರ್ಗಃ

ಶ್ರೀ ವಸಿಷ್ಠ ಉವಾಚಃ—

ಪುರೋಪಕಂಠಸಂಪ್ರಾಪ್ತೈಶ್ಚತುರ್ದಿಕ್ಕಂ ಸಹಾರಿಭಿಃ ।
ಏತಸ್ಮಿನ್ನಂತರೇ ತತ್ರ ಪ್ರವೃತ್ತಂ ದಾರುಣಂ ರಣಂ ॥೧॥

ಲುಂಠಿತ ಗ್ರಾಮನಗರಂ ಪ್ರಜಾಕುಲ ಮಹಾಕುಲಂ ।
ಅಗ್ನಿದಾಹಜ್ವಲದ್ದೇಹಂ ಧೂಮಾಭ್ರಪಟಲಾವೃತಂ ॥೨॥

ಶರಜಾಲಮಹಾಧೂಮಚ್ಛನ್ನಾರ್ಕವಿಲಸತ್ತಮಃ ।
ಕ್ಷಿಪ್ರಪೃಷ್ಟರವಿಕ್ಷಿಪ್ರಸಾವೃಷ್ಟರವಿಮಂಡಲಂ ॥೩॥

---

# ನೂರ ಹತ್ತನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧. ಆ ವೇಳೆಗೆ ನಾಲ್ಕು ದಿಕ್ಕುಗಳಲ್ಲಿಯೂ ರಾಜಧಾನಿಯ ಸಮೀಪಕ್ಕೇ ಬಂದುಬಿಟ್ಟಿದ್ದ ಅರಿಗಳೊಡನೆ ದಾರುಣವಾದ ರಣವು ಆರಂಭವಾಯಿತು.

೨. ಗ್ರಾಮ ನಗರಗಳನ್ನೆಲ್ಲ ಲೂಟಿಮಾಡಿ, ಪ್ರಜಾಕುಲಗಳೆಲ್ಲ ಮಹಾಕುಲಗಳಾಗುವಹಾಗೆ ಮಾಡಿ, ಅಗ್ನಿದಾಹದಿಂದ ದೇಹಗಳೆಲ್ಲ ಜ್ವಲಿಸುವಂತೆ ಮಾಡಿ, ಧೂಮವೆಂಬ ಮೋಡಗಳ ಗುಂಪು ಆವರಿಸುವಂತೆ ಮಾಡಿ, ರಣವು ಭಯಂಕರವಾಗಿತ್ತು.

೩. ಶರಜಾಲಗಳೆಂಬ ಮಹಾಧೂಮದಿಂದ ಸೂರ್ಯನು ಮುಚ್ಚಿಹೋಗಿ ತಮಸ್ಸು ವಿಲಾಸ ಮಾಡಲು, ಸೂರ್ಯನು ಒಂದು ಗಳಿಗೆ ಮಾತ್ರ ಕಾಣಿಸಿ ಮರೆಯಾಗಿ ಹೋದನು.

ಅಗ್ನಿದಾಹಮಹಾತಾಪಪ್ರಪತತ್ಪರ್ಣಕಾನನಂ |
ಲೋಲಾಲಾತ ಲತಾಶೂಲಮುಸಲೋಪಲ ಪೂರ್ಣಖಂ ||೪||

ಅನಲಪ್ರತಿಬಿಂಬೌಘೈರ್ದ್ವಿಗುಣ ಜ್ವಲದಾಯುಧಂ |
ರಣಭಗ್ನ ಮಹಾಶೂರ ಪ್ರಾಪ್ತೇಂದ್ರ ವನಿತಾಸುಖಂ ||೫||

ಉದ್ದಾಮವಾರಣಾರಾವೈ ರಣಲಂಪಟಹರ್ಷದಂ |
ಭೃಶುಂಡೀಮಂಡಲಪ್ರಾಸ ಶೂಲತೋಮರವರ್ಷದಂ ||೬||

ಭಟಕೋಲಾಹಲೋಲ್ಲಾಸ ಹೃದ್ಭಂಗಮೃತಪಾಮರಂ |
ರಜಃಪಟಲಶುಭ್ರಾಭ್ರಕೃತದ್ಯುಪಥವಾರಣಂ ||೭||

---

೪. ಅಗ್ನಿಯು ಸುಡುತ್ತಿರಲು ಮಹಾತಾಪದಿಂದ ಸುಟ್ಟು ಕರಿಯಾಗುತ್ತಿರುವ ಪರ್ಣಗಳುಳ್ಳ ಕಾನನವೂ ಲೋಲವಾದ ಅಲಾತ (ಚಕ್ರಗಳೆಂಬ) ಲತಾ ಶೂಲ ಮು ಸಲ, ಉಪಲ, ಗಳಿಂದ ಪೂರ್ಣವಾದ ಆಕಾಶವೂ (ಭಯಂಕರವಾದುವು.)

೫. ಸುಡುತ್ತಿರುವ ಬೆಂಕಿಯು ಪ್ರತಿಬಿಂಬಿಸಲು, ದ್ವಿಗುಣವಾದ ಆಗ್ನೇಯಾಸ್ತ್ರವು, (ಅಲ್ಲಿತ್ತು.) ರಣದಲ್ಲಿ ಭಗ್ನರಾದ ಮಹಾಶೂರರು ಇಂದ್ರವನಿತೆ (ಅಪ್ಸರೆ) ಯಿಂದ ಸುಖವನ್ನು ಪಡೆಯುತ್ತಿದ್ದರು.

೬. ಆನೆಗಳ ಬಲವಾದ ಕೂಗುಗಳಿಂದ ರಣಲಂಪಟರಿಗೆಹರ್ಷವಾಗುತ್ತಿತ್ತು. ಭುಶುಂಡೀ, ಮಂಡಲ, ಪ್ರಾಸ, ಶೂಲ, ತೋಮರ, ಮೊದಲಾದ ಆಯುಧಗಳ ವರ್ಷವೂ ಕರೆಯುತ್ತಿತ್ತು.

೭ ಭಟರ ಕೋಲಾಹಲವನ್ನು ಕೇಳಿ, ಉಲ್ಲಾಸವನ್ನು ನೋಡಿ, ಪಾಮರರು ಎದೆಯೊಡೆದು ಸಾಯುತ್ತಿದ್ದರು. ಧೂಳಿದ್ದು ಶುಭ್ರವಾದ ಆಕಾಶವನ್ನು ಮುಸುಕಿ ಅಂತರಿಕ್ಷದಲ್ಲಿ ದಾರಿಯಿಲ್ಲವಾಗುತ್ತಿತ್ತು.

ಮರಣವ್ಯಗ್ರ ಸಾಮಂತಮುಕ್ತನಾದ ಪ್ರಜಪ್ರಜಂ ।
ಇತಶ್ಚೇತಶ್ಚ ನಿಪತದ್ವಿದ್ಯುತ್ಪೋಪಹತಪ್ರಜಾ ॥೮॥

ಅಗ್ನಿದಗ್ಧಪತದ್ಗೇಹ ಪ್ರೋಜ್ಝಿತಾಗ್ನಿಮಯಾಂಬುದಂ ।
ಮರಣಾಹ್ಲಾದದಾಸಂಖ್ಯ ಶರಧಾರಾಮಯಾಂಬುದಂ ॥೯॥

ಜಿತಸಾಗರಕಲ್ಲೋಲಂ ತುರಂಗಮತರಂಗಕೈಃ ।
ದಂತಿದಂತ ವಿನಿಷ್ಪೇಷ ತಾರಕ್ರೇಂಕಾರಕರ್ಕಶಂ ॥೧೦॥

ಕೋಟಿಕೋಟಿಕುಟೀಕುಡ್ಯ ಕಂಟಕೋದ್ಭಟಸದ್ಭಟಂ ।
ಚಟತ್ಕಂಪಿತಕೋಟಾಟ್ಟ ಕೂಟಾಟನಸಟಚ್ಛಟಂ ॥೧೧॥

---

೮. ಸಾಯಲಿರುವ ಸಾಮಂತರು ಕೂಗುವ ಕೂಗುಗಳು ಭಯಂಕರವಾಗಿದ್ದುವು. ಅಲ್ಲಿ ಇಲ್ಲಿ ಬೀಳುತ್ತಿರುವ ವಿದ್ಯುತ್ತುಗಳಿಂದ ಪ್ರಜೆಗಳು ಉಪಹತರಾಗುತ್ತಿದ್ದರು.

೯. ಬೆಂಕಿಗೆ ಸಿಕ್ಕಿ ಉರಿದು ಬಿದ್ದು ಹೋದ ಮನೆಗಳಿಂದ ಏಳುತ್ತಿರುವ ಅಗ್ನಿಮಯವಾದ ಮೋಡಗಳು, ಮರಣವೆಂಬ ಸಂತೋಷವನ್ನು ನೀಡುವ ಅಸಂಖ್ಯ ಶರಗಳನ್ನು ಮಳೆಯಾಗಿ ಕರೆಯುವ ಮೋಡಗಳು, (ಆಗಿದ್ದುವು.)

೧೦. ಸಾಗರದ ಕಲ್ಲೋಲವನ್ನು ಮೀರಿದ ತುರಂಗಮುಗಳೆಂಬ ತರಂಗಗಳನ್ನುಳ್ಳದ್ದಾಗಿ, ಆನೆಯ ಕೊಂಬುಗಳಿಗೆ ಸಿಕ್ಕಿ ಚೂರುಚೂರಾಗಿ ಅಳುವವರ ತಾರಸ್ವರದ ಕ್ರೇಂಕಾರದಿಂದ ಕೂಡಿದ ಕರ್ಕಶವಾಗಿತ್ತು. (ಆ ಸಮರಭೂಮಿ)

೧೧. ಕೋಟೆಗಳ ಕೊನೆಗಳಲ್ಲಿರುವ ಕುಟಿಗಳ ಗೋಡೆಗಳಲ್ಲಿ ಕಂಟಕಗಳಂತೆ ಬಾಣವನ್ನು ನೆಡುವ ಉದ್ಭಟರೂ ಸದ್ಭಟರೂ ಉಳ್ಳುವಾಗಿ, ಬೆಂಕಿ ಹತ್ತಿಕೊಂಡು ಉರಿಯುತ್ತಾ ಚಟತ್ಕಾರ ಮಾಡುತ್ತ, ಮುರಿದು ಬೀಳುತ್ತಿರುವ ಕೋಟೆಗಳ ಅಟ್ಟಲಕಗಳ ಮೇಲೆ ಕುಣಿಯುತ್ತಿರುವ ಜ್ವಾಲೆಗಳುಳ್ಳದಾಗಿ (ಸಂಗ್ರಾಮವು ಭಯಂಕರವಾಗಿತ್ತು.)

ಲ.ಠತ್ಸ್ಪಟನ ಕುಬ್ಜ್ಯಾಕ ಸಾಟೋಪಸ್ಫುಟಪಟ್ಟಿಶಂ |
ಷೇ ಪಟತ್ಕೇತು ಪಟ್ಟ್ಯಾಟ್ಟ ಪಟತ್ಪಟಪಟಾರವಂ ||೧೨||

ನಂ ಶಿದಂತಗುಣೋದ್ಗೀರ್ಣೈರ್ಹೇತಿ ಪಾಷಾಣಘರ್ಷಣೈಃ |
ತಾರಕ್ರೇಂಕಾರ ಹುಂಕಾರೈರಾಹೂತಸುರವಾರಣಂ ||೧೩||

ವಹಚ್ಛರ ನದೀಪೂರಪೂರ್ಣಾಂಬರಮಹಾರ್ಣವಂ |
ವಿಸಂಚಚ್ಚಕ್ರ ಕುಂತಾಸಿಧಾರಾಮಕರಕರ್ಕಶಂ ||೧೪||

ಬನ್ನಾದಯೋಧ ಸಂಘಟ್ಟಕಂಕಟೋತ್ಕಟಟಾಂಕೃತೈಃ |
ಲಸಜ್ಝಣಝುಣಾರಾವೈರ್ಘಟಿತ ದ್ವೀಪಮಂಡಲಂ ||೧೫||

---

೧೨. ಹೊರಳುತ್ತಾ ದಾರಿಯಲ್ಲಿ ಅಡ್ಡವಾಗಿರುವ ಭಯಂಕರವಾದ ಶಬ್ದದಿಂದ ಬಿರಿಯುವ ಪಟ್ಟಿಶಗಳೂ ಆಕಾಶದಲ್ಲಿ ಹಾರಾಡುವ ಧ್ವಜಪಟಗಳ ಪಟಪಟ ಶಬ್ದವೂ (ತುಂಬಿದ್ದವು.)

೧೩. ಆನೆಗಳು ಕೊಂಬುಗಳು ಕಾಂತಿಗಳನ್ನುಗುಳುತ್ತಿದ್ದುವು. ಆಯುಧಗಳು ಪಾಷಾಣಗಳಂತೆ ಘರ್ಷಿಸುತ್ತಿದ್ದುವು. ತಾರಸ್ವರದ ಕ್ರೇಂಕಾರಗಳಿಂದಲೂ ಹುಂಕಾರಗಳಿಂದಲೂ ಐರಾವತವನ್ನು ಕರೆಯುವಂತಿತ್ತು.

೧೪. ಹರಿಯುತ್ತಿರುವ ಶರನದಿಯ ಪ್ರವಾಹದಿಂದ ಅಂಬರ ಮಹಾರ್ಣವವು ಪೂರ್ಣವಾಗಿ ವಿಶೇಷವಾಗಿ ಚಲಿಸುತ್ತಿರುವ ಚಕ್ರ, ಕುಂತ, ಖಡ್ಗಧಾರೆಗಳೆಂಬ ಮಕರಗಳಿಂದ ಕರ್ಕಶವಾಗಿದ್ದುವು.

೧೫. ಅಬ್ಬರಿಸುತ್ತಿರುವ ಯೋಧರು ಒಬ್ಬರನ್ನೊಬ್ಬರು ತಾಗಲು, ಅವರ ಕವಚಗಳು ಒಂದಕ್ಕೊಂದು ತಗಲಿ ಉತ್ಕಟವಾದ ಟಾಂಕಾರವನ್ನು ಮಾಡುವುವು: ಆಯುಧಗಳ ಝಣಝುಣಾರಾವವು ದ್ವೀಪ ಮಂಡಲಗಳನ್ನೆಲ್ಲ ತುಂಬಿದ್ದುವು.

ಪಾದಪಾತಪರಾಪಿಷ್ಟಪರಸಂಜಾತಕರ್ದಮಂ ।
ಪತತ್ಪ್ರಕ್ತನದೀರಾಹಃ ಪ್ರೋಹ್ಯಮಾಣಾಂಘಪ್ರಿಪಂ ॥೧೬॥

ಸುಪರ್ಣಾಯಲಾನಿಪತತ್ಕತ್ರೋತ್ಪತತ್ಪಟ್ಟಿ ಪಟ್ಟಿಶಂ ।
ಶರವಾರಿತರಂಗಾಂತರ್ ಭಗ್ನಾಯುಧಜಲೇಚರಂ ॥೧೭॥

ಹೇತಿಸಂಘಟ್ಟ ನಿಷ್ಕ್ರಾಂತಜ್ವಾಲಾಪ್ರಜ್ವಲಿತಾಂಬರಂ ।
ವಲೀಪಲಿತನಿರ್ಮುಕ್ತ ಪೂರಾಕ್ರಾಂತ ತ್ರಿವಿಷ್ಟಪಂ ॥೧೮॥

ಪಾಂಡುಪಾಂಸುಪಯೋವಾಹ ಚಕ್ರಚಕ್ರಾಚಿರದ್ಯುತಿ ।
ಹೇತಿನಿರ್ವಿವರಾಕಾಶಾಯುಧಾನಾಧಾರ ಭೂತಲಂ ॥೧೯॥

---

೧೬. ಕಾಲಿನ ತುಳಿತಕ್ಕೆ ಸಿಕ್ಕಿ ಹಿಟ್ಟಾಗಿರುವ ಬಾಣಗಳಿಂದ ಕೆಸರಾಗಿರುವ ಹರಿಯುತ್ತಿರುವ ರಕ್ತನದಿಯ ಪ್ರವಾಹವು ರಥಗಳನ್ನು ಆನೆಗಳನ್ನು ಕೊಚ್ಚಿ ಕೊಂಡು ಹೋಗುತ್ತಿದ್ದುವು.

೧೭. ಗರುಡನಂತೆ ಎರಗುವ, ಮೇಲಕ್ಕೆ ಹಾರುವ ಪಟ್ಟಿ ಪಟ್ಟಿಶಗಳೂ, ಬಾಣಗಳೆಂಬ ನೀರಿನಿಂದ ಕಂಗೆಟ್ಟು ಮುರಿದ ಆಯುಧಗಳೆಂಬ ಜಲೇಚರಗಳೂ ಅಲ್ಲಿ ಇದ್ದುವು.

೧೮. ಆಯುಧಗಳು ಒಂದಕ್ಕೊಂದು ತಗುಲಿದಾಗ ಹುಟ್ಟುವ ಜ್ವಾಲೆಯು ಆಕಾಶವನ್ನೇ ಸುಡುತ್ತಿರುವುದೋ ಎಂಬಂತಿತ್ತು ಯುದ್ಧದಲ್ಲಿ ಸತ್ತು ಅಮರರೂ ಅಜರರೂ ಆದ ಯೋದ್ಧರು ಸ್ವರ್ಗವನ್ನು ತುಂಬಿದ್ದರು

೧೯. ಬೆಳ್ಳಗಿರುವ ಧೂಳಿನ ಮೋಡವನ್ನು ಚಕ್ರಗಳ ಕಾಂತಿಗಳೆಂಬ ಮಿಂಚುಗಳು ಆಗಾಗ ಬೆಳಗುತ್ತಿದ್ದುವು. ಆಕಾಶದಲ್ಲೆಲ್ಲಾ ಆಯುಧಗಳು ತುಂಬಿ ಭೂಮಿಯಲ್ಲಿ ಎಡೆಯೇ ಇಲ್ಲದಂತಾಗಿತ್ತು.

ಕಟದ್ಧಟಭಟಾಟೋಪರಟತ್ಪ್ರತಿಭಟೋತ್ಕಟಂ |
ಜಟಚ್ಛಕಟಸಂಘಟ್ಟಪಿಷ್ಟಕಾಷ್ಠಲುಠದ್ರಥಂ ||೩೦||

ಕಬಂಧಭಟವೇತಾಲಮಿಶ್ರಕಂಟಕ ಸಂಕಟಂ |
ವೇತಾಲಭುಜ್ಯಮಾನಾಗ್ರ್ಯಶವಮಾಂಸಹೃದಂಬುಜಂ ||೩೧||

ಶೂರಶಾತಿತ ಶೀರಾರ್ಧಶಿರಃ ಕರಖುರೋರುಕಂ |
ಕಂಬಂಧದೋರ್ದ್ರುಮಸ್ಪಂದವನೀಕೃತ ನಭಸ್ತಲಂ ||೩೨||

ತರಲ್ಲೋಲಾಸ್ಯ ವೇತಾಲಹಾಸ ಘಟ್ಟಿತಪೇಟಕಂ |
ಕಂಕಟೋತ್ಕಟಸಾಟೋಪ ಭಟ ಭ್ರುಕುಟಿ ಭೀಷಣಾ ||೩೩||

---

೩೦. ಶರವರ್ಷವನ್ನು ಕರೆಯುತ್ತಿರುವ ಭಟರಿಗೂ ಭಟರಾದವರ ಆಟೋಪ ಗಳಿಂದ ರೇಗಿ ಪ್ರತಿಯಾಗಿ ಗರ್ಜಿಸುತ್ತಿರುವ ಶತ್ರುಭಟರಿಂದ ಉತ್ಕಟವಾಗಿ, ಜ್ವಲಿಸುತ್ತಿರುವ ಶಕಟಗಳ ಸಂಘಟ್ಟದಿಂದ ಪಿಷ್ಟವಾಗಿ ಹೋಗಿ ಕಾಷ್ಟಗಳಂತೆ ಬಿದ್ದುಹೋಗಿರುವ ರಥಗಳಿಂದ (ಭಯಂಕರವಾಗಿತ್ತು.)

೩೧. ತಲೆಯಿಲ್ಲವ ಸೈನಿಕರೂ ವೇತಾಲಗಳೂ ಶತ್ರುಗಳೂ ಸೇರಿ ರಣರಂಗ ವು ಸಂಕಟಕರವೂ ದುರ್ಗಮವೂ ಆಗಿತ್ತು. ವೇತಾಲಗಳು ಶವಗಳ ಹೃದಯ ಮಾಂಸವನ್ನು ಕಿತ್ತು ತಿನ್ನುತ್ತಿದ್ದುವು.

೩೨. ಶೂರರು ಕಡಿದಿರುವ, ಶಿರಸ್ಸು, ಕರ, ಖುರ. ಉರಗಳು ಎಲ್ಲೆಲ್ಲಿಯೂ ಬಿದ್ದಿರಲು, ಕಬಂಧಗಳ ಬಾಹುಗಳೆಂಬ ಮರಗಳು ತುಂಬಿ ಆಕಾಶವೆಲ್ಲವೂ ವನದಂತಾಗಿತ್ತು.

೩೩. ವೇತಾಲಗಳು ಬಾಯಿಬಿಟ್ಟು ನಗುತ್ತಾ ನರಮಾಂಸಗಳು ತುಂಬಿದ ಪೆಟ್ಟಿಗೆಗಳೊಡನೆ (ರಕ್ತನದಿಗಳನ್ನು) ದಾಟುತ್ತಿರಲು, ಕವಚಗಳ ಕಟಕಟಗಳಿಂದಲೂ ಅಟ್ಟಹಾಸಗಳಿಂದಲೂ ಭಯಂಕರವಾದ ಭಟರ ಭ್ರುಕುಟಿಗಳಿಂದ ಭೀಷಣವಾಗಿತ್ತು (ಆ ರಣಭೂಮಿ.)

ಏಕಾಂತಮಾರಣೈಕಾಂತ ಮರಣೈಕಾಂತ ಭೂಷಣಾಂ ।
ಪ್ರಹಾರದಾನಗ್ರಹಣ ಕಾರ್ಪಣ್ಯಾಪಾರ ದೂಷಣಾಂ ॥೨೪॥

ಶೂರವಾರಣ ಸಾಮಂತ ಮದವಾರಿವಿಶೋಷಣಂ ।
ಮಾರಣೈಕಾಂತ ರಸಿಕ ಕೃತಾಂತಾನಂದ ಪೋಷಣಂ ॥೨೫॥

ಅವಿಕತ್ಥನ ಗುಪ್ತಾನಾಂ ಶೂರಾಣಾಂ ಜಯಘೋಷಣಾಂ ।
ಅಶೂರಾಣಾಂ ಚ ಗುಪ್ತಾನಾಂ ಪ್ರಭಾವೃದ್ಘೋಷಣಾಂ ಪದಂ ॥೨೬॥

ಶೌರ್ಯಾದೀನಾಂ ಪ್ರಸುಪ್ತಾನಾಂ ಸಗುಣಾನಾಂ ಪ್ರಬೋಧನಂ ।
ಧನಮಾಧಾರ ಭೂತಾನಾಂ ರಾಷ್ಟ್ರೇಷು ಭುಜಶಾಲಿನಾಂ ॥೨೭॥

೨೪. ಏಕಾಂತವಾಗಿ ಮಾರಣ ಮರಣಗಳನ್ನು ಅನುಭವಿಸುವುದೇ ಭೂಷಣವೆಂಬ, ಪ್ರಹಾರಗಳ ದಾನ ಗ್ರಹಣಗಳಲ್ಲಿ ಅಸಮರ್ಥರಾಗಿರುವುದು ದೂಷಣ ಎಂಬ ಶೂರರಿಂದ (ಕೂಡಿತ್ತು.)

೨೫. ಶೂರ ವಾರಣ, ಶೂರ ಸಾಮಂತ ಇವರ ಮದವಾರಿ ವಿಶೋಷಣ ಮಾಡುವ, ಮಾರಣದಿಂದಲೇ ಸಂತೋಷಪಡುವ ಏಕಾಂತ ರಸಿಕರು ಬೇಕಾದ ಹಾಗೆ ಆನಂದಪಡುವ, (ಸ್ಥಾನವಾಗಿತ್ತು ರಣಭೂಮಿ.)

೨೬. ತಮ್ಮ ಶೌರ್ಯವನ್ನು ಹೇಳಿಕೊಳ್ಳದೆ ಗುಪ್ತವಾಗಿರುವ ಶೂರರ ಜಯಘೋಷಣವೂ ಅಶೂರರಾಗಿ ಗುಪ್ತರಾಗಿರುವವರ ಬರಿಯ ಕೂಗುಗಳೂ (ಸೇರಿದ್ದುವು)

೨೭. ಪ್ರಸುಪ್ತವಾಗಿದ್ದ ಶೌರ್ಯಾದಿ ಸದ್ಗುಣಗಳೆಲ್ಲವೂ (ಇಲ್ಲಿ) ಪ್ರಬುದ್ಧವಾಗುತ್ತಿದ್ದುವು. ರಾಷ್ಟ್ರಗಳ ರಕ್ಷಣೆಗೆ ಆಧಾರಭೂತರಾಗಿರುವ ಭುಜ ಬಲಶಾಲಿಗಳಿಗೆ ಧನವು ಈ ಗುಣಗಳು ತಾನೇ!

ದಂತ್ಯಾರೂಢರಥಾಸ್ಫೋಟೆ ಪ್ರಭಗ್ನಕಟವಾರಣಂ ।
ಸಮಸ್ತಮತ್ತಗಂಧೇಭ ದಾನವಾರಿ ನಿವಾರಣಂ ॥೨೮॥

ಸಾಧಸಾರವಸಾಮಂತ ಮುಕ್ತಮತ್ತಮತಂಗಜಂ ।
ಜರಜ್ಜಿತಕರಾನೀಕ ಕಲ್ಪಿತಾಸೀಸವೇದನಂ ॥೨೯॥

ದಿನಂ ದಿನಕರಸ್ಯೇವ ನೃಪಸ್ಯ ಶರಣಂ ಗತಂ ।
ಅನಾಗತ ಭಟವ್ರಾತ ಪಿಷ್ಟಾರ್ಧಮೃತಮಾನವಂ ॥೩೦॥

ಮಾನವಾಯು ಬಲೋನ್ಮತ್ತನತಪ್ರಾರಬ್ಧಕುಟ್ಟನಂ ।
ಧನಾನಾಂ ಪ್ರಾಣಪಣ್ಯಾನಾಂ ನವಮಾಪಣ ಪತ್ತನಂ ॥೩೧॥

---

೨೮. ಆನೆಗಳನ್ನೇರಿದವರಿಗೂ ರಥಗಳನ್ನು ಏರಿದವರಿಗೂ ಯುದ್ಧವಾದಾಗ ಆನೆಗಳ ಕೊಂಬು ಮುರಿದು ಅಲ್ಲಿರುವ ಮತ್ತ ಮಾತಂಗಗಳ ಮದಜಲವೆಲ್ಲ ಶೋಷಣವಾದಂತಾಗುವುದು.

೨೯. ಕ್ರೋಧದಿಂದ ಕೂಗುತ್ತ ಸಾಮಂತರು ತಮ್ಮ ಮತ್ತ ಮತಂಗಜಗಳನ್ನು ಮುಂದೆ ನೂಕುವರು: ಮುದುಕರಾಗಿ ಕೈಯಾಡದಿದ್ದವರೂ ಆವೇಶದಿಂದ ತಮ್ಮ ಕೈಚಳಕವನ್ನು ತೋರುತ್ತ ತಮ್ಮ ಖಡ್ಗವಿದ್ಯಾ ಪಾಂಡಿತ್ಯವನ್ನು ಮೆರೆಯುವರು.

೩೦. ದಿನವು ದಿನಕರನನ್ನು ಶರಣುಹೋಗುವಂತೆ, ದೊರೆಗೂ ಶರಣಾಗತವಾಯಿತು(?) ಇನ್ನೂ ಬರದಿರುವ ಭಟರು, ಹಿಟ್ಟುಹಿಟ್ಟಾಗಿ ಅರ್ಧ ಮೃತರಾದ ಮಾನವರು ಉಳ್ಳುದಾಗಿತ್ತು ಆ ರಣಭೂಮಿ.

೩೧ ಅಭಿಮಾನವೆಂಬ ವಾಯುರೋಗದ ಬಲದಿಂದ ಉನ್ಮತ್ತರಾದವರೂ ತಲೆ ತಗ್ಗಿಸಿದರೂ ಬಿಡದೆ ಕುಟ್ಟುವ ಪ್ರಾರಬ್ಧವುಳ್ಳವರೂ ತುಂಬಿದ ಆ ರಣಭೂಮಿಯು ಪ್ರಾಣಗಳೆಂಬ ಪಣ್ಯಗಳನ್ನು ಮಾರುವ ಹೊಸ ಸಂತೆಯಾಗಿತ್ತು.

ಪಟಿನದ್ಧ ಪತಾಕೌಘ ಚಾರುಸಂಚಾರಿ ದೋರ್ದ್ರುಮಂ ।
ರಕ್ತೋಜ್ಜ್ವಲತ್ವಾತ್ತ್ರೈಲೋಕ್ಯಲಕ್ಷ್ಮೀ ಭೂಷಣವಿದ್ರುಮಂ ॥೩೨॥

ಮಂದಾರಾಹತನಿರ್ಯಾತಕ್ಷೀರೋದಜಲಸುಂದರೈಃ ।
ಛತ್ರೈಶ್ಚಾಧಿಕಹೇತ್ಯೋಘ ಪುಷ್ಪಾಢ್ಯಗಗನಾಂಗಣಂ ॥೩೩॥

ಗಣಗೀರ್ವಾಣ ಗಂಧರ್ವಗೀತ ಶೂರಾಶಯಂ ಕೃತಂ ।
ತದ್ಧ್ವಾತರ ಲತಾಲಾಗ್ರತೇತಿ ಹ ಲಾಹಲಾಯುಧಂ ॥೩೪॥

ಸಂಘಪ್ರಹರಣ ಸಂಖ್ಯಯಾತುಧಾನಾರ್ಘುಣಜ್ಜ್ವಣಂ ।
ಘುರತ್ತ್ವ ಚಾದ್ರಿಗ.ಹಾಗೇಹಪೂರಿತಾಪೂರ್ವಮಂದ್ರಿನಂ ॥೩೫॥

---

೩೨. ಪಟಿಗಳನ್ನು ಕಟ್ಟಿರುವ ಪತಾಕೆಗಳನ್ನು ಹಿಡಿದಿರುವ ಓಡಾಡುತ್ತಿರುವ ತೋಳುಗಳೆಂಬ ಮರಗಳು ರಕ್ತದಿಂದ ಉಜ್ವಲವಾಗಿರುವ ತ್ರೈಲೋಕ್ಯಲಕ್ಷ್ಮಿಯ ಭೂಷಣಗಳಾದ ಹವಳಗಳು ಎನ್ನುವಂತಿದ್ದುವು.

೩೩. ಮಂದಾರವು ಈಚೆಗೆ ಬಂದಾಗ ಉಂಟಾದ ಕ್ಷೀರಸಮುದ್ರದ ಸಫೇನ ಜಲದಂತೆ ಸುಂದರವಾದ ಛತ್ರಗಳಿಂದಲೂ, ನಿಬಿಡವಾಗಿ ತುಂಬಿರುವ ಆಯುಧಗಳಿಂದಲೂ ಕೂಡಿ, ಗಗನಾಂಗಣವು ಪುಷ್ಪಗಳಿಂದ ತುಂಬಿದಂತಿತ್ತು.

೩೪. ಪ್ರಮಥಾದಿ ಗಣಗಳು, ಗೀರ್ವಾಣರು, ಗಂಧರ್ವರು, ಶೂರರ ಗುಣಗಳನ್ನು ಹೊಗಳುತ್ತಿದ್ದರು. ಆ ಗಂಧರ್ವಾದಿಗಳ ತೇಜಸ್ಸು ತಲಲವಾದ ಧ್ವಜಾಗ್ರಗಳನ್ನು ಬೆಳಗುತ್ತಿತ್ತು. ಆಯುಧಗಳನ್ನು ಧರಿಸಿದ ಭಟರು ಹಲಾಯುಧನಂತೆ ಉಗ್ರವಾಗುತ್ತಿದ್ದರು.

೩೫. ಅಪೂರ್ವ ದುರ್ಗಮಗಳಂತಿದ್ದ ರಾಕ್ಷಸ ಗಣಗಳು ಸದ್ದುಮಾಡದೆ ಗುಂಪುಗುಂಪಾಗಿ ಬಂದು ಅಲ್ಲಿರುವ ಶವಗಳನ್ನು ತಿಂದು ತಮ್ಮ ಮನೆಗಳಾದ ಗುಹೆಗಳಿಗೂ ಹೊತ್ತುಕೊಂಡು ಹೋಗುತ್ತಿದ್ದುವು.

ಕಚತ್ಕುಂತವನವ್ಯಸ್ತಶಿರಃ ಕರವೃತಾಂಬರಂ ।
ಕ್ಷೇಪಣೋನ್ಮುಕ್ತ ಪಾಷಾಣಪೂರಪ್ಲಾತಕಕುಬ್ಲತಂ ॥೩೬॥

ಮಹಾಚಟಚಟಾಶಬ್ದ ಸ್ಫುಟದ್ರವ ಬೃಹದ್ದ್ರುಮಂ ।
ನಾರೀಹಲಹಲಾರಾವರಣನ್ನಗರ ಮಂದಿರಂ ॥೩೭॥

ಮಂದರಾವಾನಲಾಕಾರ ನಭೋಭಾತಾಯುಧವ್ರಜಂ ।
ಪರಿತ್ಯಜ್ಯ ಧನಂ ಗೇಹಂ ದೂರೋರ್ವೀವಿದ್ರುತಪ್ರಜಂ ॥೩೮॥

ಸರ್ವತೋಹೇತಿವಹನಾನ್ತ್ರಸ್ತ ಮುಕ್ತಪೇಕ್ಷಕೋಜ್ಝಿತಂ ।
ವರ್ಜಿತಂ ಭೀರುಭಿಃ ಪಕ್ಷಿರಾಜವೃಂದ ಮಿವಾಹಿಭಿಃ ॥೩೯॥

---

೩೬. ಹೊಳೆಯುತ್ತಿರುವ ಕುಂತಗಳಿಂದ ರಣಭೂಮಿಯು ಅರಣ್ಯವಾಗಿತ್ತು. ಅವು ಕತ್ತರಿಸಿದ ಶಿರಸ್ಸುಗಳೂ ಕರಗಳೂ ಆಕಾಶವನ್ನೆಲ್ಲ ತುಂಬಿದ್ದುವು. ಅಲ್ಲಿ ಯಂತ್ರಗಳಿಂದ ಎಸೆದ ಕಲ್ಲುಗಳು ದಿಕ್ತಟಗಳನ್ನೆಲ್ಲ ತುಂಬಿದ್ದುವು.

೩೭. ಭುಜಗಳನ್ನು ಕತ್ತರಿಸಿದಾಗ ಆಗುವ ಮಹಾಶಬ್ದವು ದೊಡ್ಡ ಮರವನ್ನು ಕಡಿಯುತ್ತಿರುವರೆಂಬ ಭ್ರಾಂತಿಯನ್ನು ಹುಟ್ಟಿಸುತ್ತಿತ್ತು. ನಗರ ಮಂದಿರಗಳ ತುಂಬಾ ಹೆಂಗಸರು ಹಲಹಲಾ ಎಂದು ಕೂಗಿಕೊಳ್ಳುತ್ತಿದ್ದರು.

೩೮ ಮಂದ ಧ್ವನಿಯಿಂದ ಉರಿಯುವ ಬೆಂಕಿಯಂತೆ ಆಕಾಶವನ್ನೆಲ್ಲ ಆಯುಧಗಳು ತುಂಬಿದ್ದುವು ಮನೆ, ಹಣ, ಎಲ್ಲವನ್ನೂ ಬಿಟ್ಟು ಪ್ರಜೆಗಳು ದೂರ ದೇಶಕ್ಕೆ ಓಡಿಹೋಗುತ್ತಿದ್ದರು.

೩೯. ಹಾವುಗಳು ಇಲ್ಲದ ಗರುಡರ ಗುಂಪಿನಂತೆ, ಭೀರುಗಳು ಇಲ್ಲದ, ದಿಕ್ಕುದಿಕ್ಕುಗಳಲ್ಲಿಯೂ ಆಯುಧದಾರಿಗಳೇ ತುಂಬಿರುವ, ಅದನ್ನು ನೋಡುವುದಕ್ಕೂ ಒಬ್ಬರಿಲ್ಲದ (ಆ ರಣಭೂಮಿಯು ಭಯಂಕರವಾಗಿತ್ತು.)

ದಂತಿದಂತವಿನಿಷ್ಪಿಷ್ಟಶಿಷ್ಟಸದ್ಭಟಸಂಕಟಂ ।
ಕಟೇ ಮೃತ್ಯೋರಿವ ನರದ್ರಾಕ್ಷಾಪೀಡನಯಂತ್ರಕೇ ॥೪೦॥

ಯಂತ್ರಪಾಷಾಣಸಂಘಟ್ಟಪಿಷ್ಟಾಂಬರಗತಾಯುಧಂ ।
ಯೋಧನಾದನದದ್ದಂತಿ ವೃಂದಬಂಧುರ ಕಂಧರಂ ॥೪೧॥

ಧರಾಧರದರೀರಂತಃ ಪ್ರತಿಶ್ರುತ್ಯೋತ್ಥಗರ್ಜಿತಂ ।
ಅರ್ಜಿತಂ ಪ್ರಾಣಸರ್ವಸ್ವಮರ್ಜಯದ್ಭಿರುಪಾರ್ಜಿತಂ ॥೪೨॥

ಭರ್ಜಿತಂ ಹೇತಿಪತನೈರಗ್ನಿದಾಹೈಶ್ಚ ಸಂತತೈಃ ।
ತೈರೇವಾನ್ಯೈರಥಾನ್ಯೈಶ್ಚ ದ್ವಂದ್ವಯುದ್ಧೈರಸಿಷ್ಠಿತಂ ॥೪೩॥

---

೪೦. ದಂತಿ ದಂತಗಳಿಂದ ಚೂರು ಚೂರಾಗಿರುವ ಶಿಷ್ಟ ಸದ್ಭಟರು ಅಲ್ಲಿ ಸಂಕಟಪಡುತ್ತ ಮೃತ್ಯುವಮುಖದಲ್ಲಿ ಬಿದ್ದಿದ್ದರು. ಅದನ್ನು ನೋಡಿದರೆ ನರರೆಂಬ ದ್ರಾಕ್ಷೆಗಳನ್ನು ಅರೆಯುವ ಯಂತ್ರವೋ ಈ ರಣಭೂಮಿ ಎನ್ನುವಂತಿತ್ತು.

೪೧. ಯಂತ್ರಗಳು ಎಸೆದ ಪಾಷಾಣಗಳಿಗೆ ಸಿಕ್ಕಿ ಪಿಷ್ಟವಾಗಿ ಆಕಾಶಕ್ಕೆ ಹಾರಿದ ಆಯುಧಗಳು, ಯೋಧರ ನಾದಗಳನ್ನು ಕೇಳಿ ಅಬ್ಬರಿಸುವ ಆನೆಯ ಗುಂಪುಗಳ ಮೆರೆಯುವ ಕಂಧರಗಳೂ,

೪೨. ಬೆಟ್ಟಗಳ ಗವಿಗಳನ್ನು ಸೇರಿ ಅಲ್ಲಿಂದ ಪ್ರತಿಧ್ವನಿತವಾಗಿ ಹೊರಹೊಮ್ಮುವ ಗರ್ಜನೆಗಳು, ತಮ್ಮ ಪ್ರಾಣ ಸರ್ವಸ್ವವನ್ನೂ ಒಪ್ಪಿಸಿ ಗೆಲ್ಲಬೇಕೆಂದು ಯುದ್ಧ ಮಾಡುತ್ತಿರುವ ಶೂರರೂ (ಆ ರಣಭೂಮಿಯಲ್ಲಿ ತುಂಬಿದ್ದರು.)

೪೩. ಆಯುಧಗಳ ಸುಡುವಿಕೆಯಿಂದಲೂ ಸಂತತವಾದ ಅಗ್ನಿದಾಹದಿಂದಲೂ ಸುಟ್ಟು ಕರಿಯಾಗುತ್ತಿದ್ದರೂ ಬಿಡದೆ ಒಬ್ಬರೊಡನೊಬ್ಬರು ಮಾಡುತ್ತಿರುವ ದ್ವಂದ್ವ ಯುದ್ಧಗಳು ಇನ್ನೂ ಮುಗಿಯದಿತ್ತು ಆ ರಣಭೂಮಿಯಲ್ಲಿ.

ವೇಷ್ಟಿತಂ ಮೃತಶಿಷ್ಟೈಶ್ಚ ಸಾರೈಃ ಸುಭಟಪೇಟಕೈಃ ।
ಕೈಲಾಸೈರಿವ ಸಂಶುದ್ಧೈರೀಶ್ವರಾಧಾರತಾಂ ಗತೈಃ ॥೪೪॥

ತ್ರೈರುದಾರೈಃ ಸಮಾಕ್ರಾಂತಂ ಯೇ ಮೃತ್ಯೋರಪಿ ಮೃತ್ಯವಃ ।
ಮರಣಂ ಜೀವಿತಂ ಯೇಷಾಂ ಜೀವಿತಂ ಮರಣಂ ರಣೇ ॥೪೫॥

ರಣೇ ನಭಸಿ ನಿರ್ಲೂನವರವಾರಣವಾರಿಜೇ ।
ಸಾರಸಾಃ ಸರಸೀವಾತ್ರ ರೇಜುರತ್ಯುದ್ಭಟಾ ಭಟಾಃ ॥೪೬॥

---

೪೪. ಮೃತಶಿಷ್ಟರಾದ ಸಾರಭೂತರಾದ ಸುಭಟ ಪೇಟಕಗಳಿಂದ ತುಂಬಿ, ಸ್ವಾಮಿದ್ರೋಹಿಗಳಲ್ಲದೆ ಶುದ್ಧರಾಗಿರುವ, ಈಶ್ವರಾಧಾರರಾದ ಶೂರರಿಂದ ಆ ರಣ ಭೂಮಿಯು ಕೈಲಾಸದಂತೆ ಇತ್ತು.

೪೫. ಜೀವಿತವೇ ಮರಣವು, ರಣದಲ್ಲಿ ಮರಣವೇ ಜೀವಿತವು ಎನ್ನುವ, ಮೃತ್ಯುವಿಗೂ ಮೃತ್ಯುವಾದ ಉದಾರ ಸುಭಟರಿಂದ ಕೂಡಿತ್ತು ಆ ರಣಭೂಮಿ.

(ಯೇಷಾಂ ಭಟನಾಂ ರಣೇ ಮರಣಂ ಜೀವಿತಮಿವ ಪ್ರಿಯಂ, ಪಲಾಯನೇನ ಜೀವಿತಂ ಜೀವನಂ ತು ಮರಣ ಮಿವ ದ್ವೇಷ್ಯಂ। ಉದಾರೈಸ್ತೈಃ ಪುರುಷೈಃ ತ್ರೈ ಲೋಕ್ಯಮಪಿ ಸಮಾಕ್ರಾಂತಂ ಜಿತಮಿತ್ಯರ್ಥಃ। ಯೇ ಮೃತೋರಪಿ ಮೃತ್ಯವಃ ಪರ ಮಪದ ಪ್ರಾಪ್ತಾಃ ಸಂಪದ್ಯಂತೇ। ಯಥಾಹುಃ "ದ್ವಾವೇತೌ ಪುರುಷೌ ಲೋಕೇ ಸೂರ್ಯಮಂಡಲ ಭೇದಿನೌ। ಪರಿವ್ರಾಡ್ಯೋಗ ಯುಕ್ತಶ್ಚ ರಣೇಚಾಭಿ ಮುಖೋ ಹತಃ" ಇತಿ—ತಾ. ಪ್ರ.)

೪೬. ಸರಸ್ಸಿನಲ್ಲಿ ಗಜೇಂದ್ರನು ಕಿತ್ತಿಸೆದ ಕಮಲಗಳು ಆಕಾಶದಲ್ಲಿ ಮೆರೆ ಯುವಂತೆ, ಉದ್ಭಟರಾದ ಭಟರು ರಣದಲ್ಲಿ ಮೆರೆದರು.

# ಏಕದಶಾಧಿಕ ಶತತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ—

ಇತಿ ಕಲ್ಪಾಂತಸದೃಶೇ ಯತ್ತೇ ಸಮರಸಂಭ್ರಮೇ ।
ಪತಂತೀಷೂತ್ಪತಂತೀಷು ಸೇನಾಸು ಸಮರೇಜಿರೇ ॥೧॥

ತೂರ್ಯಭೇರೀ ಮಹಾಶಂಖಖಡ್ಗೇಷು ಖೇ ನದತ್ಸು ಚ ।
ಧನುರ್ಧ್ವನಿಷು ವೀರಾಣಾಂ ತಾರಕ್ರೇಂಕಾರ ಕಾರಿಷು ॥೨॥

ಅನ್ಯೋನ್ಯಕಠಿನಾಸ್ಫೋಟವಿಕಟೇ ಭಟಪೇಟಕೇ ।
ಕವತ್ಕಟಕಟ್ಟಟಾಟೋಪೇ ಕಟುಕುಟ್ಟಿತ ಕಂಕಟೇ ॥೩॥

---

# ನೂರ ಹನ್ನೊಂದನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧. ಹೀಗೆ ಕಲ್ಪಾಂತ ಸದೃಶವಾಗಿ ಸಮರಸಂಭ್ರಮವು ಪ್ರವೃತ್ತವಾಗಿರಲು, ಸಮರಾಂಗಣದಲ್ಲಿ ಸೇನೆಗಳೆಲ್ಲವೂ ಹಾರುತ್ತಲೂ ಬೀಳುತ್ತಲೂ ಇರಲು,

೨. ತೂರ್ಯ, ಭೇರಿ, ಮಹಾಶಂಖ, ವಾದ್ಯಗಳೂ ಖಡ್ಗ (ಆದಿ) ಆಯುಧಗಳೂ ಆಕಾಶವನ್ನು ತುಂಬುವಂತೆ ಮೊಳಗುತ್ತಿರಲು, ತಾರಸ್ವರದ ಕ್ರೇಂಕಾರಮಾಡುತ್ತ ವೀರರ ಧನುಸ್ಸುಗಳು ಧ್ವನಿಗೊಂಡಿರಲು,

೩. ಅನ್ಯೋನ್ಯವಾಗಿ ಕಠಿನವಾಗಿ ಹೋಳಾಗುವಂತೆ ಹೊಡೆದಾಡುತ್ತ ಭಯಂಕರವಾಗಿ ಸೈನ್ಯಗಳಿರಲು, ಕಟಕಟ ಎಂಬ ಶಬ್ದವು ಉಗ್ರವಾಗಿರಲು, ಕವಚಗಳನ್ನು ಪುಡಿ ಮಾಡುವಂತೆ ಪ್ರಹಾರಗಳು ಬೀಳುತ್ತಿರಲು,

ಕಿಂಚಿತ್ಪ್ರಭಜ್ಯಮಾನಾಸು ವಿಶಲ್ಯಶ್ಯಾಸು ಸಂಗರೇ ।
ವಿಪಶ್ಚಿತ್ಪಕ್ಷಸೇನಾಸು ಲೂಯಮಾನಲತಾಸ್ವಿವ ॥೪॥

ಜಯಘೋಷಸ್ಫುರದ್ದುನ್ನಾಶಾ ನೃಪಸ್ಯ ಪ್ರಯಾಣದುಂದುಭಿಃ ।
ಚತುರ್ಧಾಶನಿ ಸಂಪೂರ್ಣಕಲ್ಪಾಭ್ರರಸಿತಾಂಸಲಃ ॥೫॥

ಸ್ಫುಟಿತಾನಾಂ ಕುಲಶೈಲಾನಾಂ ತುಲ್ಯಕಾಲಮಿವೋತ್ಥಿತಃ ।
ಸ್ಫುಟಚ್ಚಟಚಟಾಸ್ಫೋಟೈರ್ಜರ್ಜರಿತಾಖಿಲ ದಿಕ್ತಟಃ ॥೬॥

ಲೋಕಪಾಲೈರಿವಾಕಾರೈರ್ನಾರಾಯಣಭುಜೈರಿವ ।
ಸ ಚತುರ್ಭಿಶ್ಚತುರ್ದಿಕ್ಕಂ ನಿರ್ಜಗಾಮ ಮಹೀಪತಿಃ ॥೭॥

---

೪. ಕತ್ತರಿಸಿದ ಲತೆಗಳಂತೆ, ವಿಪಶ್ಚಿತನ ಸೇನೆಗಳು ಅಲ್ಲಲ್ಲಿ ಪುಡಿಮೋಡುತ್ತ, ಮೂರ್ಛೆಗೆ ಸಲ್ಲುತ್ತ ಸಂಗರವು ನಡೆಯುತ್ತಿರಲು,

೫. ಅರಸನು ವಿಜಯ ಪ್ರಯಾಣ ದುಂದುಭಿಯು ದಿಕ್ತಟಗಳನ್ನು ತುಂಬುತ್ತಾ ನಾಲ್ಕು ಗುಡುಗುಗಳು ಒಟ್ಟಿಗೆ ಬಿದ್ದಂತೆ, ಪ್ರಳಯಕಾಲದ ಮೇಘಗಳ ಮೊಳಗಿದಂತೆ, ಮೊಳಗಿತು.

೬. ಕುಲಪರ್ವತಗಳೆಲ್ಲಾ ಏಕಕಾಲದಲ್ಲಿಯೇ ಒಡೆಯುವುವೋ ಎನ್ನುವಷ್ಟು ಭಾರಿಯಾಗಿ ಚಟಚಟನೆ ಒಡೆಯುತ್ತಾ ದಿಕ್ತಟಗಳೆಲ್ಲಾ ಜಡವಾಗುವಂತೆ ಮಾಡುತ್ತ,

೭. ಲೋಕಪಾಲಕರೋ, ಆಕಾರಗೊಂಡು ಬಂದಿರುವ ಶ್ರೀಮನ್ನಾರಾಯಣನ ಭುಜಗಳೋ, ಎಂಬಂತೆ, ಆ ಮಹೀಪಾಲನು ತನ್ನ ನಾಲ್ಕು ರೂಪಗಳಿಂದ, ನಾಲ್ಕು ದಿಕ್ಕುಗಳಲ್ಲಿ ಹೊರಟನು.

ಚತುರಂಗೇಣ ಮಹತಾ ಸೈನ್ಯೇನ ಪರಿವಾರಿತಃ ।
ಅಟ್ಟಾಲ ವಲಯಾತ್ತ್ಯಕ್ತ್ವಾ ನಿರ್ಗತ್ಯ ನಗರಾದ್ಬಹಿಃ ॥೮॥

ದದರ್ಶಾತ್ಮಬಲಂ ರಿಕ್ತಂ ಬಲವದ್ರಿಪುಮಂಡಲಂ ।
ಗರ್ಜಂತಂ ಚಲಯಾಕೃತ್ಯಾ ಭೀಮಂ ಯುದ್ಧೋದ್ಧತಾರ್ಣವಂ ॥೯॥

ಶರಸೀಕರ ನೀರಂಧ್ರಂ ಮಕರವ್ಯೂಹಸಂಕುಲಂ ।
ವಾರಣವ್ಯೂಹವಲಿತಂ ತರಂಗವ್ಯೂಹವಿಸ್ತೃತಂ ॥೧೦॥

ಚಕ್ರಾವರ್ತವಹದ್ವ್ಯೂಹ ಕಲ್ಲೋಲಕಲಿತಾಂತರಂ ।
ಚಲದ್ರಥ ಶತಾವರ್ತಂ ಪತಾಕಾಲಹರೀಗಣಂ ॥೧೧॥

---

೮. ಮಹತ್ತಾದ ಚತುರಂಗ ಸೈನ್ಯದೊಡನೆ, ಅಟ್ಟಾಲ ವಲಯಗಳಿಂದ ಹೊರಟು ನಗರದಿಂದ ಹೊರಕ್ಕೆ ಬಂದನು.

೯. ತನ್ನ ಬಲವು ಕ್ಷಯವಾಗಿರುವುದನ್ನೂ ಶತ್ರು ಮಂಡಲವು ಬಲವಾಗಿ, ಗರ್ಜಿಸುತ್ತಾ ಭಯಂಕರವಾಗಿ ಯುದ್ಧ ವಿಜಯದಿಂದ ಉದ್ಧತವಾಗಿ ಸಮುದ್ರದಂತೆ ನುಗ್ಗುತ್ತಿರುವುದನ್ನೂ ಕಂಡನು.

೧೦. ಶರಗಳೆಂಬ ತುಂತುರಗಳಿಂದ ತುಂಬಿ, ಸೈನ್ಯವ್ಯೂಹಗಳೆಂಬ ಮಕರಗಳಿಂದ ಸಂಕುಲವಾಗಿ, ಆನೆಗಳ ಗುಂಪುಗಳಿಂದ ಬಳಸಲ್ಪಟ್ಟು (ಕುದುರೆಗಳೆಂಬ) ತರಂಗ ವ್ಯೂಹಗಳಿಂದ ವಿಸ್ತಾರವಾಗುತ್ತ,

೧೧. ಚಕ್ರಾವರ್ತದಂತೆ ಕಾಣುತ್ತ ಹರಿದು ಮುಂದಕ್ಕೆ ಹೋಗುತ್ತಿರುವ ಕಲ್ಲೋಲಗಳಿಂದ ಕೂಡಿರುವ, ನಡೆಯುತ್ತಿರುವ ನೂರಾರು ರಥಗಳಿಂದಲೂ, ಪತಾಕೆಗಳೆಂಬ ಲಹರೀ ಗಣಗಳಿಂದಲೂ ಕೂಡಿತ್ತು ಆ ಸೈನ್ಯಸಮುದ್ರ.

ಪ್ರಸ್ಫುರಚ್ಛತ್ರಫೇನಾಢ್ಯಂ ಪಟುಹೇಷಿತಸೀತ್ಕೃತಂ ।
ಸಮುಲ್ಲಸದ್ಧೇತಿ ಜಲಂ ಖಚಗ್ರಾಹಾಕರಂ ಪರಂ ॥೧೨॥

ತರತ್ತರಲಮಾತಂಗ ತುರಂಗೌಘತರಂಗಕಂ ।
ಹೇತ್ಯಂಭಸಿ ಕಚತ್ಪ್ರಾಸ ಸಮುದ್ಯದ್ಗುಲುಗುಲೋರವಂ ॥೧೩॥

ದರೀದಲನ ಸಂಕ್ಷುಬ್ಧಸಮೀರಜನಿತಘುಂಘುಮಂ ।
ನತೋನ್ನತಕೃತಾದ್ರಿಭ್ರಮ ಮಹಾಸ್ಯಂದನಶಂಕಕಂ ॥೧೪॥

ಮಜ್ಜನ್ಮಾತಂಗ ತುರಗಹೇಲಾಹತ ಮಹೀಧರಂ
ಅಪಾರವಿಚರತ್ಪೂರ ಕಲ್ಲೋಲಾಕುಲ ಮಹಾಜಲಂ ॥೧೫॥

೧೨. ಹೊಳೆ ಹೊಳೆಯುತ್ತಿರುವ ಶ್ವೇತಚ್ಛತ್ರಗಳಿಂದ ಕೂಡಿತ್ತು. ಹಯ ಗಳ ಹೇಷಾರವದಿಂದ ಶೀತ್ಕೃತವಾಗಿತ್ತು. (ಯಾದಸಾಂ ಶೀತ್ಕಾರ ಶಬ್ದ) ಮೆರೆ ಯುತ್ತಿರುವ ಆಯುಧಗಳ ಕಾಂತಿಯೆಂಬ ಜಲದಿಂದ ಕೂಡಿತ್ತು. ಪ್ರಕಾಶಿಸುತ್ತಿರುವ ಖಡ್ಗಧಾರಿಗಳಿಗೆ ಆಕರವಾಗಿತ್ತು.

೧೩. ನಡೆಯುತ್ತ ಚಂಚಲವಾಗಿರುವ ಮಾತಂಗ, ತುರಂಗ,ಗಳೆಂಬ ತರಂಗ ಗಳಿಂದ ಕೂಡಿ, ಆಯುಧಗಳೆಂಬ ಜಲದಲ್ಲಿ, ಅಲ್ಲಲ್ಲಿ ಮಿನುಗುವ ಪಾಶಿಗಳಿಂದ ಸ್ಫೋಟ ಕರ ಗುಲುಗುಲು ಧ್ವನಿಯಿಂದ ಕೂಡಿತ್ತು.

೧೪. ದರಿಗಳನ್ನು ಒಡೆದುದರಿಂದ ಸಂಕ್ಷೋಭಗೊಂಡಿರುವ ವಾಯುಗಳ ಘುಂಘುಮ ಶಬ್ದಗಳಿಂದ ಕೂಡಿ, ಹಳ್ಳದಿಣ್ಣೆಗಳಿಂದ ಕೂಡಿದ ಮಹಾ ಶರೀರಗಳಾದ ಪರ್ವತಗಳು ಬರುತ್ತಿವೆಯೋ ಎಂಬಂತೆ ಕಾಣುತ್ತ,

೧೫. ಮುಳುಗುತ್ತ ಏಳುತ್ತ ಇರುವ ಮಾತಂಗ ತುರಂಗಮಗಳು ಲೀಲೆ ಯಿಂದ ಬೆಟ್ಟಗಳನ್ನು ಹೊಡೆಯುತ್ತಿರಲು, ಅಪಾರವಾಗಿ ನುಗ್ಗಿಬರುತ್ತಿರುವ ಪ್ರವಾಹ ಕಲ್ಲೋಲವುಳ್ಳ ಮಹಾಜಲದಂತಿತ್ತು ಆ ಸೇನೆ.

ಅಕಾಲಕಲ್ಪಾಂತದಶಾ ಸಮುತ್ಥಾನ ಘನಾಕೃತಿಂ ।
ಆಕ್ರಾಂತರೋದಸೀರಂಧ್ರರುಧಿರೈಕ ಮಹಾರ್ಣವಂ ॥೧೬॥

ಕಚದಾಯುಧ ಖಂಡೌಘಡೀನರತ್ನಾವೃತೋದರಂ ।
ಚಲದ್ವ್ಯೂಹ ಚಲದ್ವ್ಯೂಹ ಯಂತ್ರಾಶ್ಮಕ್ಷೇಪಣಾಶ್ಮಕಂ ॥೧೭॥

ರತ್ನಸೀಕರನೀಹಾರ ಸಾಂಧ್ಯಾಭ್ರ ಪಟಲಾನತಂ ।
ಕ್ವಚಿತ್ಪಾಂಸುಪಯೋವಾಹ ಪೀತಹೇತಿ ಪಯೋಧರಂ ॥೧೮॥

ತಮಾಲೋಕ್ಯ ರಣಾಂಭೋಧಿಮಗಸ್ತ್ಯೋಽಸ್ಯ ಭವಾಮ್ಯಹಂ ।
ಇತಿ ಸಂಚಿತ್ಯ ಮನಸಾ ಸ ಪಾತುಂ ತಂ ರಣಾರ್ಣವಂ ॥೧೯॥

---

೧೬. ಅಕಾಲದಲ್ಲಿ ಬಂದ ಪ್ರಲಯ ದಶೆಯಲ್ಲಿ ಕಾಣಿಸಿಕೊಂಡ ಮೇಘಗಳಂತೆ, ದಿಕ್ತಟಗಳನ್ನೆಲ್ಲ ಆಕ್ರಮಿಸಿಕೊಂಡ ರುಧಿರ ಮಹಾರ್ಣವದಂತೆ,

೧೭. ಹೊಳೆಯುತ್ತಿರುವ ಆಯುಧ ಖಂಡಗಳ ಗುಂಪುಗಳೆಂಬ ಹಾರುತ್ತಿರುವ ರತ್ನಗಳಿಂದ ತುಂಬಿ ಗುಂಪಾಗಿ ಹೋಗುತ್ತಿರುವ ಸೈನ್ಯಗಳನ್ನು ಯಂತ್ರಗಳಿಂದ ಹೊಡೆದು ಕಲ್ಲುಗಳು ಧ್ವಂಸಮಾಡುತ್ತಿರಲು,

೧೮. ರತ್ನಗಳೆಂಬ ಸೀಕರಗಳೂ ನೀಹಾರಗಳೂ ಸಂಧ್ಯಾಮೇಘ ಪಟಲವೆಂಬ ಭ್ರಾಂತಿಯನ್ನು ಹುಟ್ಟಿಸುತ್ತಿರಲು, ಅಲ್ಲೊಂದೆಡೆ ಧೂಳಿನ ಮೋಡವು ಆಯುಧಗಳೆಂಬ ಮತ್ತೊಂದು ಮೋಡವನ್ನು ಮುಚ್ಚಿಬಿಟ್ಟಿರಲು,

೧೯ ಮುಂದೆ ನುಗ್ಗಿಬರುತ್ತಿರುವ ಆ ರಣಸಮುದ್ರವನ್ನು ನೋಡಿ, ಈ ಸಮುದ್ರಕ್ಕೆ ನಾನು ಅಗಸ್ತ್ಯನಾಗುವೆನು ಎಂದು ಮನಸ್ಸಿನಲ್ಲಿ ಎಣಿಕೆ ಮಾಡುತ್ತ, ಆ ರಣಾರ್ಣವವನ್ನು ಕುಡಿಯಬೇಕೆಂದುಕೊಳ್ಳುತ್ತ,

ಅಸ್ತ್ರಂ ಸಸ್ಮಾರ ವಾಯವ್ಯಂ ಚತುರ್ದಿಕ್ಕಂ ಚ ಸಂದಧೇ ।
ಧನುಷಿ ಶಿಬಿರಾಧಾರೇ ತ್ರಿಪುರಾಂತ ಇವೋಽಸ್ಮತಃ ॥೨೦॥

ಆತ್ಮೀಯದೇಶಸ್ಯೈನ್ಯಾನಾಂ ಶ್ರೇಯೋಽರ್ಥಂ ಶಾಂತಯೇಽನಲಂ ।
ನಮಸ್ಕೃತ್ಯಾಥ ಜಪ್ತ್ವಾಸು ಸ ತತ್ತತ್ಯಾಜ ದಾರುಣಂ ॥೨೧॥

ಯಥಾ ತಥೈವ ತತ್ಯಾಜ ತಸ್ಯ ಸಹಾಯಕಾಸು ಸಃ ।
ಪರ್ಜನ್ಯಾಸ್ತ್ರಂ ಮಹಾಸ್ತ್ರೇಶಂ ಪ್ರಶಮಾತಪಶಾಂತಯೇ ॥೨೨॥

ತಸ್ಮಾದಸ್ತ್ರಮುಷೋ ಘೋರಾದ್ಧನ ಷಃ ಪರಿನಿರ್ಗತಾಃ ।
ಅಷ್ಟಮೂರ್ತೇಽಶ್ಚತುರ್ದಿಕ್ಕ ಮಹಾಕುಹರಪೂರಕಾಃ ॥೨೩॥

---

೨೦. ವಾಯವ್ಯಾಸ್ತ್ರವನ್ನು ಆ ನೃಪತಿಯು ಸ್ಮರಿಸಿದನು. ಅದನ್ನು ಸಂಧಾನಮಾಡಿ ನಾಲ್ಕು ದಿಕ್ಕುಗಳನ್ನೂ ನೋಡಿದನು. ಮೇರುವಿನಲ್ಲಿ ಅಸ್ತ್ರವನ್ನು ಹೂಡಿದ ತ್ರಿಪುರಾಂತಕನಾದ ಮಹೇಶ್ವರನಂತೆ ಧನುಸ್ಸಿನಲ್ಲಿ ಅಸ್ತ್ರವನ್ನು ಹೂಡಿದನು.

೨೧. ತನ್ನ ದೇಶಕ್ಕೂ ಸೈನ್ಯಗಳಿಗೂ ಶ್ರೇಯಸ್ಸಾಗಲೆಂದು, ಶಾಂತಿಯಾಗಲೆಂದು, ಅಗ್ನಿದೇವನನ್ನು ಪ್ರಾರ್ಥಿಸಿ, ಮಂತ್ರ ಜಪಮಾಡಿ, ದಾರುಣವಾದ ಆ ಅಸ್ತ್ರವನ್ನು ಪ್ರಯೋಗಿಸಿದನು.

೨೨. ಹಾಗೆಯೇ ಅದರ ಜೊತೆಗೆ, ಶತ್ರುಗಳೆಂಬ ಆತಪವು ಶಾಂತವಾಗಲೆಂದು, ಅಸ್ತ್ರಗಳಲ್ಲೆಲ್ಲಾ ಶ್ರೇಷ್ಠವಾದ ಪರ್ಜನ್ಯಾಸ್ತ್ರವನ್ನೂ ಪ್ರಯೋಗಿಸಿದನು.

೨೩. ಆ ಅಸ್ತ್ರಗಳು ಮಹೇಶ್ವರನಂತಹ ಆ ರಾಜನ ಆ ಘೋರವಾದ ಧನುಸ್ಸಿನಿಂದ ಹೊರಡುತ್ತಿದ್ದ ಹಾಗೆಯೇ, ಚತುರ್ದಿಕ್ಕುಗಳಲ್ಲಿಯೂ ದಿಕ್ಕುಗಳೆಂಬ ಕುಹರಗಳನ್ನು ತುಂಬುವಂತೆ,

ನಿರ್ಯಯುರ್ಬಾಣಸರಿತಸ್ತ್ರಿಶೂಲ ಸರಿತಸ್ತಥಾ ।
ಶಕ್ತೀನಾಮುಗ್ರಸರಿತೋ ಭುಶುಂಡೀಸರಿತಸ್ತಥಾ ॥೨೪

ಮುದ್ಗರಾಣಾಂ ಚ ಸರಿತಃ ಪ್ರಾಸಾನಾಂ ಸರಿತೋ ರಯಾತ್ ।
ಚಕ್ರಾಣಾಂ ಚೈವ ಸರಿತಃ ಪರಶ್ವಧನದೀರಯಾಃ ॥೨೫

ತೋಮರಾಣಾಂ ಚ ಸರಿತೋ ಭಿಂದಿಪಾಲಮಹಾಪಗಾಃ ।
ಪಾಷಾಣಾನಾಂ ಚ ಸರಿತೋ ವಾತಾಃ ಕಲ್ಪಾಂತಶಂಸಿನಃ ॥೨೬

ಅಶನೀನಾಂ ಚ ಸರಿತೋ ವಿದ್ಯುತಾಂ ಸರಿತಸ್ತಥಾ ।
ಜಲಧಾರಾಸರಿತ್ಪೂರಾಃ ಖಡ್ಗವರ್ಷಸಮನ್ವಿತಾಃ ॥೨೭

ಸನಾರಾಚಾ ಮಹಾವರ್ಷಹರ್ಷಲೋತ್ಪಾತಪೀವರಾಃ ।
ನಾಗಾಶ್ಚ ಯುಗಪರ್ಯಂತಸ್ಫುಟಿತಾದ್ರೀಂದ್ರಜಾ ಇವ ॥೨೮

---

೨೪. ಬಾಣ ನದಿಗಳು ಹೊರಟುವು ತ್ರಿಶೂಲ ನದಿಗಳು, ಶಕ್ತ್ಯಾಯು ಗಳ ಉಗ್ರ ಪ್ರವಾಹಗಳು, ಭುಶುಂಡಿಗಳ ಹೊಳೆಗಳು ಹೊರಟುವು

೨೫. ಮುದ್ಗರ, ಪ್ರಾಸ, ಚಕ್ರ, ಪರಶು, ಇವುಗಳ ನದಿಗಳೂ ವೇಗವಾ ನುಗ್ಗಿದುವು.

೨೬. ತೋಮರಗಳು, ಭಿಂದಿಪಾಲಗಳು, ಪಾಷಾಣಗಳು ಇವುಗಳ ನದಿಗಳ ಜೊತೆಗೆ ಪ್ರಲಯ ಕಾಲವೇ ಬಂತೋ ಎನ್ನಿಸುವಂತಹ ವಾತಗಳೂ ಹೊರಟುವು.

೨೭. ಸಿಡಿಲುಗಳು, ಗುಡುಗುಗಳು, ಜಲಧಾರೆಗಳು, ಖಡ್ಗವರ್ಷಗಳು ಇವು ನದಿಗಳಿಗಿಂತ ಹೆಚ್ಚಾಗಿ ಹರಿದು ಬಂದುವು.

೨೮ ಬಾಣಗಳೊಡನೆ ಕೂಡಿ, ಮಹಾವರ್ಷಗಳು ಉತ್ಪಾತಗಳಂತೆ ಭಾ ಯಾಗಿ ಸುರಿದುವು. ಆನೆಗಳು ಪ್ರಲಯಕಾಲದಲ್ಲಿ ಬಂದ ಪರ್ವತಗಳ ತುಂಡು ಳಂತೆ ನುಗ್ಗಿದುವು.

(ಮಹಾವಾತೈಃ ಹರ್ಷಲೈಃ ಪ್ರಬುದ್ಧಾ ಉತ್ಪಾತಾ ಇವ ಪೀವರಾಃ ಪುಷ್ಟಾ ನಾಗಾಃ ಸರ್ಪಾಶ್ಚ ನಿರ್ಯಯುಃ—ತಾ. ಪ್ರ.)

ತೇನಾಸ್ತ್ರವರ್ಷವೇಗೇನ ಧೂತಃ ಸೋಽರಿಬಲಾರ್ಣವಃ ।
ಕ್ಷಣೇನೈವ ನ ಕಾಲೇನ ಪಾಂಸುರಾಶಿರಿವಾಹತಃ ॥೨೯॥

ಸಲಿಲಾಶನಿ ಶಸ್ತ್ರಾಣಾಮಾಸಾರೈಸ್ಸ್ಫಂದಮಾರುತೈಃ ।
ಸರಾಂಸೀವ ವಿಸೇತೂನಿ ಸೈನ್ಯಾನಿ ಪರಿಪುಪ್ರುವುಃ ॥೩೦॥

ಚತುರಂಗಶ್ಚತುರ್ದಿಕ್ಕಂ ಬಲೌಘಃ ಸ ಪರಾಙ್ಮುಖಃ ।
ಯಯೌ ಪ್ರಾವೃಡ್ಗಿರಿಣದೀಮಹಾವಾಹ ಇವ ದ್ರುತಃ ॥೩೧॥

ವಹತ್ಛಿನ್ನಬೃಹಚ್ಛಿನ್ನ ಪತಾಕಾಕೇತುಪಾದಪಃ ।
ಮರೀಚಿಪುಷ್ಪಶಬಲ ವಿಲೋಲಾಸಿಲತಾವನಃ ॥೩೨॥

೨೯. ಆ ಅಸ್ತ್ರವರ್ಷಗಳ ವೇಗದಿಂದ ಅರಿಸೈನ್ಯವೆಂಬ ಸಮುದ್ರವು ದೀರ್ಘಕಾಲದಲ್ಲಲ್ಲ, ಆ ಕೂಡಲೇ, ಧೂಳಿನ ರಾಶಿಯು ಹಾಗೆ ಸುತ್ತಮುತ್ತಲೂ ಹಾರಿಹೋಯಿತು.

೩೦. ನೀರು, ಸಿಡಿಲು, ಶಸ್ತ್ರಗಳು ಚಂಡಮಾರುತಗಳೊಡನೆ ಸೇರಿ ಮಹಾವರ್ಷಗಳಾಗಿ ಕರೆದುವು. ಕಟ್ಟೆಯೊಡೆದ ಸರಸ್ಸುಗಳಂತೆ ಸೈನ್ಯವು ಓಡಿಹೋಯಿತು.

೩೧. ಆ ಸೈನ್ಯವು ಪರಾಙ್ಮುಖವಾಗಿ ಚತುರಂಗವು ಚತುರ್ದಿಕ್ಕುಗಳಲ್ಲಿ ವರ್ಷಾಕಾಲದ ಗಿರಿಣದಿಯ ಮಹಾಪ್ರವಾಹದಂತೆ ಓಡಿತು.

೩೨. ವಾಯುವೇಗದಿಂದ ಹಾರುತ್ತಿರುವ ಸೀಳಿದಿರುವ, ತುಂಡಿರುವ ದೊಡ್ಡ ಪತಾಕೆಗಳ ದಂಡಗಳೆಂಬ ಮರಗಳು, ಕಾಂತಿಯೆಂಬ ಪುಷ್ಪಗಳಿಂದ ಪ್ರಸ್ಫುಟವಾದ ಚಂಚಲವಾದ ಅಸಿ ಲತಾ ವನಗಳು.

ವಿಲುಠತ್ಪುಷ್ಟ ಪಾಷಾಣಪೃಷದ್ರಕ್ತ ದ್ರವಾವಟಃ ।
ಘೋರೈರ್ಘುರಘುರಾರಾವೈರಲಂ ಹೃದಯಭಂಗದಃ ॥೩೩॥

ಉಹ್ಯಮಾನ ಬೃಹದ್ದಂತಿ ದಂತದ್ರುಮವಿಘಟ್ಟನೈಃ ।
ಸ್ಫೂರ್ಜಚ್ಚಟ ಚಟಾರಾವ ತರ್ಜಿತೋದ್ಗರ್ಜಿತಾಂಬುದಃ ॥೩೪॥

ಹೇತಿವೃತ್ತ್ಯೋಗ್ರ ಸಂಘಟ್ಟ ಪುಷ್ಪಜಾತಝುಣಜ್ಝಣಃ ।
ತಂತ್ರರಲ ಸಾರಾವತುರಂಗಮತರಂಗಕಃ ॥೩೫॥

ರಥಾತಿಘಟಚಕ್ರೌಘ ಶಿಲಾಕ್ರೇಂಕಾರ ಪೀವರಃ ।
ಪದಾತಿ ರಥಹಸ್ತ್ಯಶ್ವ ಶಿಲಾಸಂಘಟ್ಟ ಸಂಕಟಃ ॥೩೬॥

---

೩೩. ಓಡಲಾರದೆ ಬಿದ್ದು ಒದ್ದಾಡುತ್ತಿರುವ ಜನರು ರಕ್ತಬಿಂದುಗಳಿಂದ ಕೂಡಿ, ಹೇಳುವುದಕ್ಕಾಗದಷ್ಟು ದುಃಸ್ಥಿತಿಯಲ್ಲಿರುವರು. ಘೋರವಾದ ಘುರಘುರಾ ರಾವದಿಂದ ನೋಡಿದವರ ಎದೆಯು ಒಡೆಯುವಂತಿರುವುದು.

೩೪. ಕೊಚ್ಚಿಹೋಗುತ್ತಿರುವ ದಂತಿಗಳ ದಂತಗಳು ತಾಟಿಸಲು, ಭಾರಿಯ ಚಟಚಟಾರಾವಗಳಿಂದ ಗರ್ಜಿಸುವ ಮೇಘಗಳಂತಿರುವುವು.

೩೫. ಆಯುಧಗಳ ಪ್ರಯೋಗದಿಂದ ಆದ ಉಗ್ರವಾದ ಸಂಘಟ್ಟನವು ನದೀ ತೀರದ ಪುಷ್ಪವೃಕ್ಷಗಳಲ್ಲಿ ಕಾಣುವ ಭ್ರಮರ ಧ್ವನಿಯಂತಿರುವುದು. ಚಂಚಲವಾಗಿ ಹೇಷಾರವದೊಡನೆ ಓಡುವ ತುರಂಗಮಗಳು ತರಂಗಗಳಂತಿರುವುವು.

೩೬. ರಥಗಳು, ಭಟರು, ಚಕ್ರೌಘಗಳು ಕ್ರೇಂಕಾರ ಮಾಡುತ್ತ ಪದಾತಿ, ರಥ, ಹಸ್ತಿ, ಅಶ್ವಗಳು ಶಿಲೆಗಳಿಂದ ಏಟುತಿಂದು ಸಂಕಟಪಡುತ್ತಿರುವುವು.

ಕಟುಝಾಂಕಾರ ಚೀತ್ಕಾರ ಕ್ರೇಂಕಾರಪರಿಶೋಭಿತಃ ।
ಮೃತಾಃ ಸ್ಮೋ ಮೃತಾಃ ಸ್ಮೇತ್ಯುಚ್ಚೈ ರ್ಘನಕೋಲಾಹಲಾಕುಲಃ ॥ ೩೭ ॥

ಸೇನಾವಾರಿ ಮಹಾವರ್ತ ಚಲದ್ಗುಲುಗುಲಾರವಃ ।
ರಕ್ತಶೀಕರನೀಹಾರ ಸಂಧ್ಯಾಂಬುದ ವಿತಾನಕಃ ॥ ೩೮ ॥

ಹೇತಿವೀಚಿವಟಾಚ್ಛಿನ್ನ ಪಾರಿವಾಮನವಾರಿದಃ ।
ವರ್ಷಪಂಕಿಲಭೂಪೀಠ ತಟಖಂಡನಮಂಡಿತಃ ॥ ೩೯ ॥

ಕುಂತಶೂಲಗದಾಪ್ರಾಸವಪತ್ತಾಲತಲಾವೃತಃ ।
ಸಾಕ್ರಂದಭೀರುಜನತಾಪ್ರತಪಸ್ಸ್ಯಗ ಪೋತಕಃ ॥ ೪೦ ॥

---

೩೭. ಶ್ರವಣಕಟುವಾದ ಝಂಕಾರ, ಚೀತ್ಕಾರ, ಕ್ರೇಂಕಾರಗಳು ಶೋಭಿತವಾಗಿರಲು, ನಾವು ಸತ್ತೆವು ಸತ್ತೆವು ಎಂಬ ಘನ ಕೋಲಾಹಲವು ತುಂಬಿಹೋಯಿತು.

೩೮. ಸೇನೆಯೆಂಬ ನೀರಿನ ಮಹಾವರ್ತದಿಂದ ಹುಟ್ಟಿದ ಗುಲುಗುಲುರಾವವು ತುಂಬಿರುವುದು. ರಕ್ತಬಿಂದುಗಳು ಹಾರಿ ಮಂಜುಕಟ್ಟಿ, ಸಂಧ್ಯಾಮೇಘಗಳು ಮೇಲ್ಕಟ್ಟು ಕಟ್ಟಿದಂತಾಗಿರುವುದು.

೩೯. ಆಯುಧಗಳೆಂಬ ತರಂಗಗಳು, ಆಕಾಶದಿಂದ ಇಳಿದು ಅಲೆದಾಡುವ ಮೇಲೆ ಕುಳಿತಿರುವ ಮೋಡಗಳಂತಿರುವುವು. ರಕ್ತವು ವರ್ಷದಿಂದ ನೆನೆದು ಕೆಸರಾಗಿರುವ ಭೂಪೀಠ ತಟವನ್ನು ಕತ್ತರಿಸಿ ಅಲಂಕಾರ ಮಾಡಿದಂತಿರುವುವು.

೪೦. ಕುಂತ, ಶೂಲ, ಗದಾ, ಪ್ರಾಸ, ಗಳನ್ನು ಧರಿಸಿರುವ ಅಪ್ಸರಿತ ತಾಲ ವೃಕ್ಷವೋ, ಹೆದರಿಕೊಂಡು ಅಳುತ್ತಿರುವ ಜನರನ್ನು ಇನ್ನೂ ಹೆದರಿಸುತ್ತಿರುವ ಸಿಂಹದ ಮರಿಯೋ ಎಂಬಂತಿದ್ದು,

ಮೃತಹಸ್ತ್ಯಶ್ವಯೋಧೌಘೆ ಜೀರ್ಣಪರ್ಣನಿರಾತರಃ ।
ಪಿಷ್ಟದೇಹವಸಾಮಾಂಸ ಪಂಕಸಂಜಾತ ಕರ್ದಮಃ ॥೪೧॥

ಚೂರ್ಣೀಕೃತ ಖುರಃಪಿಷ್ಟಮಹಾಸ್ಥಿಘನಸೈಕತಃ ।
ಉಹ್ಯಮಾನಶಿಲಾಪೂರ ಕಾಷ್ಠಕೋಟಿ ಕಟಂಕಟಃ ॥೪೨॥

ಉದ್ಗರ್ಜತ್ಪ್ರಲಯಾಂಭೋದೈರ್ವಹತ್ಪ್ರಲಯವಾಯುಭಿಃ ।
ಪ್ರಪತತ್ಪ್ರಲಯಾಸಾರೈಃ ಪ್ರಲಯಾಶನಿಸಂಕಟೈಃ ॥೪೩॥

ಪಂಕಿಲಾಖಿಲಭೂಪೀಠೈಃ ಸಲಿಲೋಪಪ್ಲುತಸ್ಥಲೈಃ ।
ನಿಶಶ್ಶೈತ್ಯಘನಾಶ್ಯಾನ ಧಾರಾಕೃತ ಖಪಂಜರೈಃ ॥೪೪॥

---

೪೧. ಮೃತರಾದ ಹಸ್ತಿ, ಅಶ್ವ, ಯೋಧರುಗಳೆಂಬ ಜೀರ್ಣ ಪರ್ಣಗಳನು ನಿರಂತರವಾಗಿ ಹೊತ್ತುತರುತ್ತ, ಪಿಷ್ಟವಾಗಿರುವ ದೇಹಗಳ ವಸಾ ಮಾಂಸ ಪಂಕ ಸಂಜಾತ ಕರ್ದಮದಿಂದ ಕೂಡಿ,

೪೨. ಗೊರಸುಗಳಿಗೆ ಸಿಕ್ಕಿ ಪುಡಿಪುಡಿಯಾದ ಮಹಾಸ್ಥಿಗಳ ಪುಡಿಯು ಘನ ಸೈಕತದಂತಿರಲು, ಕೊಚ್ಚಿಕೊಂಡು ಹೋಗುತ್ತಿರುವ ಶಿಲೆಗಳು, ಕಾಷ್ಠ ಕೋಟಿಗಳೂ ಯೋಧರ ಕವಚಗಳೂ ಉಳ್ಳ, (ರಣನದಿಯು ಹರಿಯುತ್ತಿರುವುದು.)

೪೩. ಗಟ್ಟಿಯಾಗಿ ಗುಡುಗುತ್ತಿರುವ ಪ್ರಲಯ ಮೇಘಗಳು. ಬೀಸುತ್ತಿರುವ ಪ್ರಲಯ ವಾತಗಳು, ಕರೆಯುತ್ತಿರುವ ಪ್ರಲಯ ವರ್ಷಗಳು, ಪ್ರಲಯಕಾಲದ ಸಿಡಿಲುಗಳು ಇವೆಲ್ಲ ಸೇರಿ,

೪೪. ಭೂಪೀಠವೆಲ್ಲವೂ ಕೆಸರಾಗಿ, ದಿಣ್ಣೆಗಳೂ ನೀರಲ್ಲಿ ಮುಳುಗಿ, ತೀಕ್ಷ್ಣವಾದ ಶೈತ್ಯದಿಂದ ಹೆಪ್ಪುಗಟ್ಟಿದ ಜಲಧಾರೆಗಳು ಪಂಜರದ ಕಡ್ಡಿಗಳಂತಿರಲು,

ಸಮುಗ್ರನಗರಗ್ರಾಮಗೃಹಜ್ವಲಿತವಹ್ನಿಭಿಃ ।
ಪ್ರಜಾಶ್ವೇಭಪದಾತೀನಾಮಾಕ್ರಂದೇನಾಪಿ ಘರ್ಘರೈಃ ॥೪೫॥

ರಥಾಂಭೋಧರನಿರ್ಹ್ರಾದೈರ್ದಿವಿ ಭೂಮೌ ಸ್ಫಾರಿತೈಃ ।
ಚತುರ್ದಿಕ್ಕಂ ಘನಂ ತಾರಕ್ರೇಂಕಾರಸ್ಯ ಚತುಷ್ಟಯೈಃ ॥೪೬॥

ವಿದ್ಯುದ್ವಲಯವಿಸ್ತಾರಕಾರಿ ಸಂಘಟ್ಟಘರ್ಷಣೈಃ ।
ಶರಶಕ್ತಿಗದಾಪ್ರಾಸ ಭಿಂದಿಪಾಲಾದಿವರ್ಷಣೈಃ ॥೪೭॥

ಸರ್ವದಿಕ್ಕಮಸಂಖ್ಯಾನಿ ಬಲಾನಿ ಬಲಶಾಲಿನಾಂ ।
ಭೂಭೃತಾಂ ವಿದ್ರವಂತ್ಯಾಶು ವಿನೇಶುರ್ಮಶಕೌಘವತ್ ॥೪೮॥

---

೪೫. ನಗರ, ಗ್ರಾಮ, ಗೃಹಗಳೆಲ್ಲವೂ ಸಮಗ್ರವಾಗಿ ಅಗ್ನಿಯಿಂದ ಹಾಳಾಗುತ್ತಿರಲು, ಪ್ರಜೆಗಳು, ಅಶ್ವ, ಗಜ, ಪದಾತಿಗಳ ಆಕ್ರಂದನವು ಕರ್ಣಕಠೋರವಾಗಿರಲು,

೪೬. ರಥಗಳೆಂಬ ಮೇಘಗಳ ಗುಡುಗುಗಳಿಂದ ಆಕಾಶದಲ್ಲಿಯೂ ಭೂಮಿಯಲ್ಲಿಯೂ ನಾಲ್ಕು ಕಡೆಯೂ, ಘನವಾಗಿ ತಾರಕ್ರೇಂಕಾರ ಚತುಷ್ಟಯಗಳು ತುಂಬಿ ಹೋಗಿರಲು,

೪೭. ವಿದ್ಯುದ್ವಲಯವನ್ನು ವಿಸ್ತಾರ ಪಡಿಸುವಂತೆ ಕಾಣುವ ಸಂಘಟ್ಟಘರ್ಷಣಗಳಿಂದಲೂ, ಶರಶಕ್ತಿ ಗದಾ ಪ್ರಾಸ ಭಿಂದಿಪಾಲಾದಿ ಅಸ್ತ್ರ ವರ್ಷಣಗಳಿಂದಲೂ,

೪೮. ಸರ್ವದಿಕ್ಕುಗಳಲ್ಲಿಯೂ ಬಲಶಾಲಿಗಳಾದ ಕ್ಷತ್ರಿಯರ ಅಸಂಖ್ಯಾತವಾದ ಬಲಗಳು ಓಡಿಹೋದುವು: ಸೊಳ್ಳೆಗಳ ಗುಂಪಿನಂತೆ ನಾಶವಾಗಿ ಹೋದುವು.

ಉದ್ದಾಮಪಾವಕವನೋಪಮಹೇತಿ ಸಾರ್ಧ ।
ಮೇಘಾನಲಾಕುಲ ಜನಾಶನಿವರ್ಷಪಾತೈಃ ।
ಆಸನ್ಬಲಾನಿ ಚಪಲಾಬ್ಧಿಜಲಾಬಲಾನಿ ।
ಪರ್ಯಾಕುಲಾನಿ ವಡವಾಗ್ನಿಮಿವಾವಿಶಂತಿ ॥೪೯॥

ಇತ್ಯಾರ್ಷೇ ವಾಸಿಷ್ಠಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಅವಿದ್ಯೋಪಾಖ್ಯಾನಾಂತರ್ಗತ
ವಿಪಶ್ಚಿದುಪಾಖ್ಯಾನೇ "ಚತುರ್ದಿಗ್ಗತ ಬಲದ್ರವಣಂ"
ನಾಮೈಕಾದಶಾಧಿಕ ಶತತಮಃ ಸರ್ಗಃ

---

೪೯ ಉದ್ದಾಮವಾದ ಪಾವಕವನದಂತಿರುವ ಆಯುಧಗಳಿಂದ ಕೂಡಿದ ಮೇಘಗಳ ಅಗ್ನಿವರ್ಷದಿಂದ ಆಕುಲರಾದ ಜನರು ಅಶನಿ ವರ್ಷಪಾತಗಳಿಂದಲೂ ಆಹತರಾದರು ಆ ಸೈನ್ಯಗಳು ಅಬಲಗಳಾಗಿ ಪರ್ಯಾಕುಲಗಳಾಗಿ ಬಡಬಾಗ್ನಿಯನ್ನು ಪ್ರವೇಶಿಸುವ ಚಪಲವಾದ ಜಲಧಿಯ ಜಲದಂತಾದುವು

ಇಂತಿಮ ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಚತುರ್ದಿಗ್ಗತ ಬಲದ್ರವಣ" ಎಂಬ
ನೂರ ಹನ್ನೊಂದನೆಯ ಸರ್ಗವು



# ದ್ವಾದಶಾಧಿಕ ಶತತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ:—

ಲೋಕಾಹಾರಂಬರವ್ಯಾಲಂ ಚೇದಿಚಂದನಕಾನನಂ |
ಛಿನ್ನಂ ಪರಶುಧಾರಾಭಿಃ ಪತಿತಂ ದಕ್ಷಿಣಾರ್ಣವೇ ||೧||

ಪರ್ಣವತ್ಪ್ರೋಹ್ಯ ಪೂರೇಣ ಪಾರಸೀಕಾಃ ಪರಸ್ಪರಂ |
ಪ್ರಹರಂತೋ ವಿಮೋಹೇನ ವಿನಷ್ಟಾ ಮಂಜುಲಾವನೇ ||೨||

ದರ್ದುರಾದ್ರೌ ದುರಂತೇಷು ದರದೀರ್ಣಹೃದಂತರಾಃ |
ದರೀರಂಧ್ರೇಷು ಸಂಲೀನಾ ದರದಾ ದಾನವಾ ಇವ ||೩||

ಚತುರಾಯುಧಧಾರಾಸ್ರಚೂರ್ಣೀಹಾರಧಾರಿಣಃ |
ವಿದ್ಯುದ್ವಲಯಿನೋ ವಾತಾ ವೇಲ್ಲಿತಾಯುಧವಾರಿದಾಃ ||೪||

---

# ನೂರ ಹನ್ನೆರಡನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು: –

೧. ಲಕ್ಷಣವಾದ, ಹಾರಾದಿ ಭೂಷಣಗಳೂ ಅಂಬರಾದಿ ವೇಷಗಳೂ ಉಳ್ಳ ಚೇದಿ ಸೈನ್ಯವೆಂಬ ಚಂದನ ಕಾನನವನ್ನು ಪರಶುಧಾರೆಗಳಿಂದ ಕಡಿದು ದಕ್ಷಿಣ ಸಮುದ್ರಕ್ಕೆ ಹಾಕಿಯಾಯಿತು.

೨ ಪಾರಸೀಕರ ಬಲವನ್ನು (ಜೀರ್ಣ) ಪರ್ಣಗಳಂತೆ, ಅಸ್ತ್ರ ಪ್ರವಾಹದಿಂದ ಕೊಚ್ಚಿಸಲು ಅವರು, ಹುಚ್ಚುಹಿಡಿದು ಒಬ್ಬರನ್ನೊಬ್ಬರು ಹೊಡೆಯುತ್ತಾ ಮಂಜು ಲಾವನದಲ್ಲಿ ನಾಶವಾದರು.

೩. ದರದ ದೇಶದ ಭಟರು, ದಾನವರಂತೆ, ಗಾಯಗಳಿಂದ ಬಿರಿದುಹೋದ ಎದೆಯುಳ್ಳವರಾಗಿ ದುರ್ದರ ಪರ್ವತದಲ್ಲಿ ದುರಂತಗಳಾದ ದರೀ ರಂಧ್ರಗಳಲ್ಲಿ ಕರಗಿ ಹೋದರು.

೪. ನಾಲ್ಕು ವಿಧವಾದ ಆಯುಧಗಳನ್ನು ಮಳೆಯಾಗಿ ಕರೆಯುತ್ತಾ, ಸೈನಿಕರು ತೊಟ್ಟಿದ್ದ ಕವಚಾದಿಗಳನ್ನು ಚೂರ್ಣಮಾಡುತ್ತ, ವಿದ್ಯುತ್ತುಗಳೆಂಬ ವಲಯಗಳನ್ನುಳ್ಳ, ಆಯುಧ ಮೇಘಗಳು ಬಂದು ಮುತ್ತಿಕೊಂಡುವು.

ದಂತಿನೋಽನ್ಯೋನ್ಯಮಾಭಗ್ನದಂತದೇಹೌಘಪೀಡಿತಾಃ ।
ಮೃತ್ಯೂದರೋಂಭಕಗ್ರಾಸ ಪಿಂಡಪಿಂಡಾ ಇವಾಭವನ್ ॥೫॥

ತಚ್ಚಾ ರೈವತಿಕಾ ರಾತ್ರೌ ರೌದ್ರತೋಮರತಾಡಿತಾಃ ।
ರೂಪಿಕಾಭಿಃ ಪಿಶಾಚೀಭಿರ್ಭುಕ್ತಾ ಭಾಗೀಕೃತಾಂಗಕಾಃ ೬॥

ತಾಲೀತಮಾಲಗಹನೇ ದಶಾರ್ಣಾಜೀರ್ಣಜಂಗಲೇ ।
ಗಲೇ ಪಾದಂ ನಿಧಾಯಾಂತಃ ಕೃತ್ತಾಃ ಸಿಂಹೈರ್ಗತಾಸವಃ ॥೭॥

ಪಶ್ಚಿಮಾರ್ಣವತೀರಸ್ಥಾ ನಾಲಿಕೇರಧರಾವನೌ ।
ಯವನಾ ವಿಗತಪ್ರಾಣಾ ನಿಗೀರ್ಣಾ ಮಕರೋತ್ಕರೈಃ ॥೮॥

ನಾರಾಚನಿಕರಂ ನೀಲಂ ನಿಮೇಷಂ ನಾಸಹನ್ ಶಕಾಃ ।
ಗಮಿತಾ ನಲಿನೀಖಂಡಾ ಇವ ತಾಂಡವಿತಾಸವಃ ॥೯॥

---

೫. ಆಗ ಆನೆಗಳು ಪರಸ್ಪರ ಹೋರಾಡಿ ಕೊಂಬುಗಳನ್ನು ಮುರಿದುಕೊಂಡು ದೇಹಗಳೆಲ್ಲಾ ಗಾಯವಾಗಿರಲು, ಮೃತ್ಯುವಿನ ಹೊಟ್ಟೆಗೆ ತುತ್ತುಗಳಾದುವು.

೬. ದರದ ದೇಶದವರು (?) (ರೈವತಕ ಪರ್ವತದವರು) ರಾತ್ರಿಯಲ್ಲಿ ರೌದ್ರವಾದ ತೋಮರಗಳಿಂದ ಏಟುತಿಂದು, ರೂಪಧಾರಿಗಳಾಗಿ ಬಂದ ಪಿಶಾಚಿಕೆಗಳಿಂದ ಭಾಗೀಕೃತಾಂಗರಾಗಿ ಭುಕ್ತರಾದರು.

೭. ದಶಾರ್ಣ ದೇಶದ ರೂಢವಾದ ತಾಲೀತಮಾಲ ಗಹನಗಳಾದ ಜಂಗಲುಗಳಲ್ಲಿ ದಶಾರ್ಣ ಸೇನೆಯನ್ನು ಸಿಂಹಗಳು ಕೆಡವಿಕೊಂಡು ಕತ್ತಿನ ಮೇಲೆ ಕಾಲನ್ನಿಟ್ಟು ಕೊಂದುತಿಂದುವು.

೮. ಪಶ್ಚಿಮಾರ್ಣವ ತೀರದಲ್ಲಿ ತೆಂಗಿನ ತೋಟಗಳಲ್ಲಿರುವ ಯವನರು ಸತ್ತು ಮೊಸಳೆಗಳಿಗೆ ತುತ್ತಾದರು.

೯. ಶಕರು ನೀಲಿಯಾಗಿರುವ (ಉಕ್ಕಿನ) ನಾರಾಚ ನಿಕರವನ್ನು ಒಂದು ನಿಮಿಷವೂ ಸಹಿಸಲಾರದೆ ಹೋದರು. ಗಾಳಿಗೆ ಸಿಕ್ಕಿದ ತಾವರೆಯ ಗುಂಪಿನಂತೆ ಅವರ ಜೀವಗಳು ಚೆಲ್ಲಾಡಿಹೋದುವು.

ಶ್ರವಣಾಭೋಗಶೃಂಗಾಗ್ರೋ ಮಹೇಂದ್ರೋದ್ರಿರ್ದಿವಿವ್ರಜೈಃ ।
ವಿದ್ರುತೈರ್ವಲಿತೋ ನೀಲೈರ್ಜಾಲೈರ್ಜಲಮುಚಾಮಿವ ॥೧೦॥

ಚಾಮೀಕರವರಾಕಾರಾ ಭಗ್ನಾ ತಂಗಣವಾಹಿನೀ ।
ಮೃತಾ ಹೃತಾಂಬರಾ ಚೋರೈರ್ಭುಕ್ತೈಕಾಂತೇ ನಿಶಾಚರೈಃ ॥೧೧॥

ದ್ಯೌರಿವರ್ಕ್ಷಭರೈರಾಸೀತ್ತದಾಸಾರಂ ಭುವಸ್ತಲಂ ।
ವಿವರ್ತಮಾನೈರಭಿತಃ ಕಚದ್ಭಿರ್ಜ್ವಲನಾಯುಧೈಃ ॥೧೨॥

ಧಾರಾಧರಧರಾರಂಧ್ರ ಪ್ರತಿಶ್ರುದ್ಧ್ವನಘುಂಘುಮಾ ।
ಜಗದ್ಗೇಹಗುಹಾಸಿದ್ವ್ಯೋಮ ಘನಂ ಗಾತುಮಿವೋದ್ಯತಾ ॥೧೩॥

---

೧೦. ಶ್ರವಣ ನಕ್ಷತ್ರದ ಕೋಡುಗಳಂತೆ ಮೂರು ಕೋಡುಗಳುಳ್ಳ ಮಹೇಂದ್ರ ಪರ್ವತವು, ಆಕಾಶದಲ್ಲಿ ಗಾಳಿಗೆ ಹಾರಿಬಂದ ನೀಲಮೇಘಗಳಿಂದ ಮರೆಯಾಗುವ ಶ್ರವಣ ನಕ್ಷತ್ರದ ಕೋಡುಗಳಂತೆ, ತಾನೂ ಓಡಿಬಂದು ತನ್ನನ್ನು ಸೇರಿಕೊಂಡ ಸೈನಿಕರಿಂದ ಮುಚ್ಚಿಹೋಯಿತು

೧೧. ತಂಗಣ (?) ದೇಶದ ಸೈನ್ಯವು ಚಿನ್ನದ ಪೋಷಾಕು ಧರಿಸಿತ್ತು; ಅದನ್ನು ಮೊದಲು ಕಳ್ಳರು ಸುಲಿದರು; ಅನಂತರ ನಿಶಾಚರರು ಸುಲಿದು ತಿಂದರು

೧೨. ಆಗ, ನಿಶಾಚರರು ಉರಿಯುತ್ತಿರುವ ಆಯುಧಗಳನ್ನು ತಿರುಗಿಸಿಕೊಂಡು ಸುತ್ತುತ್ತಿರಲು, ಭೂಮಿಯು ನಕ್ಷತ್ರಗಳಿಂದಲೂ ಉಲ್ಕಾಪಾತಗಳಿಂದಲೂ ಕೂಡಿದ ಆಕಾಶದಂತೆ ಆಯಿತು.

೧೩. ಆಗ ಅಂತರಿಕ್ಷವು ಪರ್ವತಗಳ ಧರಾರಂಧ್ರಗಳಲ್ಲಿ ಪ್ರತಿಧ್ವನಿತವಾಗುತ್ತಿರುವ ಘನಘುಂಘುಂ ಧ್ವಾನವುಳ್ಳುದಾಗಿ, ಜಗದ್ಗೇಹಗುಹೆಯಲ್ಲಿ ಹಾಡುತ್ತಿರುವುದೋ ಎಂಬಂತೆ ಆಯಿತು.

ದ್ವೀಪಾಂತರಜನಾಶ್ಚಕ್ರೈರ್ಜರ್ಜರಾ ಜೀವಿತಂ ಜಹುಃ |
ಮೀನಜಂಗಲಜಂಬಾಲೇ ಜೀರ್ಣಮತ್ಸ್ಯಾ ಇವಾಜಲೇ ||೧೪||

ಯಾವದ್ದ್ವೀಪಾ ಜಿತಾಃ ಕುಕ್ಷೌ ಸಹ್ಯಾದ್ರೌ ಸಮಮೂರ್ತಯಃ |
ಆಶ್ವಸ್ಯ ದಿವಸಾನ್ಸಪ್ತ ಯಯುರಾಯಾಸಮಂಥರಂ ||೧೫||

ಗಂಧಮಾದನಪುನ್ನಾಗವನಗುಂಜೇಷು ಪುಂಜಿತಾಃ |
ವಿದ್ಯಾಧರಕುಮಾರೀಭಿರ್ಗಾಂಧಾರಾಃ ಪರಿರಕ್ಷಿತಾಃ ||೧೬||

ಹೂಣಚೀನಕಿರಾತಾನಾಂ ಮುಕ್ತೈಸ್ತೈಶ್ಚಕ್ರವರ್ಷಣೈಃ |
ಕಮಲಾನೀವ ಲೂನಾನಿ ಶಿರಾಂಸ್ಯಭಿಮುಖಾನಿಲೈಃ ||೧೭||

ನಿಲೀಪಾ ನಲನೀನಾಲೇ ಕಂಟಕಾ ಇವ ನಿಶ್ಚಲಾಃ |
ದ್ರುಮೆದ್ರುಮೇ ದ್ರುಮಮಯಾ ಭಯಾತ್ತ್ವಸ್ಯಾವಸಂಶ್ಚಿರಂ ||೧೮||

---

೧೪. ಮೀನವಿಹಾರ ಸ್ಥಾನಗಳಾದ ಜಂಬಾಲ (ಶೈವಲ ಪಲ್ವಲ) ಗಳಲ್ಲಿ ನೀರಿಲ್ಲದಾಗ ಸಾಯುವ ಮುದಿಮೀನುಗಳಂತೆ ದ್ವೀಪಾಂತರಜನರು ಚಕ್ರಗಳಿಂದ ಜರ್ಜರಿತರಾಗಿ ಜೀವಿತವನ್ನು ತ್ಯಜಿಸಿದರು.

೧೫. ಯವದ್ವೀಪದ ಜನರು ಜಿತರಾಗಿ ಸಹ್ಯಾದ್ರಿಯ ಕುಕ್ಷಿಯಲ್ಲಿ ಅಡಗಿ ಏಳುದಿನ ಇದ್ದು ತಮ್ಮ ಆಯಾಸಗಳನ್ನೆಲ್ಲ ಪರಿಹಾರಮಾಡಿಕೊಂಡು ಹೋದರು.

೧೬. ಗಾಂಧಾರರು ಗಂಧಮಾದನದ ಪುನ್ನಾಗ ವನಗಳ ತೋಪುಗಳಲ್ಲಿ ಸೇರಿಕೊಂಡು ಅಲ್ಲಿದ್ದ ವಿದ್ಯಾಧರಕುಮಾರಿಯರಿಂದ ಪರಿರಕ್ಷಿತರಾದರು.

೧೭. ಹೂಣ ಚೀನ ಕಿರಾತರು ಎದುರುಗಾಳಿಗೆ ಸಿಕ್ಕಿದ ಕಮಲಗಳಂತೆ, ಆ ಚಕ್ರವರ್ಷಣಗಳಿಗೆ ಸಿಕ್ಕಿ ತಲೆಗಳನ್ನು ಕಳೆದುಕೊಂಡರು.

೧೮. ನಿಲೀಪರು ನಲಿನೀನಾಲದ ಕಂಟಕಗಳಂತೆ ನಿಶ್ಚಲರಾಗಿ, ಮರಮರದಲ್ಲಿಯೂ ಮರದ ಬೊಂಬೆಗಳಂತೆ ಇದ್ದುಕೊಂಡು ಆ ವಿಪಶ್ಚಿತನ ದಿಗಿಲಿನಿಂದ, ಬಹುಕಾಲ ಕಳೆದರು.

ಚಾರುಸಾರಂಗರಂಗಾಸು ಶೈಲಕಾನನಭೂಮಿಷು ।
ಚತುರ್ದಿಕ್ಕಂ ತದಾಪಾತ್ರೈಃ ಸಂಪನ್ನಂ ಕ್ಷೋಭಣಂ ಘನಂ ॥೧೯॥

ಕಂಟಕಸ್ಥಲನಾಮಾನಃ ಕಂಟಕಸ್ಥಲಕರ್ಕಶಾಃ ।
ಕಂಟಕಸ್ಥಲಗಾ ಆಸನ್ಕಂಟಕಸ್ಥಲಮಂಡಲೇ ॥೨೦॥

ಪಾರಸೀಕಾಃ ಪರಂ ಪೂರ್ವೈಃ ಪಾರಂ ಪ್ರಾಪ್ಯ ಪಯೋನಿಧೇಃ ।
ನಿಪೇತುಃ ಪವನೈಃ ಪೂತಾಃ ಪ್ರಲಯೇ ತಾರಕಾ ಇವ ॥೨೧॥

ವವುರಂಭೋಧಿಕುಟ್ಟಾಕಾ ದೃಷದಾಂ ಕಟಕಾಂಕಿತಾಃ ।
ಸರ್ವದಿಗ್ವನಲುಂಟಾಕಾ ವಾತಾಃ ಪ್ರಲಯಶಂಕಿತಾಃ ॥೨೨॥

ಆಸಾರಸಾರಾಃ ಪಂಕಾಂಬುಪ್ಲುತಾಃ ಸಘನಘುಂಘುಮಾಃ ।
ಆಸನ್ದಶದಿಶೋಽದೃಶ್ಯಾ ಬಹುಕ್ಷುಬ್ಧಾಯುಧಾನಿಲೈಃ ॥೨೩॥

---

೧೯. ಸಾರಗಗಳೂ ಸಾರಂಗಗಳೂ ಆಡುವ ಶೈಲಕಾನನ ಭೂಮಿಗಳಲ್ಲಿ, ಆ ಮಹಾರಾಜನ ಬಾಣಗಳಿಂದ ಘನವಾದ ಕ್ಷೋಭಣವುಂಟಾಯಿತು.

೨೦. ಕಂಟಕ (ಚೋರಾದಿ) ಸ್ಥಲಮಂಡಲಗಳಲ್ಲಿ, ಕಂಟಕಸ್ಥಲಗಳೆಂಬ ಹೆಸರಿನ ಸೈನಿಕರು, ಕಂಟಕ (ಮುಳ್ಳು) ಸ್ಥಲಗಳಂತೆ ಕರ್ಕಶರಾಗಿದ್ದರೂ ಸೋತು ಕಂಟಕ (ದುರ್ಗಮ) ಸ್ಥಲಗಳಲ್ಲಿ ಸೇರಿಕೊಂಡರು.

೨೧. ಪ್ರಲಯಕಾಲದ ನಕ್ಷತ್ರಗಳಂತೆ ಪಾರಸೀಕರು ಪವನಪೂತರಾಗಿ ಹೋಗಿ ಪಯೋನಿಧಿಯ ಪರಪಾರದಲ್ಲಿ ಬಿದ್ದರು.

೨೨. ಪ್ರಲಯವೆಂಬ ಶಂಕೆಯನ್ನುಂಟುಮಾಡುವ, ಸರ್ವ ದಿಕ್ಕುಗಳ ವನಗಳನ್ನೂ ಕಿತ್ತೆಸೆಯುವ, ಅಂಭೋಧಿಗಳನ್ನು ಕುಟ್ಟುವ, ಪರ್ವತಗಳನ್ನೂ ಶಿಲಾಪ್ರಹಾರಗಳಿಂದ ಕಟಕಾಂಕಿತಮಾಡುವ ವಾತಗಳು ಬೀಸಿದುವು.

೨೩. ಆಯುಧಾನಿಲಗಳಿಂದ ಬಹು ಕ್ಷುಬ್ಧಗಳಾಗಿ, ಮಳೆಯಿಂದ ನೆನೆದು, ಕೆಸರುನೀರಿನಿಂದ ಕೊಚ್ಚಿ ಘನಗರ್ಭಿತಗಳೆಂಬ ಘುಂ ಘುಂ ನಾದದಿಂದ ಕೂಗೆಟ್ಟು ದಶದಿಶೆಗಳೂ ಅದೃಶ್ಯಗಳಾದುವು.

ನಿಹಾರ್ರ್ಣವಕಾರಿಭಿರ್ವಾತೈರ್ಝಝ್ಝಟಝಟಾರವಂ ।
ಪ್ರಸಸ್ರುರ್ಭುವಿ ನೀಹಾರಾ ಮಹಾರ್ಣವರಯಾ ಇವ ॥೨೪॥

ವಿದೂರಸ್ಥಾ ರಥೇಭ್ಯಶ್ಚ ವೀಚಿಚೀತ್ಕಾರಕಾರಿಣಃ ।
ಸರೋಂಭಸ್ಯನಿಲೈಃ ಪೇತುಃ ಪದ್ಮೇಭ್ಯ ಇವ ಷಟ್ ಪದಾಃ ॥೨೫॥

ಆಯುಧೌಘೇಪಿ ಚಕ್ರಾಗ್ರಿಘಾತ್ಪಾದಾತಂ ಬಲಮಾನಿಲಂ ।
ರಜೋರಾಶಿರಿವಾಸಾರೇ ನ ಸಮರ್ಥಂ ಪಲಾಯನೇ ॥೨೬॥

ಹೂಣಾ ಆಮಸ್ತಕಂ ಮಗ್ನಾ ಉತ್ತರಾರ್ಣವಸೈಕತೇ ।
ಕ್ಲಿನ್ನಾಸ್ತತ್ರೈವ ಪಂಕಾಂತಃ ಪೂರಣಾವಿಲಶೂಲವತ್ ॥೨೭॥

ತೀರೈಲಾವನಲೇಖಾಸು ಶಕಾಃ ಪೂರ್ವಪಯೋನಿಧೇಃ ।
ನೀತಾ ಬದ್ಧ್ವಾ ದಿನಂ ಮುಕ್ತಾ ನ ಗತಾ ಯಮಸಾದನಂ ॥೨೮॥

---

೨೪. ಮೊರೆಯುತ್ತಿರುವ ಗಾಳಿಗಳಿಗೆ ಸಿಕ್ಕಿ ಛಟಛಟ ಎಂದು ಹಾರುತ್ತಿರುವ ನಿಹಾರಗಳು ಮಹಾರ್ಣವದ ವೇಗದಿಂದ ಭೂಮಿಯಲ್ಲಿ ಪ್ರಸರಿಸಿದುವು.

೨೫. ವಿದೂರದೇಶದ ಸೈನಿಕರು ಅಲೆಗಳಂತೆ ಚೀತ್ಕಾರಮಾಡುತ್ತ ಪದ್ಮಗಳಿಗೆ ಎರಗುವ ದುಂಬಿಗಳಂತೆ, ಗಾಲಿಗಳಿಗೆ ಸಿಕ್ಕಿ ರಥಗಳಿಂದ ಸರಸ್ಸಿನ ನೀರುಗಳಲ್ಲಿ ಬಿದ್ದರು.

೨೬. ಅವರ ಪದಾತಿ ಬಲವು ಆಯುಧಗಳಿದ್ದರೂ ವಿಪಶ್ಚಿದ್ರಾಜನ ಚಕ್ರ ಪ್ರಹಾರದಿಂದ, ಕಣ್ಣುಗಳಲ್ಲಿ ನೀರು ಸುರಿಸಿಕೊಂಡು, ಮಳೆಗಾಲದ ಧೂಳುಗಳಂತೆ ಪಲಾಯನದಲ್ಲಿಯೂ ಸಮರ್ಥರಾಗಲಿಲ್ಲ.

೨೭. ಹೂಣರು ಉತ್ತರಾರ್ಣವ ಸೈಕತದಲ್ಲಿ ಆಮಸ್ತಕಂ ಮಗ್ನರಾಗಿ, ನೆಲದಲ್ಲಿ ಹೂತ ಶೂಲದಂತೆ ಕ್ಲಿನ್ನರಾಗಿ ಪಕ್ವವಾಗಿ ಹೋದರು.

೨೮. ಶಕರು ಪೂರ್ವಪಯೋನಿಧಿಯ ತೀರದಲ್ಲಿರುವ ಏಲಾವನಗಳಲ್ಲಿ, ಒಂದು ದಿನ ಕಟ್ಟುಬಿದ್ದಿದ್ದು ಮುಕ್ತರಾದರು. ಯಮಸದನಕ್ಕೆ ಹೋಗಲಿಲ್ಲ.

ಮಂದಂ ಮಂದ್ರಾ ಮಹೇಂದ್ರಾದ್ರೌ ಕ್ರಂದಂತಃ ಪತಿತಾ ದಿವಃ ।
ಆಶ್ವಾಸಿತಾ ಮುನಿವರೈರ್ನಿಜಾಶ್ರಮಮೃಗಾ ಇವ ॥೨೯॥

ಪ್ರವಿಷ್ಟಾ ಯಾಚನಂ ಸಹ್ಯೇ ಲಬ್ಧಾಃ ಸುರಬಿಲಾದ್ದ್ವಯಂ ।
ಅನರ್ಥೇನಾರ್ಥ ಆಯಾತಿ ಕಾಕತಾಲೀಯತಃ ಕ್ವಚಿತ್ ॥೩೦॥

ಪತಿತಾ ದರ್ದುರಾರಣ್ಯೇ ದಶಾರ್ಣಾ ಜೀರ್ಣಪರ್ಣವತ್ ।
ಭುಕ್ತ್ವಾ ವಿಷಫಲಾನ್ಯಜ್ಞಾ ಮೃತಾಸ್ತತ್ರೈವ ತೇ ಸ್ವಯಂ ॥೩೧॥

ವಿಶಲ್ಯಕರಣೀಂ ಭುಕ್ತ್ವಾ ಕಾಕತಾಲೀಯಯೋಗತಃ ।
ಹಿಮಾದ್ರೌ ಹೈಹಯಾ ಯಾತಾ ಗೃಹಂ ವಿದ್ಯಾಧರಾ ಇವ ॥೩೨॥

---

೨೯. ಮಂದ್ರರು ಮಹೇಂದ್ರಾದ್ರಿಯಲ್ಲಿ ಕ್ರಂದಿಸುತ್ತಾ ಮೇಲಿಂದ ಬಿದ್ದು, ಅಲ್ಲಿರುವ ಮುನಿವರರಿಂದ ಆಶ್ರಮ ಮೃಗಗಳಂತೆ ಮಂದವಾಗಿ ಆಶ್ವಾಸಿತರಾದರು.

೩೦- ಸಹ್ಯಪರ್ವತವನ್ನು ಸೇರಿದವರು ಸುರಬಿಲಕ್ಕೆ ಅದೃಷ್ಟಬಲದಿಂದ ಹೋಗಿ, ಐಹಿಕಾಮುಷ್ಮಿಕಗಳೆರಡಕ್ಕೂ ಆಗುವ ವರವನ್ನು ಪಡೆದರು. ಒಂದೊಂದೆಡೆ ಅನರ್ಥದಿಂದ ಅರ್ಥವೂ ಕಾಕತಾಲೀಯವಾಗಿ ಬರುವುದುಂಟು.

(ಸಹ್ಯೇದಿತಾ ಪ್ರವಿಷ್ಟಾ ಭವಾಸ್ತು ಮೂಕಾಂಬಿಕಾ ಸನ್ನಿಧೌ ಕುಟಜಾಟ್ಯಾಖ್ಯೇತಚ್ಛಿಕರೇ ದೈವಾತ್ ಪ್ರವಿಷ್ಟಾತ್ ಸುರಬಿಲಾತ್ ದ್ವಯಂ ಐಹಿಕಾಮುಷ್ಮಿಕಂ ಯಾಚನಂ ಅಭಿಲಷಿತಸಿದ್ಧಿಫಲಂ ಲಬ್ಧಾಃ ಪ್ರಾಪ್ತವಂತಃ । —ತಾ. ಪ್ರ.)

೩೧. ದಶಾರ್ಣರು ಜೀರ್ಣಪರ್ಣಗಳಂತೆ ದರ್ದುರವನವನ್ನು ಹೊಕ್ಕು ಅಲ್ಲಿ ತಿಳಿಯದೆ ವಿಷಫಲಗಳನ್ನು ತಿಂದು ಅಲ್ಲಿ ತಾವಾಗಿ ಸತ್ತರು.

೩೨. ಕಾಕತಾಲೀಯ ಯೋಗದಿಂದ ಹಿಮಾದ್ರಿಯಲ್ಲಿ ಹೈಹಯರು ವಿಶಲ್ಯಕರಣಿಯನ್ನು ತಿಂದು ವಿದ್ಯಾಧರರಂತೆ ಮನೆಯನ್ನು ಸೇರಿದರು.

(ಹಿಮಾದ್ರೌ ವಿಶಲ್ಯಕರಣೀಂ ಔಷಧಿಂ ಭುಕ್ತ್ವಾ ವಿದ್ಯಾಧರಾ ಇವ ಖೇಚರಾಸ್ಸಂತೋ ಗೃಹಂ ಯಾತಾ । —ತಾ. ಪ್ರ.)

ಪೃಷ್ಠನ್ಯವ್ಲಾನಕುಸುಮಾ ಧನುರ್ಭಿರ್ಗೃಹಮಾಗತಾಃ ।
ವಂಗಾ ನಾದ್ಯಾಪಿ ದೃಶ್ಯಂತೇ ಪಿಶಾಚತ್ವಮಿವಾಗತಾಃ ॥೩೩॥

ಅಂಗಾ ವನಫಲೈರ್ಭುಕ್ತ್ವೈರ್ವಿದ್ಯಾಧರಪದಪ್ರದೈಃ ।
ವಿದ್ಯಾಧರೀಭಿಃ ಕ್ರೀಡಂತಿ ದಿವಿ ವಿದ್ಯಾಧರಾಃ ಸ್ಥಿತಾಃ ॥೩೪॥

ತಾಲೀತಮಾಲಖಂಡೇಷು ಪತಿತಾಃ ಪಾತಿತಾಂಗಕಾಃ ।
ಪಾರಸೀಕಾ ಗತಾ ಮೋಹಂ ಭ್ರಮಾದ್ವೈಮಾನಿಕಾ ಇವ ॥೩೫॥

ತರಲಾಸಾರಮಾತಂಗಂ ಪತಿತಂ ತಂಗಣಾಂಗಣೇ ।
ಅಂಗೈರಂಗಕಲಿಂಗಾನಾಂ ಚತುರಂಗಂ ಬಲಂ ಹತಂ ॥೩೬॥

ಕ್ರಮತ್ಯರಿಬಲೇ ಸಾಲ್ವಾಃ ಶರಶೈಲೋದಕೋದರೇ ।
ಪತಿತಾಃ ಪ್ರಭುಣಾ ಸಾರ್ಧಮದ್ಯಾಪ್ಯೇವೋಪಲಾಃ ಸ್ಥಿತಾಃ ॥೩೭॥

---

೩೩. ವಂಗರೂ (ಹೀಗೆಯೇ ಹೈಮವತೀಕೌಷಧೀರ್ಭುಕ್ತ್ವಾ) ಮುಡಿದಿದ್ದ ಹೂವುಗಳೆಲ್ಲಾ ಬಾಡಿಸಿಕೊಂಡು, ಧನುರ್ಮಾತ್ರರಾಗಿ ಮನೆಗೆ ಬಂದರು ; ಪಿಶಾಚತ್ವವನ್ನು ಹೊಂದಿದವರಂತೆ ಇದುವರೆಗೆ ಎಲ್ಲಿಯೂ ಕಾಣಿಸುತ್ತಲೇ ಇಲ್ಲ.

೩೪. ಅಂಗರು ವಿದ್ಯಾಧರ ಫಲಪ್ರದಗಳಾದ ವನಫಲಗಳನ್ನು ತಿಂದು, ವಿದ್ಯಾಧರರಾಗಿ, ಆಕಾಶದಲ್ಲಿ ವಿದ್ಯಾಧರಿಯರೊಡನೆ ಕ್ರೀಡಿಸುತ್ತಿರುವರು.

೩೫. ಪಾರಸೀಕರು ತಾಲೀತಮಾಲಖಂಡಗಳಲ್ಲಿ ಭಿನ್ನಾಂಗರಾಗಿ ಬಿದ್ದು ಭ್ರಮೆಗೊಂಡ ವೈಮಾನಿಕರಂತೆ ಮೋಹ(ಮೂರ್ಛೆ) ಗೊಂಡಿರುವರು.

೩೬. ತರಲಾಸಾರಮಾತಂಗವಾಗಿ ತಂಗಣಾಂಗಣದಲ್ಲಿ ಬಿದ್ದ ಕಲಿಂಗರ ಚತುರಂಗಬಲವೂ ಅಂಗಗಳನ್ನು ಸೀಗಿಕೊಂಡು ಹತವಾಗಿಹೋಯಿತು.

೩೭. ಸಾಲ್ವರು ಶರಗಳೆಂಬ ಶೈಲೋದಕಗಳನ್ನು ಉದರದಲ್ಲುಳ್ಳವರಂತೆ ಅರಿಬಲವು ನುಗ್ಗಿಬರಲು, ತಮ್ಮ ಪ್ರಭುವಿನೊಡನೆ ಅವರೂ ಬಿದ್ದರು. ಈಗಲೂ ಅವರು ಶಿಲೆಗಳಾಗಿಯೇ ಇರುವರು

ಅಸಂಖ್ಯಾಃ ಪ್ರಪಲಾಯಂತಃ ಕಕುಭಂ ಕಕುಭಂ ಪ್ರತಿ ।
ನರಾಃ ಸುರಕ್ತರಂಗೇಷು ಸಾಗರೇಷು ಲಯಂ ಗತಾಃ ॥೩೮॥

ಕ್ಷೇತ್ರಾಟವೀಪುರಜಲಸ್ಥಲಶೈಲಕೂಲ ।
ಕುಲ್ಯಾಗ್ರಹಾರಸರಿದಬ್ಧಿಭೃಗುದ್ರುಮೇಷು ।
ಗ್ರಾಮಾರಪಟ್ಟಿಗಿರಿಕೂಪಗುಹಾಗೃಹೇಷು ।
ಭ್ರಷ್ಟಾನಿ ಕಃ ಕಲಯಿತುಂ ಕುಬಲಾನಿ ಶಕ್ತಃ ॥೩೯॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ "ಅವಿದ್ಯೋಪಾಖ್ಯಾನಾಂತರ್ಗತ ವಿಪಶ್ಚಿದುಪಾಖ್ಯಾನೇ ಬಲಪರಿಭ್ರಂಶೋ" ನಾಮ ದ್ವಾದಶಾಧಿಕ ಶತತಮಃ ಸರ್ಗಃ

---

೩೮ ದಿಕ್ಕುದಿಕ್ಕುಗಳಿಗೂ ಓಡಿಹೋದ ಅಸಂಖ್ಯರಾದ ಯೋಧರು, ಉಬ್ಬಿ ಬರುವ ತರಂಗಗಳನ್ನುಳ್ಳ ಸಾಗರಗಳಲ್ಲಿ ಲಯವಾಗಿ ಹೋದರು

೩೯ ಕ್ಷೇತ್ರ, ಅಟವಿ, ಪುರ, ಜಲ, ಸ್ಥಲ, ಶೈಲ, ಕೂಲ, ಕುಲ್ಯ, ಅಗ್ರಹಾರ, ಸರಿತ್, ಅಬ್ಧಿ, ಭೃಗುದ್ರುಮ, ಗ್ರಾಮ, ಆರಪಟ್ಟಿ, ಗಿರಿ, ಕೂಪ, ಗುಹಾ, ಗೃಹ, ಗಳಲ್ಲಿ ಭ್ರಷ್ಟಗಳಾದ ಕುಬಲಗಳನ್ನು ಲೆಕ್ಕಮಾಡಲು ಯಾರುತಾನೇ ಸಮರ್ಥರು ?

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ "ಬಲಪರಿಭ್ರಂಶ" ಎಂಬ ನೂರ ಹನ್ನೆರಡನೆಯ ಸರ್ಗವು

---

# ತ್ರಯೋದಶಾಧಿಕಶತತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ—

ಬಲಾನ್ಯನುತರಂತೋಥ ತದಿತ್ಥಂ ದ್ರವತಾಂ ದ್ವಿಷಾಂ ।
ದೂರಾದ್ದೂರತರಂ ಪ್ರಾಪ್ತಾಶ್ಚತ್ವಾರಸ್ತೇ ವಿಪಶ್ಚಿತಃ ॥೧॥

ಸರ್ವಶಕ್ತಿಮಯೈಕೇನ ಚೇತನೇನೇಶ್ವರೇಣ ತೇ ।
ಪ್ರಹಿತಾ ದಿಗ್ಜಯಂ ಚಕ್ರುಃ ಸರ್ವ ಏವ ಸಮಾಶಯಾಃ ॥೨॥

ದೂರಾತ್ತಾವದವಿಚ್ಛಿನ್ನಮನುಸಸ್ರುರ್ಬಲಾನಿ ತೇ ।
ಯಾವತ್ತೀರಂ ಸಮುದ್ರಾಣಾಂ ಪ್ರವಾಹಾಃ ಸರಿತಾಮಿವ ॥೩॥

---

# ನೂರಹದಿಮೂರನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು —

೧. ಓಡುತ್ತಿರುವ ಶತ್ರುಗಳ ಬಲವನ್ನು ಅಟ್ಟಿಕೊಂಡು ಹೋಗುತ್ತಾ ಆ ನಾಲ್ವರು ವಿಪಶ್ಚಿತರು ಒಬ್ಬರಿಗೊಬ್ಬರು ದೂರದೂರವಾದರು.

೨. ಸರ್ವಶಕ್ತಿಮಯನಾಗಿ, ಎಲ್ಲರಲ್ಲಿಯೂ ಇರುವ, ಒಬ್ಬನೇ ಒಬ್ಬನಾದ ಚೈತನ್ಯಸ್ವರೂಪನಾದ ಈಶ್ವರನಿಂದ ದಿಗ್ವಿಜಯಕ್ಕಾಗಿ ಪ್ರೇರಿತರಾದ ಅವರು, ಒಂದೇ ಅಭಿಪ್ರಾಯದಿಂದ, ದಿಕ್ಕುದಿಕ್ಕುಗಳನ್ನೂ ಗೆದ್ದರು.

೩. ಸರಿತ್ತುಗಳ ಪ್ರವಾಹವು ಸಮುದ್ರಗಳ ತೀರದವರೆಗೂ ಹೋಗುವಂತೆ, ಬಹುದೂರದವರೆಗೂ ಅವರು ಶತ್ರುಬಲವನ್ನು ಅವಿಚ್ಛಿನ್ನವಾಗಿ ಸಮುದ್ರತೀರದವರೆಗೂ ಓಡಿಸಿಕೊಂಡು ಹೋದರು.

ದೂರಾವಿಶ್ರಾಂತಯಾನೇನ ತೇಷಾಂ ತತ್ಸರ್ವಸಾಧನಂ ।
ಆತ್ಮೀಯಂ ಪರಕೀಯಂ ಚ ಕ್ಷೀಣಂ ಕುಸರಿದಂಬುವತ್ ॥೪॥

ಆತ್ಮೀಯಾನ್ಯನ್ಯದೀಯಾನಿ ತೇಷಾಂ ವೀಕ್ಷ್ಯ ಬಲಾನ್ಯಲಂ ।
ಕ್ಷೀಣಾನೀವ ಮುಮುಕ್ಷೂಣಾಂ ಪುಣ್ಯಪಾಪಾನಿ ಧಾವತಾಂ ॥೫॥

ಸ್ವಯಮಸ್ತ್ರಾಣಿ ಶಾಂತಾನಿ ಕೃತಕೃತ್ಯಾನ್ಯಧಾಂಬರೇ ।
ಜ್ವಾಲಾಜಾಲಾನಿ ವಹ್ನೀನಾಂ ದಾಹ್ಯಸ್ಯಾಸಂಭವಾದಿವ ॥೬॥

ಆಲಯೇಷು ರಥಾಶ್ವೇಭವೃಕ್ಷಪೃಷ್ಠಾದಿಷು ಹೇತಯಃ ।
ಆಸನ್ನಿದ್ರಾಲವೋ ಲೀನಾ ದಿನಾಂತೇ ವಿಹಗಾ ಇವ ॥೭॥

---

೪. ಅವಿಶ್ರಾಂತವಾಗಿ ಒಂದೇಸಮನಾಗಿ ಬಹುದೂರ ಪ್ರಯಾಣಮಾಡಿದುದರಿಂದ, ಅವರ ಆತ್ಮೀಯ ಪರಕೀಯ ಸರ್ವ ಸಾಧನಗಳೂ ಅಲ್ಪನದಿಯ ನೀರಿನಂತೆ ಮುಗಿದುಹೋದುವು.

೫. ಅವರ ಆತ್ಮೀಯ ಮತ್ತು ಅನ್ಯದೀಯವಾದ ವೀಕ್ಷಣಾರ್ಹವಾದಿ ಬಲಗಳೆಲ್ಲವೂ, ಮುಮುಕ್ಷುಗಳ ಪುಣ್ಯಪಾಪಗಳುಕ್ಷೀಣವಾಗುವಂತೆ ಕ್ಷೀಣವಾಗಿಹೋದುವು.

೬. ಶತ್ರುಗಳನ್ನು ಧ್ವಂಸಮಾಡಿ ಕೃತಕೃತ್ಯವಾದ ಅಸ್ತ್ರಗಳು ಸ್ವಯಂ ಅಂಬರದಲ್ಲಿ ಶಾಂತವಾದುವು. ದಾಹ್ಯವಾದುದು ಯಾವುದೂ ಇಲ್ಲದಾಗ, ಅಗ್ನಿಯ ಜ್ವಾಲಾಜಾಲಗಳು ತಾವಾಗಿ ಶಾಂತವಾಗುವಂತೆ ಆಯಿತು.

೭. ಸಂಜೆಯ ಹೊತ್ತಿನಲ್ಲಿ ವಿಹಗಗಳು ಹೇಗೋ ಹಾಗೆ, ಆಲಯಗಳಲ್ಲಿ. ರಥ, ಅಶ್ವ, ಗಜ, ವೃಕ್ಷಪೃಷ್ಠ ಮೊದಲಾದುವುಗಳಲ್ಲಿ ಆಯುಧಗಳು ನಿದ್ರಾಲುಗಳಂತೆ ಒರೆಗಳಲ್ಲಿ ಲೀನವಾಗಿದ್ದುವು.

ತರಂಗಾ ಇವ ತೋಯೇಂತರ್ನಿಹಾರಾ ಇವ ವಾರಿದೇ ।
ಮೇಘಾ ವಾಯಾವಿವಾಮೋದಾ ವ್ಯೋಮನೀವ ನಿಲಿಲ್ಯಿರೇ ॥೮॥

ಧಾರಾಪಂಕತಲಾಲೀನ ಶಾಂತಹೇತಿ ಜಲೇಚರಃ ।
ನಾರಾಚಸೀಕರಾಸಾರ ನೀಹಾರ ಪರಿವರ್ಜಿತಃ ॥೯॥

ಚಕ್ರಾವರ್ತಶತೋನ್ಮುಕ್ತೋ ಯುಕ್ತಃ ಸೌಮ್ಯತಯಾಚ್ಛಯಾ ।
ಪ್ರಶಾಂತಮೇಘಸಂರಂಭತರಂಗೋತ್ತುಂಗ ವರ್ಷಣಃ ॥೧೦॥

ಅಂತರ್ಲೀನನರ್ಕ್ಷರತ್ನೌಘೋ ಕೋಣಸಂಸ್ಥಾರ್ಕವಾಡವಃ ।
ಶೂನ್ಯತಾವಾರಿರಮಲೋ ವ್ಯೋಮೈಕಾಬ್ಧಿರಭೂತ್ಪೃಥುಃ ॥೧೧॥

---

೮. ನೀರಿನಲ್ಲಿ ತರಂಗಗಳು, ಮೇಘದಲ್ಲಿ ನೀಹಾರಗಳು ಮೇಘಗಳು ವಾಯುವಿನಲ್ಲಿ, ಆಮೋದವು ಆಕಾಶದಲ್ಲಿ ಲೀನವಾಗುವಂತೆ, ಅವು ಲೀನವಾದುವು.

೯. ಧಾರಾಪ್ರಯುಕ್ತವಾದ ಪಂಕತಲದಲ್ಲಿ ಲೀನವಾಗಿ ಆಯುಧಗಳೆಂಬ ಜಲೇಚರಗಳು ಶಾಂತವಾಗಿದ್ದವು, ನಾರಾಚವೆಂಬ ತುಂತುರುಗಳು, ಆಸಾರಗಳು, ನೀಹಾರಗಳು ಇವೊಂದೂ ಇಲ್ಲದಿತ್ತು.

೧೦. ಚಕ್ರಾವರ್ತ-ಶತಗಳು ಇಲ್ಲದೆಹೋಗಿ, ಅಚ್ಛವಾದ ಸೌಮ್ಯತೆಯಿಂದ ಕೂಡಿ, ಮೇಘಸಂರಂಭವೆಂಬ ತರಂಗಗಳಿಂದ ಕೂಡಿದ ಉತ್ತುಂಗ ವರ್ಷಣವೆಲ್ಲವೂ ಪ್ರಶಾಂತವಾಗಿತ್ತು.

೧೧. ನಕ್ಷತ್ರಗಳೆಂಬ ರತ್ನಸಮೂಹಗಳು ಅಂತರ್ಲೀನವಾಗಿರಲು, ಸೂರ್ಯನೆಂಬ ಬಾಡವನು ಏಕದೇಶದಲ್ಲಿರಲು, ಶೂನ್ಯತೆಯೆಂಬ ನಿರ್ಮಲವಾದ ನೀರು ತುಂಬಿರಲು, ಆಕಾಶವೂ ಒಂದು ವಿಸ್ತಾರವಾದ ಸಾಗರದಂತಿತ್ತು

ಲಂಬಪ್ರಕಾಶಗಂಭೀರಂ ಪ್ರಸನ್ನಂ ಕಾಂತಿಮತ್ತತಂ ।
ರಜೋವಿರಹಿತಂ ರೇಜೇ ಖಂ ಮನೋ ಮಹತಾಮಿವ ॥೧೨॥

ಅಥಾರ್ಣವಾಂಸ್ತೇ ದದೃಶ ರಾಕಾಶಸ್ಯಾನುಜಾನಿವ ।
ವಿಸ್ತೀರ್ಣಾನ್ವಿಮಲಾಕಾರಾನ್ಪೂರಿತಾಖಿಲದಿಕ್ತಟಾನ್ ।॥೧೩॥

ತರಂಗಕಣಕಲ್ಲೋಲ ಮಹಾಗುಲುಗುಲಾಕುಲಾನ್ ।
ಭೂರಿಸೀಕರ ನೀಹಾರ ಹಾರಿಹಾರಿ ಶರೀರಿಣಃ ॥೧೪॥

ಸ್ಥಿತಾನಾತ್ಮಾನಮಾಸ್ತೀರ್ಯ ಭೂಮೌ ವ್ಯಾಧ್ಯಾತುರಾನಿವ ।
ಶ್ವಸನಾರ್ತಾಂಶ್ಚಲದ್ದೇಹಾನ್ವಿವರ್ತೋರ್ಮಿ ಮಹಾಭುಜಾನ್ ॥೧೫॥

---

೧೨. ನೀಳವಾದ ಪ್ರಕಾಶದಿಂದ ಗಂಭೀರವಾಗಿ, ಕಾಂತಿಮತ್ತಾಗಿ, ಆತತವಾಗಿ, ಪ್ರಸನ್ನವಾಗಿ, ರಜೋವಿರಹಿತವಾಗಿ ಆಕಾಶವು ಮಹಾತ್ಮರ ಮನದಂತೆ ಪ್ರಕಾಶಿಸಿತು.

೧೩. ಆಗ ಅವರು ಸಮುದ್ರಗಳನ್ನು ಕಂಡರು ಆ ಸಾಗರಗಳು ಆಕಾಶದ ಅನುಜರಂತಿದ್ದುವು. ವಿಸ್ತೀರ್ಣವಾಗಿ, ವಿಮಲಾಕಾರವಾಗಿ, ಅಖಿಲ ದಿಕ್ತಟಗಳನ್ನೂ ಆಕ್ರಮಿಸಿದಂತಿದ್ದುವು.

೧೪. ತರಂಗಗಳಿಂದ ಹಾರುವ ಜಲಕಣಗಳೂ, ಕಲ್ಲೋಲಗಳಿಂದ ಆದ ಮಹಾ ಗುಲುಗುಲು ಶಬ್ದಗಳೂ ಉಳ್ಳುದಾಗಿ, ಸೀಕರ, ನೀಹಾರಗಳನ್ನು ಬೇಕಾದ ಹಾಗೆ ಚೆಲ್ಲುತ್ತಾ, ಅವುಗಳನ್ನು ಹೊತ್ತುಕೊಂಡು ಹೋಗುವ ಮನೋಹರವಾದ ಶರೀರಗಳುಳ್ಳ ಮೇಘಗಳು ಇದ್ದು, ಆ ಸಮುದ್ರಗಳು ಭಯಂಕರಗಳಾಗಿದ್ದುವು.

೧೫. ವ್ಯಾಧಿಯಿಂದ ಆತುರರಾಗಿರುವಂತೆ ಭೂಮಿಯಲ್ಲಿ ತಮ್ಮ ದೇಹವನ್ನು ಚಾಚಿಕೊಂಡು ಇರುವ, ವಾಯುವಿನಿಂದ ಆರ್ತವಾಗಿ, ಒದ್ದಾಡುತ್ತಿರುವ ದೇಹಗಳನ್ನೂ, ತರಂಗಗಳೆಂಬ ಮಹಾಭುಜಗಳನ್ನೂ ಎತ್ತಿರುವ,

ಜಡಾನಪಿ ಸ ಂದಮಯಾನ್ಕಲ್ಲೋಲಾಕೋಟಕೋಟರಾನ್ ।
ಸಂಸಾರಾನಿವ ವಿಸ್ತೀರ್ಣಾಂಶ್ಚಕ್ರಾವರ್ತ ದಶಾಕುಲಾನ್ ॥೧೬॥

ರತ್ನರಾಶಿತಟೋದ್ಯೋತ ಪೀವರೀಕೃತ ಭಾಸ್ಕರಾನ್ ।
ಶಂಖರಾಶಿವಿಶದ್ವಾತ ಶಬ್ದ ತರ್ಜಿತ ಘುಂಘುಮಾನ್ ॥೧೭॥

ಮಾಂಸಲೋರ್ಮಿಘಟಾಘೋಷ ಘರ್ಘರಾಂಬರ ಡಂಬರಾನ್ ।
ವರ್ತುಲಾವರ್ತವಿಸ್ತಾರ ಪ್ರಭ್ರಮದ್ವಿದ್ರುಮದ್ರುಮಾನ್ ॥೧೮॥

ಮಕರವ್ಯೂಹ ನಿರ್ಹ್ರಾದ ಘರ್ಘರೋದರ ಘುಂಘುಮಾನ್ ।
ಮತ್ಸ್ಯಪುಚ್ಛಚ್ಛಟಾಚ್ಛಿನ್ನ ಮಜ್ಜತ್ಪೋತಕೃತಾರವಾನ್ ॥೧೯॥

---

೧೬. ಜಡಗಳಾದರೂ ಸವ್ಯಾಪಾರಗಳಾದ, ಕಲ್ಲೋಲಗಳೆಂಬ ಕುಟಿಲ ಕೋಟರಗಳನ್ನುಳ್ಳ, ಸಂಸಾರಗಳಂತೆ ವಿಸ್ತೀರ್ಣವಾಗಿರುವ, ಚಕ್ರಾವರ್ತದಶಗಳಿಂದ ಆಕುಲವಾಗಿರುವ,

೧೭. ರತ್ನರಾಶಿಗಳುಳ್ಳ ತಟಗಳ ಕಾಂತಿಯಿಂದ ಸೂರ್ಯನನ್ನು ದೊಡ್ಡದು ಮಾಡಿ ತೋರಿಸುವ, ತಟದಲ್ಲಿರುವ ಶಂಖರಾಶಿಗಳನ್ನು ತೂರಿ, ಘುಂಘುಂ ಶಬ್ದ ಮಾಡುವ ವಾಯುಗಳನ್ನುಳ್ಳ,

೧೮. ಪರಿಪುಷ್ಟಗಳಾದ ತರಂಗಗಣಗಳ ಘೋಷದಿಂದ ಘರ್ಘರವಾದ ಅಂಬರ ಡಂಬರ (ಹರಡುವಿಕೆ) ವುಳ್ಳ, ವರ್ತುಲಾವರ್ತ ವಿಸ್ತಾರವಾಗಿ ಅಲೆಯುತ್ತಿರುವ ವಿದ್ರುಮದ್ರುಮ (ಹವಳದ ಬಳ್ಳಿ) ಗಳನ್ನುಳ್ಳ,

೧೯. ಮಕರವ್ಯೂಹಗಳ ಧ್ವನಿಯಿಂದ ಘರ್ಘರವಾದ ಅಂತರ್ಧ್ವನಿಯಿಂದಲೂ ಮತ್ಸ್ಯಪುಚ್ಛಾಗ್ರಗಳಿಂದ ಏಟುತಿಂದು ಮುಳುಗುವ ಹಡಗುಗಳು ಮಾಡುವ ಮಹಾ ಶಬ್ದದಿಂದಲೂ ಕೂಡಿರುವ,

ಉದ್ಗ್ರೀವಕೂರ್ಮಮಕರನಿಗೀರ್ಣೌರ್ಣನರೋತ್ಕರಾನ್ ।
ಊರ್ಮಿಬಿಂಬಿತ ಸಪ್ತಾಶ್ವಸಹಸ್ರಾರ್ಕನಭೋನಿಭಾನ್ ॥೨೦॥

ಭಾಂಕಾರಕಾರಿಪವನಪತದ್ಬೃಹತ್ಪೋತೋದ್ಭಟಾನ್ ।
ಊರ್ಮ್ಯುದಸ್ತಮಣಿವ್ರಾತ ಝಲಜ್ಝುಣಝುಣಧ್ವನೀನ್ ॥೨೧॥

ನಾನಾಜಾಲೈರ್ಬಲಿಭುಜೈರ್ಲೀಲಾಸ್ಪೃಷ್ಟಾರ್ಕಮಂಡಲಾನ್ ।
ಸಮುದ್ಯನ್ನಶ್ಯದುದ್ರಶ್ಮಿರತ್ನಮಾಣಿಕ್ಯಮಂಡಲಾನ್ ॥೨೨॥

ಉತ್ಫಾಲಫೇನಿಲಾವರ್ತವಿವರ್ತಮಕರೋತ್ಕರಾನ್ ।
ಕ್ವಚಿತ್ಕರಿಕರೋನ್ನಾಲೈಃ ಕ್ಷಣಂ ವಂಶವನೀಕೃತಾನ್ ॥೨೩॥

---

೨೦. ತಲೆಯೆತ್ತಿಕೊಂಡಿರುವ ಕೂರ್ಮ ಮಕರಗಳು ಹಿಡಿದು ನುಂಗುವ ಜಲಮನುಷ್ಯರನ್ನುಳ್ಳ, ತರಂಗಗಳಲ್ಲಿ ಪ್ರತಿಬಿಂಬಿಸಿರುವ ಸೂರ್ಯಸಹಸ್ರಗಳನ್ನೂ ಆಕಾಶಗಳನ್ನೂ ಉಳ್ಳ,

(ಸಮುದ್ರಾಣಾಂ ನರಾಣಾಂ ಪ್ರಾಯೇಣ ಊರ್ಣಾಂಬರ ದ್ಯೋತನಾಯ ಔರ್ಣಾ ಇತಿ ವಿಶೇಷಣಂ–ತಾ. ಪ್ರ.)

೨೧. ಪಟವನ್ನು ವಿಸ್ತರಿಸಿದಾಗ ಭಾಂ ಎಂದು ಶಬ್ದಮಾಡುತ್ತಾ [illegible]ುವ ಗಾಳಿಗಳಿಂದ ಮುಂದುಮುಂದಕ್ಕೆ ಹೋಗುವ, ಬಹುವ್ಯಯದಿಂದ ಸಂ[illegible]ತವಾದ ದೊಡ್ಡದೊಡ್ಡ ಹಡಗುಗಳನ್ನುಳ್ಳ, ತರಂಗಗಳು ಎತ್ತಿ ಎಸೆಯುವ ಮಣಿಗಳ ಸಮೂಹಗಳು ಮಾಡುವ ಝುಣಝುಣ ಧ್ವನಿಗಳನ್ನುಳ್ಳ,

೨೨. ನಾನಾ ಜಾಲಗಳೆಂಬ ಬಲಿಷ್ಠವಾದ ತೋಳುಗಳಿಂದ ಲೀಲಾಜಾಲವಾಗಿ ಸೂರ್ಯಮಂಡಲವನ್ನು ಮುಟ್ಟುತ್ತಿರುವ, ಮರೆಯಾಗುವ, ಮೆರೆಯುವ ಕಾಂತಿಗಳ ರತ್ನಮಾಣಿಕ್ಯ ಮಂಡಲಗಳನ್ನುಳ್ಳ,

೨೩. ಅಪ್ಪಳಿಸುವುದರಿಂದ ಫೇನಿಲಮಾಡಿ ಆವರ್ತ ವಿವರ್ತಗಳನ್ನುಂಟು ಮಾಡುವ ಮಕರಗಣಗಳನ್ನುಳ್ಳ, ಒಂದೊಂದೆಡೆ ಆನೆಗಳ ಸೊಂಡಿಲುಗಳು ಮೇಲಕ್ಕೆದ್ದಿರಲು, ಬಿದಿರು ವನಗಳಂತೆ ಕಾಣುವ,

ಲಹರೀವಲ್ಲರೀವಾಲಾನ್ಸ್ಪೃಷ್ಟತಃಲಿಷು ಮಾಧವಾನ್ ।
ಕ್ವಚಿದಂತರ ವಿಶ್ರಾಂತ ಸಪರಿಚ್ಛದ ಮಾಧವಾನ್ ||೨೪||

ಏಕದೇಶಸ್ಥಿತಾಸಂಖ್ಯ ನಾನಾಸುರ ಸುರಾಲಯಾನ್ ।
ತಾರಾನವತರಂಗೌಘೈಪರಿದಂತುರಿತಾಂಬರಾನ್ ||೨೫||

ಗುಹಾಮಶಕವದ್ಗರ್ತ ಭೀತಶಾಖಾಯಿತಾಚಲಾನ್ ।
ನಯತೋಂಬುತರಂಗೌಘೈರ್ವೇಲಾದ್ರೀನತಿ ಖರ್ವತಾಂ ||೨೬||

ಖಕ್ಷೇತ್ರಾರೋಪಿತಾನಲ್ಪರತ್ನರಶ್ಮಿ ಪಥಾಂಕುರಾನ್ ।
ಶುದ್ಧ ಶುಕ್ತಿಮುಖೋನ್ಮುಕ್ತ ಮುಕ್ತಾಂತರಿತ ಸೈಕತಾನ್ । ||೨೭||

---

೨೪. ಪ್ರವಾಹಗಳಲ್ಲಿ ಬಳ್ಳಿಗಳಂತೆ ಕಾಣುವ ಬಾಲಗಳೂ, ತಮ್ಮಮೇಲೆ ನೊರೆಗಳು ಕಾಣುತ್ತಿರಲು ಪುಷ್ಪಭೂಯಿಷ್ಠವಾದ ಮಾಧವ ಮಾಸವನ್ನು ಸ್ಮರಣೆಗೆ ತರುವ ಬೆನ್ನುಗಳೂ ಉಳ್ಳ ಆನೆಗಳು ಅಲ್ಲಲ್ಲಿರಲು, ಇನ್ನೊಂದೆಡೆ (ಶ್ವೇತದ್ವೀಪ) ಸಪರಿವಾರವಾಗಿ ವಿಶ್ರಾಂತಿಯನ್ನು ಪಡೆಯುತ್ತಿರುವ ಮಾಧವನನ್ನುಳ್ಳ,

೨೫. ಒಂದು ಕಡೆಯಲ್ಲಿ ಅಸಂಖ್ಯ ನಾನಾ ಸುರ ಅಸುರರ ಆಲಯುಗಳ ನ್ನುಳ್ಳ ಹೊಸ ಅಲೆಗಳ ನೊರೆಯು ಪ್ರತಿಬಿಂಬಿಸಿದ ತಾರಾನಿವಹದಂತಿರಲು ಆಕಾಶ ವನ್ನು ಹಾಸ್ಯಮಾಡುವಂತಿರುವ,

೨೬. ಗುಹೆಯಲ್ಲಿರುವ ಮಶಕಗಳಂತೆ, ಹಳ್ಳಗಳನ್ನು ಬಿಟ್ಟುಬರಲು ಹೆದರಿ ಅಲ್ಲಿಯೇ ಹರಡಿಕೊಂಡಿರುವ ಬೆಟ್ಟಗಳನ್ನುಳ್ಳ, ತಟದಲ್ಲಿರುವ ಪರ್ವತಗಳನ್ನು ಚಿಕ್ಕವು ಮಾಡುವ ತರಂಗಗಳನ್ನುಳ್ಳ, ಆ ಸಾಗರಗಳು ಮೆರೆಯುತ್ತಿರುವುವು.

೨೭. ಅಲ್ಲಿರುವ ಅಲ್ಪರತ್ನಗಳು ಉಗುಳುವ ಕಿರಣಗಳು ರತ್ನಾಂಕುರಗಳಂತೆ ಕಾಣುವುವು. ಶುದ್ಧಶುಕ್ತಿ ಮುಖಗಳಿಂದ ಈಚೆಗೆ ಬರುವ ಮುಕ್ತಾಮಣಿಗಳ ಗರ್ಭ ದಲ್ಲಿರುವ ಮರಳು ಅಲ್ಲಿ ಮೆರೆಯುವುದು.

ನಾನಾರತ್ನಾಂಶುಕೌ ಶೀಯಸೂತ್ರಚಿತ್ರಾಂಸ್ತರಂಗಿತಾನ್ ।
ವಿಶನ್ನದೀನ್ದ ಶಾದಿಗ್ಭಿಃ ಸಮಾಕೀರ್ಣಾನ್ಪಟಾನಿವ ॥೨೮॥

ಇಂದ್ರನೀಲತಟ್ಯೈರ್ವ್ಯಸ್ತಮುಕ್ತಾಶುಕ್ತಿ ಶತಾಂಕಿತೈಃ ।
ಕ್ವಚಿದ್ದರ್ಶಯತಃ ಕಾಂತಶತೇಂದು ಕನಖಶ್ರಿಯಂ ॥೨೯॥

ರತ್ನಾಂಶುಜಾಲಸಂದಿಗ್ಧಾಸ್ತರಂಗಾದೇಶ ಬಿಂಬಿತಾಃ ।
ಪರಿವರ್ತಯತಃ ಫುಲ್ಲಾಸ್ತೀರತಾಲೀವನಾವಲೀಃ ॥೩೦॥

ಏಲಾಲವಂಗಕಂಕೋಲಫಲಮಾಲಾಂ ಜಿಘೃಕ್ಷುಭಿಃ ।
ವೇಲಾವನಲತಾಭ್ರಷ್ಟಾ ಮಾತ್ತಾವೃತ್ತೀಂ ಜಲೇಚರೈಃ ॥೩೧॥

---

೨೮ ನಾನಾ ರತ್ನಗಳ ಕಿರಣಗಳೆಂಬ ರೇಶಿಮೆಯ ಎಳೆಗಳಿಂದ ಚಿತ್ರಗಳನ್ನು ನೇಯುವಂತಿರುವುದು. ನಾನಾ ದಿಕ್ಕುಗಳಿಂದ ಬರುವ ನದಿಗಳು ಹೊಕ್ಕುಗಳಾಗಿಯೂ ದಿಕ್ಕುಗಳು ಅಂಚುಗಳಾಗಿಯೂ ಇರುವುವು ಆ ಪಟಗಳಿಗೆ.

೨೯. ಒಂದು ಕಡೆ ಇಂದ್ರನೀಲತಟಗಳಿಂದ ನೂರಾರು ಮುತ್ತಿನಚಿಪ್ಪುಗಳು ಬಂದು ಬೀಳುತ್ತಿರಲು, ಮನೋಹರವಾದ ನೂರಾರು ಚಂದ್ರರೆಂಬ ಉಗುರುಗಳನ್ನು ಮೆರೆಯುವಂತಿರುವುದು.

೩೦. ರತ್ನಾಂಶುಜಾಲವೋ ಎಂಬ ಸಂದೇಹವು ಬರುವಂತೆ ತರಂಗಗಳಲ್ಲಿ ಪ್ರತಿಬಿಂಬಿತವಾದ ತೀರದ ತಾಲೀವನಾವಲಿಗಳು ಹೋಗಿಬರುವಂತಿರುವುವು.

೩೧. ತೀರದಲ್ಲಿ ಬೆಳೆದಿರುವ ವನಲತೆಗಳಿಂದ ಬಿದ್ದಿರುವ ಏಲಕ್ಕಿ ಲವಂಗ ಕಂಕೋಲಗಳ ಫಲಮಾಲೆಗಳನ್ನು ಹಿಡಿಯಬೇಕೆಂದು ಜಲಚರಗಳು ಬಾಯಿ ತೆರೆದು ಕೊಂಡು ಪದೇಪದೇ ಬರುತ್ತಿರುವುವು.

ಚೂತನೀಪಕದಂಬಾಗ್ರ ವಿಹಗಾನ್ಪ್ರತಿಬಿಂಬಿತಾನ್ ।
ಭುಂಜಾನೈರ್ವಿಪ್ರಲಂಭೇನ ಕೃತಾಚ್ಛೋಟಾಂಜಲೇಚರೈಃ ॥೩೨॥

ಖೇಚರಪ್ರತಿಬಿಂಬೇನ ವಿಪ್ರವದ್ಭಿರಿತಸ್ತತಃ ।
ಭಗ್ನಬಂಧ ಬೃಹತ್ಸೇತೂಃಕ್ಷಣಂ ಪ್ರತಿ ಜಲೇಚರೈಃ ॥೩೩॥

ಅಮೂರ್ತಾನ್ಪ್ರತಿಬಿಂಬೇನ ಹೃದಯಸ್ಥಜಗತ್ತ್ರಯಾನ್ ।
ಚತುರೋ ವ್ಯೋಮವಿಪುಲಾನ್ದಿಕ್ಷು ನಾರಾಯಣಾನಿವ ॥೩೪॥

ಅತಿಗಾಂಭೀರ್ಯನೈರ್ಮಲ್ಯವಿಸ್ತಾರ ವಿಭವೈರ್ನಭಃ ।
ನಿಗೀರ್ಯ ಸಂದರ್ಶಯತೋ ಹೃದಯಾದಿವ ಬಿಂಬಿತಂ ॥೩೫॥

---

೩೨. ಚೂತ, ನೀಪ, ಕದಂಬಗಳಲ್ಲಿ ಕುಳಿತಿರುವ ಹಕ್ಕಿಗಳು ನೀರಿನಲ್ಲಿ ಪ್ರತಿಬಿಂಬಿಸಿರುವುದನ್ನು ಕಂಡು ಅವುಗಳನ್ನು ಹಿಡಿಯಬೇಕೆಂದು ಜಲೇಚರಗಳು ತೆರೆದ ಬಾಯನ್ನು ಮುಚ್ಚಲು, ಅದು ಚುಟುಕೆ ಹೊಡೆದಂತಾಗುವುದು.

೩೩. . ಜಲೇಚರಗಳು ಹಾರುವ ಹಕ್ಕಿಗಳ ಪ್ರತಿಬಿಂಬವನ್ನು ಕಂಡು ಅವುಗಳನ್ನು ಹಿಡಿಯಲು ಅತ್ತ ಇತ್ತ ಓಡಾಡುತ್ತಿದ್ದರೆ, ಯಾವುದಾದರೂ ಕಟ್ಟೆಯೊಡೆದಿದೆಯೋ ಎಂದು ಒಂದು ಕ್ಷಣ ಸಂಶಯವುಂಟಾಗುವುದು.

೩೪. ದಿಕ್ಕುದಿಕ್ಕುಗಳಲ್ಲಿ ಹೃದಯದಲ್ಲಿರುವ ಜಗತ್ತ್ರಯಗಳನ್ನು ಪ್ರತಿಬಿಂಬವಾಗಿ ಧರಿಸಿರುವ, ವ್ಯೋಮದಂತೆ ವಿಸ್ತಾರವಾಗಿರುವ ನಾಲ್ವರು ಅಮೂರ್ತರಾದ ? ನಾರಾಯಣರನ್ನು ಕಂಡರೋ ಎಂಬಂತಿದ್ದುವು ಆ ಸಮುದ್ರಗಳು.

೩೫. ಅತಿ ಗಾಂಭೀರ್ಯ ನೈರ್ಮಲ್ಯ ವಿಸ್ತಾರ ವಿಭವಗಳಿಂದ ಆಕಾಶವು ನುಂಗಿಬಿಟ್ಟು, ತನ್ನ ಹೃದಯದಿಂದ ತೋರಿಸುತ್ತಿದೆಯೋ ಎಂಬಂತೆ, ಸಮುದ್ರದಲ್ಲಿ ಪ್ರತಿಬಿಂಬಿಸಿರುವುದು.

ಜಲಚಾರಿವಿಹಂಗಾನಾಂ ಸಾಕಾಶಂ ಪ್ರತಿಬಿಂಬಿತಂ ।
ಆಶಯೈರ್ದಧತಃ ಸಾರ್ದ್ರೈಃ ಪದ್ಮಾನ್ಸಭೃಂಗಮಿವಾತ್ಮಗಂ ॥೩೬॥

ತರಂಗತರಲಾಸ್ಫಾಲಮಾರುತೈರಾಹತಾಂಬರಾಂ ।
ಕಂದರೋದ್ಗಾರಗಂಭೀರೈಃ ಕಲ್ಪಾಂತಜಲದಾಲಯಾನ್ ॥೩೭॥

ಗುಹಾಗುಲುಗುಲಾವರ್ತನಿರ್ಘೋಷಾಶನಿ ಭೀಷಣಾನ್ ।
ಭೃಶಂ ಭಾವಯತೋ ಗ್ರಸ್ತಾನಗಸ್ತ್ಯೌರ್ವಾನಲಾನಿವ ॥೩೮॥

ಭೂರಿಸೀಕರಪುಷ್ಪಾಣಿ ತರಂಗೌಘತರೂಣಿ ಚ ।
ಪ್ರಾಪ್ತಾನ್ಯಂಬು ವನಾನೀವ ಲಹರೀಮಂಜರೀಣಿ ಖಂ ॥೩೯॥

---

೩೬. ಜಲಚಾರಿ ವಿಹಂಗಮಗಳನ್ನು ಪ್ರೀತಿಯಿಂದ ಹೃದಯದಲ್ಲಿ ಧರಿಸಿಕೊಂಡು, ಭೃಂಗಗಳನ್ನು ತಮ್ಮಲ್ಲಿಟ್ಟುಕೊಂಡಿರುವ ಪದ್ಮಗಳನ್ನು ಹೋಲುತ್ತ, ಆಕಾಶವನ್ನು ಪ್ರತಿಬಿಂಬಿಸುತ್ತಿರುವುವು. ಆ ಸಾಗರಗಳು ?

೩೭. ಚಂಚಲವಾದ ತರಂಗಗಳ ಸ್ಫಾಲನವಿಂದ ಆಡುವ ಮಾರುತಗಳಿಂದ ಆಕಾಶವು ಆಹತವಾಗುತ್ತಿರುವುದು ? ಕಂದರೋದ್ಗಾರ ಗಂಭೀರವಾಗಿ ಪ್ರಲಯಕಾಲದ ಮೇಘಗಳಿಗೆ ಮನೆಯಾಗಿರುವ ಸಮುದ್ರಗಳನ್ನು

(ಗಂಭೀರೈರಿತಿ ಭಾವಪ್ರಧಾನೋ ನಿರ್ದೇಶಃ। ಅಂತರ್ಗತ ಗಿರಿಕಂದರಾಸು ಪವನ ಪ್ರವೇಶ ನಿರ್ಗಮಲಕ್ಷಣೋಯ ಉದ್ಗಾರಸ್ತದನು ಮೇಯು ಕಂದರಾಗಾಂಭೀರ್ಯೈಃ, ಕಲ್ಪಾಂತ ಜಲಾಂತಜಲದಾನಾಮಾಲಯ ಭೂತಾನ್—ತಾ.ಪ್ರ)

೩೮. ಗುಹೆಗಳಲ್ಲಿ ಆಗುತ್ತಿರು ಗುಲುಗುಲ ಎಂಬ ಆವರ್ತ ಶಬ್ದಗಳಿಂದ ಉಂಟಾದ ನಿರ್ಘೋಷವು ಸಿಡಿಲಿನಂತೆ ಭೀಷಣವಾಗಿರಲು ತಮ್ಮ ಶತೃಗಳಾದ ಅಗಸ್ತ್ಯ ಔರ್ವಾನಲರುಗಳನ್ನು ಏನಾದರೂ ಹಿಡಿದು ಗುಹೆಯಲ್ಲಿಟ್ಟಿರುವುವೋ ಎಂಬಂತಿರಲು. (ಆ ಸಮುದ್ರಗಳು ಮೆರೆದುವು.)

೩೯. ಬೇಕಾದಷ್ಟು ಸೀಕರಗಳೆಂಬ ಪುಷ್ಪಗಳನ್ನೂ ತರಂಗಗಣಗಳೆಂಬ ತರುಗಳನ್ನೂ ಲಹರಿಗಳೆಂಬ ಮಂಜರಿಗಳನ್ನೂ ಉಳ್ಳ ಅಂಬುವನಗಳು ಲಭಿಸಿದವು ಎಂದು ಆಕಾಶವು (ಸಂತೋಷಿಸುತ್ತಿರುವಂತೆ ಇತ್ತು.)

ಸರತ್ತರಂಗಜಾಲಾನಿ ಪ್ರೋಡ್ಡೀನಪ್ರಾಣಿಮಂತ್ಯಧಃ ।
ಆಕಾಶ ಖಂಡಖಂಡತ್ವಾತ್ಪತಿತಾನೀವ ವಿಭ್ರಮಾತ್ ॥೪೦॥

ಏಲಾಲವಂಗವಕುಲಾಮಲಕೀತಮಾಲ ।
ಹಿಂತಾಲತಾಲದಲ ತಾಂಡವ ಖಂಡಿತಾಗ್ರೇ ।
ಪ್ರಾಪ್ತೇ ಪತಲ್ಲವಣ ವಾರಿಧಿ ದೀರ್ಘತೀರಂ ।
ಕೇಖಾ ಬಭಾವಲಿನಿಭಾಂಬರಶೈಲಮೂರ್ಧ್ನಿ ॥೪೧॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಅವಿದ್ಯೋಪಾಖ್ಯಾನಾಂತರ್ಗತ
ವಿಪಶ್ಚಿದುಪಾಖ್ಯಾನೇ "ಸಮುದ್ರವರ್ಣನಂ" ನಾಮ
ತ್ರಯೋದಶಾಧಿಕ ಶತತಮಃ ಸರ್ಗಃ

---

೪೦. ತರಂಗಗಳು ಗುಂಪುಗುಂಪಾಗಿ ಮುಂದೆ ಬರುತ್ತಿದ್ದುವು. ಅವುಗಳಲ್ಲಿ ಜಲಚರಗಳು ಹಾರಾಡುತ್ತಿದ್ದುವು. ಅದನ್ನು ಕಂಡರೆ, ಖಂಡಿತವಾದ ಆಕಾಶ ಖಂಡಗಳು ಭ್ರಾಂತಿಗೊಂಡು ಸಮುದ್ರಕ್ಕೆ ಬಿದ್ದುವೋ ಎಂಬಂತಿತ್ತು.

೪೧. ಲವಣವಾರಿಧಿಯು ದೀರ್ಘತೀರದಲ್ಲಿ ಅಂಬರ ಚುಂಬಿಯಾದ ಪರ್ವತಗಳ ಶಿಖರ ಭಾಗದಲ್ಲಿ ಆ ವಿಪಶ್ಚಿತರ ಸೈನ್ಯವು ಬಂದು ನಿಂತಿತು. ಆ ಬೆಟ್ಟಗಳಲ್ಲಿ ಬೆಳೆದಿರುವ ಏಲಾ ಲವಂಗ ಬಕುಲ ಆಮಲಕೀತಿಯಾಲ ಹಿಂತಾಲ ತಾಲ ದಲಗಳ ತಾಂಡವದಿಂದ ಆ ವನಪಂಗ್ತಿಯು ಓಡಾಡುತ್ತಿರುವ ಅದು ದುಂಬಿಯ ಸಾಲಿನಂತಿತ್ತು.

(ಈ ಸರ್ಗದಲ್ಲಿ ಕೊನೆಯ ನಾಲ್ಕೈದು ಶ್ಲೋಕಗಳಲ್ಲಿ ಗ್ರಂಥಪಾತವಾಗಿರಬಹುದೆಂದು ತೋರುತ್ತದೆ)

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಸಮುದ್ರವರ್ಣನ" ಎಂಬ
ನೂರ ಹದಿಮೂರನೆಯ ಸರ್ಗವು



## ಚತುರ್ದಶಾಧಿಕ ಶತತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ —

ಅಥ ತೇಷಾಂ ತದಾ ತತ್ರ ತತಸ್ತಾಂಸ್ತಾನದರ್ಶಯನ್ ।
ಪಾರ್ಶ್ವಗಾ ವನವೃಕ್ಷಾಬ್ಧಿ ಶೈಲಮೇಘವನೇಚರಾನ್ ॥೧॥

ದೇವಪಶ್ಯಾಸ್ಯ ಶೈಲಸ್ಯ ಯೇಯಮಭ್ರಂಕಷಾಗ್ರಭೂಃ ।
ಸಮುಉನ್ಮಧ್ಯದೇಶಾದೇರಶ್ಮದೇಶಮುಪೇಯುಷಃ ॥೨॥

ಇಮಾ ವಕುಲಪುನ್ನಾಗ ನಾಲಿಕೇರ ಕುಲಾಕುಲಾಃ ।
ವಿಪಿನಾವಲಯೋ ವಾಂತವಿವಿಧಾಮೋದ ಮಾರುತಾಃ ॥೩॥

---

## ನೂರ ಹದಿನಾಲ್ಕನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು

೧ ಆಗ ಅಲ್ಲಿ ಆ ವಿಪಶ್ಚಿತರಿಗೆ, ಪಾರ್ಶ್ವದಲ್ಲಿದ್ದವರು ವನ, ವೃಕ್ಷ, ಅಬ್ಧಿ, ಶೈಲ, ಮೇಘ, ವನೇಚರಗಳನ್ನು ತೋರಿಸಿದರು

೨ ದೇವ, ನೋಡು, ಈ ಶೈಲದ ಅಗ್ರಭೂಮಿಯು ಆಕಾಶದ ವರೆಗೂ ಚಾಚಿರುವುದು ಈ ಶೈಲದಲ್ಲಿ ಮಧ್ಯದೇಶದಿಂದ ಹಿಡಿದ ಸಮರುತ್ತಾದ ಅಶ್ಮದೇಶದವರೆಗೂ ಎಲ್ಲಾ ಭಾಗಗಳೂ ಇರುವುವು

೩ ಈ ವಿಪಿನಾವಲಿಗಳಲ್ಲಿ ಬಕುಲ, ಪುನ್ನಾಗ, ನಾಲಿಕೇರಗಳ ತೋಪುಗಳುಂಟು ಮಾರುತಗಳು ಇಲ್ಲಿ ನಾನಾ ವಿಧವಾದ ಆಮೋದವನ್ನು ಹೊತ್ತು ತರುವುವು.

ಲುನಾತ್ಯುಪತ್ಯಕಾಂ ವಾರ್ಧಿಃ ಶೈಲಶಾಲಿಶಿಲಾ ವಲೀಃ ।
ವನಾಲೀರ್ಲಹರೀದಾತ್ರೈರಾಪಾದ ಫಲಪಲ್ಲವಾಃ ॥೪॥

ಅಧಿತ್ಯಕಾಸು ಮೇಘಾಲೀರ್ನೃತ್ಯತಾಂ ಸ್ವಾಂಬುಭೂಭೃತಾಂ ।
ಧುನೋತಿ ಜಲಧಿ ರ್ಬಾಲೋ ಗೃಹಧೂಮಾವಲೀಮಿವ ॥೫॥

ರಾಕಾಬ್ಧಿ ಪೂರ ಸಂಪ್ರೇರಿತ ಶಂಖಶಾಖಾಸ್ತಟದ್ರುಮಾಃ ।
ಚಂದ್ರಬಿಂಬಫಲಾಃ ಕಲ್ಪವೃಕ್ಷಾ ಇವ ವಿಭಾಂತ್ಯ ಮೀ ॥೬॥

ರಕ್ತಪುಷ್ಪ ಭರಾಪೂರ್ಣರಕ್ತಪಲ್ಲವ ಪಾಣಯಃ ।
ಭವಂತಂ ಪೂಜಯಂತೀವ ಲತಾದಾರಾನ್ವಿತಾ ದ್ರುಮಾಃ ॥೭॥

---

೪. ಸಮುದ್ರವು ಈ ಶೈಲದ ಪಾದಗಳಲ್ಲಿರುವ ಉಪತ್ಯಕಾ ಭೂಮಿಯನ್ನು ಕತ್ತರಿಸುವುದು. ಬಗೆದು ಬಂಡೆಗಳನ್ನು ಉರುಳಿಸುವುದು. ಪಾದಗಳವರೆಗೂ ಫಲಪಲ್ಲವಗಳಿಂದ ಶೋಭಿಸುವ ಮರಗಳನ್ನು ಸಮುದ್ರವು ಜಲಲಹರಿಗಳು ಎಂಬ ಕುಡುಗೋಲುಗಳಿಂದ ಕತ್ತರಿಸುವುದು.

೫. ಹುಡುಗರು ತಮ್ಮ ಮನೆಯಿಂದ ಹೊರಟ ಹೊಗೆಯನ್ನು ಬೀಸಣಿಗೆಯ ಗಾಳಿಗಳಿಂದ ಚದುರಿಸುವಂತೆ, ಜಲಧಿಯು (ಪವನ ಕುಂಪಿತ ತರುಲತಾ ಭುಜಾದ್ಯಭಿನಯೈಃ) ನೃತ್ಯಮಾಡುವ ಆ ಆಯಾಸದಿಂದ ಬೆವರು ಹನಿಗಳಂತೆ ಹಾರುವ ಜಲಕಣಗಳನ್ನು ಧರಿಸಿರುವ ಪರ್ವತಗಳ ಅಧಿತ್ಯಕೆಗಳಲ್ಲಿ ಇರುವ ಮೇಘಾಲಿಗಳನ್ನು ಹಾರಿಸುವುದು.

೬. ಹುಣ್ಣಿಮೆಯ ದಿನ ಸಮುದ್ರವು ಉಬ್ಬಿದಾಗ ಒಳಗಿದ್ದ ಶಂಖಗಳೆಲ್ಲವೂ ಈಚೆಗೆ ಬರುವುವು. ಅವನ್ನು ನೋಡಿದರೆ, ತಟದ್ರುಮಗಳು ಚಂದ್ರಬಿಂಬಗಳೆಂಬ ಅಮೃತರಸಪೂರ್ಣವಾದ ಫಲಗಳನ್ನು ಬಿಟ್ಟಿರುವ ಕಲ್ಪವೃಕ್ಷಗಳಾದುವೋ ಎಂಬಂತೆ ಮೆರೆಯುವುವು.

೭. ರಕ್ತಪುಷ್ಪಗಳಿಂದ ತುಂಬಿ, ರಕ್ತಪಲ್ಲವ ಪ್ರಾಣಿಗಳಾಗಿ, ಲತೆಗಳೆಂಬ ಹೆಂಡತಿಯರನ್ನು ಒಡಗೂಡಿಕೊಂಡು ಬಂದು ಈ ಮರಗಳು ನಿನ್ನನ್ನು ಗೌರವಿಸುತ್ತಿರುವುವೋ ಎಂಬಂತಿರುವುದು.

ಪ್ರೋತೋರ್ಮಿಮಕರಗ್ರಾಸೈರ್ದೃಷದ್ದಂತೈರ್ಗುಹಾಮುಖೈಃ ।
ಋಕ್ಷವಾನೃಕ್ಷವಮ್ಭೂಭೃದ್ಧತ್ತೇ ಘುರಘುರಾರವಂ ॥೮॥

ಮಹೇಂದ್ರೋ ಮಂದ್ರಗರ್ಜಾಭಿರಭಿಕ್ಷಿಪತಿ ಗರ್ಜತಃ ।
ಪರ್ಜನ್ಯಾನೂರ್ಜಿತೋ ಜನ್ಯಃ ಪ್ರತಿಜನ್ಯಾನ್ಯಥಾ ಜಡೈಃ ॥೯॥

ಚಂದನಾಽಽಶ್ಲಿಷ್ಟಿತಃ ಶ್ರೀಮಾಞ್ಜೇತುಂ ಜಲಧಿವೇಲ್ಲನಾಃ ।
ಸಮುದ್ಯತ ಇವೋಽಶ್ಟೋಽಸೌ ಮಲ್ಲೋ ಮಲಯಪರ್ವತಃ ॥೧೦॥

ಸರ್ವತಃ ಕಚಿತೋಽಜಸ್ರಂ ರತ್ನವೀಚಿಭಿರಂಭುಧಿಃ ।
ಭೂರತ್ನವಲಯಭ್ರಾಂತ್ಯಾ ಪ್ರೇಕ್ಷ್ಯತೇ ಸೂರ್ಯಮಾರ್ಗಗೈಃ ॥೧೧॥

---

೮. ಕೊಚ್ಚಿ ಬರುತ್ತಿರುವ ತರಂಗಗಳೆಂಬ ಮಕರಗಳನ್ನು ಕಬಳಿಸುತ್ತ, ಶಿಲಾಮಯವಾದ ಗುಹಾಮುಖಗಳಿಂದ ಕರಡಿಯಂತೆ ಘುರಘುರ ಎಂದು ಮೊರೆಯುತ್ತ ಋಕ್ಷವಾ ಎಂಬ ಅರಸನು ಇಲ್ಲಿ ಇರುವನು.

೯. ತಲೆಯಮೇಲೆ ಗರ್ಜಿಸುತ್ತಿರುವ ಮೇಘಗಳನ್ನು ಈ ಮಹೇಂದ್ರ ಪರ್ವತವು ಪ್ರತಿಪಕ್ಷದ ಯೊದ್ಧರನ್ನು ಬಯ್ದಾಡುವ ಜಡರಂತೆ, ತನ್ನ ಮಂದ್ರ ಗರ್ಜನಗಳಿಂದ ಆಭಿಕ್ಷೇಪ ಮಾಡುತ್ತಿರುವುದು

೧೦. ಚಂದನ (ವೃಕ್ಷ) ವೇಷ್ಟಿತನಾಗಿ ಶ್ರೀಮಂತನಾಗಿರುವ ಈ ಮಲಯ ಪರ್ವತವು ಎದುರಲಜಟ್ಟಿಯಾದ ತೋಳ ಬೀಸುಗಳನ್ನು ಗೆಲ್ಲಬೇಕೆಂದು ಹವಣಿಸುತ್ತಿರುವ ಮಲ್ಲನೋ ಎಂಬಂತೆ ಕಾಣುತ್ತಿರುವುದು.

೧೧. ಈ ಅಂಬುಧಿಯು ಒಂದೇ ಸಮನಾಗಿ, ಎತ್ತೆತ್ತಲೂ, ರತ್ನಮಯವಾದ ತರಂಗಗಳನ್ನು ಎಸೆಯುತ್ತಿರುವುದು. ಸೂರ್ಯಮಾರ್ಗವಾದ ಗಗನದಲ್ಲಿ ಸಂಚರಿಸುವವರು ಇದನ್ನು ಕಂಡು ಭೂದೇವಿಯ ರತ್ನಮಯವಾದ ವಲಯವೋ ಎಂದು ಸಂಭ್ರಮಪಡುವರು.

ಸರಂತಿ ರತ್ನಮೂರ್ಧಾನಶ್ಚಲಕಾನಿಲಪಾಯಿನಃ ।
ವಾನಪೂರಾಃ ಪರ್ವತಕಾಃ ಸರ್ಪಾ ಇವ ನತೋನ್ನತೈಃ ॥೧೨॥

ಭ್ರಮಂತೋ ವೀಚಿಶೃಂಗೇಷು ಮಕರೇಭಾಃ ಕರೋತ್ಕಟೈಃ ।
ಹರಂತಿ ಸೀಕರಾಂಭೋದಾ ಮೇಘಾನುದ್ರಾವಿತಾ ಇವ ॥೧೩॥

ಆವರ್ತವಲಿತಾಕಾರಃ ಸೀಕರೋತ್ಕರ ಕೀರ್ಣದಿಕ್ ।
ಪೂರ್ಣತ್ವಾತ್ತ್ವ ಶಿರೋಶಕ್ತ್ಯೋ ಮ್ರಿಯತೇತ್ಯುತ್ಕರಃ ಕರೀ ॥೧೪॥

ವಿವಿಧಪ್ರಾಣಿ ಸಂಪೂರ್ಣಾಃ ಸಜಲಾದ್ರಿನತೋನ್ನತಾಃ ।
ಯಥೈವಾಂಭೋಧಯಃ ಸರ್ವಾಸ್ತಥೈವ ದ್ವೀಪಭೂಮಯಃ ॥೧೫॥

---

೧೨. ವನಗಳು ಬೆಳೆದಿರುವ ಸಣ್ಣಸಣ್ಣ ಪರ್ವತಕಗಳು ಗಾಳಿಗೆ ಸಿಕ್ಕಿ ಅಲೆಯುತ್ತಿರುವ ವನಗಳಿಂದ ಕೂಡಿರಲು, ರತ್ನಗಳನ್ನು ತಲೆಯಲ್ಲಿಟ್ಟುಕೊಂಡು, ಗಾಳಿಯನ್ನು ಕುಡಿದುಕೊಂಡು ತಿರುಗುತ್ತಿರುವ ಮಹಾ ಸರ್ಪಗಳು ಓಡಾಡುತ್ತಿರುವುವೋ ಎಂಬಂತಿರುವುವು.

೧೩. ತರಂಗಾಗ್ರಗಳಲ್ಲಿ ಅಲೆಯುತ್ತಿರುವ ಆನೆಗಳೂ ಮೊಸಳೆಗಳೂ ಒಂದನ್ನೊಂದು ಹಿಡಿಯಬೇಕೆಂದು ಯತ್ನಮಾಡುತ್ತ ಮೇಘಗಳು ಓಡಿಸಿಕೊಂಡು ಬಂದ ಸೀಕಾರಾಂ ಭೋದಗಳೋ ಎನ್ನುವಂತಿರುವುವು.

೧೪. ಅವುಗಳಲ್ಲೊಂದು ಕರಿಯು, ಸುಳಿಗೆಸಿಕ್ಕಿ ಗರ್ರನೆ ತಿರುಗುತ್ತಾ, ದಿಕ್ಕುಗಳಲ್ಲೆಲ್ಲಾ ತುಂತುರುಗಳನ್ನು ಎಸೆಯುತ್ತಾ, ನೀರಿನಲ್ಲಿ ಮುಳುಗುತ್ತಾ, ಈಚೆಗೆ ಬರಲು ಅಶಕ್ತವಾಗಿ ಸೊಂಡಿಲನ್ನು ಮೇಲಕ್ಕೆತ್ತಿಕೊಂಡು ಸಾಯುವುದು.

೧೫. ವಿವಿಧ ಪ್ರಾಣಿ ಸಂಪೂರ್ಣಗಳಾಗಿ ಜಲ, ಅದ್ರಿ, ಇವುಗಳಿಂದ ನತೋನ್ನತಗಳಾಗಿ, ದ್ವೀಪ ಭೂಮಿಗಳೆಲ್ಲವೂ ಅಂಭೋಧಿಗಳಂತೆಯೇ ಇರುವುವು.

ಆವರ್ತಾನಾತ್ಮನೋನನ್ಯಾನಪ್ಯನ್ಯಾನಿವ ಭಾಸ್ವರಾನ್ ।
ಗೃಹ್ಯಮಾಣಾನಸದ್ರೂಪಾನ್ದೃಶ್ಯಪಾನಾನಪಿ ಸ್ಫುಟಾನ್ ॥೧೬॥

ತರಂಗತರಲಾನಂತ ರ್ಜಡಾನಪ್ಯಂಬುಧಿಶ್ಚಲಾನ್ ।
ಧತ್ತೇ ಬ್ರಹ್ಮಜಗಂತೀವ ಸಾಂತಾನಪ್ಯಂತ ವರ್ಜಿತಾನ್ ॥೧೭॥

ಯಾನಂತರಿಂದ್ರವದ್ಭಾನುಮಣೀನ್ಧತ್ತೇಂಬುಧಿರ್ಬಹೂನ್ ।
ಮಂಥಾಪಹೃತಸರ್ವಸ್ವೋ ದೇವೇಭ್ಯಃ ಪರಿರಕ್ಷಿತಾನ್ ॥೧೮॥

ದೃಶ್ಯಮಾನಾನ್ಮಹಾತೇಜಸ್ತಥಾ ಪಾತಾಲತೋಪ್ಯಲಂ ।
ಪ್ರತಿಬಿಂಬವಿಭಂಗ್ಯಾಂತರಸತ್ಯಾನಿವ ಗೋಪಿತಾನ್ ॥೧೯॥

---

೧೬. ಸಮುದ್ರದಲ್ಲಿಯೇ ಹುಟ್ಟಿದ್ದರೂ, ಸಮುದ್ರಕ್ಕಿಂತ ಬೇರೆಯಾದ ಇನ್ನೇನೋ ಎಂದುಕೊಳ್ಳುವಂತೆ ಇದ್ದು, ದೃಶ್ಯವಾದ ಏನು ಸಿಕ್ಕಿದರೂ ನುಂಗುತ್ತಿರುವ ಆವರ್ತಗಳನ್ನೂ ;.

೧೭. ಚಂಚಲವಾಗಿ, ಅಂತರ್ಜಡವಾಗಿ, ಸಾರತಗಳಾದರೂ ಅಂತವರ್ಜಿತಗಳಾಗಿರುವಂತೆ ತೋರುವ ತರಲ ತರಂಗಗಳನ್ನೂ ಜಗತ್ತುಗಳನ್ನು ಧರಿಸಿರುವ ಬ್ರಹ್ಮದಂತೆ ಅಂಭೋಧಿಯು ಧರಿಸಿರುವುದು.

೧೮. ಇಂದ್ರನು ಗುಪ್ತವಾಗಿ ರತ್ನಗಳನ್ನು ಇಟ್ಟುಕೊಂಡಿರುವಂತೆ ಅಂಬುಧಿಯು ತನ್ನ ಸರ್ವಸ್ವವನ್ನೂ ಅಪಹಾರಮಾಡಿದ ದೇವತೆಗಳಿಗೆ ಕೊಡದೆ, ಭಾನು ಮಣಿಗಳನ್ನು ಕಾಪಾಡಿಟ್ಟುಕೊಂಡಿರುವನೋ ಎಂಬಂತೆ ಇರುವುದು.

೧೯. ಮಹಾ ತೇಜಸ್ವಿಗಳಾದುದರಿಂದ ಈ ಮಣಿಗಳು ಪಾತಾಲದವರೆಗೂ ಕಾಣಿಸುವುವು. ಅದರಿಂದ ಯಾರಾದರೂ ಅಪಹಾರ ಮಾಡಾರು ಎಂದು ಅವು ತನ್ನಲ್ಲಿಲ್ಲ ಎಂದು ಹೇಳಿಕೊಳ್ಳಲು ಅನುಕೂಲವಾಗಿರುವಂತೆ, ಪ್ರತಿಬಿಂಬಗಳೂ ಎಂದು ತೋರಿಸಿಕೊಂಡು ಕಾಪಾಡಿಕೊಳ್ಳುತ್ತಿರುವಂತೆ ಇರುವುದು.

ತೇಷಾಂ ಮಧ್ಯಾದೇಕಮೇಕಂ ಪ್ರತ್ಯಹಂ ಪಶ್ಚಿಮಾರ್ಣವೇ ।
ನಿಕ್ಷೇಪಾಯ ಕ್ಷಿಪತಿ ಯಂ ತೇನ ಮನ್ಯೇ ದಿನಂ ಭವೇತ್ ॥೩೦॥

ನಾನಾದಿಗ್ದೇಶಪಯಸಾಮಬ್ಧೌ ಸಾಧುಸಮಾಗಮಃ ।
ಯಾತ್ರಾಯಾಮಿವ ಲೋಕಾನಾಂ ಮಿಥಃ ಕಲಕಲಾಸ್ಫಿತಃ ॥೩೧॥

ಜಲೇಚರಾಮರಾ ನೂನಂ ಸಾಗರಾರ್ಣವ ಸಂಗಮೇ ।
ಅನ್ಯೋನ್ಯಮೇಲ್ಲನಾದ್ಯುದ್ಧಂ ನ ಕದಾಚನ ಶಾಮ್ಯತಿ ॥೩೨॥

ತಾಮ್ಯತ್ತಿಮಿತರಂಗಾಗ್ರ ನರ್ತನಾವರ್ತವಿಭ್ರಮಂ ।
ವಲಯನ್ವಾಯುರಾಯಾತಿ ವಾಂತಸೀಕರಮೌಕ್ತಿಕೈಃ ॥೩೩॥

---

೩೦. ಈ ಸಮುದ್ರವು ತನ್ನಲ್ಲಿರುವ ಈ ಮಣಿಗಳನ್ನು ದಿನದಿನವೂ ಒಂದೊಂದನ್ನಾಗಿ ಪಶ್ಚಿಮ ಸಮುದ್ರದಲ್ಲಿ ನಿಕ್ಷೇಪವಾಗಿ ಇರಲಿ ಎಂದು ಎಸೆಯು ವನು. ಅದರಿಂದ ದಿನವಾಗುವುದು ಎಂದುಕೊಳ್ಳುವೆನು.

೩೧. ನಾನಾ ದಿಗ್ದೇಶಗಳಲ್ಲಿರುವ ನೀರುಗಳೆಲ್ಲವೂ ಬಂದು ಅಂಬುಧಿಯಲ್ಲಿ ಸಾಧುಗಳಂತೆ ಸೇರುವುವು. ಯಾತ್ರೆಯಲ್ಲಿ ಜನರು ಬಂದು ಸೇರುವುದಿಲ್ಲವೆ ಹಾಗೇ ಇದೂ ! ಆಗ ಆಗುವ ಧ್ವನಿಯೇ ಈ ಕಲಕಲವು.

೩೨. ಸಾಗರವೂ ಅರ್ಣವವೂ ಸಂಗಮವಾಗುವಾಗ, ಅನ್ಯೋನ್ಯವಾಗಿ ಹೊಡೆದಾಟವಾಗುವುದರಿಂದ ಯುದ್ಧವು ಯಾವಾಗಲೂ ನಿಲ್ಲದೆಯೇ ನಡೆಯುತ್ತಿರು ವುದು. ಎರಡೂ ಕಡೆಯೂ ಅಂತಹ ನಿಲ್ಲದ ಯುದ್ಧದಲ್ಲಿ ಭಾಗಿಗಳಾಗುವ ಜಲೇ ಚರಗಳೇ ಯೋಧಶ್ರೇಷ್ಠರು.

೩೩. (ನೀರಿನಲ್ಲಿ ಬಹಳ ಹೊತ್ತು ಇದ್ದು ಆಯಾಸಪಟ್ಟು) ಮೇಲಕ್ಕೆ ಬಂದು ತರಂಗಾಗ್ರಗಳಲ್ಲಿ ನರ್ತಿಸುತ್ತಾ ಆವರ್ತ ಭ್ರಾಂತಿಯನ್ನು ಹುಟ್ಟಿಸುವ ತಿಮಿಂಗಿಲಗಳು ಸೀಕರಗಳೆಂಬ ಮೌಕ್ತಿಕಗಳನ್ನು ಎಸೆಯುವುವು. ಅವುಗಳನ್ನು ಧರಿಸಿ ವಾಯುವು ಬೀಸುವುದು.

ಸ್ಫುರಿನ್ಮುಕ್ತಾಲತಾಮಧ್ಯಮಧ್ಯಸ್ಥಾಬ್ದಮಣೀಶ್ವರಾಃ ।
ದೀರ್ಘಾಃ ಖಣಖಣಾಯಂತೇ ಚಂಚಲಾಃ ಸರ್ವತೋಂಬುಧೇಃ ॥೨೪॥

ಮಹೇಂದ್ರಾದ್ರೇರ್ಗುಹಾಗೇಹ ಪರಾವೃತ್ತಾರ್ಣವಾಧ್ವನಾಂ ।
ಭಾಂಕಾರಿಣ್ಯೋ ಭುವಃ ಸಿದ್ಧಸಾಧ್ಯಾನಾಂ ಸುಸುಖಾವಹಃ ॥೨೫॥

ಮಂದರಃ ಕಂದರೋದ್ಗೀರ್ಣೈಃ ಪ್ರಸರ್ಪೈರ್ಮಾತರಿಶ್ವನಃ ।
ಕಂಪಾಕುಲವನಾಭೋಗಃ ಪುಷ್ಪಮೇಘಾಂಸ್ತನೋತಿ ಖೇ ॥೨೬॥

ಚೂತ ನೀಪಕದಂಬಾಢ್ಯ ಗಂಧಮಾದನ ಕಂದರಾನ್ ।
ವಿಶಂತಿ ಮೇಘಹರಿಣಾಸ್ತಡಿತ್ತರಲ ಲೋಚನಾಃ ॥೨೭॥

---

೨೪. ನಡುನಡುವೆ ಮೋಡಗಳೆಂಬ ಶ್ರೇಷ್ಠ ರತ್ನಗಳನ್ನುಳ್ಳ ನದಿಗಳೆಂಬ ದೀರ್ಘವಾದ ಮುಕ್ತಾಹಾರಗಳು ಒಂದಕ್ಕೊಂದು ತಗುಲಿ, ಸಮುದ್ರದಲ್ಲಿ ಎಲ್ಲೆಲ್ಲೂ ಖಣಖಣ ಎಂದು ಧ್ವನಿಮಾಡುತ್ತಿರುವುವು.

೨೫. ಮಹೇಂದ್ರ ಪರ್ವತದ ಗುಹೆಗಳಲ್ಲಿರಲು ಮನಸ್ಸಾಗದೆ ಹಿಂತಿರುಗಿದ ಸಮುದ್ರಚಾರಿಗಳಾದ ಸಿದ್ಧಸಾಧ್ಯರಿಗೆ ಸುಸುಖವನ್ನು ಉಂಟುಮಾಡುವ ವಾಯುಗಳು ಭೂಮಿಯ ಕಡೆಯಿಂದ 'ಭಾಂ' ಶಬ್ದಮಾಡುತ್ತ ಬೀಸುತ್ತಿರುವುವು.

(ಇಲ್ಲಿ ಮಹೇಂದ್ರಾದೇಃ ಎಂಬುದನ್ನು ಮಹೇಂದ್ರಾದ್ರಿ ಮಾಡಿ)

೨೬. ತನ್ನ ಕಂದರಗಳಿಂದ ಹೊರಟ ವಾಯು ಪ್ರಸರಗಳು ತನ್ನ ವಿಸ್ತಾರವಾದ ವನಗಳನ್ನು ಅಲ್ಲಾಡಿಸಿಕೊಂಡು ಅಲ್ಲಿರುವ ಹೂಗಳನ್ನು ಮೇಲಕ್ಕೆತ್ತಿಕೊಂಡು ಹೋಗಲು, ಮಂದರ ಪರ್ವತವು ಪುಷ್ಪ ಮೇಘಗಳನ್ನು ವಿರಚಿಸುತ್ತಿರುವುದೋ ಎಂಬಂತಿರುವುದು.

೨೭. ಚೂತ, ನೀಪ, ಕದಂಬಗಳಿಂದ ಕೂಡಿದ ಗಂಧಮಾದನ ಪರ್ವತದ ಕಂದರಗಳನ್ನು ವಿದ್ಯುತ್ತೆಂಬ ತರಲಲೋಚನಗಳನ್ನುಳ್ಳ ಮೇಘಗಳೆಂಬ ಜಿಂಕೆಗಳು ಪ್ರವೇಶಿಸುವುವು.

ಹಿಮವತ್ಕಂದರೋದ್ಗೀರ್ಣಾ ವಲ್ಲೀವಲಯತಾಂಡವಂ ।
ತನ್ವಾನಾ ವಾಯವೋ ಯಾಂತಿ ವಿಭಿನ್ನಾಬ್ದಾಬ್ಧಿವೀಚಯಃ ॥೨೮॥

ತಾತ ಚೂತಕದಂಬಾಗ್ರ ಪರಾಮರ್ಶಸುಗಂಧಯಃ ।
ವಲಯಂತ್ಯಬ್ಧಿ ಕಲ್ಲೋಲಾನ್ಗಂಧಮಾದನವಾಯವಃ ॥೨೯॥

ಜಲದಾನ್ವಲಯನ್ವಾಯುಃ ಅಲಕಾಲಕತಾಂ ಗತಾನ್ ।
ಇತ ಆಯಾತಿ ಪುಷ್ಪಾಭ್ರಂ ರಚಯನ್ವನವೀಥಿಷು ॥೩೦॥

ಕುಂದಮಂದಾರಸಂದೋಹ ಮಧುರಾಮೋದಮಂಥರಾನ್ ।
ತುಷಾರಸೀಕರೋನ್ಮಿಶ್ರಾನಿವಾತ್ರ ಕಲಯಾನಿಲಾನ್ ॥೩೧॥

ನಾಲಿಕೇರ ಲತಾಲಾಸ್ಯಲಬ್ಧತಿಕ್ತ ಸುಗಂಧಯಃ ।
ಪತಂತಿ ಪವನಾಃ ಪಶ್ಯ ಪಾರಸೀಕಪುರೀಃ ಪುರಾ ॥೩೨॥

---

೨೮. ಹಿಮವತ್ಕಂದರದಿಂದ ಹೊರಟು, ವಲ್ಲೀವಲಯಗಳನ್ನು ಕುಣಿಸುತ್ತಾ ವಾಯುಗಳು ಅಬ್ದಗಳನ್ನೂ ಅಬ್ಧಿವೀಚಿಗಳನ್ನು ಚೂರುಚೂರು ಮಾಡುತ್ತಾ ಬೀಸುವುವು.

೨೯. ಚೂತ ಕದಂಬಗಳ ಪರಾಮರ್ಶದಿಂದ ಸುಗಂಧಗಳನ್ನು ಪಡೆದು, ಅಬ್ಧಿಯ ಕಲ್ಲೋಲಗಳನ್ನೂ ಬಳಸಿಕೊಂಡು, ಗಂಧಮಾದನ ವಾಯುಗಳು ಬೀಸುವುವು.

೩೦. ಅಲಕಾಪುರಿಯ ಅಲಕಗಳಾದ ಮೇಘಗಳನ್ನು ವನವೀಥಿಗಳಲ್ಲಿ ಪುಷ್ಪಮೇಘಗಳನ್ನು ಮಾಡುತ್ತಾ ವಾಯುವು ಇತ್ತ ಬೀಸುವುದು.

೩೧. ಕುಂದ ಮಂದಾರ ಸಂದೋಹಗಳ ಮಧುರಾಮೋದಗಳಿಂದ ಮನೋಹರವಾದ, ತುಷಾರ ಸೀಕರಗಳಿಂದ ಸೇರಿರುವ ವಾಯುಗಳನ್ನು ಸೇವಿಸು.

೩೨. ನಾಲಿಕೇರ ತರುಗಳನ್ನೂ ಮಲ್ಲಿಕಾದಿ ಲತೆಗಳನ್ನೂ ನರ್ತಿಸುವಂತೆ ಮಾಡಿ ಅವುಗಳ ತಿಕ್ತ ಸುಗಂಧಗಳನ್ನು ಪಡೆದುಕೊಂಡು ಮುಂದಿರುವ ಪಾರಸೀಕ ಪುರಿಗಳನ್ನು ಈ ಪವನಗಳು ಪ್ರವೇಶಿಸುವುವು.

ಧುನ್ವಾನಾಃ ಪುಷ್ಪಿತೇಶಾನವನ ಕರ್ಪೂರವಾರಿದಾನ್ ।
ಚಾಲಯಂತೋನಿಲಾ ವಾಂತಿ ಕೈಲಾಸಕಮಲಾಕರಾನ್ ॥೩೩॥

ಕರೀಂದ್ರಕುಂಭ ನಿಷ್ಕ್ರಾಂತ ಮದಮಂಥರಮೂರ್ತಯಃ ।
ಇಮೇ ಶುಕಶುಕಾಯಂತೇ ವಿಂಧ್ಯಕಂದರ ವಾಯವಃ ॥೩೪॥

ಶಬರೀಣಾಂ ಶರೀರೇಷು ಶೀರ್ಣಪರ್ಣೋತ್ಕರೇ ಗಿರೌ ।
ನಾರಾಚೈಃ ಪರ್ಣಶಬರೈರ್ವನಾಲೀ ನಗರಾಯತೇ ॥೩೫॥

ಅಬ್ಧ್ಯದ್ರಿಸರಿದಂಭೋದವನಲೇಖಾಂಗಿಕಾದಿಶಃ ।
ತ್ವತ್ಪ್ರತಾಪಬಲೈರೇತಾ ಹಸಂತೀವಾರ್ಕರಶ್ಮಿಭಿಃ ॥೩೬॥

---

೩೩. ಈಶಾನನ ವನವು ಪುಷ್ಪಿತವಾಗಿರುವುದು. ಅಲ್ಲಿ ಕರ್ಪೂರ ಗಂಧವುಳ್ಳ ಮೋಡಗಳಿರುವುವು. ಮೋಡಗಳನ್ನೂ ಕೈಲಾಸದಲ್ಲಿರುವ ಕಮಲ ಸರೋವರಗಳನ್ನೂ ಆಡಿಸುತ್ತಾ ಬೀಸುವುವು.

೩೪. ಕರೀಂದ್ರ ಕುಂಭದಲ್ಲಿ ಜಿನುಗುತ್ತಿರುವ ಮದೋದಕದ ಗಂಧದಿಂದ ಸುಂದರವಾದ ದೇಹವುಳ್ಳವಾಗಿ, ಈ ವಿಂಧ್ಯಕಂದರದಿಂದ ಬೀಸುವ ವಾಯುಗಳು ಶುಕಶುಕ ಎಂದು ಧ್ವನಿಮಾಡುವುವು.

(ಶುಕ ಶುಕಾಯಂತೇ ಇತಿ ವೀರಣಸ್ತಂಭೋದ್ಭೂತ ಅವ್ಯಕ್ತಧ್ವನ್ಯನುಕರಣಂ ಅಥವಾ ವಿಂಧ್ಯಶುಕೈಃ ಸಹ ನಿರ್ಗಮನಾತ್ತದ್ವರ್ಣೈಃ ಶುಕಾಯಂತೇ ಹರಿತಾಯಂತೇ–ತಾ. ಪ್ರ.)

೩೫. ಒಣಗಿದ ಎಲೆಗಳನ್ನು ಉಡುವ ಶರೀರವುಳ್ಳ ಶಬರಿಯರುಳ್ಳ ಮಲಯಗಿರಿಯಲ್ಲಿ, ಪರ್ಣವಸ್ತ್ರಗಳಾದ ಶಬರರು ಬಾಣಗಳನ್ನು ಪ್ರಯೋಗಿಸಿ ಮೃಗಪಕ್ಷಿಗಳು ಇಲ್ಲದಂತೆ ಮಾಡಿ ವನಗಳೆಲ್ಲಾ ನಗರಳಾಗುವುದಕ್ಕೆ ಯೋಗ್ಯವನ್ನು ಮಾಡಿರುವರು.

೩೬. ಅಬ್ಧಿ, ಅದ್ರಿ, ಸರಿತ್, ಅಂಭೋದ, ವನಲೇಖೆಗಳೆಂಬ ಅಂಗಗಳನ್ನುಳ್ಳ ಈ ದಿಶೆಗಳು, ನಿನ್ನ ಪ್ರತಾಪ ಬಲಗಳೆಂಬ ಸೂರ್ಯಕಿರಣಗಳಿಂದ ನಗುತ್ತಿರುವವೋ ಎನ್ನುವಂತಿರುವುದು.

ಆಶ್ರೋಪಶೈಲವನವೀಥಿಷು ಪುಷ್ಪಶಯ್ಯಾ ।
ವಿದ್ಯಾಧರೀವಿರಚಿತಾಃ ಪರಿವರ್ಣಯಂತಿ॥
ಪಾರ್ಶ್ವದ್ವಯಸ್ಥಪರಿವೃತ್ತಪದಾತ್ಸಮುದ್ರಾ ।
ದ್ವ್ಯಾವೃತ್ತಮುಗ್ಧವನಿತಾ ಪುರುಷಾಹಿತಾನಿ ॥೩೬॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಅವಿದ್ಯೋಪಾಖ್ಯಾನಾಂತರ್ಗತ ವಿಪಶ್ಚಿದುಪಾಖ್ಯಾನೇ "ದಿಗ್ದರ್ಶನಂ" ನಾಮ ಚತುರ್ದಶಾಧಿಕ ಶತತಮಃ ಸರ್ಗಃ

---

೩೬. ಇಲ್ಲಿ ಉಪಶೈಲಿಗಳಲ್ಲಿಯೂ ವನವೀಧಿಗಳಲ್ಲಿಯೂ ವಿದ್ಯಾಧರಿಯರು ರಚಿಸಿರುವ ಪುಷ್ಪಶಯ್ಯೆಗಳು ಪಾರ್ಶ್ವದ್ವಯಗಳಲ್ಲಿ ಚೆನ್ನಾಗಿ ಊರಿರುವ, ಸ+ಮುದ್ರೆಗಳಾದ ಪದಗಳಿಂದ, ವ್ಯಾವೃತ್ತ ಮುಗ್ಧ ವನಿತೆಯರ ಪುರುಷವದ್ವ್ಯಾಪಾರಗಳಿಂದ ಮೆರೆಯುವುವು

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ " ದಿಗ್ದರ್ಶನ" ಎಂಬ ನೂರ ಹದಿನಾಲ್ಕನೆಯ ಸರ್ಗವು

## ಪಂಚದಶಾಧಿಕ ಶತತಮಃ ಸರ್ಗಃ

ಪಾರ್ಶ್ವಗಾ ಊಚುಃ —

ಅತ್ರೋತ್ತಮಾಶಯುಲತಾವಲಯಾಲಯೇಷು ।
ಲೀಲಾವಿಲೋಲಲಲನಾಃ ಕಲಯಂತಿ ಗೀತಂ ।
ಉದ್ದಾಮಭಾವರಸನಿಸ್ಸೃತವಾಸರೇಹಾ ।
ವಿಶ್ರಮ್ಯ ಕಿಂನರಗಣಾಃ ಕಲಕಾಕಲೀಕಂ ॥೧॥

ಏತೇ ಹಿಮಾದ್ರಿಮಲಯಾಚಲವಿಂಧ್ಯಸಹ್ಯ ।
ಕ್ರೌಂಚಾ ಮಹೇಂದ್ರಮಧುಮಂದರದರ್ದುರಾದ್ಯಾಃ ।
ದೂರಸ್ಥಿತಾ ದೃಶಿ ಸಿತಾಭ್ರಪಟಾ ವಹಂತಿ ।
ಸಂಶುಷ್ಕಪರ್ಣಲವಲಾಂಛಿತ ಲೋಷ್ಟಲೀಲಾಂ ॥೨॥

ಅಮೀ ದೂರಾಲೋಕ್ಯವಹಿತಮಹಾವರ್ತ್ಮನಿಚಯಾಃ ।
ಪುರಃ ಪ್ರಾಕಾರಾಣಾಂ ಕುಲಶಿಖರಿಣೋ ಬಿಭ್ರತಿ ವಪುಃ ।
ವಿಶಂತೀರಂಭೋಧಿಂ ಕಲಯ ಲುಲಿತಾ ಭಾಂತಿ ಸರಿತಃ ।
ಪಟಸ್ಯಾಂತಃ ಸಕ್ತಾಃ ಪ್ರತನುಸಿತಸೂತ್ರಾ ಇವ ದಶಾಃ ॥೩॥

---

## ನೂರ ಹದಿನೈದನೆಯ ಸರ್ಗವು

ಪಾರ್ಶ್ವದಲ್ಲಿದ್ದವರು ಹೇಳಿದರ :—

೧. ಉತ್ತಮಾಶಯವುಳ್ಳ ಎಲೈ ಅರಸನೆ, ಲತಾವಲಯಗಳಿಂದ ಆದ ಆಲಯಗಳಲ್ಲಿ ಕಿನ್ನರಗಣಗಳು, ಲೀಲಾ ವಿಲೋಲ ಲಲನಾ ಸಹಾಯರಾಗಿ, ಉದ್ದಾಮ ಭಾವರಸ (ಶೃಂಗಾರ) ವ್ಯಾಪಾರಗಳಲ್ಲಿ ಕಾಲವನ್ನು ಮರೆತು, ವಿಶ್ರಾಂತರಾಗಿ, ಕಲ ಕಾಕಲೀಕವಾದ ಗೀತವನ್ನು ಅನುಭವಿಸುವರು.

೨. ಈ ಹಿಮಾದ್ರಿ, ಮಲಯಾಚಲ, ವಿಂದ್ಯ, ಸಹ್ಯ, ಕ್ರೌಂಚ, ಮಹೇಂದ್ರ ಮಧು, ಮಂದರ, ದರ್ದುರ, ಮೊದಲಾದ ಬೆಟ್ಟಗಳು ದೂರದೂರದಲ್ಲಿ ಇದ್ದುಕೊಂಡು ಬಿಳಿಯ ಮೋಡಗಳನ್ನು ಹೊಡೆದುಕೊಂಡು, ಸಂಶುಷ್ಕ ಪರ್ಣ ಲವಗಳಲ್ಲಿರುವ ಲೋಷ್ಟರದಂತೆ ಕಾಣಿಸುವುವು.

೩. ದೂರದಿಂದ ನೋಡಿದಾಗ, ಈ ಕುಲಶೈಲಗಳು ಹೆದ್ದಾರಿಗಳಂತೆ ಕಾಣುತ್ತ ಪ್ರಾಕಾರಗಳು ಎಂಬಂತೆ ಕಾಣುತ್ತಿರುವುವು. ಆ ಪರ್ವತಗಳಿಂದ ಇಳಿಯುತ್ತಿರುವ ನದಿಗಳು ಕಲಕಲ ಧ್ವನಿಯಿಂದ ಸಮುದ್ರವನ್ನು ಪ್ರವೇಶಮಾಡುತ್ತಾ ಪಟದ ನಡುವೆ ಎದ್ದಿರುವ ಸೂಕ್ಷ್ಮವಾದ ಬಿಳಿಯ ಎಳೆಗಳಂತೆ ಕಾಣುವುವು.

ದಶಾಶಾಃ ಶೈಲನಾಮುಪರಿ ಪರಿತಃ ಪ್ರಾವೃತಘನಾ ।
ಘನಶ್ಯಾಮಾಕಾರಾಃ ಖಗಕಲಕಲಾಲಾಪಲಪಿತಾಃ ।
ಲತಾಮುಕ್ತೈಃ ಪುಷ್ಪೈರ್ಲಲಿತವನಲೇಖಾಭುಜಲತಾ ।
ಹಸಂತ್ಯಸ್ತೇ ರಾಜನ್ಭವನವನಿತಾ ಭಾಂತಿ ಪುರತಃ ॥೪॥

ತಾಲೀತಮಾಲವಕುಲಾಕುಲತುಂಗಶೃಂಗ ।
ಮೇಕೀಕೃತಾಕೃತಿ ವನಂ ತರಲಂ ವಿಭಾತಿ ।
ಅಭ್ಯಾಹತಂ ಜಲನಿಧೇಸ್ತರಲೈಸ್ತರಂಗೈ ।
ಸ್ತೀರಾಂತಲಗ್ನಘೆತಶೈವಲ ಜಾಲಕಲ್ಪಂ ॥೫॥

ಇತಃ ಸ್ವಪಿತಿ ಕೇಶವಃ ಕುಲಮಿತಸ್ತದೀಯದ್ವಿಷಾ ।
ಮಿತೋಽಪಿ ಶರಣಾರ್ಥಿನಃ ಶಿಖರಿಪತ್ರಿಣಃ ಶೇರತೇ ।
ಇತೋಽಪಿ ವಡವಾನಲಃ ಸಹ ಸಮಸ್ತಸಂವರ್ತಕೈ ।
ರಹೋ ವಿತತಮೂರ್ಜಿತಂ ಭರಸಹಂ ಚ ಸಿಂಧೋರ್ವಪುಃ ॥೬॥

---

೪. ಈ ಶೈಲಗಳ ಮೇಲೆ ಎಲ್ಲೆಲ್ಲೂ ಕುಳಿತಿರುವ ಮೇಘಗಳಿಂದ ಶ್ಯಾಮವಾಗಿರುವ ಆಕಾಶವುಳ್ಳವರಾಗಿ, ಪಕ್ಷಿಗಳ ಕಲಕಲಾಪದಿಂದ ಮಾತನಾಡುತ್ತ, ಲತೆಗಳು ಸುರಿಯುತ್ತಿರುವ ಹೂಗಳಿಂದ ಲಲಿತವಾಗಿರುವ ವನಲೇಖೆಗಳೆಂಬ ಭುಜಲತೆಗಳುಳ್ಳವರಾಗಿ, ನಗುತ್ತಿರುವ ಭವನ ವನಿತೆಯರಂತೆ, ಈ ಹತ್ತು ದಿಕ್ಕುಗಳೂ ಮೆರೆಯುತ್ತಿರುವುವು.

೫. ತಾಲಿ, ತಮಾಲ, ಬಕುಲ, ಇವುಗಳು ತುಂಬಿರುವ ಎತ್ತರವಾದ ಶಿಖರಗಳು ಏಕೀಕೃತವಾಗಿರಲು ಎಲ್ಲವೂ ವನವೇ ಆಗಿ ತಲೆತೂಗುತ್ತಿರುವಂತೆ ಕಾಣುತ್ತಿರುವುದು. ಜಲನಿಧಿಯ ತರಲವಾದ ತರಂಗಗಳು ಅಪ್ಪಳಿಸುತ್ತಿರಲು, ತೀರಾಂತದಲ್ಲಿರುವ ಮೋಡಗಳು ಶೈವಲ ಕಲ್ಪಜಲದಂತೆ ತೋರುವುವು.

೬. ಇಲ್ಲಿ ಕೇಶವನು ಮಲಗಿರುವನು: ಇಲ್ಲಿ ಆತನ ವಿದ್ವೇಷಿಗಳ ಕುಲವಿರುವುದು: ಇಲ್ಲಿಯೇ ಶರಣಾರ್ಥಿಗಳಾದ ಪರ್ವತಗಳೆಂಬ ಪಕ್ಷಿಗಳು ಇರುವುವು: ಸಂವರ್ತಕಗಳೆಂಬ ಪ್ರಲಯ ವಾಯುಗಳಿಂದ ಕೂಡಿರುವ ವಡವಾನಲನೂ ಇಲ್ಲಿಯೇ ಇರುವನು; ಅಹಹಾ, ಈ ಸಮುದ್ರದ ವಿತತವೂ ಊರ್ಜಿತವೂ ಭಾರಸಹವೂ ಆದ ವಪುವು ಎಂಥದು!

ಏತೇ ಜಂಬುನದೀತಟಾ ರವಿಕರೈರಾಭಾಂತಿ ಹೇಮಾಖಿಲ ।
ಗ್ರಾಮಾರಣ್ಯಪುರಸ್ಥಲೀ ಗಿರಿತರುಸ್ಥಾಣ್ವಗ್ರಹಾರೋಚ್ಚ್ರಯಾಃ ।
ಜ್ವಾಲಾಲೀವಲಿತಾಂಬರಾಂತರಲಿಹೋಮುಂಚಂತಿ ಭಾಸೋಭಿತಃ ।
ಸರ್ವಾ ಭೂಮಿಪ ಭೂರಿಹೈವಮಮರಾಸೇವ್ಯಾಸ್ತಿ ನೋ ಮಾನುಷೈಃ ॥೭॥

ಏತೇಕದಂಬವನ ಕಂಬಲಮಂಬುದಾಭ ।
ಮಾಭಾಂತಿಭಾಸ್ಕರಪಥಾನುಗತಾವಹಂತಃ।
ಅಸ್ಯಾಚಲಸ್ಯ ವಸುಧೇವ ತಟಂ ತವಾಸ್ತು ।
ಮಾ ಸೂರ್ಯರೋಧಕ ನಭಸ್ಥಘನೌಘಶಂಕಾ ॥೮॥

ಏಷೋಸೌ ಮಲಯೋ ಲಯೋಗ್ರಲವಲೀವಲ್ಲೀಲಸಚ್ಚಂದನ ।
ಸ್ಫೀತಾಮೋದಮುದಾದ್ರಸೇನ ತರವೋ ವಕ್ತ್ರೇ ಕ್ರಿಯಂತೇ ತ್ರಿಭಿಃ ।
ಸಜ್ವಾಲೋದ್ದಹನಾಕ್ಷಸಂಸ್ಥಿತ ಕವೋಲೋಷ್ಮೋದಯೋತ್ತಾಂಡವೇ ।
ಅಂಗುಷ್ಠಾಂಗುಲಿಭಿರ್ಯಥೋಷ್ಣಕ ಕಣಾಸ್ತಪ್ತಾ ಯಥಾ ಯೋಷಿತಾಂ ॥೯॥

---

೭. ಎಲೈ ಭೂಮಿಪತಿಯೆ, ಗ್ರಾಮ ಅರಣ್ಯ ಪುರಿ ಸ್ಥಲೀ ಗಿರಿ ತರು ಸ್ಥಾಣು ಅಗ್ರಹಾರ, ಉಚ್ಚ್ರಯಗಳೆಲ್ಲವೂ ಚಿನ್ನವಾಗಿರುವ ಈ ಜಂಬೂನದೀ ತಟಭೂಮಿಯು ಸೂರ್ಯಕಿರಣಗಳಿಂದ ಹೊಳೆಯುತ್ತಿರುವುದು. ಆಕಾಶವನ್ನು ನೆಕ್ಕುತ್ತಿರುವ ಜ್ವಾಲಾ ಮಾಲೆಗಳಿಂದ ವ್ಯಾಪ್ತವಾಗಿ, ಸುತ್ತಲೂ ಕಾಂತಿಯನ್ನು ಉಗುಳುತ್ತಿರುವುದು. ಈ ಭೂಮಿಯು ದೇವಯೋಗ್ಯವೇ ಹೊರತು ಮಾನುಷರಿಗಲ್ಲ.

೮. ಅಂಬುದಗಳಂತಿರುವ ಕದಂಬ ವನವೆಂಬ ಕಂಬಲವನ್ನು ಹೊದೆದು, ಭಾಸ್ಕರ ಪಥಾನುಗತವಾದ ಈ ಪರ್ವತದ ಅಧಿತ್ಯಕೆಗಳು ಮೆರೆಯುತ್ತಿರುವುವು. ಸೂರ್ಯನನ್ನು ತಡೆಯುವ ಆಕಾಶದ ಮೇಘಗಳು ಇವು ಎಂದುಕೊಳ್ಳಬೇಡ. ಇದೂ ಭೂಮಿಯೇ! ಇದು ತಟವು.

೯. ಇದು ಮಲಯವು. ಇಲ್ಲಿ ಶ್ರೇಷ್ಠವಾದ ಲವಲೀವಲ್ಲಿಗಳು ಆಶ್ರಯಿಸಿ ರುವ ಚಂದನ ವೃಕ್ಷಗಳ ಬಲವಾದ ಆಮೋದದಿಂದ ಇತರ ತರುಗಳೂ ಚಂದನದಂ ತೆಯೇ ಆಗಿರುವುವು. ಆ ವೃಕ್ಷಗಳ ರಸಗಳನ್ನೇ ದೇವಾಸುರ ಮನುಷ್ಯರೆಲ್ಲರೂ ಮುಖ

ಗಳಲ್ಲಿ ದುಂಬಿಗಳಂತಿರುವ ತಿಲಕವನ್ನಾಗಿ ಧರಿಸುವರು. ಸಜ್ವಾಲೆಯಿಂದ ಕೂಡಿದ ಅಗ್ನಿಯನ್ನು ನೇತ್ರದಲ್ಲಿ ಧರಿಸುವ ರುದ್ರನ ಕಪೋಲಗಳೂ ಬೆಚ್ಚಗಾಗುವಷ್ಟಿಗೆ ಮಾಡುವ ಆ ಉತ್ಕೃಷ್ಟ ತಾಂಡವದಲ್ಲಿ ಅಂಗುಷ್ಠಾಂಗುಲಿಗಳಿಂದ ಹೊರಡುವ ಬೆವರಿನ ಕಣಗಳನ್ನೂ ಈ ಆಮೋದವು ಹೆಂಗುಸರ ಶ್ರಮವನ್ನು ಹರಿಸುವಷ್ಟು ಸುಲಭವಾಗಿ ಹರಿಸುವುದು.

ಏಷೋಬ್ಧಿ ಧೌತಕಲಧೌತತಟಾಧಿರೂಢ ।
ಭೋಗೀಂದ್ರಭೋಗಪರಿವೇಷ್ಟಿತ ಚಂದನೋಗಃ ।
ವಿದ್ಯಾಧರೀವದನಪಂಕಜ ದೀಪ್ತಿಪುಂಜ ।
ಹೇಮೀಕೃತಾಖಿಲ ಶಿಲೋ ಮಲಯಾಭಿಧಾನಃ ॥೧೦॥

ಕೂಜತ್ಕುಂಜಕಠೋರ ಗಹ್ವರ ನದೀಕ್ವತ್ಕಾರವತ್ಕೀಚಕ ।
ಸ್ತಂಭಾಡಂಬರಮೂಕಮೌಕುಲಿಕುಲಃ ಕ್ರೌಂಚಾಚಲೋಯಂಗಿರಿಃ ।
ಏತಸ್ಮಿನ್ಪ್ರಬಲಾಕಿನಾಂ ಪ್ರಚಲತಾಮುದ್ವೇಜಿತಾಃ ಕೂಜಿತೈ ।
ರುದ್ವೇಲ್ಲಂತಿ ಪುರಾಣರೋಹಣತರುಸ್ತಂಭೇಷು ಕುಂಭೀನಸಾಃ ॥೧೧॥

---

೧೦. ಈ ಮಲಯವು, ಸಮುದ್ರದ ಅಲೆಗಳು ತೊಳೆಯುವ ಚಿನ್ನದ ತಟಗಳನ್ನು ಏರಿರುವ ಭೋಗೀಂದ್ರ ಭೋಗ ಪರಿವೇಷ್ಟಿತವಾದ ಚಂದನ ವೃಕ್ಷಗಳನ್ನುಳ್ಳದು. ವಿದ್ಯಾಧರಿಯರ ವದನ ಪಂಕಜಗಳ ಕಾಂತಿಯಿಂದ ತುಂಬಿ ಚಿನ್ನದಂತಾಗಿರುವ ಶಿಲೆಗಳಿಂದ ತುಂಬಿರುವುದು.

೧೧. ಇದು ಕ್ರೌಂಚ ಪರ್ವತವು : ಇಲ್ಲಿ ಕುಂಜಗಳಿಂದ ಕಠೋರವಾದ ಅರಣ್ಯಗಳಲ್ಲಿ ಹರಿಯುವ ನದಿಗಳ ಹಾಡು ಸದ್ದುಮಾಡುತ್ತಿರುವ ಕೀಚಕ (ಬಿದಿರು) ಸ್ತಂಭಗಳ ತಾಳ, ಇವು ಸೇರಿದ ಆ ಗೀತಾಡಂಬರವನ್ನು ಕೇಳಿ ಮುಕುಲ ನಿವಾಸಿಗಳಾದ ಭ್ರಮರಗಳು ಮೂಕವಾಗುವುವು. ಇಲ್ಲಿ ಬಲಾಕದ ಹಕ್ಕಿಗಳು ಜೊತೆಯಲ್ಲಿ ಹೋಗುವ ನೀಲಮೇಘಗಳು ಕಾಣಿಸಲು ಅವುಗಳಿಂದ ಉದ್ವೇಜಿತಗಳಾಗಿ ನವಿಲುಗಳು ಕೂಗುವುವು. ಅದನ್ನು ಕೇಳಿ ಅಲ್ಲಿರುವ ಹಾವುಗಳು ಹೆದರಿ ಹಳೆಯ ಮರಗಳ ಪೊಳ್ಳುಗಳಲ್ಲಿ ಅಡಗಿಕೊಳ್ಳುವುವು.

ಕೋಮಲಕನಕಲತಾಲಯವಿ-
ಲಸಿತಲಲನಾವಿಲೋಲವಲಯಕೃತಂ ।
ಶ್ರವಣರಸಾಯನಪಾನಂ-
ವಿತತಮಿಹಾಕರ್ಣಯಾಸ್ಯ ತಟೇ ॥ ೧೨ ॥

ಕರಿಕರಟಗಲಿತಮದಜಲ-
ವಲಿತಶ್ಚಲವೀಚಿಚಂಚರೀಕಚಯೈಃ ।
ಚರ್ವಿತ ಏಷ ಕದರ್ಥಿತ-
ಇವ ಕಣನಿಕರೋ ವಿರೌತಿ ವಾರಿನಿಧೌ ॥ ೧೩ ॥

ಪಶ್ಯಾಮಲೇಂದುರಾಪ್ಲುತ-
ನವನೀತಶರೀರಸುಂದರೀವಲಿತಃ ।
ಪಿತುರುತ್ಸಂಗೇ ಕುರುತೇ
ಜಲಲೀಲಾಂ ಕ್ಷೀರವಾರಿನಿಧೌ ॥ ೧೪ ॥

---

೧೨. ಈ ಗಿರಿಯ ತಟಪ್ರದೇಶದಲ್ಲಿ ಕೋಮಲವಾದ ಕನಕಲತೆಯ ಆಲಯಗಳಲ್ಲಿ ವಿಲಸಿತವಾದ ವಿಲೋಲ ಲಲನೆಯರ ವಲಯುಗಳಿಂದ ಆದ ಸ್ಫುಟವಾದ ಶಬ್ದಗಳನ್ನು ಕೇಳು. ಅದು ಶ್ರವಣ ರಸಾಯನ ಪಾನವು.

೧೩. ಆನೆಗಳ ಗಂಡಸ್ಥಲಗಳಿಂದ ಗಲಿತವಾದ ಮದಜಲಗಳಿಂದ ಕೂಡಿ, ತರಂಗಗಳ ಏಟನಿಂದ ಚಂಚಲವಾದ ಭ್ರಮರ ಪಂಕ್ತಿಗಳಿಂದ ಚರ್ವಿತವಾಗಿ, ತಮ್ಮ ಜೀವನವು ಕದರ್ಥಿತ (ವ್ಯರ್ಥ)ವಾಯಿತು ಎಂದು ಕಣನಿಕರವು ವಾರಿಧಿಯಲ್ಲಿ ಅಳುತ್ತಿರುವುದು.

೧೪. ನೋಡು, ನಿರ್ಮಲನಾದ ಚಂದ್ರನು, ಅಮೃತನವನೀತ ಶರೀರವುಳ್ಳ ಸುಂದರಿಯಿಂದ ವಲಿತನಾಗಿ, ಕ್ಷೀರವಾರಿನಿಧಿಯಲ್ಲಿ ತಂದೆಯ ತೊಡೆಯ ಮೇಲೆ ಜಲಲೀಲೆಯನ್ನು ಆಡುತ್ತಿರುವನು.

ನೃತ್ಯಂತಿ ಮತ್ತಕಲಕೋಕಿಲಕಾಕಲೀಕಾಃ
ಪಶ್ಯಾಮಲೇ ಮಲಯಸಾನುನಿ ಬಾಲವಲ್ಲ್ಯಃ ।
ಲೋಲಾಲಿಜಾಲನಯನಾರುಣಪತ್ರಪಾಣಿ-
ಪುಷ್ಪಾಮಧೂತ್ಸವವಿಲಾಸವಿಶೇಷವತ್ಯಃ ॥ ೧೫ ॥

ವಂಶಾನಾಂ ಹೃದಿ ಪರ್ವತೇಷು ಜಲಧೌ ತೋಯಾರ್ಥಿನೀನಾಂ ತು ಯೇ
ಶುಕ್ತೀನಾಂ ಹೃದಯೇ ವಿಶಂತಿ ಸಮಯೇ ವರ್ಷಾಂಭಸಾಂ ಬಿಂದವಃ ।
ತೇ ಮುಕ್ತಾಫಲತಾಂ ವ್ರಜಂತಿ ಕರಿಣಾಂ ಕುಂಭೇಷು ವಾನ್ಯದ್ಭವೇತ್
ಶುದ್ಧಾ ಮೌಕ್ತಿಕವತ್ಸ್ಮೃರುತ್ತಮಗುಣಾ ಏತಾಸ್ತ್ರಿಧಾ ಜಾತಯಃ ॥ ೧೬ ॥

ಶೈಲೇಽಬ್ಧೌ ಪುರುಷೇಽವನೌ ಜಲಧರೇ ಭೇಕೇ ಶಿಲಾಯಾಂ ಗಜೇ
ನಾನಾಕಾರಧರಾ ಭವಂತಿ ಮಣಯಃ ಕರ್ಮಾಣಿ ತೇಷಾಂ ವಿಭೋ ।
ಹ್ಲಾದೋಚ್ಚಾಟನಮಾರಣಜ್ವರಭಯಭ್ರಾಂತಿಪ್ರಕಾಶಾಂಧತಾ-
ಖೇದೋತ್ತಾಪನಭೂನಭೋಗತಿದೃಶೋ ನಾಶೋ ವಿಧಾನಂ ತಥಾ ॥ ೧೭ ॥

---

೧೫. ಈ ಮಲಯ ಪರ್ವತದ ಸಾನುಪ್ರದೇಶಗಳಲ್ಲಿ ಲೋಲವಾದ ಭ್ರಮರಗಳೆಂಬ ನಯನಗಳೂ ಅರುಣ ಪತ್ರವೆಂಬ ಪಾಣಿಪುಷ್ಪಗಳೂ ಉಳ್ಳವಾಗಿ ಮಧು ಮಹೋತ್ಸವವೆಂಬ ವಿಲಾಸ ವಿಶೇಷವನ್ನುಳ್ಳ ಈ ಬಾಲವಲ್ಲಿಗಳು, ಮತ್ತಕಲ ಕೋಕಿಲಗಳ ಮನೋಹರವಾದ ಸಂಗೀತಕ್ಕೆ ಸರಿಯಾಗಿ ಕುಣಿಯುತ್ತಿರುವುವು.

೧೬. ಪರ್ವತಗಳಲ್ಲಿ ಸ್ಥೂಲವಂಶ (ಬಿದಿರು)ಗಳ ಹೃದಯದಲ್ಲಿ, ಜಲಧಿಯಲ್ಲಿ ತೋಯಾರ್ಥಿಗಳಾಗಿ ಬಾಯಿಬಿಟ್ಟಿರುವ ಶುಕ್ತಿಗಳಲ್ಲಿ, ನಿರ್ದಿಷ್ಟವಾದ ಸಮಯದಲ್ಲಿ ಸೇರಿದ (ಸ್ವಾತೀ) ಮಳೆಯ ಹನಿಗಳು ಮುತ್ತುಗಳಾಗುವುವು. ಹಾಗೆಯೇ ಕರಿಗಳ ಕುಂಭಸ್ಥಲಗಳಲ್ಲಿಯೂ ಆಗುವುವು. ಮೌಕ್ತಿಕಗಳಲ್ಲಿ ಈ ಮೂರು ಜಾತಿಗಳು ಉತ್ತಮವಾದವು.

೧೭. ಶೈಲದಲ್ಲಿ, ಅಬ್ಧಿಯಲ್ಲಿ, ಪುರುಷನಲ್ಲಿ, ಅವನಿಯಲ್ಲಿ, ಮೇಘದಲ್ಲಿ, ಕಪ್ಪೆಯಲ್ಲಿ, ಶಿಲೆಯಲ್ಲಿ, ಗಜದಲ್ಲಿ ನಾನಾ ವಿಧವಾಗಿ ನಾನಾಕಾರವುಳ್ಳವಾಗಿ ಮಣಿಗಳು ಆಗುವುವು. ಅವುಗಳಿಂದ ಆಗುವ ಕೆಲಸಗಳು ಇವು: ಹ್ಲಾದ (ತಾಪ ಶಾಂತಿ). ಉಚ್ಚಾಟನ, ಮಾರಣ, ಜ್ವರ, ಭಯ, ಭ್ರಾಂತಿ, ಪ್ರಕಾಶ, ಅಂಧತಾ, ಖೇದ, ಉತ್ತಾಪನ, ಭೂಗತಿ (ದೂರಗಮನ), ನಭೋಗತಿ, (ಅತೀತಾನಾಗತ)

ವಾತಾಯನೋದರಗವಾಕ್ಷಕವಾಟಕಕ್ಷಾ-
ದ್ವಾರಾನನೈರಿಹ ಪುರಾಣ್ಯುದಿತೇ ಪಠಂತಿ ।
ಶ್ವಭ್ರಾಭ್ರಕಂದರದರೀವನವೇಣುರಂಧ್ರ-
ವರ್ಗೇಣ ಮಂದರ ಇವಾಮೃತಸಿಂಧುಮಿಂದುಂ ॥ ೧೮ ॥

ಏತಚ್ಛೃಂಗಂ ಹರತಿ ಪವನಃ ಕಿಂಸ್ವಿದಿತ್ಯುನ್ಮುಖೀಭಿ-
ರ್ದೃಷ್ಟೋತ್ಸಾಹಶ್ಚಕಿತಚಕಿತಂ ಮುಗ್ಧಸಿದ್ಧಾಂಗನಾಭಿಃ ।
ಪ್ರಾಲೇಯಾದ್ರೇಃ ಪ್ರತಿತಟವನಂ ಪ್ರೋತ್ಪತತ್ಯಭ್ರಮೂರ್ಧ್ವಂ
ವಜ್ರಸ್ತಂಭೋ ಗಗನಸುತಲೋತ್ತೋಲನಾಯೇವ ಭೂಮೇಃ ॥ ೧೯ ॥

ಗಂಗಾತರಂಗಹಿಮಸೀಕರಶೀತಲಾನಿ
ವಿದ್ಯಾಧರಾಧ್ಯುಷಿತಚಾರುಶಿಲಾತಲಾನಿ ।
ಪುಷ್ಪಾಭ್ರಸಂವಲಿತಪುಷ್ಪಿತಕಾನನಾನಿ
ರಾಜನ್ವಿಲೋಕಯ ಮಹೇಂದ್ರಗಿರೇಸ್ತಟಾನಿ ॥ ೨೦ ॥

---

ದರ್ಶನ (ವ್ಯಾಧಿದುರ್ಭಿಕ್ಷಾದಿ) ನಾಶ, (ಪರ ಪ್ರಯುಕ್ತವಿಷಕೃತ್ಯಾ ಯಂತ್ರಾದಿ ಪ್ರತಿ) ವಿಧಾನ ಎಂಬಿಷ್ಟೂ ಆ ಮಣಿಗಳಿಂದ ಆಗುವುವು.

೧೮. ಶ್ವಭ್ರ, ಅಭ್ರ, ಕಂದರ, ದರೀ, ವನವೇಣು, ಇವುಗಳ ರಂಧ್ರ ವರ್ಗದಿಂದ ಮಂದರವು ಹೇಗೋ ಹಾಗೆಯೇ ಪುರಗಳೂ ತಮ್ಮ ವಾತಾಯನೋದರ, ಗವಾಕ್ಷ, ಕವಾಟ, ಕಕ್ಷಾ ದ್ವಾರಗಳೆಂಬ ವದನಗಳಿಂದ ಅಮೃತ ಸಿಂಧುವಾದ ಇಂದುವನ್ನು ಹೊಗಳುವುವು

೧೯. ಪವನನೇನಾದರೂ ಅದ್ರಿಶೃಂಗವನ್ನು ಹಾರಿಸಿಕೊಂಡು ಹೋಗುತ್ತಿರುವನೋ ಎಂದು ಭಯಭೀತರಾಗಿ ಮುಗ್ಧ ಸಿದ್ಧಾಂಗನೆಯರು ಮುಖವೆತ್ತಿ ಹರ್ಷೋತ್ಸಾಹಗಳಿಂದ ನೋಡುತ್ತಿರಲು, ಆಕಾಶದಲ್ಲಿ ಸುತಲ ಲೋಕವನ್ನು ತೂಕ ಮಾಡಬೇಕೆಂದು ಭೂಮಿಯಿಂದ ತಂದಿರುವ ವಜ್ರಸ್ತಂಭವೋ ಎಂಬಂತೆ, ಹಿಮಾಚಲದಿಂದ ಒಂದು ಮೋಡವು ಮೇಲೆ, ಸಮುದ್ರ ತಟದಲ್ಲಿರುವ ವನಕ್ಕೆ ಬರುತ್ತಿರುವುದು.

೨೦. ಗಂಗಾ ತರಂಗಗಳ ಹಿಮಸೀಕರಗಳಿಂದ ಶೀತಲಗಳಾದ ವಿದ್ಯಾಧರರು

ದೇಶಾಂತರೇಷು ವಿತತಾನಿ ವನಾಂತರಾಣಿ
ಪುಷ್ಪಸ್ಥಲಾನ್ಯುಪವನಾನ್ಯಥ ಪತ್ತನಾನಿ ।
ತೀರ್ಥೇಷು ಪೂತಭುವನಾನಿ ಜಲಾನಿ ದೃಷ್ಟ್ವಾ
ದೌರ್ಭಾಗ್ಯಭೀತಿರಪಯಾತಿ ಜವಾನುವಿದ್ಧಾ ॥ ೨೧ ॥

ಶೃಂಗಾಣಿ ಪೂರಿತದಿಗಂತರಮಂಡಲಾನಿ
ಶ್ವಭ್ರಾಭ್ರಕಂದರನಿಕುಂಜಕುಲಾಕುಲಾನಿ ।
ವ್ಯೋಮೋಪಮಾನ್ಯಪಿ ಚ ವಾರಿಧಿಕುಂಡಲಾನಿ
ದೃಷ್ಟ್ವಾ ಗಲಂತಿ ಕುಕೃತಾನಿ ಬೃಹತ್ತರಾಣಿ ॥ ೨೨ ॥

ರಮ್ಯಾಶ್ಚಂದನವೀಥಯೋ ಹಿ ಮಲಯೇ ವಿಂಧ್ಯೇ ಮದಾಂಧಾ ಗಜಾಃ
ಕೈಲಾಸೇ ನೃಪ ಪಾದಜಾತಿ ಕನಕಂ ಚಂದ್ರಂ ಮಹೇಂದ್ರಾಚಲೇ ।
ದಿವ್ಯಾಶ್ಚೌಷಧಯಸ್ತುಷಾರಶಿಖರೇ ಸರ್ವತ್ರ ರತ್ನಾನಿ ವೈ
ಸಂತ್ಯೇಂಧಾಖುವದೇವ ಜೀರ್ಣಸದನೇ ವ್ಯರ್ಥಂ ಜನೋ ಜೀರ್ಯತೇ ॥ ೨೩ ॥

---

ಆಶ್ರಯಿಸುವ ಚಾರು ಶಿಲಾತಲಗಳನ್ನುಳ್ಳ ಪುಷ್ಪ ಮೇಘಗಳಿಂದ ಕೂಡಿರುವ ಪುಷ್ಪಿತಕಾನನಗಳನ್ನುಳ್ಳ ಈ ಮಹೇಂದ್ರಗಿರಿಯ ತಟಗಳನ್ನು ನೋಡು.

೨೧. ದೇಶಾಂತರಗಳಲ್ಲಿರುವ ವಿಸ್ತಾರವಾದ ವನಾಂತರಗಳನ್ನೂ, ಪುಷ್ಪಸ್ಥಲಗಳನ್ನೂ, ಉಪವನಗಳನ್ನೂ, ಪತ್ತನಗಳನ್ನೂ, ತೀರ್ಥಗಳಿಂದ ಪವಿತ್ರವಾದ ಪ್ರದೇಶಗಳನ್ನೂ ಜಲಗಳನ್ನೂ ನೋಡಿದರೆ, ದೌರ್ಭಾಗ್ಯ ಭೀತಿಯು ಆ ಕೂಡಲೇ ಕಳೆದುಹೋಗುವುದು.

೨೨. ದಿಗಂತರ ಮಂಡಲಗಳನ್ನು ತುಂಬುವಂತೆ ಇರುವ, ಶ್ವಭ್ರ, ಅಭ್ರ, ಕಂದರ, ನಿಕುಂಜಕುಲಗಳಿಂದ ತುಂಬಿರುವ, ಆಕಾಶದಂತೆ ವಿಸ್ತಾರವಾಗಿರುವ ವಾರಿಧಿಕುಂಡಲಗಳನ್ನಾಧರಿಸಿರುವ ಶೃಂಗಗಳನ್ನು ದರ್ಶನ ಮಾಡಿದರೆ, ಬೃಹತ್ತರವಾಗಿರುವ ದುಷ್ಕೃತಗಳೂ ನಾಶವಾಗುವುವು.

೨೩. ಮಲಯದಲ್ಲಿ ರಮ್ಯವಾದ ಚಂದನವೀಥಿಗಳೂ, ವಿಂಧ್ಯದಲ್ಲಿ ಮದಾಂಧವಾದ ಗಜೇಂದ್ರಗಳೂ, ಕೈಲಾಸದಲ್ಲಿ ಪಾದಜಾತಿ (ಶ್ರೇಷ್ಠ) ಕನಕವೂ, ಮಹೇಂದ್ರಾಚಲದಲ್ಲಿ ಚಂದ್ರವೆಂಬ ಗಿರಿಧಾತು ವಿಶೇಷವು, ಹಿಮಾಲಯದಲ್ಲಿ ದಿವ್ಯೌಷಧಿಗಳು, ರತ್ನಗಳು ಎಲ್ಲೆಲ್ಲಿಯೂ ಇರುವುದಾದರೂ, ಜೀರ್ಣ ಗೃಹಗಳಲ್ಲಿ ಕುರುಡು ಹೆಗ್ಗಣದಂತೆ ಜನಗಳು ವ್ಯರ್ಥವಾಗಿ ಜೀರ್ಣವಾಗುವರು.

ಸೋನ್ನತಂ ಜಗದಿವೋರುತಟಾಕಂ
ವಾರಿಣಾ ವಿವಲಿತಂ ತಿಮಿರೇಣ ।
ಪ್ರಸ್ಫುರಂತಿ ಚ ಯುಗಾಂತ ಇವೈತಾ-
ವಿದ್ಯುತಃ ಶಫರಿಕಾ ಇವ ಲೋಲಾಃ ॥ ೨೪ ॥

ಸಾವಶ್ಯಾಯಾಶ್ಯಾನನೀಹಾರಧಾರಾ
ಧಾರೋದ್ಗಾರಾನ್ವಾರಿದಾನ್ಮಾದಯಂತಃ ।
ಶೀತಾನೀತೋದ್ದಾಮರೋಮಾಂಚಚರ್ಚಾಃ
ಪ್ರೋದ್ಯಚ್ಛಬ್ದಂ ವಾಂತ್ಯಹೋ ವರ್ಷವಾತಾಃ ॥ ೨೫ ॥

ಹಾ ವಾತಿ ನೀಲಜಲದಪ್ರಸರಾನುಸಾರೀ
ವಾತಃ ಕಿರನ್ವಿಟಪಿಪಲ್ಲವಪುಷ್ಪಗುಚ್ಛಾನ್ ।
ಧೀರೋತ್ಕರದ್ರುಮವನಾಂತರಚಾರಚಾರು-
ರಾಸಾರಸೀಕರಕದಂಬಕಸಾರಸಾರಃ ॥ ೨೬ ॥

---

೨೪. ಯುಗಾಂತದಲ್ಲಿ ಮೇಘಗಳಿಂದಾದ ತಿಮಿರದಿಂದಲೂ, ಅವು ಕರೆದ ಮಳೆಗಳ ನೀರುಗಳಿಂದಲೂ ಅಂತರಿಕ್ಷದವರೆಗೂ ತುಂಬಿ, ಈ ಜಗತ್ತೇ ಒಂದೇ ತಟಾಕವಾಗುವುದು. ಆಗ ವಿದ್ಯುತ್ತುಗಳು ಸಣ್ಣ ಮೀನುಗಳಂತೆ ಲೋಲವಾಗಿ ಆಡುವುವು.

೨೫. ಆಗ ವರ್ಷವಾತಗಳು ತಾವು ನೀಹಾರ ಸಂಪನ್ನವಾಗಿದ್ದರೂ ಭೂಮಿಯಲ್ಲಿರುವ ನೀಹಾರವನ್ನು ಕ್ಷಯಮಾಡಿ, ಧಾರೆಗಳನ್ನು ಸುರಿಯುತ್ತಿರುವ ಮೇಘಗಳಿಗೆ ಮದವನ್ನುಂಟು ಮಾಡಿ, ಶೀತದಿಂದ ಬಹುವಾಗಿ ರೋಮಾಂಚವನ್ನುಂಟು ಮಾಡುತ್ತ, ಗಟ್ಟಿಯಾಗಿ ಮೊರೆಯುತ್ತ ಬೀಸುವುವು.

೨೬. ನೀಲಮೇಘಗಳ ಪ್ರಸರವನ್ನು ಅನುಸರಿಸಿಕೊಂಡು, ಮರಗಳಿಂದ ಕಿತ್ತು ತಂದಿರುವ ಪಲ್ಲವ ಪುಷ್ಪ ಗುಚ್ಛಗಳನ್ನು ಎರಚುತ್ತಾ, ಪಲ್ಲವಿಸಿರುವ ಮರಗಳುಳ್ಳ ವನಾಂತರ ಸಂಚಾರದಿಂದ ಸುಗಂಧಿತವಾಗಿ ಮನೋಹರವಾಗಿ, ಆಸಾರ ಶೀಕರಗಳನ್ನೂ ಕದಂಬ ಸಾರವನ್ನೂ ಸೇವಿಸಿ ಸಾರ (ಬಲಿಷ್ಠ) ನಾಗಿ, ಧೀರನಾಗಿ, ಈ ವಾಯುವು ಬೀಸುತ್ತಿರುವನು.

ಮಾರುತಾಃ ಸುರತಕ್ರಾಂತಕಾಂತಾನಿಃಶ್ವಸಿತೈರಿಮೇ ।
ವಹಂತಿ ವೃದ್ಧಿಂ ಗಂಧಂ ಚ ಲವಂ ಸ್ವರ್ಗಾದಿವ ಚ್ಯುತಾಃ ॥ ೨೭ ॥

ಕುವಲಯಕುವಲಯವಿಕಚನ-
ಕುಸುಮಲತಾವಿದಲನೋದ್ಯತಾ ಮೃದವಃ ।
ಘನಪಟಪಾಟನಪಟವೋ
ವಿಧುತೋ ಪವನಾ ವಹಂತ್ಯಮೀ ಪವನಾಃ ॥ ೨೮ ॥

ಸಂಧ್ಯಾಭ್ರಲೇಶಾನುಪಯಂತಿ ವಾತಾ
ನಭಸ್ತಲೇ ಕೋಮಲಕಂಪನೇನ ।
ನೃಪಾಂಗಣೇ ಪುಷ್ಪವಿಚಿತ್ರಲೇಖಾ
ನುವಾಸಿತೇ ಭೃತ್ಯವರಾ ಇವೈತೇ ॥ ೨೯ ॥

ಕ್ವಚಿತ್ಕುಸುಮಗಂಧಯಃ ಕಮಲವರ್ಗಗಂಧಾಃ ಕ್ವಚಿ
ತ್ಕ್ವಚಿತ್ಕುಸುಮವರ್ಷಿಣೋ ಲಲಿತಕೇಸರಾಸಾರಿಣಃ ।
ಕ್ವಚಿಚ್ಚ ಹಿಮಪಾಂಡವೋ ಹರಿತಪೀತಲಶ್ಯಾಮಲಾ
ವಹಂತಿ ಶಿಖರಾನಿಲಾಃ ಸುರತಮಂದಘರ್ಮಚ್ಛಿದಃ ॥ ೩೦ ॥

---

೨೭. ಸ್ವರ್ಗಚ್ಯುತರಾದವರು ಪೂರ್ವಪುಣ್ಯಲವವನ್ನು ಪಡೆಯುವಂತೆ, ಈ ಮಾರುತಗಳು ಸುರತಕ್ಲಾಂತ ಕಾಂತಾ ನಿಶ್ವಾಸದಿಂದ ವೃದ್ಧಿಯನ್ನೂ ಗಂಧ (ಗರ್ವ) ವನ್ನೂ ಪಡೆಯುವುವು.

೨೮. ಕುವಲಯ (ಭೂಮಂಡಲ) ದಲ್ಲಿರುವ ಕುವಲಯ (ಕನ್ನೈದಿಲೆ) ಗಳನ್ನೂ ಅರಳುತ್ತಿರುವ ಕುಸುಮಲತೆಗಳನ್ನೂ ವಿದಲನ ಮಾಡುವುದರಲ್ಲಿಯೂ ಉದ್ಯತಗಳಾಗಿ ಘನ (ಮೇಘ) ಪಟಗಳ ಪಾಟನದಲ್ಲಿ ಪಟುಗಳಾದ ಈ ಶೀತವಾತ ಗಳು ಉಪವನಗಳನ್ನು ಆಡಿಸುತ್ತಾ ಬೀಸುವುವು.

೨೯. ವಿಚಿತ್ರವಾದ ಪುಷ್ಪಹಾರಗಳಿಂದ ಅಲಂಕೃತವಾದ ಅರಮನೆಯ ಅಂಗಳ ದಲ್ಲಿ ಭೃತ್ಯವರರು ಪುಷ್ಪಗಳನ್ನು ತುಳಿಯದೆ ತಿರುಗುವಂತೆ, ಈ ವಾತಗಳು ನಭ ಸ್ತಲದಲ್ಲಿ ಸಂಧ್ಯಾಮೇಘಶಕಲಗಳನ್ನು ಕೋಮಲ ಕಂಪನದಿಂದ ಒತ್ತರಿಸಿಕೊಂಡು ಹೋಗುವುವು.

೩೦. ಬೆಟ್ಟದ ಮೇಲಿಂದ ಬೀಸುವ ಗಾಳಿಗಳು, ಕೆಲವೆಡೆ ಕುಸುಮ ಗಂಧ

ಕ್ವಚಿದ್ಧುಂಕಾರಕಾಂಕಾರೈರಂಗಾರನಿಕರಾನ್ಕರೈಃ ।
ಕಿಂಕರೈರ್ವಿಕಿರತ್ಯರ್ಕೋ ಮೂರ್ಖಸಂಸರ್ಗವಾನಿವ ॥ ೩೧ ॥

ನರರಸಾಯನತೃಪ್ತಿವಿಮುಕ್ತಯಾ
ಪ್ರಮದಯಾ ಮದಯಾಪಿತಲಜ್ಜಯಾ ।
ಉಪಗತೇ ವಪುಷಾ ತ ವಿಷಹ್ಯತೇ
ವಿಷವಿಮೂರ್ಛನಯೇವ ಸಮಾಯತಾ ॥ ೩೨ ॥

ವಲಿತತಾಮರಸಾ ಮೃದುಶೀಕರಾಃ
ಶಶಿಕರೋತ್ಕರವೀಚಿವಿಭೇದಿನಃ ।
ಸದಹನಾ ಇವ ತಾಪಮಯಾಃ ಪುರೋ
ವಿರಹಿಣೀಷು ವನಾವನಿವಾಯವಃ ॥ ೩೩ ॥

---

ಗಳನ್ನೂ, ಇನ್ನು ಕೆಲವೆಡೆ ಕಮಲ ವರ್ಗ ಗಂಧಗಳನ್ನೂ, ಅಲ್ಲಲ್ಲಿ ಕುಸುಮ ವರ್ಷ ಗಳನ್ನೂ, ಇನ್ನೊಂದೆಡೆ ಮನೋಹರವಾದ ಕೇಸರ ಗಂಧಗಳನ್ನೂ ಪ್ರಸರಿಸುತ್ತ, ಕೆಲವೆಡೆ ಹಿಮ ಪಾಂಡುಗಳಾಗಿ, ಹರಿತ, ಪೀತಲ, ಶ್ಯಾಮಲಗಳಾಗಿ ಸುರತಮಂದ ಘರ್ಮಹಾರಿಗಳಾಗಿ ಬೀಸುವುವು.

೩೧. ಮೂರ್ಖ ಸಂಸರ್ಗವುಳ್ಳವನಂತೆ ಅರ್ಕನು ಸೇವಕರಾದ ಕಿರಣಗಳಿಂದ, (ಸೂರ್ಯಕಾಂತ ಶಿಲೆಗಳನ್ನು ರೇಗಿಸಿ ಅವುಗಳಿಂದ) ಅಂಗಾರದಂತಿರುವ ಬಿಸಿಯನ್ನು ಪಸರಿಸಿ, ಗುಹಾಗತಗಳಾದ ಪ್ರಾಣಿಗಳು ಹುಂಕಾರ, ಕಾಂಕಾರ (ಆಕ್ರಂದನ ಶಬ್ದ) ಗಳನ್ನು ಬಿಡುವಂತೆ ಮಾಡುವನು.

೩೨. ಪುರುಷ ಸಂಗಮವೆಂಬ ರಸಾಯನವನ್ನು ಸೇವಿಸಿಯೂ ತೃಪ್ತಳಾಗದ ಪ್ರಮದೆಯು ತನ್ನ ಲಜ್ಜೆಯನ್ನು ಮದವು ಕಳೆದು ಬಿಟ್ಟಿರಲು, ಲಭಿಸಿದ ನಾಯ ಕನು ವಿಲಂಬನ ಮಾಡುವುದನ್ನು ವಿಷವಿಮೂರ್ಛನೆಯನ್ನು ಹೇಗೋ ಹಾಗೆ ಸಹಿಸಲಾರದೆ ಒದ್ದಾಡುವಳು.

೩೩. ತಾಮರಸಗಳನ್ನು ಆಲಂಗಿಸಿ ಮೃದು ಶೀಕರಗಳನ್ನು ಪಡೆದು ಚಂದ್ರಿ ಕೆಯ ತರಂಗಗಳನ್ನು ಭೇದಿಸಿಕೊಂಡು ಬಂದಿದ್ದರೂ ವಿರಹಿಣಿಯರಿಗೆ, ವನಗಳ ಕಡೆಯಿಂದ ಬೀಸುವ ಗಾಳಿಗಳು, ಬೆಂಕಿಯಿಂದ ಕೂಡಿರುವಂತೆ ತಾಪಮಯಗಳಾ ಗಿರುವುವು.

ಇಹ ಹಿ ಪೂರ್ವಪಯೋಧಿತಟಾವಟೀ
ವಿಕಟಪತ್ರಪಟಾಃ ಕಟಕೀತಟಾಃ ।
ನವಮದಾಸವಯೌವನಸಂಶ್ರಯಾಃ
ಕಲಯ ಯಾಂತಿ ಕಥಂ ಶಬರಸ್ತ್ರಿಯಃ ॥ ೩೪ ॥

ನವರಸಾಸವಸಾರನಿಶಾಗಮ
ಕ್ಷಯಭಯಾತುರಚಿತ್ತತಯಾಂಗನಾ ।
ತ್ಯಜತಿ ಕಾಂತಮಿಯಂ ನ ಮನಾಗಪಿ
ದ್ರುತಮಿತೋ ವಲಿತೇವ ಪುರೋಽಹಿಭಿಃ ॥ ೩೫ ॥

ಪ್ರಭಾತತೂರ್ಯಮುಖರೈರ್ದಿವಸ್ತೈರಿವ ತರ್ಜಿತಾ ।
ಹೃದ್ಯೇವ ಸ್ಫುಟಿತಾ ನಾರೀ ನಿಲೀನಾ ದಯಿತೋರಸಿ ॥ ೩೬ ॥

ಪ್ರೋತ್ಫುಲ್ಲಕಿಂಶುಕೈಷಾ
ದಕ್ಷಿಣಜಲಧೇಸ್ತಟೇಽತ್ರ ವನರಾಜೀ ।
ಜ್ವಲಿತೇವ ಜಲತರಂಗೈಃ-
ಪೌನಃಪುನ್ಯೇನ ಸಿಚ್ಯತೇಽಂಬುಧಿನಾ ॥ ೩೭ ॥

---

೩೪. ಪೂರ್ವಪಯೋಧಿಯ ತಟದಲ್ಲಿರುವ ನಿಮ್ನ ದೇಶಗಳಲ್ಲಿ (ಹಿತ್ತಾಳೆಯ) ಕಟಕಗಳನ್ನು ಧರಿಸಿರುವ ಶಬರ ಸ್ತ್ರೀಯರು, ಹೊಸದಾಗಿ ಮಾಡಿರುವ ಮದ್ಯವನ್ನು ಸೇವಿಸಿ, ಯೌವನ ಮದವನ್ನು ಹೊಂದಿ, ವಿಕಟವಾದ (ನಿರ್ಗುಂಡಿಯ) ಪತ್ರಗಳನ್ನು ಸುತ್ತಿಕೊಂಡು ಹೇಗೆ ಕುಣಿಯುವರು ನೋಡು.

೩೫. ಇವಳು ಹೊಸದಾದ ಮದ್ಯವನ್ನು ಸೇವಿಸಿ, ನಾಯಕನನ್ನು ಸೇರಿ, ಎಲ್ಲಿ ರಾತ್ರಿಯು ಕಳೆದು ಹೋಗುವುದೋ ಎಂಬ ಭೀತಿಯಿಂದ, ಹಾವು ಚಂದನ ವೃಕ್ಷಕ್ಕೆ ಸುತ್ತಿಕೊಳ್ಳುವಂತೆ ಕಾಂತನನ್ನು ಕಟ್ಟಿಕೊಂಡು ಕಟ್ಟನ್ನು ಕೊಂಚವೂ ಸಡಲಿಸದೆ ಇರುವಳು.

೩೬. ಪ್ರಭಾತದ ತೂರ್ಯ ಧ್ವನಿಗಳಿಂದ ಬಂದ ದಿವಸವು ದಂಡಿಸಲಾಗಿ ಎದೆ, ಯೊಡೆದು ಬಿದ್ದಳೋ ಎಂಬಂತೆ, ಹೆಣ್ಣು ಗಂಡಿನ ಎದೆಯಲ್ಲಿ ಒರಗಿರುವುದು.

೩೭. ಈ ದಕ್ಷಿಣ ಸಮುದ್ರದ ತಟದಲ್ಲಿ ವನರಾಜಿಯು ಹೂಬಿಟ್ಟಿರುವ

ಅಸ್ಯಾ ನಿರ್ಯಾಂತ್ಯನಿಲೈ
ಧೂಮಾ ಇವ ಕೃಷ್ಣಕೇಸರಾಂಬುಧರಾಃ ।
ಅಂಗಾರಾ ಇವ ಕುಸುಮಾ–
ನ್ಯುಪಶಾಂತಾಂಗಾರವಚ್ಚ ಖಗಭೃಂಗಾಃ ॥ ೩೮ ॥

ಈದೃಶ್ಯೇವ ವಿಲೋಕಯ
ವನರಾಜೀ ಸತ್ಯವಹ್ನಿನಾ ಜ್ವಲಿತಾ ।
ಗಿರಿಶಿರಸಿ ತೂತ್ತರಸ್ಯಾಂ–
ದಿಶಿ ದೂರೇ ಧೂಯತೇ ಚ ಖೇ ಪವನೈಃ ॥ ೩೯ ॥

ಕ್ರೌಂಚಾಚಲಸ್ಯ ಭುವಿ ಮಂಧರಮೇಘಚಕ್ರ
ಗಂಭೀರತಾರರವನರ್ತಿತಬರ್ಹಿಣೀಯಂ ।
ಪಶ್ಯೋತ್ಥಿತಂ ತುಮುಲಮಾಕುಲವರ್ಷವಾತ
ವ್ಯಾಧೂತಪುಷ್ಪಫಲಪಲ್ಲವಕಾನನೀಯಂ ॥ ೪೦ ॥

---

ಮುತ್ತುಗಳಿಂದ ಕೂಡಿ, ಜಲತರಂಗಗಳಿಂದ ಜ್ವಲಿತವಾಗಿರುವಂತೆ ಕಾಣುವುದು ಸಮುದ್ರವು ಆ ಜ್ವಾಲೆಯನ್ನು ಉಜ್ಜ್ವಲಗೊಳಿಸಲು, ಮತ್ತೆ ಮತ್ತೆ ನೀರು ಹೊಯ್ಯುವಂತಿರುವುದು.

೩೮. ಈ ವನದಿಂದ ಕೃಷ್ಣ ಕೇಸರ ವರ್ಣಗಳ ಮೋಡಗಳು ಬೆಂಕಿಯೊಡನೆ ಕೂಡಿದ ಹೊಗೆಗಳಂತೆ ಏಳುವುವು. ಕುಸುಮಗಳು ಬೆಂಕಿಯ ಕೆಂಡಗಳಂತೆಯೂ, ಹಕ್ಕಿದುಂಬಿಗಳು ಇಜ್ಜಲಿನಂತೆಯೂ ಇರುವುವು.

೩೯. ಹೀಗೆಯೇ ನಿಜವಾದ ಬೆಂಕಿಯಿಂದ ಉತ್ತರದಲ್ಲಿ ದೂರದ ಬೆಟ್ಟದ ತಲೆಯ ಮೇಲೆ ಕಾಡು ಹತ್ತಿಕೊಂಡು ಉರಿಯುತ್ತಿರುವುದು; ಗಾಳಿಗಳು ಅದನ್ನು ಊದುತ್ತಿರುವುವು. ನೋಡು.

೪೦. ಕ್ರೌಂಚಾಚಲದಲ್ಲಿ ಮೆಲ್ಲಗೆ ಹೋಗುವ ಮೋಡಗಳು ಗಂಭೀರವಾಗಿ ತಾರರವದಲ್ಲಿ ಗುಡುಗಲು ನವಿಲುಗಳು ಕುಣಿಯುತ್ತಿರುವುವು. (ಅದಕ್ಕೆ ತಕ್ಕಂತೆ ತಲೆಹಾಕುತ್ತಿರುವುದೋ ಎಂಬಂತೆ) ಆಕುಲವಾದ ವರ್ಷಸಹಿತ ವಾತಗಳಿಂದ ಕಂಪಿತವಾದ ಪುಷ್ಪಫಲ ಪಲ್ಲವಗಳುಳ್ಳ ಕಾನನ ಸಮೂಹವೂ ಸಶಬ್ದವಾಗಿ ಅಲ್ಲಾಡುತ್ತಿರುವುದು. ನೋಡು.

ಅಸ್ತಾಚಲೇ ವಿಕಟಕಾಂಚನಕೂಟಕೋಟಿ-
ಸಂಘಟ್ಟನಸ್ಫುಟಿತಜರ್ಜರಚಾರುಸಂಧಿಃ ।
ಖರ್ವಂ ರಥಃ ಪತತಿ ಸ ಸ್ಮ ರವೇಃ ಸಚಕ್ರ-
ಚೀತ್ಕಾರತಾರತರಕೂಬರರಾಸ ಏಷಃ ॥ ೪೧ ॥

ಭುವನಭವನಪ್ರಾಕಾರೇಽದ್ರೌ ನಿಶಾಕರಭೇರುಕಂ
ಪರಿವಿಕಸಿತಂ ಭೀತಂ ಭಾಸಾ ಮಲಾಲಿರುಪಾಶ್ರಿತಃ ।
ತದಿಹ ಜಗತಾಂ ವಸ್ತು ಶ್ರೇಷ್ಠಂ ನ ಕಿಂಚನ ವಿದ್ಯತೇ
ವಿಧಿರುಪಹತಃ ಕುರ್ಯಾನ್ನೋ ಯತ್ ಕ್ಷಣೇನ ಕಲಂಕಿತಂ ॥೪೨॥

ತ್ರಿಭುವನಹರಾಟ್ಟಹಾಸೋ
ಭುವನಮಹಾಭವನ ಏಷ ಮಂಕೋಲಃ ।
ಕ್ಷೀರಸಲಿಲಾವಪೂರೋ-
ಗಗನಾಬ್ಧೇಶ್ಚಾಂದ್ರ ಆಲೋಕಃ ॥ ೪೩ ॥

---

೪೧. ಪಶ್ಚಿಮದ ಪರ್ವತದಲ್ಲಿ ಸೂರ್ಯನ ರಥವು ವಿಷಮವಾದ ಕಾಂಚನಮಯ ಕೂಟದ ಕೊನೆಯಲ್ಲಿ ಸಂಘಟ್ಟನದಿಂದ ಸ್ಫುಟಿತವಾಗಿ ಸಂಧಿ ಬಂಧಗಳೆಲ್ಲವೂ ಸಡಿಲ ವಾಗಿ, ಚೀತ್ಕಾರ ತಾರರವದಿಂದ, ಕೂಬರನ ರಾಸಕ್ರೀಡೆಯ ಧ್ವನಿಯಂತೆ ಧ್ವನಿ ಮಾಡುತ್ತ ಹಳ್ಳದ ಕಡೆಗೆ ನುಗ್ಗುವುದು.

೪೨. ಭುವನವೆಂಬ ಭವನದ ಪ್ರಾಕಾರವಾಗಿರುವ ಉದಯಗಿರಿಯ ಶಿಖರ ದಲ್ಲಿ ನಿಶಾಕರ ಬಿಂಬವೆಂಬ ಭೇರುಕ ಪುಷ್ಪವು ತನಗೆ ಎಲ್ಲಿ ಅಮಂಗಲವು ಸೋಕೀತೋ ಎಂದು ಹೆದರಿ, ಕಾಂತಿಯ ಕಿರಣಗಳನ್ನು ಪ್ರಸರಿಸುತ್ತಾ ಅರಳಿತು. ಆದರೂ ಅದನ್ನು ಕಲಂಕವೆಂಬ ದುಂಬಿಯು ಬಂದು ಆಶ್ರಯಿಸಿತು. ಆಹಾ ! ಈ ಜಗತ್ತಿನಲ್ಲಿ, ವಿಧಿಯು ಒಂದೇ ಒಂದು ಕ್ಷಣದಲ್ಲಿ ಕಲಂಕಿತವನ್ನು ಮಾಡದ ಶ್ರೇಷ್ಠವಾದ ವಸ್ತುವಾದರೂ ಯಾವದಿರುವುದು ?

(ಭೇರುಕಂ ಮಾಂಗಲಿಕಂ ತರುವಿಶೇಷಜಂ ಪುಷ್ಪಂ ದೇಶವಿಶೇಷೇ ಪ್ರಸಿದ್ಧಂ ತಚ್ಚ ಮಂಗಲ ಸೂಚಕತ್ವಾದಮಂಗಲಾತ್ ಮಾಲಿನ್ಯಾದ್ಭೀತಂ ॥ —ತಾ. ಪ್ರ.)

೪೩. ಈ ಚಂದ್ರಮಂಡಲವು ಬೆಳಗುತ್ತಿದ್ದರೆ, ಸಂಧ್ಯಾನರ್ತನದಲ್ಲಿ ಮಹಾ ದೇವನು ಮಾಡಿದ ಅಟ್ಟಹಾಸವು ಘನವಾಗಿ ಮೂರು ಭುವನಗಳನ್ನೂ ತುಂಬಿತೋ,

ಸ್ಪೃಷ್ಟಪ್ರದೋಷಸಮಯಮಂದರ ಮಥ್ಯಮಾನ
ಚಂದ್ರಾರ್ಣವೋಲ್ಲಸಿತದುಗ್ಧ ತರಂಗಭಂಗೈಃ ।
ಪಶ್ಯ ಪ್ರಭಾಪಟಲಕೈಃ ಪರಿಪೂರಿತಾಂಗೀಃ
ಪೂರೈರಿವೋಗ್ರಸರಿತಃ ಪ್ರಸರದ್ಭಿರಾಶಾಃ ॥ ೪೪ ॥

ಏತೇ ಪತಂತ್ಯತುಲತಾಲಕರಾಲಲೋಲ-
ವೇತಾಲಬಾಲವಲಿತಾ ನಿಶಿ ಗುಹ್ಯಕೌಘಾಃ ।
ಹೂಣೇಶ್ವರಸ್ಯ ನಗರಾಣಿ ನಿರಸ್ತಶಾಂತಿ
ಸ್ವಸ್ತಿಶ್ರವಾದಿವಿಕಲಾನಿ ಬಲೇನ ಭೋಕ್ತುಂ ॥ ೪೫ ॥

ತಾವದ್ವಿಭಾತಿ ಗಗನೇ ಪರಿಪೂರ್ಣಚಂದ್ರೋ
ಯಾವದ್ವಧೂವದನಮೇತಿ ನ ಸದ್ಮ ಬಾಹ್ಯಂ ।
ಅಭ್ಯುದ್ಗತೇಽಂಗಣನಭಸ್ಯಬಲಾನನೇಂದಾ-
ವಿಂದೋಃ ಸಿತಾಭ್ರಶಕಲಸ್ಯ ಚ ಕೋ ವಿಶೇಷಃ ॥ ೪೬ ॥

---

ಭುವನವೆಂಬ ಮಹಾಭವನವನ್ನು ಸುಣ್ಣದಿಂದ ತುಂಬಿದರೋ, ಗಗನಸಮುದ್ರ ದಿಂದ ಕ್ಷೀರ ಪ್ರವಾಹವು ಹೊರಟು ಲೋಕಗಳನ್ನೆಲ್ಲಾ ತುಂಬಿತೋ, ಎಂಬಂತೆ ಇರುವುದು

೪೪. ಸಂಧ್ಯಾ ಮೇಘಗಳ ಕಾಂತಿಯಿಂದ ರಂಜಿತವಾದ ಮಂದರ ಪರ್ವತ ದಿಂದ ಕ್ಷೀರಸಮುದ್ರವನ್ನು ಕಡೆಯುವಾಗ, ಅಲ್ಲಿನ ಕ್ಷೀರಜಲಗಳ ತರಂಗಗಳು ಭಂಗವನ್ನು ಪಡೆದು ಚೆಲ್ಲಾಡಲು ಆ ಪ್ರಭಾ ಪಟಲಗಳಿಂದ ಪರಿಪೂರಿತವಾದುವೋ, ರುದ್ರನ ಜಟಾಮಂಡಲದಿಂದ ಜಾರಿ ಜಾಹ್ನವಿಯು ತನ್ನ ಪ್ರವಾಹದಿಂದ ತುಂಬಿ ದಳೋ ಎಂಬಂತೆ, ದಿಕ್ಕುದಿಕ್ಕುಗಳೆಲ್ಲವೂ ಚಂದ್ರಕಿರಣಗಳಿಂದ ವ್ಯಾಪ್ತವಾಗಿರುವುವು.

೪೫. ಎಲೈ ಅತುಲ ಪರಾಕ್ರಮಿಯಾದ ಅರಸನೆ, ತಾಲ ವೃಕ್ಷಗಳಂತೆ ಕರಾಲರಾದ ವೇತಾಲ ಬಾಲಕರಿಂದ ಕೂಡಿ ಈ ಗುಹ್ಯಕರ ಗುಂಪುಗಳು ರಾತ್ರಿಯಲ್ಲಿ ಶಾಂತಿ ಕರ್ಮಗಳಿಂದ ರಕ್ಷಿತವಲ್ಲದ, ಸ್ವಸ್ತಿ ಕರ್ಮಗಳನ್ನು ಕಾಣದ, ವಿಕಲಗಳಾದ ಹೂಣೇಶ್ವರನ ನಗರಗಳನ್ನು ಮೇಲ್ಬೆಬಿದ್ದು ಭೋಗಿಸಲು ನುಗ್ಗು ತ್ತಿರುವುವು.

೪೬. ಎಲ್ಲಿನವರೆಗೂ ನವವಧುವು ನಾಚಿಕೆಯಿಂದ ಮನೆಯನ್ನು ಬಿಟ್ಟು

ವೃದ್ಧಾನಿ ಚಂದ್ರಾಂಶುನವಾಂಬರಾಣಿ
ಗಂಗೌಘನಿರ್ಧೂತಶಿಲಾನ್ಯಮೂನಿ ।
ಹಿಮಾತತಾನ್ಯುಗ್ರಲತಾಜಟಾನಿ
ತುಷಾರಶೈಲೇಶ್ವರಮಸ್ತಕಾನಿ ॥ ೪೭ ॥

ಸ ಏಷ ಮಂದಾರವನಾವತಂಸೋ
ದೋಲಾಪ್ಸರೋಗೇಯವಿಸಾರಿವಾತಃ ।
ಕ್ವಚಿನ್ಮಣಿದ್ಯೋತವಿಚಿತ್ರಚಿತ್ರಃ
ಸಂದೃಶ್ಯತೇ ವ್ಯೋಮನಿ ಮಂದರಾದ್ರಿಃ ॥ ೪೮ ॥

ಪ್ರೋನ್ನಿದ್ರನೀರಂಧ್ರಶಿಲೀಂಧ್ರಸಾಂದ್ರ
ಪುಷ್ಪಾರ್ಘ್ಯಪಾತ್ರಧ್ರಮಹಾಮಹೀಧ್ರಾಃ ।
ಸಾಂದ್ರಾಭ್ರನಿರ್ಹ್ರಾದಗಭೀರಕುಕ್ಷಿ
ಸರ್ವಾಂತರಿಕ್ಷಶ್ರಿಯಮುದ್ವಹಂತಿ ॥ ೪೯ ॥

---

ಬರದಿರುವಳೋ ಅಲ್ಲಿನವರೆಗೂ ಪರಿಪೂರ್ಣ ಚಂದ್ರನು ತನ್ನನ್ನು ಬಿಟ್ಟರೆ ಇಲ್ಲವೆಂದು ಮೆರೆಯುವನು. ಅಂಗಳವೆಂಬ ಆಕಾಶದಲ್ಲಿ ಅಬಲಾನನವೆಂಬ ಚಂದ್ರನು ಉದಯಿಸಲು, ಇಂದುವಿಗೂ ಬಿಳಿಯ ಮೋಡದ ತುಂಡಿಗೂ ಏನೂ ವಿಶೇಷವಿಲ್ಲವಾಗುವುದು.

೪೭. ತುಷಾರ (ಹಿಮ) ಶೈಲೇಶ್ವರನ ಮಸ್ತಕಗಳಾದ ಶಿಖರಗಳು, ಗಂಗಾ ಪ್ರವಾಹದಲ್ಲಿ ಸ್ನಾನ ಮಾಡಿ ಶುದ್ಧರಾಗಿ, ಹಿಮದಿಂದ ಕೂಡಿ, ಉಗ್ರವಾದ ಲತೆಗಳೆಂಬ ಜಟೆಗಳಿಂದ ಕೂಡಿ, ಚಂದ್ರ ಕಿರಣಗಳೆಂಬ ನವಾಂಬರಗಳನ್ನು ಧರಿಸಿ ವೃದ್ಧಿಯನ್ನು ಹೊಂದಿದುವು.

೪೮. ಈ ಮಂದರ ಪರ್ವತವು ಮಂದಾರ ವನಗಳೆಂಬ ಅವತಂಸಗಳನ್ನು ಧರಿಸಿ, ಉಯ್ಯಾಲೆಯಲ್ಲಿ ಕುಳಿತು ಹಾಡುತ್ತಿರುವ ಅಪ್ಸರೆಯರ ಗೀತಿಗಳನ್ನು ಹಂಚುತ್ತಿರುವ ವಾಯುಗಳನ್ನುಳ್ಳವನಾಗಿ, ಅಲ್ಲಲ್ಲಿ ಮಣಿಕಾಂತಿಯಿಂದ ವಿಚಿತ್ರ ಚಿತ್ರಗಳನ್ನು ರಚಿಸುತ್ತಾ, ಅತ್ಯುನ್ನತನಾದುದರಿಂದ ಆಕಾಶದಲ್ಲಿ ಕಾಣಿಸುತ್ತಿರುವನು.

೪೯. ಮಹಾಮಹೀಧರಗಳು ಶಿಲೀಂಧ್ರಗಳು ಸಾಂಧ್ರವಾಗಿ ಎಡೆಬಿಡದೆ ನೀರಂಧ್ರವಾಗಿ ಎಚ್ಚರವಾಗಿ ಬಿಟ್ಟಿರುವ ಕಣ್ಣುಗಳಂತಿರಲು, ಪುಷ್ಪಗಳಿಂದ

ಇತಃ ಸ ಕೈಲಾಸಗಿರಿರ್ಗರೀಯಸಾ
　　ಪ್ರಭಾಪ್ರವಾಹೇಣ ಮಿತೇನ ಯಸ್ಯ ಖಂ ।
ಶಂಭೋರಿವಾಭಾತಿ ಸುತಸ್ಯ ಕುಟ್ಟಿಮಂ
　　ಚಂದ್ರೋಽಪಿ ಚ ಕ್ಷೀರಸಮುದ್ರಗೋ ಯಥಾ　　॥ ೫೦ ॥

ಸ್ಥಾಣೂನಾಂ ಛಿನ್ನ ಶಾಖಾನಾಂ ಮೃನ್ಮಯಾನಾಂ ಚ ವಾಸವಃ ।
ಸಂಧತ್ತೇ ಪಶ್ಯ ದೂರಾಣಾಂ ವಾತೈರ್ಮುಕ್ತಶಿಖಾ ಇವ　　॥ ೫೧ ॥

ಏತೇ ಕದಂಬಕುಲಕುಂದಸುಗಂಧಿವಾತಾ
　　ಲಿಂಪಂತಿ ಮಾಂಸಲತಯಾ ಮಕರಂದವೃಷ್ಟೇಃ ।
ಘ್ರಾಣಂ ಘನೈಃ ಪರಿಮಲೈರಲಿಜಾಲನೀಲಾ
　　ವ್ಯಾಲೋಡ್ಯ ಮೇಘಪಟಲೈಃ ಖಮಿವಾಭ್ರಕಾಯಾಃ　　॥ ೫೨ ॥

---

ಕೂಡಿದ ಅರ್ಘ್ಯ ಪಾತ್ರವನ್ನು ಧರಿಸಿರುವುವೊ ಎಂಬಂತೆಯೂ, ಮೇಘ ಗರ್ಜನೆಯಿಂದ ಸಾಂದ್ರವಾಗಿ ಗಭೀರವಾಗಿ ಕುಕ್ಷಿಯು ತುಂಬಿರಲು, ನಕ್ಷತ್ರಸಹಿತವಾದ ಅಂತರಿಕ್ಷದ ಸೌಭಾಗ್ಯವನ್ನು ತಳೆದಿರುವುವೋ ಎಂಬಂತೆಯೂ ಇರುವುವು.

೫೦. ಇತ್ತಕಡೆ ಉತ್ತರದಲ್ಲಿ ಕೈಲಾಸಗಿರಿಯು ಪ್ರಕಾಶಿಸುತ್ತಿರುವುದು. ಅದರ ಪ್ರಭಾಪ್ರವಾಹವು ಆಕಾಶವನ್ನೆಲ್ಲಾ ತುಂಬಿರಲು, ಶಂಭುಪುತ್ರನಾದ ಸ್ಕಂದನ ಕ್ರೀಡಾ ಕ್ಷೇತ್ರವೆಂಬಂತೆ ಇರುವುದು. ಮೇಲಿರುವ ಚಂದ್ರನು ಕ್ಷೀರ ಸಮುದ್ರದಲ್ಲಿ ತೇಲುತ್ತಿರುವಂತೆ ಇರುವನು.

೫೧. ಛಿನ್ನಶಾಖೆಗಳಾಗಿ ಮಣ್ಣಿನ ಗೋಡೆಗಳಂತಾಗಿರುವ ಮರದ ಬುಡಗಳು, (ಮಳೆಗಳಿಂದ ಚಿಗುರಿ) ಜುಟ್ಟು ಬಿಚ್ಚಿದಂತಿರಲು ದೂರ ದೂರವಾಗಿರುವ ಅವುಗಳನ್ನು ಗಾಳಿಗಳಿಂದ ಇಂದ್ರನೇನಾದರೂ ಕಟ್ಟುತ್ತಿರುವನೋ ಎಂಬಂತಿರುವುದು.

೫೨. ಕದಂಬ ಕುಲಗಳ ಕುಂದ ಪುಷ್ಪಗಳ ಸುಗಂಧವನ್ನು ಹೊತ್ತು ತಂದಿರುವ ಆಕಾಶ ಶರೀರಗಳಾದ ಈ ವಾಯುಗಳು, ಮಕರಂದ ವೃಷ್ಟಿಯಿಂದ ದಪ್ಪಗಳಾಗಿ, ಪರಿಮಲ ಘನಗಳಾಗಿ ದುಂಬಿಗಳಂತೆ ಕಪ್ಪಾಗಿ, ಎಳೆತಂದು ಮೇಘ ಪಟಲಗಳಿಂದ ಅಂತರಿಕ್ಷವನ್ನು ಮುಚ್ಚುವಂತೆ, ಜನಗಳ ಮೂಗುಗಳನ್ನೂ ಮೆತ್ತುತ್ತಿರುವುದು.

ಉನ್ನಿದ್ರಕುಡ್ಮಲದಲಾಸು ವನಸ್ಥಲೀಷು
ಸಚ್ಛಾಯಶಾದ್ವಲಘನೇಷು ಚ ಜಂಗಲೇಷು ।
ಗ್ರಾಮೇಷು ಸಂತತಫಲದ್ರುಮಸಂಕುಲೇಷು
ಲಕ್ಷ್ಮೀಃ ಸ್ವಯಂ ನಿವಸತೀವ ನಿವಾಸಹೇತೋಃ ॥ ೫೩ ॥

ವಾತಾಯನಾಗತಲತಾವೃತಸೌಧಕೋಶ
ಕೋಶಾತಕೀಕುಸುಮಕೇಸರಮಾಹರದ್ಭಿಃ ।
ಆಗುಲ್ಫಕೀರ್ಣಮುಕುಲಾಜಿರ ಏಷ ವಾತೈ-
ರ್ಗ್ರಾಮೋ ವಿಭಾತಿ ನಗರಂ ವನದೇವತಾನಾಂ ॥ ೫೪ ॥

ಉನ್ನಿದ್ರಾಮಲಚಂಪಕದ್ರುಮಲತಾದೋಲಾವಿಲೋಲಾಂಗನಾಃ
ಕೂಜನ್ನಿರ್ಝರವಾರಯಃ ಪರಿಸರಪ್ರೋನ್ನಿದ್ರತಾಲದ್ರುಮಾಃ ।
ಉತ್ಫುಲ್ಲೋಜ್ಜ್ವಲಮಂಜರೀಸಿತಲತಾಗೇಹೋಲ್ಲಸದ್ಬರ್ಹಿಣಃ
ಪರ್ಯಂತೋನ್ನತಸಾಲಲಂಬಜಲದಾ ರಮ್ಯಾ ಗಿರಿಗ್ರಾಮಕಾಃ ॥ ೫೫ ॥

---

೫೩. ಅರಳಿರುವ ಕುಟ್ಮಲದಲಗಳುಳ್ಳ ವನಸ್ಥಲಿಗಳಲ್ಲಿ, ಒತ್ತಾಗಿ ಬೆಳೆದು ನಿಂತಿರುವ ಹುಲ್ಲುಗಳುಳ್ಳ ಜಂಗಲಗಳಲ್ಲಿ, ಫಲದ್ರುಮಗಳ ಗುಂಪುಗಳು ತುಂಬಿರುವ ಗ್ರಾಮಗಳಲ್ಲಿ, ಲಕ್ಷ್ಮಿಯು ವಾಸ ಮಾಡಬೇಕೆಂದೇ ಬಂದು ನೆಲಸಿರುವಳೋ ಎಂಬಂತಿರುವುದು.

೫೪. ಕಿಟಕಿಗಳಿಂದ ಒಳನುಗ್ಗಿ ಬಂದು ಮನೆಗಳನ್ನು ಅಕ್ರಮಿಸಿರುವ ಕೋಶಾತಕಿಯ ಕುಸುಮ ಕೇಸರಗಳನ್ನು ತಂದು ಅಂಗಳದಲ್ಲಿ ಹಿಮ್ಮಡಿಯ ವರೆಗೂ ಈ ಗಾಳಿಗಳು ತುಂಬಿರಲು, ಈ ಗ್ರಾಮಗಳು ವನದೇವತೆಗಳ ನಗರ ಗಳಂತಾಗಿರುವುವು.

೫೫. ಎದ್ದು ಕಣ್ಣುಬಿಡುತ್ತಿರುವ ನಿರ್ಮಲ (ಬಿಳಿಯ ?) ಚಂಪಕ ದ್ರುಮಗಳ ಕೊಂಬೆಗಳಲ್ಲಿ ಕುಳಿತು ತೂಗಿಕೊಳ್ಳುವ ಕ್ರೀಡಾಪರೆಯರಾದ ಅಂಗನೆಯರು, ಮೊರೆಯುತ್ತಿರುವ ನಿರ್ಝರಗಳ ನೀರುಗಳು, ಸುತ್ತಲೂ ಹುವ್ವು ಬಿಟ್ಟಿರುವ ತಾಲದ್ರುಮಗಳು, ಚೆನ್ನಾಗಿ ಅರಳಿ ಸುಂದರವಾಗಿರುವ ಮಂಜರಿಗಳಿಂದ ಬೆಳ್ಳಗಿರುವ ಲತಾಗೇಹಗಳಲ್ಲಿ ಸಂತೋಷವಾಗಿರುವ ನವಿಲುಗಳು, ಗ್ರಾಮಗಳ ಅಂಚಿನಲ್ಲಿರುವ ಸಾಲವೃಕ್ಷಗಳನ್ನು ಅವಲಂಬಿಸಿರುವ ಮೋಡಗಳೂ ಉಳ್ಳವಾಗಿ ಗಿರಿಗ್ರಾಮಗಳು ಮನೋಹರಗಳಾಗಿರುವುವು.

ವಾತಾಲೋಲವಿಚಿತ್ರಪತ್ರಲತಿಕಾಸಂಪೂರ್ಣನೀಲಸ್ಥಲಾಃ
　　ಕೂಜಲ್ಲಾವಕಕೋಕಕುಕ್ಕುಟಘಟಾಗಾಯತ್ಪುಲಿಂದಾಂಗನಾಃ ।
ಬಾಲಾವ್ಯಾಕುಲತರ್ಣಕಾ ದಧಿಮಧುಕ್ಷೀರಾಜ್ಯಪಾನೋಜ್ಜ್ವಲಾಃ
　　ಕಸ್ಯೇವಾಮೃತಮಂಡಪಾ ವಿರಚಿತಾ ರಮ್ಯಾ ಗಿರಿಗ್ರಾಮಕಾಃ ॥ ೫೭ ॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ " ವಿಪಶ್ಚಿದನುಚರಕೃತಪದಾರ್ಥವರ್ಣನಂ " ನಾಮ
ಪಂಚದಶಾಧಿಕಶತತಮಃ ಸರ್ಗಃ

---

೫೭ ಗಾಳಿಗಳಿಂದ ತೂಗುವ ವಿಚಿತ್ರ ಪತ್ರಗಳುಳ್ಳ ಲತೆಗಳಿಂದ ತುಂಬಿ ನೀಲವಾಗಿರುವ ಸ್ಥಲಗಳು, ಕೂಗುತ್ತಿರುವ ಲಾವಕ, ಕೋಕ, ಕುಕ್ಕುಟಗಳ ಗುಂಪುಗಳೂ ಹಾಡುತ್ತಿರುವ ಪುಲಿಂದಾಂಗನೆಯರೂ ಹೆದರದೆ ಹುಡುಗರೊಡನೆ ತಿರುಗುವ ಎಳೆಯ ಕರುಗಳೂ, ದಧಿಮಧುಕ್ಷೀರಆಜ್ಯ ಪಾನಗಳಿಂದ ಸುಖ ಪ್ರದಗಳಾದ ಗಿರಿಗ್ರಾಮಗಳು ಬ್ರಹ್ಮನು ತನಗಾಗಿಯೇ ವಿರಚಿಸಿಕೊಂಡಿರುವ ಅಮೃತ ಮಂಟಪಗಳೋ ಎಂಬಂತಿರುವುವು

ಇಂತಿದು ವಾಸಿಷ್ಠ ಮಹಾರಾಮಾಯಣದ ನಿರ್ವಾಣಪ್ರಕರಣದ
ಉತ್ತರಾರ್ಧದಲ್ಲಿ " ವಿಪಶ್ಚಿದನುಚರಕೃತಪದಾರ್ಥವರ್ಣನ " ಎಂಬ
ನೂರಹದಿನೈದನೆಯ ಸರ್ಗವು

# ಷೋಡಶಾಧಿಕಶತತಮಃ ಸರ್ಗಃ

ಅನುಚರಾ ಊಚುಃ :—

ದೇವ ಪಶ್ಯಾತ್ರ ಸಂಗ್ರಾಮಲಗ್ನ ಸೀಮಾಂತಭೂಭೃತಾಂ ।
ಕಚಂತಿ ಹೇತಿಸಂಘಾತಾ ವಿಸರಂತಿ ಬಲಾನಿ ಚ ॥ ೧ ॥

ಹತಾನ್ಹತಾನಭಿಮುಖಾನ್ವೀರಾನ್ವೀರೈಃ ಸಹಸ್ರಶಃ ।
ಆರೋಪ್ಯಾರೋಪ್ಯ ಖಂ ಯಾಂತಿ ಪಶ್ಯ ಪಶ್ಯಾಂಗನಾರಥೈಃ ॥ ೨ ॥

ವಿಜಿಗೀಷೋಃ ಪುನಃ ಪ್ರಾಪ್ತೇ ಸಂಕಟೇ ಪ್ರಕಟೇ ರಣೇ ।
ಧರ್ಮ್ಯಂ ವಿರಾಜತೇ ಯುದ್ಧಂ ಯೌವನೇ ಸುರತಂ ಯಥಾ ॥ ೩ ॥

---

# ನೂರಹದಿನಾರನೆಯ ಸರ್ಗವು

ಅನುಚರರು ಹೇಳಿದರು :—

೧. ದೇವ, ಇತ್ತನೋಡು. ಸಂಗ್ರಾಮಕ್ಕೆ ಬಂದಿದ್ದ ಸೀಮಾಂತ ಭೂಪತಿಗಳ ಬಲಗಳೂ, ಆಯುಧ ಸಂಘಾತಗಳಿಂದ ವಿರಾಜಿಸುತ್ತಾ ಹಿಂದಕ್ಕೆ ಹೋಗುತ್ತಿರುವುವು.

೨. ಅಪ್ಸರಸೆಯರು ಅಭಿಮುಖ ಯುದ್ಧದಲ್ಲಿ ವೀರರಿಂದ ಹತರಾದ ವೀರರನ್ನು ಸಾವಿರಗಟ್ಟಲೆಯಾಗಿ ವಿಮಾನಗಳಲ್ಲಿ ಕೂರಿಸಿಕೊಂಡು ಅಂತರಿಕ್ಷಲೋಕಕ್ಕೆ ಕರೆದೊಯ್ಯುತ್ತಿರುವರು.

೩. ಗೆಲ್ಲಬೇಕೆಂದು ಮತ್ತಾವನಾದರೂ ಬಂದರೆ, ಆಗ ಸಂಕಟಕರವಾದ ರಣವು ಮತ್ತೆ ಸಂಭವಿಸಿದರೆ, ಯೌವನದಲ್ಲಿ ಸುರತವು ಹೇಗೋ ಹಾಗೆ, ಧರ್ಮ್ಯವಾದ ಯುದ್ಧವೂ ಶೋಭಿಸಿಯೇ ಶೋಭಿಸುವುದು.

ಲೋಕೈರನಿಂದಿತಾ ಲಕ್ಷ್ಮೀರಾರೋಗ್ಯಂ ಶ್ರೀಸಮನ್ವಿತಂ ।
ಧರ್ಮ್ಯಂ ಯುದ್ಧಂ ಪರಾರ್ಥೇನ ಜೀವಿತಸ್ಯೋತ್ತಮಂ ಫಲಂ ॥ ೪ ॥

ಅವಿರೋಧೇನ ಧರ್ಮಸ್ಯ ಯುದ್ಧೇ ಸಂಮುಖಮಾಗತಂ ।
ಯೋಧಾನುರೂಪಂ ಯೋ ಹಂತಿ ಶೂರಃ ಸ್ವರ್ಗ್ಯಃ ಸ ನೇತರಃ ॥ ೫ ॥

ಹಸ್ತಸ್ಥಿತಾಸಿವರನೀಲಸರೋಜದಾಮ
ಶ್ಯಾಮೋ ಹಯೋತ್ಥಘನರೇಣುನಿಶಾಗಮೋಽತ್ರ ।
ಆಲೋಕಯ ಕ್ರಮಣಮೇಷ ಕಥಂ ಕರೋತಿ-
ಪ್ರೋನ್ನಾಮಹೇತಿಭರಭೂಷಣಭಾಜಿಲಕ್ಷ್ಮ್ಯಾಃ ॥ ೬ ॥

---

೪. ಲೋಕನಿಂದಾದುಷ್ಟವಲ್ಲದ ಐಶ್ವರ್ಯವು, ಆರೋಗ್ಯವು, ಶ್ರೀಮಂತಿಕೆಯು ಪರಾರ್ಥಕ್ಕಾಗಿ ಮಾಡುವ ಧರ್ಮ್ಯವಾದ ಯುದ್ಧವು, ಜೀವಿತದ ಉತ್ತಮೋತ್ತಮ ಫಲವು.

೫. ಧರ್ಮಕ್ಕೆ ವಿರೋಧವಾಗದಂತೆ, ಯುದ್ಧದಲ್ಲಿ ಸಮ್ಮುಖನಾಗಿ ಬಂದವನನ್ನು, ಆಯೋಧಾನುರೂಪವಾಗಿ ಯಾವನು ಶತ್ರುವನ್ನು ವಧಿಸುವನೋ ಅವನು ಸ್ವರ್ಗಕ್ಕೆ ಅರ್ಹನಲ್ಲದೆ ಇತರನಲ್ಲ.

(ಯೋಧಾನು ರೂಪಮಿತಿ ತದ್ಯಥಾ, ಏಕಸ್ಮಿನ್ ಯೋಧೇ ಏಕಏವಸಃ, ಸವಾಹನೇ ಸವಾನಃ, ಸಧನುಷಿ ಸಧನುಃ ಸಖಡ್ಗೇ ಸಖಡ್ಗಃ, ನಿರಾಯುಧೇ ನಿರಾಯುಧಃ ಏವ ಬಾಹುಯುದ್ಧಂ ಚರನ್ ಯೋಹಂತಿ ಇತ್ಯರ್ಥಃ ॥ —ತಾ. ಪ್ರ)

೬. ಆಯುಧ ಸಂಗ್ರಹಗಳನ್ನು ಭೂಷಣಗಳಂತೆ ಧರಿಸಿಕೊಂಡು ಬರುತ್ತಿರುವ ಈ ಶೂರವರನು ತನ್ನ ಕೈಯಲ್ಲಿ ಹಿಡಿದಿರುವ ಖಡ್ಗರತ್ನವೆಂಬ ನೈದಿಲೆಯ ಕಾಂತಿಯಿಂದ ಶ್ಯಾಮನಾಗಿ, ಕುದುರೆಗಳ ಕಾಲಿನಿಂದ ಎದ್ದ ಧೂಳಿಯಿಂದ ಎಲ್ಲವೂ ಕತ್ತಲಾಗುತ್ತಿರಲು, ಜಯಲಕ್ಷ್ಮಿಯನ್ನು ಹೇಗೆ ಪಡೆಯುವನು ಎಂಬುದನ್ನು ನೋಡು.

ಏತೇ ಕಚಂತಿ ಶರಶಕ್ತಿಗದಾಭುಶುಂಡೀ
ಶೂಲಾಸಿಕುಂತಪಟುತೋಮರಚಕ್ರಪೂರ್ಣಾಃ ।
ತಾಪಾಃ ಸತಾಂಡವಕಚಪ್ರಚಲೇಽಚಲೇಽಬ್ಧೌ
ದೇಹೇನ ವಲ್ಗತಿ ಭುವೀವ ಫಣೀಂದ್ರಸಂಘಾಃ ॥ ೭ ॥

ಪಶ್ಯಾಂಬರಂ ಬಲವದಂಬುಧರಾಬ್ಧಿಪೂರ್ಣಂ
ಪಶ್ಯಾಂಬರಂ ತರಲತಾರಕತಾರಹಾರಂ ।
ಪಶ್ಯಾಂಬರಂ ಸುಘನಸಕ್ತಮಸ್ಯೈಕಸಾರಂ
ಪಶ್ಯಾಂಬರಂ ವಿಶದಚಂದ್ರಕರಾವಸಿಕ್ತಂ ॥ ೮ ॥

ಯತ್ರಾನೇಕಸುರಾಸುರಾಸ್ಪದಘಟಾ ತಾರಾಪದೇಶಂ ಗತಾ
ಋಕ್ಷಾಣಾಂ ಚ ಯದಾಸ್ಪದಂ ವಿಸರತಾಂ ಸರ್ವೋನ್ನತಾನಾಂ ಚ ಯತ್ ।
ತಸ್ಮಿನ್ ಶೂನ್ಯಮಿತಿ ಪ್ರತೀತಿರಧುನಾ ಪ್ಯಸ್ತಂ ಗತಾ ನಾಂಬರೇ
ಕೋಽನ್ಯೋ ಮಾರ್ಜಯಿತುಂ ಜನೋಽಜ್ಞರಚಿತಂ ಲೋಕಾಪವಾದಂ ಕ್ಷಮಃ॥ ೯ ॥

---

೭. ಶರ, ಶಕ್ತಿ, ಗದಾ, ಭುಶುಂಡೀ, ಶೂಲ, ಖಡ್ಗ, ಕುಂತ, ತೋಮರ, ಚಕ್ರ, (ಆದಿ ಆಯುಧಗಳನ್ನು) ಧರಿಸಿರುವ ಈ ಯೋಧವೀರರು, ತೃಣವೃಕ್ಷಗಳಿಂದ ಕೂಡಿದ ಪರ್ವತಾಗ್ರದಲ್ಲಿ ಹತ್ತಿರುವ ದಾವಾಗ್ನಿಗಳಂತೆ ಮೆರೆಯುತ್ತಿರುವರು. ಇವರು ಧರಿಸಿರುವ ಆಯುಧಗಳು, ಸಮುದ್ರದಲ್ಲಿದ್ದ ಭಾರಿಯ ಹಾವುಗಳು ಗುಂಪು ಗುಂಪಾಗಿ ದೇಹಧಾರಿಗಳಾಗಿ ಭೂಮಿಗೆ ಬಂದಂತಿರುವುವು.

೮. ಬಲವಂತರಾದ ಮೇಘಗಳಿಂದ ಆವೃತವಾದ ಅಂಬುದಿಯಂತೆ ಕಾಣುವ ಆಕಾಶವನ್ನು ನೋಡು. ತರಲವಾದ ತಾರಕೆಗಳ ತಾರಹಾರವನ್ನು ಧರಿಸಿರುವಂತಿರುವ ಆಕಾಶವನ್ನು ನೋಡು. ದಪ್ಪವಾಗಿ ಹೆಪ್ಪುಕಟ್ಟಿರುವ ತಮಸ್ಸಲ್ಲದೆ ಮತ್ತೇನೂ ಇಲ್ಲವೇ ಇಲ್ಲವೆಂಬಂತಿರುವ ಈ ಆಕಾಶವನ್ನು ನೋಡು. ಹಾಗೆಯೇ ಪ್ರಕಾಶಿಸುತ್ತಿರುವ ಚಂದ್ರನ ಕಿರಣಗಳಿಂದ ಬೆಳ್ಳಗಾಗಿರುವ ಆಕಾಶವನ್ನು ನೋಡು.

೯. ಈ ಆಕಾಶದಲ್ಲಿ ಅನೇಕ ಸುರ-ಅಸುರ ಗಣಗಳು ಮಾಡಿಕೊಂಡಿರುವ ನೆಲೆಗಳು, ತಾರೆಗಳು ಎನ್ನಿಸಿಕೊಂಡಿರುವುವು: ವಿಸರತೆಯನ್ನು ಹೊಂದುತ್ತಿರುವ ಸರ್ವೋನ್ನತಗಳಾದ ನಕ್ಷತ್ರಗಳಿಗೆ ಈ ಆಕಾಶವು ಸ್ಥಾನವಾಗಿರುವುದು : ಹೀಗಿ

ಮೇಘಾಟೋಪೈಃ ಪ್ರಲಯದಹನೈರದ್ರಿಪಕ್ಷಾಭಿಘಾತೈ-
ಸ್ತಾರಾಪೂರೈರಮರದಿತಿಜ ಕ್ಷುಬ್ಧಸಂಗ್ರಾಮಸಂಘೈಃ ।
ವ್ಯೋಮಾದ್ಯಾಪಿ ಪ್ರಕೃತಿವಿಕೃತಿಂ ನಾಮ ನಾಯಾತ್ಯಸಂಖ್ಯೈ-
ರಂತಃಸಾರಾಶಯಗುಣವತಾಂ ಲಕ್ಷ್ಯತೇ ನೋ ಮಹಿಮ್ನಃ ॥೧೦॥

ಆಂದೋಲಯಸ್ಯವಿರಲಂ ಗಗನಾರ್ಕಮಂಕೇ
ನಾರಾಯಣಂ ಚ ಶಶಿನಂ ಚ ತಥೇತರಾಣಿ ।
ತೇಜಾಂಸಿ ಭಾಸುರತಡಿತ್ಪ್ರಭೃತೀನಿ ಸಾಧೋ
ಚಿತ್ರಂ ತಥಾಪಿ ನ ಜಹಾಸಿ ಯದಾಂಧ್ಯಮಂತಃ ॥ ೧೧ ॥

ಆಕಾಶ ಕಾಶಸಿ ತು ಯತ್ರ ಶಶಾಂಕಬಿಂಬಂ
ತ್ವತ್ಕೀರ್ಣಕಜ್ಜಲತಮೋಮಲಿನೋಽಸಿ ತತ್ತ್ವಂ ।
ಸಂಗಾನ್ನಯನ್ನಯಸಿ ತತ್ಖಲು ಚಿತ್ರಮುಚ್ಚೈಃ
ಕೋ ನಾಮ ವಾಂತರಮಲಂ ಮಲಿನೀಕರೋತಿ ॥ ೧೨ ॥

---

ದ್ದರೂ ಆಕಾಶವು ಶೂನ್ಯವು ಎಂಬ ಪ್ರತೀತಿಯು ಈಗಲೂ ಹೋಗಿಲ್ಲ: ಅಜ್ಞ ರಚಿತವಾದ ಲೋಕಾಪವಾದವನ್ನು ತೊಳೆಯುವುದಕ್ಕೆ ಯಾರು ತಾನೆ ಶಕ್ತರು?

೧೦. ಮೇಘಗಳ ಆಟೋಪಗಳಿಂದಲೂ, ಪ್ರಲಯಾಗ್ನಿಗಳಿಂದಲೂ, ಪರ್ವತ ಪಕ್ಷ ಪ್ರಘಾತಗಳಿಂದಲೂ, ತಾರಾಗಣಗಳಿಂದಲೂ, ಕ್ಷುಬ್ಧರಾಗಿ ಯುದ್ಧ ಮಾಡು ತ್ತಿರುವ ಸುರಾಸುರಗಣಗಳಿಂದಲೂ, ಅನಾಕಾನೇಕವಾಗಿ ಪ್ರಕ್ಷೋಭಗೊಂಡಿ ದ್ದರೂ ಆಕಾಶವು ತನ್ನ ಪ್ರಕೃತಿಯನ್ನು ಬಿಟ್ಟು ವಿಕೃತಿಯನ್ನು ಹೊಂದಿಲ್ಲ. ಅಂತಸ್ಸಾರವಾಗಿ ಗುಣವಂತರಾದವರ ಮಹಿಮೆಗೆ ಕೊನೆಯಲ್ಲಿ?

೧೧. ಎಲೈ ಗಗನವೇ, ಸೂರ್ಯನನ್ನು ನಾರಾಯಣನನ್ನು, ಚಂದ್ರನನ್ನು, ಹಾಗೆಯೇ ಪ್ರಕಾಶಮಾನವಾದ ವಿದ್ಯುತ್ತು ಮೊದಲಾದ ಇತರ ತೇಜಸ್ಸುಗಳನ್ನೂ, ಒಂದೇಸಮನಾಗಿ ತೊಡೆಯಲ್ಲಿ ಕುಳ್ಳಿರಿಸಿಕೊಂಡು ಆಡಿಸುತ್ತಿರುವೆ. ಆದರೂ, ಎಲೈ ಸಾಧುವೆ, ನಿನ್ನ ಒಳಗಿರುವ ಆಂಧ್ಯ (ತಮಸ್ಸು)ವು ಮಾತ್ರ ಇನ್ನೂ ಹೋಗಿಲ್ಲವಲ್ಲ ಏನು ಚಿತ್ರವಿದು!

೧೨. ಎಲೈ ಆಕಾಶವೇ, ಶಶಾಂಕ ಬಿಂಬದಲ್ಲಿ ನೀನು ತೂತುಮಾಡಿ, ಅದನ್ನು ಕಾಡಿಗೆಯಂತೆ ಕಪ್ಪು ಮಾಡಿ, ಅಲ್ಲಿ ಕಲಂಕವೆಂಬ ನೆಪದಿಂದ ಮಲಿನನಾಗಿ

ಪೂರ್ಣಸ್ಯಾಪಿ ಜಗದ್ದೋಷೈಃ ಸರ್ವದೈವಾವಿಕಾರಿಣಃ ।
ಖಸ್ಯ ಮನ್ಯೇ ಬುಧಸ್ಯೇವ ಸುಖಂ ಸದಾರ್ಥಶೂನ್ಯತಾ ॥ ೧೩ ॥

ಕಲ್ಪಾಭ್ರದ್ರುಮವೀರುದುನ್ನತಿದೃಶಾಂ ಕರ್ತಾಸಿ ಧರ್ತಾಸಿ ಚ
ಆಕಾಶೇಂದು ಘನಾರ್ಕಕಿನ್ನರ ಮರುತ್ಸ್ಕಂಧಾಮರಾಣಾಮಪಿ ।
ಸರ್ವಂ ರಮ್ಯಮಸಂಕುಲಾಶಯಸಮಸ್ವಚ್ಛಸ್ವಭಾವಶ್ಯತೇ
ಯತ್ತ್ವೇತದ್ದಹನತ್ವಮಂಗ ತದಹೋ ಮುಖ್ಯಾಯ ಖೇದಾಯನಃ ॥ ೧೪ ॥

---

ಕಾಣಿಸುತ್ತಿರುವೆ. ನಿಜವಾಗಿಯೂ ನಿನ್ನ ಸಂಗಮದಿಂದಲೂ ಶಶಿಬಿಂಬವು ಸಂಪೂರ್ಣವಾಗಿ ಕಪ್ಪಾಗದಿರುವುದು ಆಶ್ಚರ್ಯವೇ ಸರಿ. ಒಳಗೆ ಶುದ್ಧವಾಗಿರುವವನನ್ನು ಯಾರು ಮಲಿನಮಾಡಬಲ್ಲರು ?

(ವಾ ಅಥವಾ ಮಲಿನ ಸಂಗಾದಂತರ್ಮಲಿನ ಏವ ಬಹಿರಪಿಮಾಲಿನ್ಯಮಾಪದ್ಯತೇ । ಅಂತರಮಲಂತು ಕೋನಾಮಲಿನೀಕರೋತಿ ನಕಶ್ಚಿದಿತ್ಯರ್ಥಃ —ತಾ. ಪ್ರ.)

೧೩. ಅಥವಾ ಜಗದ್ದೋಷಗಳಿಂದ ಪೂರ್ಣನಾಗಿದ್ದರೂ ಸರ್ವ ಅವಿಕಾರಿಯೇ ಆಗಿ ಆಕಾಶಕ್ಕೆ, ವಿದ್ವಾಂಸನಿಗೆ ಹೇಗೋ ಹಾಗೆ, ಯಾವಾಗಲೂ ಸರ್ವಾರ್ಥ ಶೂನ್ಯವಾಗಿರುವುದೇ ಸುಖ ಎಂದುಕೊಳ್ಳುವನು.

೧೪. ಕಲ್ಪಾಭ್ರಗಳೆಂಬ ದ್ರುಮ, ಲತೆಗಳು ಬೇಕಾದ ಹಾಗೆ ಉನ್ನತಿಯನ್ನು ಪಡೆಯಲು ಅನುಕೂಲಮಾಡಿಕೊಡುವೆ: ಇದು, ಘನ (ಮೋಡ), ಅರ್ಕ, ಕಿನ್ನರ, ಮರುತ್ ಸ್ಕಂಧಗಳು, ಅಮರರು, ಇವರೆಲ್ಲರನ್ನೂ ಧರಿಸಿರುವೆ: ಉದಾರ ಬುದ್ಧಿಯಾದ ಆಕಾಶವೇ, ಸಮವೂ ಸ್ವಚ್ಛವೂ ಆದ ಸ್ವಭಾವವುಳ್ಳ ನಿನ್ನ ಈ ನಡತೆಗಳೆಲ್ಲವೂ ರಮ್ಯವಾದವು : ಆದರೆ, (ಸೂರ್ಯಾಗ್ನಿಗಳ ಪ್ರಭಾವಕ್ಕೆ ಎಡೆಗೊಟ್ಟು) ದಹನಕ್ಕೆ ಕಾರಣನಾಗಿರುವೆಯಲ್ಲ, ಅದು ಮಾತ್ರ ನಮಗೆ ಬಹಳ ದೊಡ್ಡ ಖೇದ ಕಾರಣವು.

ಆಕಾಶಕಾಶಮಸಿ ನಿರ್ಮಲಮಚ್ಛಮುಚ್ಚೈ-
ರಾಧಾರ ಉನ್ನತತಯೋತ್ತಮಮುತ್ತಮಾನಾಂ ।
ತ್ವಾಮೇತ್ಯ ಕಿಂತು ವಿರಲಂ ಕರಕಾಘನೋಽಯಂ
ಲೋಕಂ ವಿಮರ್ದಯತಿ ತೇನ ಪಶೋಽಸಿ ನೀಚೈಃ ॥ ೧೫ ॥

ಆಕಾಶಕರ್ಷಕಷ ಏವ ನಿಕರ್ಷಣಂ ತೇ
ಮನ್ಯೇ ಚಿರಂ ಸಮುಚಿತಂ ನತು ಕಿಂಚಿದನ್ಯತ್ ।
ಶೂನ್ಯೋಽಸಿ ಯಜ್ಜಲಧರರ್ಕ್ಷವಿಮಾನಚಂದ್ರ-
ಸೂರ್ಯಾನಿಲಾನ್ವಹಸಿ ಭಾಸಿ ನ ಚಾರ್ಥಶೂನ್ಯಃ ॥ ೧೬ ॥

ಅಹ್ನಿ ಪ್ರಕಾಶಮಸಿ ರಕ್ತವಪುರ್ದಿನಾಂತೇ
ಯಾಮಾಸು ಕೃಷ್ಣಮಥ ಚಾಖಿಲವಸ್ತುರಿಕ್ತಂ ।
ನಿತ್ಯಂ ನ ಕಿಂಚಿದಪಿ ಸದ್ವಹಸೀತಿ ಮಾಯಾಂ
ನ ವ್ಯೋಮ ವೇತ್ತಿ ವಿದುಷೋಽಪಿ ವಿಚೇಷ್ಟಿತಂ ತೇ ॥ ೧೭ ॥

---

೧೫. ಎಲೈ ಆಕಾಶ, ನೀನು ನಿರ್ಮಲವೂ ಅಚ್ಛವೂ ಆದ ತೇಜಸ್ಸಾಗಿರುವೆ. ನೀನು ಉನ್ನತನಾದ್ದರಿಂದ ಉತ್ತಮರಾದ ದೇವತೆಗಳಿಗೂ ಉತ್ತಮವೂ ಉಚ್ಚವೂ ಆದ ಆಧಾರನಾಗಿರುವೆ. ವಿರಲನಾದ ನಿನ್ನನ್ನು ಸೇರಿ ಈ ಕರಕಾಘನವು (ಆಲಿಕಲ್ಲು ಕರೆಯುವ ಮೋಡವು) ಲೋಕವನ್ನು ವಿಶೇಷವಾಗಿ ಮರ್ದಿಸುವುದು. ಆದರಿಂದ, ನೀನು ನೀಚರಿಗಿಂತಲೂ ನೀಚನಾಗಿರುವೆ.

೧೬. ಆಕಾಶ, ನಿನ್ನನ್ನು ಚಿನ್ನವನ್ನು ಉಜ್ಜುವ ಕಲ್ಲಿನ ಮೇಲೆ ಚಿರಕಾಲ ಉಜ್ಜಿ ನೋಡಿದ ಹೊರತು ನಿನ್ನ ಗುಣಗಳೊಂದೂ ಗೊತ್ತಾಗುವುದಿಲ್ಲ: ಏಕೆಂದರೆ ನೀನು ಹೇಳಿ ಕೇಳಿ ಶೂನ್ಯನು: ಆದರೂ ಜಲಧರ, ನಕ್ಷತ್ರ, ವಿಮಾನ, ಚಂದ್ರ, ಸೂರ್ಯ, ವಾಯುಗಳನ್ನು ಧರಿಸಿ ಮೆರೆಯುವೆಯಾಗಿ ನೀನು ಅರ್ಥ ಶೂನ್ಯನೂ ಅಲ್ಲ.

೧೭. ಎಲೈ ಆಕಾಶವೆ, ಹಗಲಿನಲ್ಲಿ ಪ್ರಕಾಶವಾಗಿರುವೆ: ಸಂಜೆಯಲ್ಲಿ ಕೆಂಪಾಗಿರುವೆ: ರಾತ್ರಿಯಲ್ಲಿ ಕೃಷ್ಣವರ್ಣನಾಗಿ ಅಖಿಲವಸ್ತು ಶೂನ್ಯನಾಗಿರುವೆ: ನೀನು ಯಾನಾಗಲೂ ಏನೂ ಅಲ್ಲದೆ ಇದ್ದರೂ, ಸದ್ವಸ್ತುವನ್ನು ವಹಿಸಿಕೊಂಡಿರುವೆ. ಹೀಗಿರುವ ನಿನ್ನ ಕಾರ್ಯವನ್ನು ವಿದ್ವಾಂಸನೂ ಕೂಡ ತಿಳಿಯಲಾರನು.

ಅಕಿಂಚನೋಽಪಿ ಕಾರ್ಯಾಣಿ ಸಾಧಯತ್ಯಾತತಾಶಯಃ ।
ಅಂತಃಶೂನ್ಯಮಪಿ ವ್ಯೋಮ ಸರ್ವಸ್ಯೋನ್ನತಿಕಾರಣಂ ॥ ೧೮ ॥

ನ ತೃಣಸಲಿಲಂ ನೈವ ಗ್ರಾಮೋ ನ ನಾವು ಚ ಪತ್ತನಂ
ನಚ ದಲಭರಸ್ನಿಗ್ಧಚ್ಛಾಯಸ್ತರುರ್ನ ಚ ಸತ್ಪ್ರಪಾ ।
ತದಪಿ ಗಗನಾಧ್ವಾನಂ ಸೂರ್ಯಃ ಪ್ರಯಾತಿ ದಿನೇದಿನೇ
ವಿಷಮಮಪಿ ಯತ್ಪ್ರಾರಬ್ಧಂ ತತ್ತ್ಯಜಂತಿ ನ ಸಾತ್ವಿಕಾಃ ॥ ೧೯ ॥

ಯಾಮಾ ಧ್ವಾಂತಪಟೇನ ಶೀತಲರುಚೇಃ ಕರ್ಪೂರಪೂರೈಃ ಕರೈ
ರರ್ಕಾಲೋಕನ ವಾಂಶುಕೇನ ದಿವಸಸ್ತಾರೌಘಪುಷ್ಪೈಸ್ತ್ರ್ಯೈಃ ।
ದ್ಯೌರಂಭೋದತುಷಾರವಾರಿಕುಸುಮೈಃ ಸರ್ವರ್ತವೋ ಭೂಷಯ–
ನ್ತ್ಯೇತೇಕಾಲಕಲಾತ್ಮನೋಸ್ತ್ರಿಭುವನೇ ವ್ಯೋಮಾಂಗಣಂ ನಾಥಯೋಃ ॥ ೨೦ ॥

---

೧೮. ಆತತಾಶಯನು (ಅತಿ ವಿಪುಲ ಬುದ್ಧಿಯುಃ ಅರ್ಥಾತ್ ತತ್ತ್ವ ವಿತ್ತಾದವನು) ಅಕಿಂಚನನಾದರೂ ಕಾರ್ಯಗಳನ್ನು ಸಾಧಿಸುವನು. ವ್ಯೋಮವು ಅಂತಶ್ಶೂನ್ಯವಾದರೂ (ಆತತನಾದ್ದರಿಂದ) ಎಲ್ಲರ ಉನ್ನತಿಗೂ ಕಾರಣನಾಗುವನು.

೧೯. ಆಕಾಶಮಾರ್ಗದಲ್ಲಿ ಹುಲ್ಲಿಲ್ಲ: ನೀರಿಲ್ಲ. ಗ್ರಾಮವಿಲ್ಲ: ಪತ್ತನವಿಲ್ಲ: ಚಿಗುರುಗಳಿಂದ ಕೂಡಿ ದಟ್ಟವಾದ ನೆರಳನ್ನೀಯುವ ಮರವಂತೂ ಇಲ್ಲವೇ ಇಲ್ಲ: ಒಂದು ಒಳ್ಳೆಯ ಅರವಟಿಗೆಯೂ ಇಲ್ಲ. ಆದರೂ ಆ (ಅಧ್ವಾನದ) ಧ್ವಾನದಲ್ಲಿ ಸೂರ್ಯನು ದಿನ ದಿನದಲ್ಲಿಯೂ ಪ್ರಯಾಣ ಮಾಡುವನು. ಸಾತ್ವಿಕರು ಆರಂಭಿಸಿರುವ ಕಾರ್ಯವು ವಿಷಮವಾದರೂ ಅದನ್ನು ಬಿಡುವುದಿಲ್ಲ.

೨೦. ರಾತ್ರಿಯು ಕರ್ಪೂರದಂತೆ ತಣ್ಣಗಿರುವ ಶೀತಾಂಶುವಿನ ಕಿರಣಗಳಿಂದಲೂ ಕತ್ತಲೆಂಬ ಪಟದಿಂದಲೂ ಸೂರ್ಯ ಪ್ರಕಾಶವೆಂಬ ಹೊಸಬಟ್ಟೆಯಿಂದ ದಿವಸವೂ ಅಂತರಿಕ್ಷವು ತಾರಾಗಣವೆಂಬ ಪುಷ್ಪಗಳಿಂದಲೂ, ಸರ್ವ ಋತುಗಳೂ ಅಂಭೋದ, ತುಷಾರವಾರಿ, ಕುಸುಮಗಳಿಂದಲೂ, ತ್ರಿಭುವನಗಳಲ್ಲಿಯೂ ಕಾಲ ಕಲಾತ್ಮರೆಂದು ಹೆಸರಾದ ಸೂರ್ಯಚಂದ್ರರೆಂಬ ಅರಸುಗಳ, ಕ್ರೀಡಾಕ್ಷೇತ್ರವಾದ ಆಕಾಶವೆಂಬ ಅಂಗಳವನ್ನು ಅಲಂಕರಿಸಿರುವರು.

ಧೂಮಾಭ್ರರೇಣುತಿಮಿರಾರ್ಕನಿಶೇಶಸಂಧ್ಯಾ
ತಾರಾವಿಮಾನಗರುಡಾದ್ರಿಸುರಾಸುರಾಣಾಂ-
ಕ್ಷೋಭೈರಪಿ ಪ್ರಕೃತಿಮುಜ್ಝತಿ ನಾಂತರಿಕ್ಷಂ
ಚಿತ್ರೋತ್ಥಿತಾ ಸ್ಥಿತಿರಹೋ ನು ಮಹಾಶಯಸ್ಯ ॥ ೨೧ ॥

ದಿಗ್ಭಿತ್ತಿಬದ್ಧಮಿದಮೂರ್ಧ್ವತಲಾಂತರಿಕ್ಷ
ಮುರ್ವೀತಲಂ ಘನಪುರಾಚಲಭೂರಿಭಾಂಡಂ ।
ವಿದ್ಯಾಧರಾಮರಮಹೋರಗ ಜಾಲಕಾರಂ-
ಲೋಕೌಘಸಂಸರಣಸಂಘಪಿಪೀಲಿಕಾಢ್ಯಂ ॥ ೨೨ ॥

ಕಾಲಃ ಕ್ರಿಯಾ ಚ ಭುವನಂ ಭವನಂ ಚಿರಾಯ
ನಾಮಾಧಿತಿಷ್ಠತ ಇವೋಪವನಂ ವಿಕಾಸಿ ।
ಆಶಂಕ್ಯತೇ ಪ್ರತಿದಿನಂ ನನು ನಷ್ಟಮೇವ-
ನಾದ್ಯಾಪಿ ನಶ್ಯತಿ ಚ ಕೇಯಮಹೋ ನು ಮಾಯಾಯುಗಲಕಂ ॥ ೨೩ ॥

---

೨೧. ಧೂಮ, ಅಭ್ರ, ರೇಣು, ತಿಮಿರ, ಅರ್ಕ, ಚಂದ್ರ, ಸಂಧ್ಯಾ, ತಾರಾ, ವಿಮಾನ, ಗರುಡ, ಪರ್ವತ, ಸುರಾಸುರರು, ಎಲ್ಲರೂ ಕ್ಷೋಭಗೊಂಡು ನಾಶವಾದರೂ ಅಂತರಿಕ್ಷವು ತನ್ನ ಪ್ರಕೃತಿ (ಸ್ವಭಾವ)ವನ್ನು ಬಿಡುವುದಿಲ್ಲ. ಮಹಾಶಯರ ಸ್ಥಿತಿಯು ಯಾವಾಗಲೂ ಚಿತ್ರವೇ !

೨೨. ದಿಗ್ಭಿತ್ತಿಗಳಿಂದ ಬದ್ಧವಾಗಿರುವ ಅಂತರಿಕ್ಷವು ತಲೆಯಮೇಲೆ: ದೊಡ್ಡ ದೊಡ್ಡ ಪುರ, ಅಚಲ, ಇವುಗಳ ಭೂರಿಭಾಂಡವಾಗಿರುವ ಉರ್ವೀತಲವು ನೆಲದಲ್ಲಿ ವಿದ್ಯಾಧರ, ಅಮರ, ಮಹೋರಗಗಳೆಂಬ ಜಾಡರ ಹುಳುಗಳು, ಲೋಕೌಘಗಳೆಂಬ ಹರಿಯುವ ಇರುವೆಗಳ ಗುಂಪುಗಳೂ ನಡುವಿನ ಅಂತರಾಳದಲ್ಲಿ: (ಹೀಗೆ ಈ ಭುವನವು ಜೀರ್ಣಗೃಹದಂತಿರುವುದು.)

೨೩. ಕಾಲಕ್ರಿಯಾ ಎಂಬ ದಂಪತಿಗಳು ಈ ಭುವನವೆಂಬ ಭವನವನ್ನು ವಿಕಾಸಿ, ಉಪವನವನ್ನು ಹೇಗೋ ಹಾಗೆ ಬಹು ಕಾಲ ಕಾಪಾಡುವರು. ಪ್ರತಿದಿನವೂ ಹೋಯಿತು ಎನ್ನಿಸಿದರೂ ಇದುವರೆಗೂ ಹೋಗದೆ ಇರುವುದು. ಆಹಾ ! ಇದೇನು ಈ ಮಾಯೆಯು !

ಖಂ ಮನ್ಯೇ ಪಾದಪಾದೀನಾಂ ರೋಧಯತ್ಯಧಿಕೋನ್ನತಿಂ ।
ಅಕರ್ತುರೇವ ಮಹತೋ ಮಹಿಮ್ನೋದೇತಿ ಕರ್ತೃತಾ ॥ ೨೪ ॥

ಜಗತಾಂ ಯತ್ರ ಲಕ್ಷಾಣಿ ನಭವಂತ್ಯುದ್ಭವಂತಿ ಚ ।
ತಚ್ಛೂನ್ಯಮುಚ್ಯತೇ ವ್ಯೋಮ ದಿಕ್ಪಾಂಡಿತ್ಯಮಖಂಡಿತಂ ॥ ೨೫ ॥

ವ್ಯೋಮನ್ಯೇವ ಪ್ರಲೀಯಂತೇ ವ್ಯೋಮತಃ ಪ್ರೋದ್ಭವಂತಿ ಚ
ಗಚ್ಛತೋನ್ಮತ್ತತಾಮೇಷಾಮೀಶ್ವರಾನ್ಯಭಿದಾ ಕೃತಾ ॥ ೨೬ ॥

ಆಯಾಂತಿ ಯಾಂತಿ ನಿಪತಂತಿ ತಥೋತ್ಪತಂತಿ
ಸರ್ಗಶ್ರಿಯಃ ಕಣಘಟಾ ಇವ ಪಾವಕೋತ್ಥಾಃ ।
ಯತ್ರಾಮಲಂ ತದಹಮೇಕಮನಾದಿಮಧ್ಯಂ–
ಮನ್ಯೇ ಖಮೇವ ನತು ಕಾರಣಮೀಶ್ವರಾಖ್ಯಂ ॥ ೨೭ ॥

---

(ಏವಂ ನಶ್ಯದಪಿ ನ ನಶ್ಯತೀತಿ ವಿರುದ್ಧ ಧರ್ಮಕತ್ವಾ ದ ಹೋನುಮಾಯಾ! ಇಂದ್ರಜಾಲ ಸದೃಶಮೇತ ದಿತ್ಯರ್ಥಃ । ತಥಾ ಚ ಶ್ರುತಿಃ "ಕಸ್ಮಾತ್ತಾನಿ ನ ಕ್ಷೀಯಂತೇ ಅದ್ಯಮಾನಾನಿ ಸರ್ವದಾ" ಇತಿ । "ಪುರುಷೋವಾ ಅಕ್ಷಿತಿಃ ಸ ಹೀದ ಮನ್ನಂ ಧಿಯಾಧಿಯಾ ಜನಯತೆ ಕರ್ಮಭಿಃ'' ಇತಿ—ತಾ. ಪ್ರ.)

೨೪. ಆಕಾಶವು ಪಾದಪಾದಿಗಳ ಅಧಿಕೋನ್ನತಿಯನ್ನು ತಡೆಯುವುದು. ಅಕರ್ತೃವಾಗಿದ್ದರೂ ಮಹಾತ್ಮರ ಮಹಿಮೆಯಿಂದಲೇ ಕರ್ತೃತೆಯು ಉದಯ ವಾಗುವುದು.

೨೫. ಎಲ್ಲಿ ಜಗತ್ತುಗಳು ಲಕ್ಷಲಕ್ಷವಾಗಿ ಹುಟ್ಟಿ ಹುಟ್ಟಿ ಸಾಯುವುವೋ ಅದೇ ಶೂನ್ಯವಾದ ಆಕಾಶ ಎನ್ನುವರು. ಈ ಪಂಡಿತರ ಪಾಂಡಿತ್ಯವೂ ಅಖಂಡಿತ ವಾಗಿರುವುದಲ್ಲಾ !

೨೬ ವ್ಯೋಮದಲ್ಲಿ ಎಲ್ಲವೂ ನಾಶವಾಗುವುದು: ವ್ಯೋಮದಿಂದಲೇ ಎಲ್ಲವೂ ಹುಟ್ಟುವುದು. ವ್ಯೋಮದಲ್ಲಿ ಎಲ್ಲವೂ ಇರುವುದು. ಹೀಗೆ ಉತ್ಪತ್ತಿ ಸ್ಥಿತಿ ಪ್ರಲಯಗಳಿಗೆಲ್ಲ ಕಾರಣವಾಗಿರುವ ವ್ಯೋಮವು ಬೇರೆ, ಈಶ್ವರನು ಬೇರೆ ಎಂದು ಹೇಳುವ ಹುಚ್ಚರೂ ಇರುವರಲ್ಲಾ !

೨೭ ಅಗ್ನಿಕುಂಡದಿಂದ ಹುಟ್ಟಿದ ಕಣಗಣಗಳಂತೆ ಸರ್ಗ ಶ್ರೀಯುಕು

ಆಧಾರಮಾಯತತರಂ ತ್ರಿಜಗನ್ಮಣೀನಾ
ಮಂಗೇ ಬಿಭರ್ತ್ಯಮಿತಮಂತರಶೇಷವಸ್ತು ।
ವ್ಯೋಮ್ನೈವ ಚಿದ್ವಪುರಹಂ ಪರಮೇವ ಮನ್ಯೇ-
ಯತ್ರೋದಯಾಸ್ತಮಯಮೇತಿ ಜಗದ್ಭ್ರಮೋಽಯಂ ॥ ೨೮ ॥

ವನಾವನೌ ವನಚರಚಾರುಕಾಮಿನಾ
ಮನೋಹರದ್ರುಮಗಹನೇಷು ಗೀಯತೇ ।
ಇತೋ ಗಿರೇಃ ಶಿರಸಿ ವಿಲೋಕ್ಯತೇಽಮುನಾ
ವಿಯೋಗಿನಾ ಪಥಿ ವಹತಾ ರಸಾಕುಲಂ ॥ ೨೯ ॥

---

ಬರುವರು, ಹೋಗುವರು, ಬೀಳುವರು, ಹುಟ್ಟುವರು: ಹೀಗೆ ಇದೆಲ್ಲಕ್ಕೂ ಕಾರಣ ವಾದುದು ಅಮಲವಾದ, ಅಹಂ ಎಂಬ ಆದಿಮಧ್ಯಗಳಿಲ್ಲದ, ಒಂದೇ ಒಂದಾದ ಆಕಾಶವೇ ಹೊರತು ಈಶ್ವರನಲ್ಲ.

(ಯದಿ ವ್ಯೋಮ್ನಃ ಸಕಾಶಾ ದೇವ ಅಗ್ನಿವಿಸ್ಫುಲಿಂಗ ನ್ಯಾಯೇನ ಜಗಜ್ಜ ನ್ಮಾದಿ ಮನ್ಯಸೇ · ತರ್ಹಿ ನ ಜಡಂ ವ್ಯೋಮ, ತತ್ ಕಿಂತು ಚಿದ್ವ್ಯೋಮ ರೂಪೋಽಹಮೇವ "ಮಯ್ಯೇವ ಸಕಲಂ ಜಾತಂ ಮಯಿ ಸರ್ವಂ ಪ್ರತಿಷ್ಠಿತಂ । ಮಯಿ ಸರ್ವಂ ಲಯಂ ಯಾತಿ ತದ್ಬ್ರಹ್ಮಾದ್ವಯ ಮಸ್ಮ್ಯಹಂ ॥ : ಇತಿ ಶ್ರುತೇ ರಹಮೇವ ಸ ಈಶ್ವರ ಇತಿ ತಟಸ್ಥೇಶ್ವರ ಪಕ್ಷ ಏವ ನಿರಸನಾರ್ಹ ಇತಿ ತತ್ರ ಕಶ್ಚಿತ್ತತ್ತ್ವವಿದಾಹ ।—ತಾ. ಪ್ರ.)

೨೮. ಎಲ್ಲಿ ಈ ಜಗತ್ತುಂಟೆಂಬ ಭ್ರಮೆಯು ಉದಯಾಸ್ತಮಯಗಳನ್ನು ಹೊಂದುವುದೋ, ಯಾವುದು ತ್ರಿಜಗತ್ತುಗಳೆಂಬ ಮಣಿಗಳಿಗೆ ವಿಸ್ತಾರವಾದ ಆಧಾರವಾಗಿದ್ದುಕೊಂಡು, ತಾನು ಅಮಿತವಾಗಿದ್ದುಕೊಂಡು ಅಶೇಷ ವಸ್ತು ಗಳನ್ನು ತನ್ನಲ್ಲಿಯೇ ಧರಿಸಿಕೊಂಡಿರುವುದೋ ಚಿದ್ವಪುವಾದ ಆ ವ್ಯೋಮವೇ ಎಲ್ಲದಕ್ಕೂ ಶ್ರೇಷ್ಠವೆಂದು ನಾನು ಭಾವಿಸುವೆನು.

೨೯. ಗಿರಿಶಿಖರದಲ್ಲಿರುವ ವನಭೂಮಿಯಲ್ಲಿ ಮನೋಹರ ದ್ರುಮಗಳ ತೋಪಿನಲ್ಲಿ ವನಚರನಾದ ಸುಂದರ ಕಾಮಿಯೊಬ್ಬನು ಪ್ರಣಯ ಗೀತವನ್ನು ಹಾಡುವನು: ಕೆಳಗೆ ದಾರಿಯಲ್ಲಿ ಹೋಗುತ್ತಿದ್ದವನು, ಅದನ್ನು ಕೇಳಿ ಮನಸ್ಸು ಕಲಕಿದಂತಾಗಿ ತಲೆಯೆತ್ತಿ ನೋಡುವನು.

ಗೀತಂ ಶೃಂಗತರೂಚ್ಚಪಲ್ಲವಪುಟೇ ನಿಃಶ್ವಸ್ಯ ಸೋತ್ಕಂಠಯಾ
ಕಂಠಾಶ್ಲಿಷ್ಟಗಿರಾ ವಿಯೋಗಹತಯಾ ವಿದ್ಯಾಧರಾಣಾಂ ಸ್ತ್ರಿಯಾ ।
ಯನ್ನಾಮಾತ್ರ ತದೇಷ ನಾಥ ಪಥಿಕಃ ಸೋಚ್ಛ್ವಾಸಮಾಕರ್ಣಯನ್-
ದೋಲಾನ್ದೋಲನಯೇವ ಚಂಚಲಧಿಯಾ ನೋಯಾತಿ ನೋನ್ನೂಚ್ಯತೇ ॥ ೩೦ ॥

ಗಾಯತ್ಯದ್ರಿಶಿರಸ್ತರೌ ದಲಪುಟೇ ನಿಃಶ್ವಸ್ಯ ವಿದ್ಯಾಧರೀ
ಕಾಕಲ್ಯಾತಿಲಕಂ ವಿಯೋಗವಿದುರಾ ಬಾಷ್ಪಾಕುಲೈಷಾ ಪುರಃ ।
ನಾಥೋತ್ಸಂಗಗೃಹೇ ಗೃಹೀತಚಿಬುಕಂ ಸ್ಮೇರಂ ಭವಚ್ಚುಂಬನಂ-
ಸ್ಮೃತ್ವಾಸ್ವಾದ್ಯ ರಸಾಯನಂ ಹತಸಮಾ ನೀತಾ ಮಯೈತಾ ಇತಿ ॥ ೩೧ ॥

ಅಸ್ಯಾಃ ಪ್ರಾಗ್ಭವಸತ್ಪತಿಃ ಸ ಮುನಿನಾ ಶಾಪೇನ ವೃಕ್ಷೀಕೃತೋ
ವರ್ಷದ್ವಾದಶಕಂ ತದೇವ ಗಣಯಂತ್ಯೇಷ್ಯೈವ ಸಾತ್ರ ಸ್ಥಿತಾ ।
ಗಾಯತ್ಯುತ್ಕಲಿತಾ ತದೇವ ದಯಿತಂ ತಂ ಪಾದಪಂ ಸಂಶ್ರಿತಾ
ಮಾರ್ಗೇ ಮಾರ್ಗವಿಹಾರಿಣಾಂ ವದನತೋ ರಾಜನ್ಮಮೈತಚ್ಛ್ರುತಂ ॥ ೩೨ ॥

---

೩೦. (ಇನ್ನೊಂದು ಚಿತ್ರವನ್ನು ನೋಡು) ವಿದ್ಯಾಧರ ಸ್ತ್ರೀಯೊಬ್ಬಳು ವಿಯೋಗಹತಳಾಗಿ, ಕತ್ತಿನಿಂದ ಹೊರಡದೆ ಇದ್ದರೂ ಕಷ್ಟದಿಂದ, ಸೋತ್ಕಂಠಳಾಗಿ ಗಟ್ಟಿಯಾಗಿ ನಿಟ್ಟುಸಿರುಬಿಡುತ್ತ ಶಿಖರದ ಎತ್ತರವಾದ ಮರದ ತಲೆಯ ಮೇಲಿನ ಪಲ್ಲವಪುಟದಲ್ಲಿ ಕುಳಿತು ಕಾಂತನ ಹೆಸರನ್ನು ಹಿಡಿದು ಹಾಡಿದಳು. ಅವಳ ನಾಥನು ದಾರಿಯಲ್ಲಿ ಹೋಗುತ್ತಿದ್ದು ಅದನ್ನು ಕೇಳಿ ನಿಟ್ಟುಸಿರುಬಿಟ್ಟು, ಉಯ್ಯಾಲೆಯಂತೆ ಮನಸ್ಸು ಚಂಚಲವಾಗಿರಲು ಬೆಟ್ಟದ ಮೇಲಕ್ಕೆ ಹೋಗಲಿಲ್ಲ: ಅವನ ಜೊತೆಯಲ್ಲಿದ್ದವರೂ ಅವನನ್ನು ಹೋಗು ಎನ್ನಲಿಲ್ಲ.

೩೧. ಅದ್ರಿಶಿರಸ್ತರುವಿನ ದಲಪುಟದಲ್ಲಿ ವಿದ್ಯಾಧರಿಯು ಕಣ್ಣಿನಲ್ಲಿ ನೀರಿಟ್ಟು ಕೊಂಡು, ಹಣೆಯಲ್ಲಿ ತಿಲಕವಿಲ್ಲದಿರುವುದನ್ನೂ ಲಕ್ಷಿಸದೆ, ವಿಯೋಗ ವಿಧುರಳಾಗಿ ದೊಡ್ಡದಾಗಿ ಹೀಗೆಂದು ಅಳುತ್ತಿರುವಳು: "ನಾಥ ನೀನು ನನ್ನನ್ನು ತೊಡೆಯ ಮೇಲೆ ಮಲಗಿಸಿಕೊಂಡು ಚಿಬುಕವೆನ್ನೆತ್ತಿ ನಗುತ್ತ ಚಲಂಬಿಸಿದೆ: ಆ ರಸಾಯನವನ್ನು ಈಗಲೂ ಸ್ಮರಣ ಮಾತ್ರದಿಂದಲೇ ಆಸ್ವಾದಿಸುತ್ತ ಈ ಹಾಳು ವರ್ಷವನ್ನೆಲ್ಲ ಕಳೆದಿರುವೆನೆಲ್ಲಾ !

೩೨. ಯುವಕನಾಗಿದ್ದ ಇವಳ ಗಂಡನು ಮುನಿಯ ಶಾಪದಿಂದ ವೃಕ್ಷವಾಗಿರುವನು: ಅವನು ಆ ಜನ್ಮದಲ್ಲಿ ಹನ್ನೆರಡು ವರ್ಷಗಳನ್ನು ಕಳೆಯಬೇಕಾ

ಪಶ್ಯೈಷ ಸೋಽಸ್ಮದವಲೋಕನಶಾಂತಶಾಪೋ
ವಿದ್ಯಾಧರೋ ವಿಟಪಿತಾಮವಮುಚ್ಯ ಬಾಲಾಂ ।
ಕಂಠೇಕರೋತಿ ವಿಟಪಾಕೃತಿವಿಪ್ರಲಂಬೈ-
ಸ್ತೈರೇವ ಬಾಹುಭಿರಲಂ ಸ್ಫುಟಪುಷ್ಪಹಾಸಃ ॥ ೩೩ ॥

ಶಿಖರಿಣಾಂ ಕರಿಣಾಂ ಕುಸುಮೋತ್ಕರೋ
ವಿಟಪಿಷು ಸ್ಫುಟರೋಮಸು ರಾಜತೇ ।
ಗಗನ ವಿಚ್ಯುತತಾರಕಲೀಲಯಾ
ಶಿಖರಮೇಷ ತುಷಾರಸಮಾನಯಾ ॥ ೩೪ ॥

ಮೀನಾವಲೀಸರಭಸಪ್ಲುತಿಘಟ್ಟಿತಾಂಬು-
ವೀಚೀವಿಲೋಲವಿರುವತ್ಕುರರೀಕರಾಲಾ ।
ಕಾವೇರ್ಯಹೋ ಕುಸುಮಶುಕ್ಲಪಟಾವಭಾತಿ
ನಿಃಶಂಕರಂಕುಲಸಂಕುಲಕೂಲಕಚ್ಛಾ ॥ ೩೫ ॥

---

ಗಿರುವುದು. ಇವಳು ಅದನ್ನು ಲೆಕ್ಕಿಸುತ್ತಾ ಅಲ್ಲಿಯೇ ತನ್ನ ದಯಿತನಾಗಿದ್ದ ಆಪಾದಪವನ್ನೇ ಆಶ್ರಯಿಸಿಕೊಂಡು, ಉತ್ಕಂಠಿತಳಾಗಿ, ಹಾಡುತ್ತಿರುವಳು" ಎಂದು. ಆ ಮಾರ್ಗದಲ್ಲಿ ಹೋಗಿ ಬರುವವರಿಂದ, ಎಲೈ ರಾಜನೆ, ಕೇಳಿದೆನು.

೩೩. ಎಲೈ ಅರಸನೆ, ನೋಡು ನೋಡು, ಆ ವಿದ್ಯಾಧರನು ನಮ್ಮನ್ನು ನೋಡಿ ಶಾಂತ ಶಾಪನಾಗಿ, ವೃಕ್ಷತ್ವವನ್ನು ಕಳೆದುಕೊಂಡರೂ ವಿಟಪಾಕೃತಿಯನ್ನೇ ಅವಲಂಬಿಸಿ ಪುಷ್ಪಗಳ ವ್ಯಾಜದಿಂದ ನಗುತ್ತಾ, ಆ ವಿಟಪ ಬಾಹುಗಳಿಂದಲೇ ಅವುಗಳನ್ನು ಆಲಿಂಗಿಸುವನು.

೩೪. ಶಿಖರಿಗಳೆಂಬ ಕರಿಗಳ ಸ್ಫುಟ ರೋಮದಂತಿರುವ ಮರಗಳಲ್ಲಿ ವಸಂತ ಸಮಯವು ರಾಜಿಸುತ್ತಿರುವುದು. ಶಿಖರಗಳಲ್ಲಿ ನಿಂತ ಮೇಷ ಮಾಸದ ತುಷಾರವು ಗಗನದಿಂದ ಬಿದ್ದ ತಾರಕೆಗಳು ಎಂಬಂತಿರುವುವು.

೩೫ ಕಾವೇರೀ ನದಿಯು ಮೀನುಗಳ ಗುಂಪುಗಳು ಸರಭಸದಿಂದ ಹಾರಾಡುತ್ತ ಘಟ್ಟಿಸಿದಾಗ ಹುಟ್ಟುವ ತರಂಗಗಳಲ್ಲಿ ಆಟವಾಡುತ್ತಾ ಹಾಡುತ್ತಾ ಇರುವ ಕುರರೀ ಪಕ್ಷಿಗಳಿಂದ ಕರಾಲವಾಗಿ, ಕುಸುಮವೆಂಬ ಶುಕ್ಲಪಟವುಳ್ಳವಳಾಗಿ

ಭಾತ್ಯತ್ರ ಪಶ್ಯ ರವಿಣಾ ಕಟಕೇ ಸುವೇಲ-
ಶೈಲಸ್ಯ ಕಾಂಚನಶಿಲಾ ಸಕಲಾಮಲಶ್ರೀಃ ।
ವೇಲಾವಲೋಲವರುಣಾಲಯ ವೀಚಿಭಂಗ-
ಪರ್ಯಸ್ತವಾಡವಕೃಶಾನುಕಣೋಪಮಾನಂ ॥ ೩೬ ॥

ಆಸನ್ನಪೇನಜಲದಾವಲಿತಾಲಯಾನಾಂ
ಗೇಹೋಪಶಲ್ಯಪರಿಫುಲ್ಲವನದ್ರುಮಾಣಾಂ ।
ಲಕ್ಷ್ಮೀಃ ಪಲಾಶಪಟಲಾವಲಿತಾಂಬರಾಣಾಂ
ಘೋಷೌಕಸಾಂ ಸಮಲೋಕಯ ಪರ್ವತೇಷು ॥ ೩೭ ॥

ಉನ್ನಿದ್ರಪುಷ್ಪಪಟುಪಾಂಡುರಪುಷ್ಪಖಂಡಾ
ಮಂದಾರಭಾಂಡವಿಶಿಖಂಡಿಕರಂಡಕಚ್ಛಾಃ ।
ಗ್ರಾಮಾಃ ಪ್ರಪಾತಜಲಜಾಲವಿಲಾಸವಾದ್ಯಾ
ವಲ್ಗದ್ಗುಹಾಗಹನಗೀತಜನಾ ಜಯಂತಿ ॥ ೩೮ ॥

---

ನಿಶ್ಶಂಕೆಯಿಂದ ಕೂಲಗಳಲ್ಲಿ ತಿರುಗುವ ರಂಕುಮೃಗ ಸಂಕುಲಗಳನ್ನುಳ್ಳವಳಾಗಿ ಮೆರೆಯುತ್ತಿರುವಳು.

೩೬. ಸುವೇಲ ಪರ್ವತದ ಕಟಕದಲ್ಲಿರುವ ಕಾಂಚನ ಶಿಲೆಯು ನಿರ್ಮಲವಾದ ಸಕಲ ಸೌಭಾಗ್ಯಗಳೂ ಉಳ್ಳುದಾಗಿ ಸೂರ್ಯನ ಕಾಂತಿಯಿಂದ ಹೊಳೆಯುತ್ತ ತಟಗಳಲ್ಲಿ ಬಂದು ಬಡಿಯುವ ಸಮುದ್ರದ ತರಂಗಗಳು ಆರಿಸಬೇಕೆಂದು ಯತ್ನಿಸುವ ಬಡಬಾಗ್ನಿಯ ಒಂದು ತುಂಡೋ ಎಂಬಂತಿರುವುದು.

೩೭. ಪರ್ವತಗಳ ಮೇಲೆ ಇರುವ ಗ್ರಾಮವಾಸಿಗಳ ಮನೆಗಳನ್ನು ಕೊಬ್ಬಿದ ಮೇಘಗಳು ಬಂದು ಮುತ್ತುವುವು: ಆ ಮನೆಗಳ ಸುತ್ತಲೂ ಹೂವು ಬಿಟ್ಟಿರುವ ವನತರುಗಳು ಇರುವುವು. ಅವರು ಪಲಾಶಪಟಲಗಳನ್ನು ಉಟ್ಟಿರುವರು. ಅವರ ಸೊಬಗನ್ನು ನೋಡು.

೩೮. ಆ ಗ್ರಾಮಗಳ ಪುಷ್ಪವಾಟಿಕೆಗಳು ಅರಳಿರುವ ಪುಷ್ಪಗಳಿಂದ ಅತಿ ಶುಭ್ರಗಳಾಗಿರುವುವು. ಮಂದಾರ ವೃಕ್ಷಗಳೆಂಬ ಪುಷ್ಪಭಾಂಡಗಳು ಕುಣಿಯುವ ನವಿಲುಗಳಿಗೆ ತಂಪಾದ ಕ್ರೀಡಾಕ್ಷೇತ್ರಗಳಾಗಿರುವುವು: ಪ್ರಪಾತಗಳಿಂದ ಧುಮುಕುವ ಜಲಜಾಲಗಳೆಂಬ ವಿಲಾಸ ವಾದ್ಯಗಳುಳ್ಳವಾಗಿ, ಗುಹೆಗಳಲ್ಲಿ ಹಾಡುವ ಜನಗಳುಳ್ಳವಾಗಿ ಆ ಗ್ರಾಮಗಳು ವಿರಾಜಿಸುತ್ತಿರುವರು.

ಉನ್ನಿದ್ರಕಂದಲದಲಾಂತರಲೀಯಮಾನ-
ಕೂಜನ್ಮದಾಂಧಮಧುಪೋನ್ಮದಪಾಮರಾಣಾಂ ।
ಮನ್ಯೇ ನ ಸಾ ಭವತಿ ತುಷ್ಟಿರಿಹಾಮರಾಣಾಂ
ಯಾ ಗೋಕುಲೇಷು ಗಿರಿಗಹ್ವರಿಣಾಂ ನರಾಣಾಂ ॥ ೩೯ ॥

ಭೃಂಗಾವದೋಲಿತಲತಾಕುಲಕಾನನಾಂತ-
ರ್ಗಾಯತ್ಪುಲಿಂದದಯಿತಾನನದತ್ತನೇತ್ರಂ ।
ಲೀಲಾಕುಲಾ ಗತಘೃಣಂ ಗಿರಿಗಹ್ವರೇಷು
ಕಿಂ ಘ್ನಂತಿ ಶತ್ರುಮಿವ ಮುಗ್ಧಮೃಗಂ ಕಿರಾತಾಃ ॥ ೪೦ ॥

ನಾನಾವಿಕಾಸಿಕುಸುಮೋತ್ಕರಸಾರಲಬ್ಧ-
ವಲ್ಲೀದಲಾವಲನಶೀತಲಿತಾಧ್ವಗಾಂಗಾಃ ।
ಸಾಂಭಃ ಪಥಪ್ರಸರಣೇನ ತರತ್ತರಂಗಾ
ಗ್ರಾಮಾ ಗಿರೀಂದ್ರಗಹನೇಷು ಜಯಂತಿ ಚಂದ್ರಂ ॥ ೪೧ ॥

---

೩೯. ಈ ಗ್ರಾಮಗಳ ಗೋಕುಲಗಳಲ್ಲಿ ಅರಳುತ್ತಿರುವ, ಹೂವುಗಳ ದಳಗಳಲ್ಲಿ ಮುಳುಗಿ, ಕೂಗುತ್ತ, ಮದಾಂಧರಾದ ದುಂಬಿಗಳ ಹಾಡುಗಳಿಂದ ಉದ್ದೀಪಿತ ಕಾಮರಾದ ಪಾಮರರಿಗೆ, ಆ ಗಿರಿ ಗಹ್ವರಗಳಲ್ಲಿ ದೊರಕುವ ತೃಪ್ತಿಯು ನಂದನದಲ್ಲಿ ಕ್ರೀಡಿಸುವ ಅಮರರಿಗೂ ದೊರಕುವುದೋ ಇಲ್ಲವೋ ?

೪೦. ಗಿರಿಗಹ್ವರಗಳಲ್ಲಿ ಭೃಂಗಗಳು ಉಯ್ಯಾಲೆಯಾಡುವ ಲತೆಗಳಿಂದ ಆಕುಲವಾಗಿರುವ ಕಾನನಗಳಲ್ಲಿ ಹಾಡುತ್ತಿರುವ ಪುಲಿಂದ ಕಾಂತೆಯರನ್ನು ನೋಡುತ್ತಿರುವ ಮುಗ್ಧಮೃಗಗಳನ್ನು, ಲೀಲಾಪರರಾದ ಕಿರಾತರು ನಿರ್ದಯರಾಗಿ ಶತ್ರುವನ್ನು ಹೇಗೋ ಹಾಗೆ ಕೊಲ್ಲುವದೇನು ?

೪೧. ಅರಳಿರುವ ನಾನಾ ಕುಸುಮಗಳಿಂದ ಗಂಧವನ್ನು ಪಡೆದು, ಲತೆಗಳ ಚಿಗುರುಗಳನ್ನು ತಬ್ಬಿಕೊಂಡು ತಂಪನ್ನು ಪಡೆದಿರುವ ಮೈಗಳುಳ್ಳವಾಗಿ, ಹಾದಿಯಲ್ಲಿ ಹರಡಿರುವ ನೀರಿನ ಅಲೆಗಳನ್ನು ದಾಟಿ ಬರುವ ವಾಯುಗಳಿಂದ ಆ ಗ್ರಾಮಗಳು ಚಂದ್ರನಿಗೂ ಮೀರಿದ ತಂಪನ್ನುಳ್ಳವಾಗಿರುವುವು.

ಕೂಜನ್ನಿರ್ಜರವಾರಯಃ ಪರಿಸರತ್ಫ್ರೋನ್ನಿದ್ರತಾಲದ್ರುಮಾ
ಹೇಲೋಲ್ಲಾಸಿತಪುಷ್ಪಪಲ್ಲವವಲದ್ವಲ್ಲೀವಿತಾನಾಂಬರಾಃ ।
ಪರ್ಯಂತೋನ್ನತಸಾಲಲಂಬಿಜಲದಾ ರಮ್ಯಾ ಗಿರಿಗ್ರಾಮಕಾ-
ಶ್ಚಂದ್ರಾಶ್ವತ್ಥಮಿತಾವನಿಂ ಶಶಿಪುರೋದ್ಯಾನಸ್ಯ ಭಾಗಾ ಇವ ॥೪೨॥

ಆಸನ್ನಪೀತಘನಘರ್ಘರಮೇಘನಾದ-
ನೃತ್ಯಚ್ಛಿಖಂಡಿನವತಾಂಡವವಿಪ್ರಕೀರ್ಣೈಃ ।
ಗ್ರಾಮಾಃ ಕಲಾಪಿಕುಲಕೋಮಲಬರ್ಹಖಂಡೈ
ಪ್ರೋಡ್ಡೀನಚಂದ್ರಕಮಣಿಪ್ರಕರಾ ಜಯಂತಿ ॥ ೪೩ ॥

ಪಾರ್ಶ್ವಸ್ಥಚಾರುಶಶಿಮಂಡಲಮಂಡನೇಷು-
ವಿಶ್ರಾಂತವಾರಿ ಗುರುವಾರಿದವಾರಣೇಷು ।
ಗ್ರಾಮೇಷು ಯಾಗಿರಿತಟೇಷು ವಿಲಾಸಲಕ್ಷ್ಮೀ
ರಾಜ್ಯೇಷು ಸಾ ವಿಭವವತ್ಸು ಕುತೋ ವಿರಿಂಚೇಃ ॥ ೪೪ ॥

---

೪೨. ನಿರ್ಝರಗಳ ನೀರುಗಳು ಹಾಡುವುವು ಅವುಗಳ ಮಗ್ಗುಲಲ್ಲಿ ಹೂವು ಬಿಟ್ಟ ತಾಲದ್ರುಮಗಳು; ಲೀಲೆಯಿಂದಲೂ ಉಲ್ಲಾಸದಿಂದಲೂ ಪುಷ್ಪಪಲ್ಲವಗಳಿಂದ ಕೂಡಿ ನಲಿಯುತ್ತಿರುವ ಬಳ್ಳಿಗಳು ಆಕಾಶಕ್ಕೆ ತೋರಣಕಟ್ಟಿದಂತಿರುವುವು : ಗ್ರಾಮಗಳ ಕೊನೆಯಲ್ಲಿ ಬೆಳೆದಿರುವ ಸಾಲವೃಕ್ಷಗಳಲ್ಲಿ ಜಲದಗಳು ಆಶ್ರಯವನ್ನು ಹೊಂದಿರುವುವು. ಹೀಗೆ ರಮ್ಯಗಳಾದ ಆ ಗಿರಿ ಗ್ರಾಮಗಳು ಶಶಿಪುರದ ಉದ್ಯಾನದ ಚಂದ್ರಾಶ್ವತ್ಥವಿರುವ ಭಾಗಗಳೋ ಎಂಬಂತೆ ಇರುವುವು.

("ಸೋಽಶ್ವತ್ಥಃ ಸೋಮಸರ್ವಃ" ಇತಿ ಶ್ರುತೇಶ್ಚಾಂದ್ರಾಸ್ಸೃತ ಸ್ರಾವಿಣಾ ಅಶ್ವತ್ಥೇನ ಮಿತಾಂ ಬ್ರಹ್ಮಲೋಕಾವನಿಂ ಚ ಜಯಂತೀತ್ಯನುಷಜ್ಜ್ಯತೇ—ತಾ.ಪ್ರ)

೪೩. ಮೇಘಗಳು ಮಿಂಚುಗಳಿಂದ ಕೂಡಿ, ಘನವಾಗಿ ಗುಡುಗಲು, ಅದನ್ನು ಕೇಳಿ ನವಿಲುಗಳು ಹೊಸದಾಗಿ ತಾಂಡವವನ್ನು ಆರಂಭಿಸುವುವು. ಕೋಮಲವಾದ ಗರಿಗಳ ತುಂಡುಗಳು ಆಗ ಉದುರುವುವು. ಆಗ ಚಂದ್ರನಂತಿರುವ ಮಣಿಗಳು ಹಾರಾಡುತ್ತಿರುವಂತೆ ಕಾಣುವುವು. ಇಂತಹ ಗಿರಿಗ್ರಾಮಗಳು ವಿರಾಜಿಸುವುವು.

೪೪. ಆ ಗಿರಿತಟಗಳಲ್ಲಿ ಒಂದು ಪಾರ್ಶ್ವದಲ್ಲಿ ಮನೋಹರವಾದ ಶಶಿಮಂಡಲವು ಅಲಂಕಾರವಾಗಿರಲು, ಇನ್ನೊಂದು ಪಾರ್ಶ್ವದಲ್ಲಿ ನೀರಿನ ಭಾರವನ್ನು

ಸ್ವಾಮೋದನಂದನ ವನಾಂತರ ಸುಂದರೇಷು
ಸಂತಾನಕಸ್ತಬಕಹಾಸಿನಿಕುಂಜಕೇಷು ।
ಉನ್ನಿದ್ರಮಂದ್ರಮಧುಪಾಕುಲಪಾರಿಭದ್ರ-
ಸಾಂದ್ರದ್ರುಮೇಷ್ವಭಿರಮೇ ಗಿರಿಗಹ್ವರೇಷು　　॥ ೪೫ ॥

ಹರಿಣೀರಾವರಮ್ಯೇಷು ಹಾರಿರಾರೀತಹಾರೀಷು ।
ಗಿರಿಗ್ರಾಮೇಷು ಪುಷ್ಪೇಷು ಪುರೇಷ್ವಿವ ರತಿರ್ನೃಣಾಂ　　॥ ೪೬ ॥

ಸ್ಫಾಟಿಕಸ್ತಂಭಸಂಭಾರರಮ್ಯನಿರ್ಝರವಾರಿಣಿ ।
ನೃತ್ಯಂತ್ಯೇತಾಃ ಶಿಖಂಡಿನ್ಯಃ ಪಶ್ಯಾಸ್ಮಿನ್ಗ್ರಾಮಗಹ್ವರೇ　　॥ ೪೭ ॥

ಶಿಖಂಡಿನ್ಯೋ ವಿಲಾಸಿನ್ಯಃ ಪುಷ್ಪಭಾರನತಾ ಲತಾಃ ।
ಅತ್ರ ನೃತ್ಯಂತಿ ಕುಂಜೇಷು ರಣನಿರ್ಝರಪುಷ್ಕರೇ　　॥ ೪೮ ॥

---

ಹೊರುತ್ತಿರುವ ಮೋಡಗಳೆಂಬ ಆನೆಗಳಿರಲು, ವಿರಿಂಚಿಯ ವಿಭವ ಸಂಪನ್ನವಾದ ರಾಜ್ಯಗಳಲ್ಲಿಯೂ ಇಲ್ಲದ ವಿಲಾಸ ಲಕ್ಷ್ಮಿಯು ಆ ಗ್ರಾಮಗಳಲ್ಲಿ ಇರುವಳು.

೪೫. ಸುಗಂಧ ಭರಿತವಾದ ನಂದನವನದಂತೆ ಸುಂದರವಾದ, ಸಂತಾನ ವೃಕ್ಷದ ಸ್ತಬಕವನ್ನು ಹಾಸ್ಯಮಾಡುವ ನಿಕುಂಜಗಳಲ್ಲಿ, ಎಚ್ಚೆತ್ತು ಮಂದ್ರದಲ್ಲಿ ಕೂಗುತ್ತಿರುವ ಮಧುಪಗಳಿಂದ ಕೂಡಿದ ಪಾರಿಭದ್ರ ವೃಕ್ಷಗಳ ಸಾಂದ್ರವಾದ ತೋಪುಗಳುಳ್ಳ ಗಿರಿಗಹ್ವರಗಳಲ್ಲಿ ಅಭಿರಮಿಸುವೆನು.

(ಪಾರಿಭದ್ರಾ, ನಿಂಬತರುರೂಪಾಃ ದ್ರುಮಾಃ —ತಾ. ಪ್ರ.)

೪೬. ಹರಿಣಿಯ ಕೂಗಿನಿಂದ ರಮ್ಯವಾಗಿ, ಮನೋಹರವಾದ ಹಾರೀತಕೀ ಪುಷ್ಪಗಳ ಹಾರಗಳುಳ್ಳ, ಗಿರಿಗ್ರಾಮಗಳಲ್ಲಿ ಮನ್ಮಥನ ಪುರಗಳಲ್ಲಿ ಹೇಗೋ ಹಾಗೇ ನರರು ಸಂತೋಷಪಡುವರು.

೪೭. ಈ ಗ್ರಾಮಗಹ್ವರದಲ್ಲಿ ಸ್ಫಟಿಕದ ಸ್ತಂಭಗಳ ಗುಂಪಿನಂತೆ ರಮ್ಯವಾದ ನಿರ್ಝರ ವಾರಿಗಳಲ್ಲಿ ಈ ಹೆಣ್ಣು ನವಿಲುಗಳು ಕುಣಿಯುತ್ತಿರುವುವು ನೋಡು.

೪೮. ವಿಲಾಸ ಮಾಡುವ ಹೆಣ್ಣು ನವಿಲುಗಳು, ಪುಷ್ಪಭಾರದಿಂದ ಬಗ್ಗಿರುವ ಲತೆಗಳು ಎರಡೂ ನಿರ್ಝರವೆಂಬ ಪುಷ್ಕರ ವಾದ್ಯದ ಶಬ್ದಕ್ಕೆ ಕುಂಜಗಳಲ್ಲಿ ಕುಣಿಯುವುವು.

ಹಾರೀತಹಾರಿಹರಿತೋಪವನದ್ರುಮಾಸು
ವಾಪೀಪ್ರಮಾಣರಣಿತಾಮಲಕಾಕಲೀಷು ।
ಗ್ರಾಮಸ್ಥಲೀಷು ಗಿರಿಗಹ್ವರಗೋಪಿತಾಸು–
ಮನ್ಯೇ ಮುದೈಷ ರಮತೇ ಸ್ವರಸೇನ ಕಾಮಃ ॥ ೪೯ ॥

ಶ್ರೀಮದ್ವೃತ್ತಮಹಾಶಯಾತಪಹರ ಪ್ರೋಚ್ಚೈರ್ಗಭೀರಾಕೃತೇ
ಭೂಭೃನ್ಮೂರ್ಧಸು ಭೂಷಣಂ ಭವಸಿ ಭೋ ಭೂಮೇ ರಸೈಕಾಸ್ಪದಂ ।
ಏತತ್ತು ಕ್ಷಪಯೇನ್ಮನಾಂಸಿ ಯದಿದಂ ಮೇಘ ತ್ವಯಾ ವರ್ಷತಾ–
ಹರ್ಷಾದೂಷರಪಲ್ವಲಸ್ಥಲತರುಷ್ವಂಭೋವಿಭಾಗಕ್ರಮಃ ॥ ೫೦ ॥

---

೪೯. ಹಾರೀತಗಳೆಂಬ ಪಕ್ಷಿಭೇದಗಳಿಂದ ಮನೋಹರವಾಗಿರುವ ಹಸುರು ಬಣ್ಣದ ಉಪವನ ವೃಕ್ಷಗಳುಳ್ಳ, ವಾಪಿಗಳಲ್ಲಿ ಪ್ರಮಾಣಬದ್ಧವಾಗಿ ಕೂಗುವ ಪಕ್ಷಿಗಳ ಶುದ್ಧವಾದ ಮನೋಹರ ಧ್ವನಿಗಳುಳ್ಳ, ಗಿರಿಗಹ್ವರಗಳಲ್ಲಿ ಅಡಗಿರುವ ಗ್ರಾಮಸ್ಥಲಿಗಳಲ್ಲಿ ಕಾಮನು ಬಹು ಸಂತೋಷದಿಂದ ಕ್ರೀಡಿಸುವನು ಎಂದುಕೊಳ್ಳುವೆನು.

೫೦. ಶ್ರೀಮಂತರಂತೆ ವೃತ್ತಿಯುಳ್ಳ ಮಹಾಶಯನೆ, ಆತಪ ಹರನೆ, ಅತ್ಯಂತ ಗಭೀರಾಕೃತಿಯುಳ್ಳವನೆ, ಎಲೈ ಮೇಘನೆ, ನೀನು ಭೂಭೃತ್ (ಪರ್ವತ-ಕ್ಷತ್ರಿಯು ಶಿರಸ್ಸುಗಳಲ್ಲಿ ಭೂಷಣವಾಗಬಲ್ಲವನು. ಭೂಮಿಯು ಬೆಳೆಯಬೇಕಾದರೆ ಅವಶ್ಯವಾದ ಜೀವನಕ್ಕೆ ಏಕಾಸ್ಪದನಾಗಿರುವವನು. ಆದರೂ ಒಂದು ಮಾತ್ರ ಸಜ್ಜನರ ಮನಸ್ಸನ್ನು ಕೊರೆಯುವುದು. ನೀನು ಹರ್ಷವಾಗಿ ಮಳೆಗರೆಯುವಾಗ, ಊಷರವಿದು, ಪಲ್ವಲವಿದು, ದಿಣ್ಣೆಯಿದು, ಕಂಟಕ ತರುವಿದು ಎಂಬುದನ್ನು ನೋಡಿ ನೀರನ್ನು ಅದದಕ್ಕೆ ತಕ್ಕಂತೆ ಹಂಚುವಿದಲ್ಲವಲ್ಲ ?

(ಆಸರ್ಗಸಮಾಪ್ತೇರಿತ ಆರಭ್ಯ ಪ್ರಾಯೇಣ ಅನ್ಯಾಪದೇಶಾ ಬೋಧ್ಯಾಃ.... ಏತತ್ತೇ ಸದಸತ್ಪಾತ್ರ ವಿಭಾಗಾ ಪರಿಜ್ಞಾನಂತು ಸತ್ತಾಂ ಮನಃ ಕ್ಷಪಯೇತ್ ಪೀಡಯೇತ್ । ಯದಿಭವಾದೃಶಾ ಮಹಾಂತೋಽಪಿ ಸುಪಾತ್ರಗುಣೋತ್ಕರ್ಷಂ ನ ಮಾನಯಂತಿ ತರ್ಹಿ ಅನ್ಯೇ ಕೇ ಮಾನಯಿಷ್ಯಂತೀತಿ ಭಾವಃ । —ತಾ. ಪ್ರ.)

ನಿತ್ಯಂ ಸ್ನಾಸಿ ಸುತೀರ್ಥವಾರಿವಿಸರೈರುಚ್ಚೈಃಪದಸ್ಥೋಽಂಬುದ
ಶುದ್ಧಃ ಸನ್ವಿಪಿನಾವನೌ ನಿವಸಸಿ ಪ್ರಾರಬ್ಧಮೌನವ್ರತಃ ।
ರಿಕ್ತಸ್ಯಾಪ್ಯತಿಕಾಂತಿರೇವ ಭವತಃ ಕಾಯಾಶ್ರಯಾಲಕ್ಷ್ಯತೇ-
ಪ್ರೋತ್ಥಾಯಾಶನಿಮಾತನೋಷಿ ಕಿಮಿದಂ ತುಚ್ಛಂ ತವಾಚೇಷ್ಟಿತಂ ॥ ೫೧ ॥

ವಸ್ತ್ವಸ್ಥಾನಗತಂ ಸರ್ವಂ ಶುಭಮಪ್ಯಶುಭಂ ಭವೇತ್ ।
ದುರ್ಮೇಘಂ ಸ್ಥಾನಮಾಸಾದ್ಯ ವಾರಿ ತ್ವಸಿತತಾಂ ಗತಂ ॥ ೫೨ ॥

ಅಹೋ ನು ಮೇಘೇನ ಜಲಂ ವಿಮುಕ್ತ
ಮಹೋನು ತೋಯೇನ ವಿಪೂರಿತಾ ಭೂಃ ।
ಅಹೋ ನು ಭೂಮೌ ಪರಿಪೋಷಿತಶ್ಚ-
ಜಲೈರ್ಧನಾಢ್ಯೈಃ ಪ್ರಣಯೀವ ದೀನಃ ॥ ೫೩ ॥

---

೫೧. ಎಲೈ ಮೇಘವೆ, ನೀನು ನಿತ್ಯವೂ ಸುತೀರ್ಥಗಳ ಜಲಗಳಲ್ಲಿಯೇ ಸ್ನಾನಮಾಡುವೆ. ಯಾವಾಗಲೂ ಉಚ್ಚಪದದಲ್ಲಿಯೇ ಇರುವೆ; ಶುದ್ಧನಾಗಿ, ವಿಪಿನ ಭೂಮಿಗಳಲ್ಲಿ ಮೌನವ್ರತ ಧಾರಣಮಾಡಿ ವಾಸವಾಗಿರುವೆ. ನೀನು ರಿಕ್ತನಾದಾಗಲೂ ಶುದ್ಧವಾದ ಅತಿಕಾಂತಿಯು ನಿನ್ನ ದೇಹದಲ್ಲಿ ಕಾಣುವುದು. ಹೀಗಿದ್ದರೂ ದಾನ ಮಾಡುವುದಕ್ಕೆ ಹೊರಟಾಗ ಮಾತ್ರ ಸಿಡಿಲುಗಳಿಂದ ಹೊಡೆಯುವೆ. ನೀನು ಇಂತಹ ತುಚ್ಛವಾದ ವ್ಯಾಪಾರವನ್ನು ಮಾಡಬಹುದೇ ?

೫೨. ಅಸ್ಥಾನಗತವಾದ ವಸ್ತುವು ಶುಭವಾದರೂ ಅಶುಭವೇ ಆಗುವುದು. ದುರ್ಮೇಘವೆಂಬ ಸ್ಥಾನವನ್ನು ಪಡೆದು ನೀರು ಕಪ್ಪಾಗುವುದು.

೫೩. ಅಹೋ, ಮೇಘವು ಜಲವನ್ನು ಕರೆದೇ ಕರೆಯಿತು. ಅಹೋ, ಭೂಮಿಯೆಲ್ಲವೂ ಜಲಮಯವಾಯಿತು. ಅಹೋ ಭೂಮಿಯಲ್ಲಿ ಜಲಗಳಿಂದ ಧನಾಢ್ಯರು ತಮಗೆ ಬೇಕಾದ ದೀನರನ್ನು ಪೋಷಿಸುವಂತೆ, ದೀನವಾದ ಸಸ್ಯಾದಿಗಳೇ ಪರಿಪೋಷಿತವಾದುವು.

ನೈರ್ಘೃಣ್ಯಮಸ್ಥೈರ್ಯಮಥಾಶುಚಿತ್ವಂ
ರಥ್ಯಾಚರತ್ವಂ ಪರಿಕುತ್ಸಿತತ್ವಂ ।
ಶ್ವಭ್ಯೋ ಗೃಹೀತಂ ಕಿಮು ನಾಮ ಮೂರ್ಖೈ-
ರ್ಮೂರ್ಖೇಭ್ಯ ಏವಾಥ ಶುನಾ ನ ಜಾನೇ ॥ ೫೪ ॥

ಗುಣೈಃ ಕತಿಪಯೈರೇವ ಬಹುದೋಷೋಽಪಿ ಕಸ್ಯಚಿತ್ ।
ಉಪಾದೇಯೋ ಭವತ್ಯೇವ ಶೌರ್ಯಸಂತೋಷಭಕ್ತಿಭಿಃ ॥ ೫೫ ॥

ಉನ್ಮತ್ತಮತ್ತಪತನೋನ್ಮುಖಧಾವಮಾನ
ಮಾನಾಧಿಕಾನ್ವಿಷಯವೀಥಿಷು ಮುಕ್ತಮೂರ್ತಿಃ ।
ಯನ್ಮನ್ಯತೇ ತೃಣಲವಾಗ್ರವಿಲೋಕಯೇಚ್ಛಾ-
ಸತ್ವಂ ಜಡತ್ವಮುತ ವಾಸ್ಯ ವಿಚಾರ್ಯತಾಂ ತತ್ ॥ ೫೬ ॥

---

೫೪. ನೈರ್ಘೃಣ್ಯ, ಅಸ್ಥೈರ್ಯ, ಅಶುಚಿತ್ವ, ಬೀದಿ ತಿರುಗುವುದು, ಪರಿಕುತ್ಸಿತತ್ವ ಎಂಬ ಈ ದುರ್ಗುಣಗಳನ್ನು ಮೂರ್ಖರಿಂದ ನಾಯಿಯು ಕಲಿಯಿತೋ, ನಾಯಿಯಿಂದ ಮೂರ್ಖರು ಕಲಿತರೋ ನಾನು ಕಾಣೆ.

೫೫. ಕೆಲವು ಒಳ್ಳೆಯ ಗುಣಗಳಿದ್ದರೆ ಸಾಕು: ಬಹು ದೋಷಗಳಿದ್ದರೂ ಉಪಾದೇಯನಾಗುವನು. ಶೌರ್ಯ, ಸಂತೋಷ, ಭಕ್ತಿಗಳಿದ್ದವನನ್ನು ಯಾರು ತಾನೇ ಪರಿಗ್ರಹಿಸುವುದಿಲ್ಲ.

(ಶ್ವೇವ ಮೂರ್ಖೋಽಪಿ ಶೌರ್ಯಾದಿ ಗುಣೈಃ ಕಸ್ಯಚಿತ್ ಕುನೃಪಾದೇಃ ಉಪಾದೇಯೋ ಭವತ್ಯೇವ —ತಾ. ಪ್ರ.)

೫೬. ವಿಷಯ ಪರಂಪರೆಗಳಲ್ಲಿ ಆಸಕ್ತನಾದವನೇ, (ಧತ್ತೂರಾದಿ ಭಕ್ಷಣದಿಂದ) ಉನ್ಮತ್ತರಾದವರನ್ನು, (ಮದಿರಾದಿ ಸೇವನದಿಂದ) ಮತ್ತರಾದವರನ್ನೋ (ಪ್ರಮಾದ ಕ್ರೋಧಾವೇಶಾದಿಗಳಿಂದ) ಕೂಪಾದಿ ಪತನೋನ್ಮುಖರನ್ನು, (ಪಿಶಾಚಾದ್ಯಾವೇಶಗಳಿಂದ) ಓಡುವವರನ್ನೂ (ತತ್ತ್ವಜ್ಞಾನ ಪ್ರಕರ್ಷದಿಂದ ದೇಹಾದಿ ಪರಿಚ್ಛೇದ ವಿಸ್ಮರಣವನ್ನು ಹೊಂದಿ ಅಹಂ ಬ್ರಹ್ಮ ಭಾವವನ್ನು ಹೊಂದಿದ) ಮಾನಾಧಿಕರೆಂದರೆ ಸಪ್ತಭೂಮಿಕಾಧಿರೂಢರಾಗಿರುವವರನ್ನೂ, ಎಲೈ, ಹುಲ್ಲಿನ ಕಡ್ಡಿಗಿಂತಲೂ ಕಡೆಯೆಂದು ಕೊಳ್ಳುವೆಯಲ್ಲ! ಅದು ಇಚ್ಛಾ ಸತ್ವವೋ ಜಡತ್ವವೋ, ನೀನೇ ವಿಚಾರಿಸು.

ಕೋಲಾಹಲಃ ಸಮಾನೇಽಪಿ ತಿರ್ಯಕ್ತ್ವೇ ಕ್ಷುಬ್ಧಮಾನಸೈಃ ।
ಅನ್ಯಥಾ ಸಹ್ಯತೇ ಸಿಂಹೈರ್ಮೀಲಿತೈರನ್ಯಥಾ ಶ್ವಭಿಃ　　॥ ೫೭ ॥

ನಿತ್ಯಾಶುಚೇ ಪ್ರಿಯಜನೇ ಭಷಣೈಕನಿಷ್ಠ
　ರಥ್ಯಾಂತರಭ್ರಮಣನೀತಸಮಸ್ತಕಾಲ ।
ಕೌಲೇಯಕಾಶಯಸಮಾನತಯೈವ ಮನ್ಯೇ-
　ಮೂರ್ಖೇಣ ಕೇನಚಿದಹೋ ಬತ ಶಿಕ್ಷಿತೋಽಸಿ　　॥ ೫೮ ॥

ನಿತ್ಯಂ ಸರ್ವಂ ಜಗದಸದೃಶಂ ಕುರ್ವತೋಚ್ಚೈರ್ವಿಧಾತ್ರಾ
　ದೌಹಿತ್ರೇಽಸ್ಮಿನ್ ಶುನಿ ಸಮದೃಶೇ ನಿರ್ಮಿತಂ ಸರ್ವಮೇವ ।
ವಾಸೋಽಮೇಧ್ಯಾವಕರಕುಹರೇ ಭೋಜನಂ ಗೂಥಪೂಯಂ-
　ಸರ್ವಾಲೋಕೇ ಕುರತಿ ಕುರತಿಃ ಸರ್ವನಿಂದ್ಯಂ ಶರೀರಂ　　॥ ೫೯ ॥

---

೫೭. ತಿರ್ಯಕ್ತ್ವವೆನ್ನುವುದು ಎರಡಕ್ಕೂ ಸಮಾನವೇ ಆದರೂ ಮೇಘ ಗರ್ಜನದ ಕೋಲಾಹಲವನ್ನು ನಾಯಿಯು ಹೆದರಿಕೆಯಿಂದ ಕಣ್ಣುಮುಚ್ಚಿಕೊಂಡು ಸಹಿಸಿದರೆ, ಸಿಂಹವು ಕಿಂಚಿತ್ತೂ ಹೆದರಿಕೆಯಿಲ್ಲದೆ, ಉದಾಸೀನದಿಂದ ಕಣ್ಣು ಮುಚ್ಚಿಕೊಂಡು ಸಹಿಸುವುದು.

೫೮. ಎಲೈ ನಾಯಿಯೆ, ಯಾವಾಗಲೂ ಅಶುಚಿಯಾಗಿ, ಪ್ರಿಯಜನ ರಲ್ಲಿಯೂ ಬಿಡದೆ ಬೊಗಳುವವನಾಗಿ, ಬೀದಿಯಲ್ಲಿ ತಿರುಗುತ್ತ ಕಾಲವನ್ನೆಲ್ಲ ಕಳೆ ಯುವವನಾಗಿ, ಇರುವೆಯಲ್ಲಾ ! ಇಂಥಾ ನಿನಗೆ ಆಶಯ ಸಮಾನತೆಯಿಂದ ಯಾವನೋ ಒಬ್ಬ ಮೂರ್ಖನೇ ಇದೆಲ್ಲವನ್ನೂ ಕಲಿಸಿದ್ದಾನು ಎಂದುಕೊಳ್ಳುವೆನು.

೫೯. ಯಾವಾಗಲೂ ಜಗತ್ತನ್ನು ಹೆಚ್ಚುಕಡಿಮೆಯಾಗಿಯೇ ಮಾಡುವ ಬ್ರಹ್ಮನು, ತನ್ನ (ಮಗಳಾದ ಸುರಮೆಯೆಂಬ ದೇವಶುನಿಯ ಮಗನಾದ್ದರಿಂದ) ಮೊಮ್ಮಗನಾದ ನಾಯಿಗೆ ಮಾತ್ರ ಎಲ್ಲವನ್ನೂ ಸರಿಯಾಗಿ ಒಂದಕ್ಕೊಂದು ಸರಿ ಹೋಗುವಂತೆ ಮಾಡಿರುವನು. ಅಮೇಧ್ಯ, ಅವಕರ (ಗುಡಿಸಿ ಎಸೆದುದು) ಮೊದಲಾದವುಗಳ ಗುಂಡಿಯಲ್ಲಿ ವಾಸ, ಭೋಜನವು ಪುರೀಷ ಪೂಯಗಳು, ಎಲ್ಲರೂ ನೋಡುವಂತೆ ಕುರತಿ (ಚಿರಗ್ರಂಥಿಲಾ ಯಾ ರತಿಃ) ಯಲ್ಲಿ ಕುರತಿ (ಕೆಟ್ಟ ಮೋಕಿ) ಸರ್ವ ನಿಂದ್ಯವಾದ ಶರೀರ. ಇನ್ನೇನು ಬೇಕು ?

ತ್ವತ್ತಃ ಕೋಽಧಮ ಇತ್ಯುದೀರಿತವತೇ ಶ್ವೋವಾಚ ಹಾಸಾನ್ವಿತಂ
ಮತ್ತೋ ಮೌರ್ಖ್ಯಮಮೇಧ್ಯಮಾಂಧ್ಯಮಶುಭಂ ಯಃ ಸೇವತೇ ಸೋಽಧಿಕಃ ।
ಶೌರ್ಯಂ ಭಕ್ತಿರಕೃತ್ರಿಮಾ ಧೃತಿರಿತಿ ಶ್ರೀಮಾನ್ಗುಣೋ ಯೋಽಸ್ತಿ ಮೇ
ಮೂರ್ಖಾದೇಷ ಗುಣಃ ಪ್ರಯತ್ನನಿಚಯೈರನ್ವಿಷ್ಯ ನೋ ಲಭ್ಯತೇ ॥ ೬೦ ॥

ಭುಂಕ್ತೇಽಮೇಧ್ಯಮಮೇಧ್ಯ ಏವ ರಮತೇ ನಿತ್ಯಂ ಮಹಾವಸ್ಕರೇ
ತೂಷ್ಣೀಮತ್ತಿ ಸಚೇತನಂ ಕೃತರತಿರ್ನಿಶ್ಚೇತನಂ ಕೃಂತತಿ ।
ಸರ್ವೈರೇತ್ಯ ರತೇ ಶುನೀವಿವಲಿತೇ ಲ್ಲೋಷ್ಟೈರ್ಜನೈಸ್ತಾಡ್ಯತೇ-
ಧಾತ್ರಾ ಖೇಲಸಮನ್ವಿತಸ್ಥಿತಿರಲಂ ಲೋಕೇ ಕೃತೋ ನೇಶ್ವರಃ ॥ ೬೧ ॥

ಲಿಂಗಸ್ಯೋರ್ಧ್ವಂ ಗತತ್ಕಾಕ ಆತ್ಮಾನಂ ದರ್ಶಯತ್ಯಯಂ ।
ಸರ್ವಾಧಃಪಾತಕೋತ್ತುಂಗಗತಂ ಪಶ್ಯತ ಮಾಮಿತಿ ॥ ೬೨ ॥

---

೬೦. ನಿನಗಿಂತಲೂ ಅಧಮನು ಇನ್ನು ಯಾರು ಎಂದು ಕೇಳಿದರೆ, ನಾಯಿಯು ನಕ್ಕು ಹೇಳಿತು: ಮೌರ್ಖ್ಯವನ್ನೂ ಅಮೇಧ್ಯವನ್ನೂ ಆಂಧ್ಯವನ್ನೂ ಅಶುಭವನ್ನೂ ಸೇವಿಸುವವನು ನನಗಿಂತಲೂ ಅಧಿಕನು. ನನ್ನಲ್ಲಿ ಶೌರ್ಯ, ಅಕೃತ್ರಿಮವಾದ ಭಕ್ತಿ, ಧೈರ್ಯ ಎಂಬ ಶುಭ ಗುಣಗಳು ಉಂಟು. ಮೂರ್ಖನಲ್ಲಿ ಈ ಗುಣಗಳು ಪ್ರಯತ್ನಪಟ್ಟು ಹುಡುಕಿದರೂ ಸಿಕ್ಕುವುದಿಲ್ಲ.

(ಮೌರ್ಖ್ಯಮಜ್ಞಾನಂ । ಅಮೇಧ್ಯಮಪವಿತ್ರಂ ದೇಹಾದ್ಯಭಿಮಾನಂ । ಆಂಧ್ಯಂ ವಿಚಾರ ನೇತ್ರರಾಹಿತ್ಯಂ ।....ಧೃತಿರಲ್ಪ ಸಂತೋಷಃ —ತಾ. ಪ್ರ.)

೬೧. ಅಮೇಧ್ಯವನ್ನು ತಿನ್ನುವುದು: ಅಮೇಧ್ಯದಲ್ಲಿಯೇ ಗೊಬ್ಬರದ ಗುಂಡಿಯಲ್ಲಿಯೇ ರಮಿಸುವುದು. ಸಚೇತನಗಳನ್ನು ತಿನ್ನುವುದು: ಕೈಲಾಗದವರನ್ನು ಕಚ್ಚುವುದರಲ್ಲಿ ಆಸಕ್ತಿ ವಹಿಸುವುದು: ರತಿ ಮಾಡಿದಾಗ ಎಲ್ಲರಿಂದಲೂ ಏಟು ತಿನ್ನುವುದು. ಬ್ರಹ್ಮನು ಕೆಟ್ಟ ಆಟವಾಡುವುದಕ್ಕೇ, ತನ್ನನ್ನು ತಾನು ಕಾಪಾಡಿಕೊಳ್ಳಲೂ ಅಸಮರ್ಥವಾದ ಈ ನಾಯಿಯನ್ನು ಸೃಷ್ಟಿಸಿರಬೇಕು.

೬೨. ಶಿವಲಿಂಗದ ತಲೆಯ ಮೇಲೆ ಕುಳಿತಿರುವ ಕಾಗೆಯನ್ನು ನೋಡಿ. ಅದು ಏನು ಹೇಳುವುದು ಬಲ್ಲಿರಾ ? ಅಧೋಗತಿಗೆ ಎಳೆದೊಯ್ಯುವ ಪಾತಕಗಳಲ್ಲೆಲ್ಲಾ ಕನಿಷ್ಠವಾದುದು ಈ ಶಿವಸ್ವ (ಶಿವನ ಆಸ್ತಿ) ಭಕ್ಷಣವು: ಅದನ್ನು ಮಾಡಿಯೇ ನನಗೆ ಈ ಜನ್ಮ ಬಂದುದು ಎಂಬುದಕ್ಕೆ ನಿದರ್ಶನವಾಗಿ ತನ್ನನ್ನು ತೋರಿಸಿಕೊಳ್ಳುವುದು.

ಕಾಕಕ ಕಟುಕಳ್ಕಾರವ
ಕವಲಿತಗುಣಕರ್ದಮೋ ಭ್ರಮನ್ಸರಸಿ ।
ಅಂತರಯಸಿ ಮಧುಪರವಂ–
ಯದತೋ ಮೇ ಶಿರಸಿ ಫಲಭೂತಃ ॥ ೬೩ ॥

ಕವಲಯತಿನರಕನಿಕರಂ
ಪರಿಹರತಿ ಮೃಣಾಲಿಕಾಂ ಧ್ವಾಂಕ್ಷಃ ।
ಯದತೋಽಸ್ತು ಮಾ ಸ್ಮಯಃಸ್ತೇ–
ಸ್ವಭ್ಯಸ್ತಂ ಸರ್ವದಾ ಸ್ವದತೇ ॥ ೬೪ ॥

ವಿವಿಧವನಕುಸುಮಕೇಸರ
ಧವಲವಪುರ್ಹಂಸ ಇವ ದೃಷ್ಟಃ ।
ಕಾಕಃ ಕೃಮಿಕುಲಕವಲಂ–
ಕ್ಲಿನ್ನಮಥೋ ಕವಲಯನ್ಜ್ಞಾತಃ ॥ ೬೫ ॥

---

೬೩. ಎಲೆ ಕಾಕಕ, ಕಟುವಾದ ದಂಭ ಧ್ವನಿಗಳಿಂದ ಗುಣವಂತರಾದ ಹಂಸಸಾರ ಸಾದಿಗಳ ಧ್ವನಿಯನ್ನು ನುಂಗಿದವನೆ, ಸರಸಿಯ ಕೆಸರಿನಲ್ಲಿ ತಿರುಗುತ್ತ, ಕಮಲದಲ್ಲಿದ್ದು ಕೂಗುವ ಭ್ರಮರದ ಧ್ವನಿಯನ್ನು ನಿನ್ನ ಕೂಗಿನಿಂದ ಮುಳುಗಿಸುವೆ. ನೋಡು, ನಿನ್ನ ಧ್ವನಿಯನ್ನು ಕೇಳಿ ನನಗೆ ತಲೆನೋವು ಬಂತು.

೬೪. ಈ ಕಾಗೆಯು ನರಕ (ಅಮೇಧ್ಯ) ನಿಕರವನ್ನು ತಿನ್ನುವುದು : ಕಮಲದ ದಂಟು ಸಿಕ್ಕಿದರೂ ಅದನ್ನು ತಿನ್ನುವುದಿಲ್ಲ. ಅದಕ್ಕಾಗಿ ವಿಸ್ಮಯಪಡಬೇಕಾಗಿಲ್ಲ. ಯಾರೇ ಆಗಲಿ, ತಮಗೆ ಯಾವುದು ಅಭ್ಯಾಸವಾಗಿರುವುದೋ ಅದನ್ನೇ ತಿನ್ನುವರು.

೬೫. ವಿವಿಧವಾದ ವನ ಕುಸುಮಗಳ ಕೇಸರಗಳಿಂದ ಮೈಯೆಲ್ಲವೂ ಬೆಳಗಾಗಿರಲು, ಹಂಸವೋ ಎನ್ನಿಸಿತು. ಆದರೆ ಕ್ಲಿನ್ನವಾದ ಕೃಮಿಕುಲ ಕವಲಗಳನ್ನು ತಿನ್ನುತ್ತ, ತಾನು ಕಾಗೆ ಎಂಬುದನ್ನು ತಾನೇ ತೋರಿಸಿಕೊಂಡಿತು.

ತುಲ್ಯವರ್ಣಚ್ಛದೈಃ ಕೃಷ್ಣೈಃ ಸಂಗತೈಃ ಕಿಲ ಕೋಕಿಲೈಃ ।
ಕೇನ ವಿಜ್ಞಾಯತೇ ಕಾಕಃ ಸ್ವಯಂ ಯದಿ ನ ಭಾಷತೇ ॥ ೭೬ ॥

ಅರಣ್ಯಾನ್ಯಾ ಮೃದಃ ಸ್ಥಾಣೌ ಸ್ಥಿತಃ ಕಾಕೋ ನಿರೀಕ್ಷ್ಯತೇ ।
ಜೈತ್ಯಾದ್ದಶದಿಶಶ್ಚೋರೋ ನಿಶಿ ಸುಪ್ತೇ ಜನೇ ಯಥಾ ॥ ೭೭ ॥

ಸರಭಸಸಾರಸವಿದಲ
ತ್ಪುಷ್ಕರಮಕರಂದಸುಂದರೇ ಸರಸಿ ।
ಕಥಮಿಹ ವಿಹರತಿ ಕಾಕಃ
ಸ್ಫುರದವಕರನಿಕರಧೂಸರಸ್ಕಂಧಃ ॥ ೭೮ ॥

ಹಾ ಕಷ್ಟಮಿಷ್ಟವಪುಷಿ ಸ್ಫುಟಪುಂಡರೀಕ ।
ಕೋಶೇ ಕಷಾಹನನಯೋಗ್ಯಮುಖಃ ಪಿಶಾಚಃ ।
ಪಶ್ಯೈಷ ಕಾಕ ಉಪವಿಶ್ಯ ಕುಪಲ್ವಲೇಸ್ಮಿನ್-
ಲೀಲಾಃ ಕರೋತಿ ವಿವಿಧಾಃ ಸಹ ರಾಜಹಂಸೈಃ ॥ ೭೯ ॥

---

೭೬. ಸಮಾನವಾದ ಬಣ್ಣವುಳ್ಳ ಕರಿಯ ಕಾಗೆಯು ಕರಿಯ ಕೋಗಿಲೆಗಳ ಜೊತೆಯಲ್ಲಿದ್ದರೆ ಅದನ್ನು, ಅದಾಗಿ ಕೂಗಿದ ಹೊರತು, ಕಾಗೆಯೆಂದು ಯಾರು ಗುರ್ತಿಸಬಲ್ಲರು ?

೭೭. ಕಾಡಿನ ಮಣ್ಣಿನ ಗುಡ್ಡೆಗಳ ಮೇಲೆ ಕಾಗೆಯು ಕುಳಿತು ಎಲ್ಲರೂ ಮೈಮರೆತು ನಿದ್ದೆ ಹೋಗುತ್ತಿರುವಾಗ ಮರವನ್ನು ಹತ್ತಿ ಕುಳಿತಿರುವ ಕಳ್ಳನಂತೆ ಕಾಣುವುದು.

೭೮. ತಾವರೆಯು ಹೂಗಳು ಭರ್ರನೆ ಅರಳಿ, ಸರಸ್ಸನ್ನೆಲ್ಲಾ ತಮ್ಮ ಮಕರಂದದಿಂದ ಸುಂದರವನ್ನಾಗಿ ಮಾಡುವಾಗ, ಗಾಳಿಗಳು ಬೀಸಿ ಆ ಮಕರಂದವನ್ನು ತಂದು ಇದರ ಮೇಲೆಲ್ಲಾ ಸುರಿದರೆ, ಕಾಕವು ಅದನ್ನು ಸಹಿಸಿಕೊಂಡು ಅಲ್ಲಿ ವಿಹರಿಸುವುದೆಂತು ?

೭೯. ತಮಗೆ ಬಹಳ ಇಷ್ಟವಾದ ಅರಳಿದ ಪುಂಡರೀಕಗಳ ಕೋಶದಲ್ಲಿ ಕುಳಿತಾಡುವ ರಾಜಹಂಸಗಳೊಡನೆ, ಕಲ್ಲಿನಲ್ಲಿ ಹೊಡೆಸಿಕೊಳ್ಳಬೇಕಾದ ಕೆಟ್ಟ ಮುಖದ

ಹೇ ಕಾಕ ಕರ್ಕಶರವ ಕ್ರಕಚೈಕಚಿಹ್ನ
ತಾದೃಕ್ಸ್ವಶಂಕನಮಪಿ ಕ್ವ ನು ತೇಽದ್ಯ ಯಾತಂ ।
ಕಸ್ಮಾದನರ್ಥಕಮಿದಂ ಪಿಕಪಾಕಮೇಕ-
ಪುತ್ರಾಶಯಾ ತದಪಿ ತೇ ಹ್ಯುಪಹಾಸಸಿದ್ಧ್ಯೈ ॥ ೨೦ ॥

ಆಲೋಕ್ಯ ಪಂಕಜವನೇ ಸವಿಲಾಸವಂತಂ
ಕಾಕಂ ಕಲಂಗಸದೃಶಂ ಭೃಶಮಾರಟಂತಂ ।
ಹಾ ಕಷ್ಟಶಬ್ದಶತನಷ್ಟವಿಚೇಷ್ಟಿತೋ ಯೋ-
ನೋ ರೋದಿತಿ ಕ್ರಕಚಕೇನ ವಿದಾರ್ಯತಾಂ ಸಃ ॥ ೨೧ ॥

---

ಈ ಪಿಶಾಚಿ ಕಾಗೆಯು, ಈ ಅದೃಷ್ಟಹೀನ ಪಲ್ವಲದಲ್ಲಿ ಕುಳಿತು ಲೀಲೆಯೆನ್ನಿಸಿಕೊಳ್ಳುವ ಚೇಷ್ಟೆಗಳನ್ನು ಮಾಡುತ್ತಿರುವುದಲ್ಲಾ! ಅಹಹಾ! ಏನು ಕಷ್ಟ!

೨೦. ಎಲೆ ಕಾಗೆ, ಕರ್ಕಶರವ, ಗರಗಸವೊಂದೇ ಗುರುತಾಗಿರಬೇಕಾದವನೆ, ಸ್ವಭಾಗವನ್ನು ಅಕಾಕವು ಸೇವಿಸಕೂಡದು ಎಂದು ಕಾಗೆಗಳನ್ನೇ ಕರೆಯುತ್ತಿದ್ದ ನಿನ್ನ ಸ್ವಭಾವವು ಈಗ ಎಲ್ಲಿ ಹೋಯಿತು? ಪುತ್ರಾಶೆಯಿಂದ ಈ ಪಿಕ ಪಾಕ (ಮರಿ) ವನ್ನು ಏಕೆ ಕಾಪಾಡುತ್ತಿರುವೆ? ಇದು ನಿನಗೆ ಅನರ್ಥಕಾರಿಯು. ಇದರಿಂದ ತಪ್ಪದೆ ನಿನಗೆ ಉಪಹಾಸವು ಲಭಿಸುವುದು.

(ವಂಚನಾಪಹಾರಾದಿನಾ ಸ್ವಲಭ್ಯಧನಾದಿ ಭಾಗಂ ನ್ಯಾಯ್ಯೇನೋಪಾಯೇನ ಸಾಧುರ್ಮಾ ಪ್ರಾಪದಿತಿ ಶಂಕಯಾ ತನ್ನಿರಾಸಾಯ ರಾಜಸಭಾಸು ಕಟುರಟಂತಂ ಖಲಂ ಪ್ರತಿ ಅನ್ಯಾಪದೇಶೇನ ಕಶ್ಚಿದಾಹ —ತಾ. ಪ್ರ.)

೨೧. ಕಮಲವನದಲ್ಲಿ ಸವಿಲಾಸವಾಗಿ, ಆಡುತ್ತಾ ಒರಟಾಗಿ ಕೂಗುತ್ತಾ ಕಲಂಕ ಸದೃಶವಾಗಿರುವ ಕಾಗೆಯನ್ನು ನೋಡಿ ಯಾವನು ಕಷ್ಟ ಕಷ್ಟ ಎಂದು ಒಂದು ನೂರು ಸಲ ಹೇಳಿ ಮೂರ್ಛೆ ಹೋಗುವುದಿಲ್ಲವೋ, ಯಾವನು ಅಳುವುದಿಲ್ಲವೋ ಅವನನ್ನು ಗರಗಸದಿಂದ ಸೀಳಬೇಕು.

ವಿಶರಾರುಶರಾರುಮಯೋ
ಬಕಮದ್ಗುಘನೇ ಚ ಪಲ್ವಲೇ ಚಪಲಾಃ ।
ಸ್ಯುರ್ಯದಿ ಕೌಶಿಕಕಾಕಾ-
ಸ್ತತ್ಸ್ಯಾದೇಷಾ ಸಮನ್ವಿತಾ ಗೋಷ್ಠೀ ॥ ೭೨ ॥

ಕೋಕಿಲಃ ಕಾಕಸಂಘಾತೈಃ ಸಮಸಂವರಣಾಕೃತಿಃ ।
ಗದಿತೈರ್ವ್ಯಕ್ತತಾಮೇತಿ ಸಭಾಯಾಮಿವ ಪಂಡಿತಃ ॥ ೭೩ ॥

ಮೃದುಕುಸುಮಾಂಕುರದಲನಂ
ಸೋಢುಮಲಂ ಕೋಕಿಲಸ್ಯ ಕುಸುಮಲತಾ ।
ನತು ಕಂಕಗೃಧ್ರಮದ್ಗುಕ-
ಬಕಕುಕ್ಕುಟವಾಯಸಾದೀನಾಂ ॥ ೭೪ ॥

ಶ್ರೋತ್ರೋತ್ಸವಂ ತವ ಕಲಂ ಕಲಕಂಠ ಕೋಽತ್ರ
ನಾದಂ ಶೃಣೋತಿ ರತಿವಿಗ್ರಹಸಂಧಿದೂತಂ ।
ಕಾಕೈರುಲೂಕಕಲಹೈರಿಹ ಗುಲ್ಮಕೇಷು-
ಕ್ರೇಂಕಾರಘರ್ಘರರವೈಃ ಶ್ರುತಿರಾಗತಾಸ್ತಂ ॥ ೭೫ ॥

---

೭೨. ಹಿಂಸೆ ಮಾಡಿಕೊಂಡು ತಿರುಗಾಡುವ ಕೊಕ್ಕರೆಗಳು, ನೀರು ಕಾಗೆಗಳು, ತುಂಬಿರುವ ಪಲ್ವಲದಲ್ಲಿ ಚಪಲಗಳಾದ ಕೌಶಿಕ ಕಾಕಗಳು (ಕೌಶಿಕಗಳೂ ಕಾಕಗಳೂ) ಸೇರುವುದಾದರೆ, ಆ ಗೋಷ್ಠಿಯು ಸಮಸಮನ್ವಿತವಾಗುವುದು.

೭೩. ಕೋಕಿಲವು ಕಾಕಸಂಘಾತದ ಜೊತೆಯಲ್ಲಿರುವಾಗ, ಎರಡೂ ಒಂದೇ ಬಣ್ಣವಾದ್ದರಿಂದ, ಅದು ಗೋಪ್ಯವಾಗಿರುವುದು. ನುಡಿದರೆ ಆಗ, ಸಭೆಯಲ್ಲಿರುವ ಪಂಡಿತನ ಹಾಗೆ, ಪ್ರಕಟವಾಗುವುದು.

೭೪. ಕೋಕಿಲವು ಬಂದು ಮೃದುವಾದ ಅಂಕುರಗಳನ್ನೂ ಕುಸುಮಗಳನ್ನೂ ಕೊಯ್ದುಕೊಂಡರೆ ಕುಸುಮ ಲತೆಯು ಸಹಿಸೀತು ! ಆದರೆ ಕಂಕ, ಗೃಧ್ರ, ನೀರು ಕಾಗೆ, ಬಕ, ಕುಕ್ಕುಟ, ವಾಯಸಾದಿಗಳೂ ಹಾಗೇ ಮಾಡಿದರೆ ಸಹಿಸಲಾದೀತೆ ?

೭೫. ಗುಲ್ಮಗಳಲ್ಲಿ ಗೂಬೆಗಳಿಗೂ ಕಾಗೆಗಳಿಗೂ ಕಲಹವಾಗುತ್ತಿರುವಾಗ ಕೇಳಿಸುವ ಒರಟಾದ ಕರ್ಕಶ ಧ್ವನಿಗಳನ್ನು ಕೇಳಿ ಕೇಳಿ ಕಿವಿಯು ಕಿವುಡಾಗಿರುವಾಗ,

ವಾಚಾಕೋಮಲಯಾಸುಕೋಕಿಲಶಿಶುಃಕಲ್ಯಾಣಕಲ್ಪಾಂ ಕಥಾಂ
ಸರ್ವಾವರ್ಜನಮಾರ್ಜವೇನ ಕುರುತೇ ಯಾವತ್ಪ್ರರೋ ರಾಗಿಣಾಂ ।
ತಾವನ್ಮತ್ತನಯೋಽಯಮಿತ್ಯವಿರತಂ ದ್ರಾಂಕಾರಭೀಮಾರವೈ-
ರ್ಧ್ವಾಂಕ್ಷೇಣೋಪವನೇ ನಿಪತ್ಯ ನಭಸಃ ಸರ್ವೇ ಕೃತಾನೀರಸಾಃ ॥ ೭೬ ॥

ಕಿಂ ಕಿಂ ಕೋಕಿಲ ಕೂಜಸಿ ದ್ರುತರವಂ ಹರ್ಷಾತ್ಸಮುಲ್ಲಾಸಿತಂ
ಗ್ರೀವಾಕೋಟರತಃ ಪ್ರವೇಶಯ ಪುನರ್ಮಾ ಭೂಚ್ಚಿರಂ ತೇ ಭ್ರಮಃ ।
ಉದ್ದಾಮೈಃ ಕುಸುಮೈರ್ನಿರಂತರತರಂ ನೇದಂ ಮಧೋರ್ಜೃಂಭಿತಂ-
ಹೇಮಂತೇನಕೃತಾಸ್ತುಷಾರನಿಕರೈಃ ಶುಷ್ಕಾ ಅಮೀ ಪಾದಪಾಃ ॥ ೭೭ ॥

ಕೂಜತ್ಕೋಕಿಲಕೋಮಲಂ ಕಲರವೈರ್ನಿತ್ಯಂ ಪ್ರಶಸ್ತಾಕೃತೇ
ಕೇನೇದಂ ಬತ ಶಿಕ್ಷಿತೋಽಸಿ ವಚನಂ ದುಃಖಪ್ರದಂ ದುರ್ಭಗಂ ।
ಚೈತ್ರೇ ಚಿತ್ರನವಾಂಕುರೇ ವಿರಹಿಣೀ ವಕ್ತಿ ತ್ವಯಾ ಯಾತ್ಮನಃ
ಕಸ್ಯಾಯಂ ಮಧುರಿತ್ಯತಸ್ತವತವೇತ್ಯುಕ್ತಂ ತ್ವರೋಚ್ಚೈಸ್ತರೋಃ ॥ ೭೮ ॥

---

ರತಿವಿಗ್ರಹ ಸಂಧಿ ದೂತವಾಗಿ ಶ್ರೋತ್ರೋತ್ಸವವಾದ ನಿನ್ನ ಹಾಡನ್ನು, ಎಲೈ ಕಲಕಂಠನೆ, ಕೇಳುವವರಾರು ?

೭೬. ಒಂದು ಉಪವನದಲ್ಲಿ ಕೋಕಿಲ ಶಿಶುವೊಂದು ಕೋಮಲವಾದ ವಾಕ್ಕಿನಿಂದ, ಕಲ್ಯಾಣಕಾರಕವಾಗಿರುವ ಕಥೆಯೊಂದನ್ನು ವಿಶ್ವಾಸವಾಗಿ ಕೇಳುವವರಿಗೆ ಹೇಳಿ, ಎಲ್ಲರ ಮನಸ್ಸನ್ನೂ ಸಂತೋಷಪಡಿಸುತ್ತಿತ್ತು. ಅಷ್ಟರೊಳಗೆ, "ಇದು ನನ್ನ ಶಿಶು" ಎಂದು ಕಟುವಾಗಿ ಭಯಂಕರವಾಗಿ ಕೂಗುತ್ತ ಒಂದು ಕಾಗೆಯು ಆಕಾಶದಿಂದ ಇಳಿದು ಎಲ್ಲರ ಮನಸ್ಸನ್ನೂ ಕೆಡಿಸಿತು.

೭೭. ಏನಿದು ಕೋಕಿಲ, ಹರ್ಷದಿಂದ ಉಲಾಸಗೊಂಡು ಹೀಗೆ, ಅವಸರದಿಂದ ಕೂಗುತ್ತಿರುವೆ ? ಹಾಡನ್ನು ತಡೆ, ಮತ್ತೆ ಭ್ರಾಂತಿಯನ್ನು ಹೊಂದಬೇಡ. ಇದು ಉದ್ದಾಮ ಕುಸುಮರಂಜಿತವಾದ ಮಧುವಿನ ವಿಜೃಂಭಣ ಎಂದು ಕೊಳ್ಳಬೇಡ. ಇದು ಹೇಮಂತದ ಹಿಮತುಷಾರಗಳಿಂದ ಕೂಡಿ ಒಣಗಿ ನಿಂತಿರುವ ಮರಗಳು.

೭೮. ಚಿತ್ರ ಚಿತ್ರವಾದ ನವಾಂಕುರಗಳಿಂದ ಮನೋಹರವಾದ ಚೈತ್ರ

ಮೌನಸ್ಪಂದವಿಹಾರವರ್ಣವಪುಷಾಂಣಸಾಮ್ಯೇಽಪಿ ಕಾಕವ್ರಜೇ
ಕಾಕಃ ಕೋಕಿಲ ಏಷ ಕಾಂತಿರುಚಿರೋ ದೂರಾತ್ಪರಿಜ್ಞಾಯತೇ ।
ಮಧ್ಯೇ ಮೂರ್ಖಜನಸ್ಯ ಪಂಡಿತ ಇವ ಸ್ವಾಕಾರಭವ್ಯಕ್ರಿಯಃ–
ಸರ್ವೋಽಹಿ ಪ್ರಥಿಮಾನಮೇತಿಸದೃಶಸ್ವಾಂತಶ್ಚಮತ್ಕಾರತಃ ॥ ೭೯ ॥

ಭ್ರಾತಃ ಕೋಕಿಲ ಕೂಜಿತೈರಲಮಲಂ ನಾಯಾತ್ಯನರ್ಘ್ಯೋ ಗುಣ
ಸ್ತೂಷ್ಣೀಮಾಸ್ಸ್ವವಿಶೀರ್ಣಪರ್ಣಪಟಲಚ್ಛನ್ನೇ ಕ್ವಚಿತ್ಕೋಟರೇ ।
ಉದ್ದಾಮದ್ರುಮಕಂಪರೇ ಕಟುರಟತ್ಕಾಕಾವಲೀಸಂಕುಲಃ–
ಕಾಲೋಽಯಂ ಶಿಶಿರಸ್ಯಸಂಪ್ರತಿಸಖೇನಾಯಂ ವಸಂತೋತ್ಸವಃ ॥ ೮೦ ॥

---

ಮಾಸದಲ್ಲಿ ವಿರಹಿಣಿಯೊಬ್ಬಳು "ಮನೋಹರವಾಗಿ ಕೋಮಲವಾಗಿ ನಿತ್ಯವೂ ಹಾಡುವ, ಪ್ರಶಸ್ತಾ ಕೃತಿಯುಳ್ಳ ಕೋಕಿಲವೇ, ನಿನಗೆ ಈದುರ್ಭಗವಾದ ದುಃಖ ಪ್ರದವಾದ ವಚನವನ್ನು ನಿನಗೆ ಕಲಿಸಿದವರಾರು ? ಈ ಮಧು ಮಾಸವು ಯಾರಿಗೆ ಎಂದು ಕೇಳಿದರೆ, ತವ, ತವ, ಎಂದು ಎತ್ತರವಾದ ಮರದ ಮೇಲೆ ಕುಳಿತು ಕೂಗುತ್ತಿರುವಿಯಲ್ಲ ?" ಎಂದು ಬಯ್ದಳು.

೭೯. ವರ್ಣ, ವಪು, ಗಳ ಸಾಮ್ಯದಿಂದ ಕಾಗೆಯಂತೆಯೇ ಇರುವ ಕೋಗಿಲೆಯು, ಮೌನವಾಗಿ ಅವುಗಳಂತೆಯೇ ಚೇಷ್ಟೆಗಳನ್ನೂ ವಿಲಾಸಗಳನ್ನೂ ಮಾಡುತ್ತ ಇದ್ದರೂ, ಇದು ಕಾಗೆಯಲ್ಲ: ಕೋಗಿಲೆಯೆಂದು ಅದರ ಕಾಂತಿಯಿಂದಲೇ ದೂರದಿಂದಲೇ ತಿಳಿದು ಹೋಗುವುದು. ಮೂರ್ಖ ಜನರ ಮಧ್ಯದಲ್ಲಿದ್ದರೂ ಸ್ವಾಕಾರ ಭವ್ಯಕ್ರಿಯನಾದ ಪಂಡಿತನು ಗುರುತು ಸಿಕ್ಕುವಂತೆ ಇದು. ಯಾರೇ ಆಗಲಿ, ತನ್ನ ಯೋಗ್ಯತಾದಿಗಳಿಗೆ ತಕ್ಕಂತೆ ಕೀರ್ತಿಯನ್ನು ಪಡೆದೇ ಪಡೆಯುವನು.

೮೦. ತಮ್ಮ, ಕೋಗಿಲೆ, ಕೂಜಿತಗಳನ್ನು ಸಾಕು ಮಾಡು. ಇದರಿಂದ ಯಾವುದೂ ಉತ್ತಮವಾದ ಫಲವಿಲ್ಲ. ಜೀರ್ಣವಾದ ಪರ್ಣಗಳಿಂದ ಆಚ್ಛಾದಿತ ವಾಗಿರುವ ಯಾವುದೋ ಒಂದು ಕೊಟರದಲ್ಲಿ ತೆಪ್ಪಗೆ ಕುಳಿತಿರು. ಎತ್ತರವಾದ ಮರದ ಮೇಲೆ, ಕಟುವಾಗಿ ಕೂಗುತ್ತ ಈ ಕಾರ್ಕ ಸಮೂಹವು ಕುಳಿತಿರುವುದು. ಇದು ಶಿಶಿಋತುವು: ಮಿತ್ರ, ಇದು ವಸಂತೋತ್ಸವ ಸಮಯವಲ್ಲ.

ಚಿತ್ರಂ ಮಾತರಮೇಷ ಕೋಕಿಲಶಿಶುಃ ಸಂತ್ಯಜ್ಯ ಕಾಕೀಂ ಗತಃ
ಸ್ವೈಷ್ವೈನಂ ತುದತೀತಿ ಯಾವದಹಮಪ್ಯಾಚಿಂತಯಾಮಿ ಕ್ಷಣಂ ।
ತಾವತ್ಸೋಽಪಿ ತಥಾಶು ಮಾತೃಸದೃಶಂ ಶ್ಲಿಷ್ಟೋ ರಸಾದ್ವರ್ಧಿತಂ
ಯಾಮಾಯಾತಿ ದಿಶಂ ಸ್ವಭಾವಸುಭಗಃ ಸೈವಾಸ್ಯ ಮಾಹಾತ್ಮ್ಯದಾ ॥೮೧॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕಿಯೇ ಮೋಕ್ಷೋಪಾಯೇಷು
ನಿರ್ವಾಣ ಪ್ರಕರಣೇ "ಶ್ವಕಾಕಕೋಕಿಲಾನ್ಯೋಕ್ತಿ ವರ್ಣನಂ" ನಾಮ
ಷೋಡಶಾಧಿಕಶತತಮಃ ಸರ್ಗಃ

---

೮೧. ಈ ಕೋಕಿಲ ಶಿಶುವು ತಾಯಿಯಾದ ಕಾಗೆಯನ್ನು ಬಿಟ್ಟು ಓಡಿ ಹೋಯಿತಲ್ಲಾ ಎಂತಹ ಚಿತ್ರವಿದು! ಆ ತಾಯಿಯಾದ ಕಾಗೆಯು ತಾನೇ ಸಾಕಿದ ಮಗುವಾದ ಕೋಗಿಲೆಯನ್ನು ಹಿಂಸಿಸುವುದು ಇನ್ನೊಂದು ಚಿತ್ರವು! ಈ ಎರಡನ್ನೂ ನಾನು ಒಂದು ಕ್ಷಣ ಚಿಂತಿಸುವಾಗ, ಆ ಕಾಗೆಯು ಇದನ್ನು ಪ್ರೀತಿಯಿಂದ ತಾಯಿಯಂತೆಯೇ ಪೋಷಿಸಿತಲ್ಲಾ ಎಂಬ ಇನ್ನೊಂದು ಚಿತ್ರವೂ ತೋರುವುದು. ಭಾಗ್ಯವಂತನಾಗಿ ಹುಟ್ಟಿದವನು ಎಲ್ಲಿ ಹೋದರೂ ಅವನಿಗೆ ಅಲ್ಲೇ ಎಲ್ಲವೂ ಅನುಕೂಲವಾಗುವುದು.

ಇಂತಿದು ವಾಸಿಷ್ಠ ಮಹಾರಾಮಾಯಣದ ನಿರ್ವಾಣಪ್ರಕರಣದ
ಉತ್ತರಾರ್ಧದಲ್ಲಿ "ಶ್ವಕಾಕಕೋಕಿಲಾನ್ಯೋಕ್ತಿ ವರ್ಣನ" ಎಂಬ
ನೂರಹದಿನಾರನೆಯ ಸರ್ಗವು.

# ಸಪ್ತದಶಾಧಿಕಶತತಮಃ ಸರ್ಗಃ

**ಸಹಚರಾ ಊಚುಃ :—**

ಪಶ್ಯಾದ್ರಿಸಾನಾವಿವ ಬಿಂಬಿತಂ ಖಂ
ಪುರಃಸರೋ ಮಾರಪುರಃಸರೋ ಯಃ ।
ಕಹ್ಲಾರಪದ್ಮೋತ್ಪಲಜಾಲನಾಲ
ಲಲದ್ವಿಚಿತ್ರಾರವಪಕ್ಷಿವೀತಂ ॥ ೧ ॥

ವಿಕಾಸಿತೋದ್ದಂಡಸಹಸ್ರ ಪತ್ರ
ಕೋಶಸ್ಥಲಸ್ಥೋದ್ಧುರರಾಜಹಂಸಂ ।
ಪೀಠದ್ವಿರೇಫದ್ವಿಜಲೋಕಜುಷ್ಟಂ
ಭುವೀವ ಗೇಹಂ ಕಮಲಾಸನಸ್ಯ ॥ ೨ ॥

---

# ನೂರಹದಿನೇಳನೆಯ ಸರ್ಗವು

**ಸಹಚರರು ಹೇಳಿದರು :—**

೧. ಬೆಟ್ಟದ ಕಿಬ್ಬದಿಯಲ್ಲಿರುವ ಈ ಸರೋವರವನ್ನು ನೋಡು. ಇದರಲ್ಲಿ ಆಕಾಶವು ಬಿಂಬಿತವಾಗಿರುವುದು. ಕಹ್ಲಾರ, ಪದ್ಮ, ಉತ್ಪಲ, ಗುಂಪುಗಳ ನಾಳ ಗಳನ್ನು ತಿನ್ನಲು ಬಂದು ಆಡುತ್ತಿರುವ ಕಾಮೋದ್ದೀಪಕವಾದ ವಿಚಿತ್ರವಾದ ಶಬ್ದ ಗಳನ್ನು ಮಾಡುತ್ತಿರುವ ಪಕ್ಷಿಗಳು ತುಂಬಿರಲು, ಇದು ಮನಸ್ಥನ ಭೃತ್ಯನಂತಿ ರುವುದು.

೨. ಅರಳಿರುವ ಸೊಗಸಾದ ಸಹಸ್ರ ಪತ್ರವಾದ ಕಮಲವೆಂಬ ಆಸನದಲ್ಲಿ ರಾಜಹಂಸವು ಕುಳಿತಿರುವುದು. ಆದರ ಪೀಠದಲ್ಲಿರುವ ಭೃಂಗ, ದ್ವಿಜ, ಲೋಕ ಗಳೆಲ್ಲಾ ಅದನ್ನು ಸೇವಿಸುತ್ತಿರಲು, ಈ ಸರಸ್ಸು ಎರಡನೆಯ ಬ್ರಹ್ಮಲೋಕದಂತಿ ರುವುದು.

ಆಕೀರ್ಣಸೀಕರಕರಾಲದಿಗಂತರಾಲೇ
ಫುಲ್ಲೋತ್ಪಲಾಬ್ಜಪಟಲೋದರರೇಣುಗೌರಂ |
ಆಮೋದಮತ್ತಮಧುಪದ್ವಿಜಗೀತಿಗೀತಂ
ಯಾತಂ ವಿತಾನಕವಿವಾಂಬರಗಂ ವಹಂತಂ || ೩ ||

ಕ್ವಚಿತ್ತರತ್ತಾರತರಂಗಭಂಗಂ
ಕ್ವಚಿದ್ದ್ರವದ್ಭೂರಿವಿರಾವಿಭೃಂಗಂ |
ಕ್ವಚಿದ್ಗಭೀರಾಮಲವಾರಿಸುಪ್ತಂ
ಕ್ವಚಿತ್ಸರೋಜೋಜ್ಜ್ವಲಪುಷ್ಪಗುಪ್ತಂ || ೪ ||

ಕಣಾಣುಮುಕ್ತಾಜಲತಾಪಟಾಲಂ
ತೀರೇಷು ಸಿಂಹೇ ಷುಲತಾಸುಟಾಲಂ |
ತರಂಗನಿರ್ಘೂತಶಿಲೋಗ್ರಕಚ್ಛಂ
ಮಹೀತಲಾಕಾಶಮನಂತಕಚ್ಛಂ || ೫ ||

---

೩. ದಿಕ್ಕುಗಳಲ್ಲೆಲ್ಲಾ ಹನಿಗಳು ತುಂಬಿರಲು ಅವು ಕರಾಲಗಳಾಗಿರುವುವು: ಅರಳಿದ ಉತ್ಪಲ, ಅಬ್ಜಗಳ ಗುಂಪು ಚೆಲ್ಲಿರುವ ಪರಾಗರೇಣುಗಳಿಂದ ಗೌರವಾಗಿರುವುದು. ಆಮೋದದಿಂದ ಮತ್ತವಾಗಿರುವ ಮಧುಪಗಳ ಹಕ್ಕಿಗಳ ಗೀತಿಯಿಂದ ಮನೋಹರವಾದಿರುವುದು. ಆಕಾಶದಲ್ಲಿರುವ ಮೇಘಗಳು ಮೇಲ್ಕಟ್ಟನ್ನು ಕಟ್ಟಿದಂತಿರುವುದು.

೪. ಈ ಸರೋವರದಲ್ಲಿ ಒಂದೆಡೆ, ಬರುತ್ತಿರುವ ತರಂಗಗಳು ಭಂಗವಾಗುತ್ತಿರುವುವು. ಇನ್ನೊಂದೆಡೆ ಕೊಬ್ಬಿ ಒಂದರೊಡನೊಂದು ಕಾದಾಡುತ್ತಿರುವ ಭೃಂಗಗಳು ಮೊರೆಯುತ್ತಿರುವುವು. ಇನ್ನೊಂದೆಡೆ ನೀರು ಆಳವಾಗಿರುವುದಂದ ನಿಶ್ಶಬ್ದವಾಗಿ ಮಲಗಿರುವಂತಿರುವುದು. ಮತ್ತೊಂದೆಡೆ ಸರೋಜಾದಿ ಪುಷ್ಪಗಳಿಂದ ಉಜ್ವಲವಾಗಿ ನೀರೇ ಕಾಣದೆ ಮರೆಯಾದಂತಿರುವುದು.

೫. ತುಂತುರುಗಳಾಗಿ ಮುತ್ತಿನ ಮಣಿಗಳಂತೆ ಕಾಣುತ್ತ ಜಲದಲ್ಲಿರುವ ಬಿಸಿಯನ್ನಾರಿಸುತ್ತಿರುವುದು ಒಂದು ಕಡೆ, ತೀರದಲ್ಲಿ ನೀರು ಕುಡಿಯುವುದಕ್ಕೆ ಬಂದ ಸಿಂಹದ ಪ್ರತಿಬಿಂಬವು ಕಾಣಿಸದಂತೆ ಮುಚ್ಚಿರುವ ಲತೆಗಳು ಒಂದೆಡೆ. ತರಂಗಗಳು ತೊಳೆಯುತ್ತಿರುವ ಶಿಲೆಗಳಿಂದ ಉಗ್ರವಾಗಿರುವ ತೀರವಿನ್ನೊಂದೆಡೆ, ಇನ್ನೊಂದೆಡೆ ಆಕಾಶವೇ ನೆಲಕ್ಕಿಳಿಯಿತೋ ಎಂಬಂತಿರುವ ಅನಂತ ತೀರವು.

ತಡಿತ್ಪ್ರಕಾಶೋದರಮಸ್ಯ ಮೇಘೈ-
ರುನ್ನಾಬ್ಜಜಾತೋತ್ಥರಜಃ ಪ್ರಭಾಭಿಃ ।
ಪೃಷದ್ಭರಧ್ವಾಂತಮಯೈಕದೇಶಂ
ಸಂಧ್ಯಾಂಬರಾಭೋಗಮಿವಾಪ್ರಕಾಶಂ ॥ ೬ ॥

ವಾತಾವಕೀರ್ಣಶರದಂಬುದಖಂಡಖಂಡಂ
ವ್ಯೋಮೇವ ಕೇವಲಸಮೀರಣಮಾವೃತಾಂಗಂ ।
ಹಂಸೈರ್ಲಸದ್ಬಿಸಲತಾಕವಲಾಲಸಾಂಸೈಃ
ಕಾಲೇನ ಸಂಚಯಕೃತೈರಿವ ಚಂದ್ರಬಿಂಬೈಃ ॥ ೭ ॥

ಆಮೋದಮಂದಮಕರಂದಕರಾಲವಾತ-
ವ್ಯಾಧೂತಪಂಕಪುಟಪಾಟನಪಾಟವೇನ ।
ಉದ್ಯನ್ಮಹಾಪಟಪಟಾ ವಯತೀವ ಲೇಖಾ-
ಕ್ಷುಭ್ಯತ್ಖಗಾಶ್ರಿತಲತೋಜ್ಝಿತಪುಷ್ಪವರ್ಷಂ ॥ ೮ ॥

---

೬. ಈ ಸರಸ್ಸು ಮೇಘಗಳನ್ನು ಹಾರಿಸುತ್ತ ಬೀಸುವ ಗಾಳಿಗಳಿಂದ ಕಂಪಿತವಾದ ಕಮಲ ಷಂಡದಿಂದ ಮೇಲಕ್ಕೆದ್ದ ಪುಷ್ಪರಜಃ ಪ್ರಕಾಶದಿಂದ ವಿದ್ಯುತ್ತೇನಾದರೂ ಮಿಂಚಿತೋ ಎಂಬಂತೆ ಪ್ರಕಾಶಮಯವಾಗಿರುವುದು ಒಂದು ಕಡೆ, ಇನ್ನೊಂದುಕಡೆ ಜಲಬಿಂದುಗಳಿಂದ ಕೂಡಿ ಕತ್ತಲಾಗಿರುತ್ತ, ಸಂಧ್ಯಾಕಾಶದ ಹರಹಿನಂತೆ ಅಪ್ರಕಾಶವಾಗಿರುವುದು.

೭. ಗಾಳಿಯು ಚೆದುರಿಸಿದ ಶರದಭ್ರಗಳ ತುಂಡುಗಳಿಂದ ಮನೋಹರವಾದ ಆಕಾಶದಂತೆ, ಮರಿಗಳಿಗೆ ಕೊಂಡೊಯ್ಯಬೇಕೆಂದು ಕಮಲಲತೆಗಳನ್ನು ಸಂಗ್ರಹಿಸಿ ಆ ಭಾರದಿಂದ ನೋಯುತ್ತಿರುವ ಹಂಸಗಳು ಕಾಲನು ಸಂಗ್ರಹಿಸಿರುವ ಚಂದ್ರಬಿಂಬಗಳಂತೆ ಮೆರೆಯುತ್ತಿರಲು, ಕೇವಲ ಸಮೀರಣವಾದ ಸರಸ್ಸು (ಮನೋಹರವಾಗಿರುವುದು.)

೮. ಆಮೋದದಿಂದ ತುಂಬಿ ಮಂದವಾದ ಮಕರಂದದಿಂದ ತಂಪುಗೊಂಡ ಗಾಳಿಯು ಕೆಸರಿರುವ ಕಡೆ ಬೀಸಲು, ನೀರು ಕೆಸರುಗಳುಬೇರೆ ಬೇರೆಯಾಗುವ ಅವಸರದಲ್ಲಿ ಪಟ ಪಟ ಎಂಬ ಮಹಾ ಶಬ್ದವಾಗುತ್ತಿರುವುದು. ಆಗ ಕ್ಷೋಭಗೊಂಡು ಹಕ್ಕಿಗಳು ತಾವು ಕುಳಿತಿದ್ದ ಲತೆಗಳನ್ನು ಬಿಟ್ಟು ಹಾರುವುವು.

ವೇಲ್ಲನ್ಮಹಾಕಮಲಪಲ್ಲವತಾಲವೃಂತ
ಸಂಜೀವಿತಂ ವಲಿತಚಾಮರಚಾರುಫೇನಂ ।
ರಾಜಾಯಮಾನಮಲಿಕೋಕಿಲಗೀತಗೀತಂ-
ಸದ್ವೃತ್ತಪಂಕಜಲತಾಲಲಿತಾಂಗನೌಘಂ ॥ ೯ ॥

ಭೃಂಗಾಗ್ರಭಾಜನಮನೋಹರಹಾರಿಗೀತಂ
ರಾಜೀವರೇಣುರಣಕೀರ್ಣಪಿಶಂಗತೋಯಂ ।
ಡಿಂಡೀರಪಿಂಡಪರಿಪಾಂಡುರಪುಂಡರೀಕ-
ಖಂಡೋಪಮಂಡಿತತಟೋಪವನಾವತಂಸಂ ॥ ೧೦ ॥

ವಿವಿಕ್ತಹೃದಯಾಂಭೋಜಂ ಹೃದಯಾಹ್ಲಾದನಂ ಪರಂ ।
ರಸವತ್ಸ್ವಾದು ಭಾತೀದಂ ಸರಃ ಸತ್ಸಂಗಮೋಪಮಂ ॥ ೧೧ ॥

---

ಆ ಲತೆಗಳು ಆಗ ಅಲ್ಲಾಡಿ ತಮ್ಮ ಹೂಗಳನ್ನು ಉದುರಿಸುವುವು. ಅವು ನೀರಿಗೆ ಬೀಳುವುವು. ಅದನ್ನು ಕಂಡರೆ ಯಾವನೋ ಪಟ ಪಟ ಎಂದು ಸದ್ದು ಮಾಡುತ್ತ ಒಂದು ಪಟವನ್ನು ನೇಯುವಂತಿರುವುದು.

೯. ಈ ಸರೋವರವು ರಾಜನಂತಿರುವುದು. ಚಲಿಸುತ್ತಿರುವ ಮಹಾ ಕಮಲ ಪಲ್ಲವಗಳು ಬೀಸುವ ತಾಳೆಯ ಬೀಸಣಿಗೆಯಂತಿರುವುವು. ನೊರೆಯ ಗುಡ್ಡೆಗಳು ಬೀಸುತ್ತಿರುವ ಚಾಮರಗಳಂತೆ ಮನೋಹರವಾಗಿರುವುವು. ಅಲಿಗಳೂ ಕೋಕಿಲಗಳೂ ಕೀರ್ತಿ ಗೀತಿಗಳನ್ನು ಹಾಡುತ್ತಿರುವುವು. ಸದ್ವೃತ್ತ (ಗುಂಡು-ನಡತೆ)ಗಳನ್ನುಳ್ಳ ಕಮಲಲತೆಗಳೆಂಬ ಲಲಿತಾಂಗನಾ ಗಣವು ಈತ ನೊಡನೆ ಇರುವುದು.

೧೦. ಈ ರಾಜನು, ಭೃಂಗಗಳೆಂಬ ಶ್ರೇಷ್ಠಗಾಯಕರ ಮನೋಹರವಾದ ಗೀತಗಳುಳ್ಳವನು. ರಾಜೀವ ರೇಣುಗಳು ತುಂಬಿ ಹಳದಿಯಾಗಿರುವ ನೀರುಳ್ಳವನು. ನೊರೆಗಳ ಹಿಂಡುಗಳೆಂಬಂತೆ ಬೆಳ್ಳಗಿರುವ ಪುಂಡರೀಕಗಳಿಂದ ಅಲಂಕೃತವಾಗಿರುವ ತಟೋಪವನಗಳೆಂಬ ಅವತಂಸವುಳ್ಳವನು.

೧೧. ಅರಳಿದ ಹೃದಯಾಂಭೋಜವುಳ್ಳುದಾಗಿ, ಉತ್ತಮವಾದ ರೀತಿಯಲ್ಲಿ ಮನಸ್ಸನ್ನು ಆನಂದಪಡಿಸುವುದಾಗಿ, ಸತ್ಸಂಗಮದಂತೆ, ಈ ಸರೋವರವು ಪ್ರಕಾಶಿಸುವುದು.

ಬಿಂಬಿತೇನ ಮರುವ್ಯೋಮ್ನಾ ಭಾತೀದಂ ಸೌಮ್ಯನಿರ್ಮಲಂ ।
ಶಾಸ್ತ್ರಾರ್ಥಪರಿಣಾಮೇನ ಮಹತಾಮಿವ ಮಾನಸಂ ॥ ೧೨ ॥

ಕಿಂಚಿಲ್ಲಕ್ಷ್ಯಮಪಶ್ಯಾಮಂ ಪೃಷತ್ಪರುಷಮಾರುತಂ ।
ಹಿಮಾಭ್ರಮಿವ ಭಾತೀದಂ ಸರಃ ಸರಸಸಾರಸಂ ॥ ೧೩ ॥

ಯಥೇದಂ ಬ್ರಹ್ಮಣೋ ದೃಶ್ಯಮವಿಕಾರಾದಿ ನೇತರತ್ ।
ಯಥಾಂಭಸಿ ತರಂಗಾದಿ ರಾಜನ್ಪೃಥಗಿವ ಸ್ಥಿತಂ ॥ ೧೪ ॥

ಆತ್ಮನ್ಯೈವೋಹ್ಯವಮಾನಾನಾಂ ಚಕ್ರಾವರ್ತವಿಧಾಯಿನಾಂ ।
ಜಡಾಶಯಾನಾಂ ವಿಷಮಾ ಹಾ ಕಲ್ಲೋಲಪರಂಪರಾ ॥ ೧೫ ॥

ಕೂಪವಾಪೀಸರೋಬ್ಧೀನಾಂ ದೃಶ್ಯತೇ ಯಾದೃಗಂ ತರಂ ।
ನಾರೀಪುರುಷತೋಯಾನಾಂ ವಿಜ್ಞೇಯಂ ತಾದೃಗಂತರಂ ॥ ೧೬ ॥

---

೧೨. ಶಸ್ತ್ರಾರ್ಥವನ್ನು ಜೀರ್ಣಿಸಿಕೊಂಡ ಪರಿಣಾಮವಾಗಿ ನಿರ್ಮಲವಾಗಿರುವ ಮಹಾತ್ಮರ ಮನಸ್ಸಿನಂತೆ, ಮರುಭೂಮಿಯಂತೆ ನಿರ್ಜಲವಾಗಿ, ನಿರ್ಮಲವಾಗಿರುವ ಆಕಾಶವನ್ನು ಪ್ರತಿಬಿಂಬಿಸಿ ಸೌಮ್ಯವಾಗಿ, ನಿರ್ಮಲವಾಗಿರುವ ಈ ಸರೋವರವು ಪ್ರಕಾಶಿಸುವುದು.

೧೩. ಆನಂದವಾಗಿರುವ ಸಾರಸಗಳಿಂದ ಮನೋಹರವಾಗಿರುವ ಈ ಸರಸ್ಸು, ಕೊಂಚ ಮಟ್ಟಿಗೆ ಕಾಣಿಸುತ್ತಾ, ಕಪ್ಪು ಇಲ್ಲದೆ, ಜಲಬಿಂದುಗಳಿಂದ ಪರುಷವಾಗಿರುವ ಮಾರುತವುಳ್ಳದಾಗಿ, ಹಿಮದ ಮೋಡದಂತೆ ಪ್ರಕಾಶಿಸುವುದು.

೧೪. ಈ ದೃಶ್ಯವು ಅವಿಕಾರಾದಿಗಳಾದ ಬ್ರಹ್ಮವಲ್ಲದೆ ಮತ್ತೇನೂ ಹೇಗೆ ಅಲ್ಲವೋ ಹಾಗೇ ನೀರಿನಲ್ಲಿಯೇ ಪೃಥಕ್ಕಾಗಿರುವಂತೆ ತೋರಿದರೂ ತರಂಗಾದಿಗಳು ಅಪೃಥಕ್ಕಾಗಿಯೇ ಇರುವುವು.

೧೫. ಜಡಾ (ಲ) ಶಯಗಳುಳ್ಳವರ ಕಲ್ಲೋಲ ಪರಂಪರೆಯು ತಾನೇ ಹರಿಯುತ್ತಿದ್ದರೂ ಚಕ್ರಾವರ್ತಗಳನ್ನು ಮಾಡುವುದರಿಂದ ವಿಷಮವಾಗುವುದು.

೧೬. ಕೂಪ, ವಾಪಿ, ಸರಸ್ಸು, ಅಬ್ಧಿ ಮೊದಲಾದ ಜಲಾಶಯಗಳಿಗೆ ಹೇಗೆ ಅಂತರವೋ, ಹಾಗೆಯೇ ನಾರೀಪುರುಷ ಮೊದಲಾದ ಶರೀರಗಳನ್ನು ಧರಿಸುವ ಆತ್ಮನಲ್ಲಿ ಅಂತರವೆಂದು ತಿಳಿಯಬೇಕು.

ಜಂತೋರಿವಾಸ್ಯ ಮನಸೋ ಜಲಜಾತಿಬಂಧ
ಜೀರ್ಣಸ್ಯ ಜರ್ಜರದಶಾಲಹರೀಭ್ರಮೇಣ
ಆವರ್ತವೃತ್ತಿವಲಿತಾನ್ಯತಿಸಂತತಾನಿ
ಕೋ ನಾಮ ಸಂಕಲಯಿತುಂ ಕಮಲಾನಿ ಶಕ್ತಃ ॥೧೭॥

ಚಿತ್ರಂ ವಿಜೃಂಭಿತಮಹೋ ಜಡಸಂಗಮಸ್ಯ
ಪದ್ಮೋಽಪಿ ಯನ್ನಿಜಗುಣಾನಗುಣಾನಿವೈಷಃ ।
ಅಂತಃ ಪ್ರಗೋಪಯತಿ ಕಂಠತಲೇ ನಿವೇಶ್ಯ
ಸರ್ವಸ್ಯ ದರ್ಶಯತಿ ದುರ್ಭಗಕಂಟಕೌಘಂ ॥೧೮॥

---

೧೭. ಜಂತುವಿನ ಮನಸ್ಸಿನಹಾಗೆಯೇ, ಜಲ (ಡ) ಜಾತಿಗಳ ಸಂಬಂಧದಿಂದ ಜೀರ್ಣವಾಗಿ ಜರ್ಜರದಶೆಯಲ್ಲಿ ಲಹರಿಗಳಲ್ಲಿ ಅಲೆಯುತ್ತಾ, ಆವರ್ತ, ಪ್ರವಾಹಗಳಲ್ಲಿ ಸಿಕ್ಕಿಕೊಂಡು ಸಂತತವಾಗಿ ಕೊಚ್ಚಿಹೋಗುವ ಕಮಲಗಳನ್ನು ಲೆಕ್ಕ ಮಾಡಲು ಯಾರುತಾನೇ ಶಕ್ತರಾದಾರು ?

(ಜಲೇಜಾತಿರ್ಜನ್ಮಯೇಷಾಂ ಪದ್ಮೋತ್ಪಲಾದೀನಾಂ। ಲಡಯೋರಭೇದಾತ್ ಜಡಾಜ್ಞಾತಯೋಃ ನಾನಾಯೋನಿಭೇದಾಶ್ಚ ತೇಷಾಂ ಬಂಧೇನ ಸಂಬಂಧೇನ ಜೀರ್ಣಸ್ಯ ಜಂತೋರ್ಮನಸ ಇವಾಸ್ಯ ಸರಸಃ ಪದ್ಮಾದೀನಾಂ ತತ್ತದ್ದೇಹಾನಾಂ ಚ ಜರ್ಜರದಶಾಂ ತಾಯಾಲಹರ್ಯಸ್ತರಂಗಾಭೋಗೋತ್ಸಾಹಶ್ಚ ತದ್ಭ್ರಮೇಣ ಅತಿಶಯೇನ ಸಂತತಾನಿ ಆವರ್ತ ತುಲ್ಯಾನಿ ಇಚ್ಛಾದ್ವೇಷಾದಿ ವೃತ್ತೀನಾಂ ವಲಿತಾನಿ ಪರಿವರ್ತಿತಾನಿ ಇವ ಅಸಂಖ್ಯಾತಾನಿ ಕಮಲಾನಿ ಸಂಕಲಯಿತುಂ ಕೋನಾಮ ಶಕ್ತಃ, ನಕಶ್ಚಿದಿತ್ಯರ್ಥಃ —ತಾ.ಪ್ರ )

೧೮. ಪದ್ಮವು ತನ್ನ ಗುಣಗಳನ್ನು ಪ್ರದರ್ಶಿಸದೆ ಅವುಗಳನ್ನು ಕಂಠದಲ್ಲಿಟ್ಟುಕೊಂಡು ಒಳಗೇ ಮುಚ್ಚಿಟ್ಟುಕೊಳ್ಳುವುದು. ತನ್ನಲ್ಲಿರುವ ಕೆಟ್ಟ ಮುಳ್ಳುಗಳೆಂಬ ಕೆಟ್ಟ ಗುಣಗಳನ್ನು ಎಲ್ಲರಿಗೂ ಕಾಣುವಂತೆ ತೋರಿಸುವುದು. ಜಡರ ಸಂಗಡ ವಿಜೃಂಭಣವು ಹೇಗಿರುವುದು ನೋಡು !

ಸಚ್ಛಿದ್ರೈರದೃಢೈಃ ಸೂಕ್ಷ್ಮೈರ್ಗೋಪಿತೈರ್ಜಾಡ್ಯಸಂಯುತೈಃ ।
ಅನಲ್ಪೈರಪಿ ನಿಃಸಾರೈಃ ಪದ್ಮಸ್ಯೇವ ಗುಣೈರಲಂ ॥೧೯॥

ಮಹತಾಂ ಕುಲಪದ್ಮಾನಾಂ ಗುಣಸೌಂದರ್ಯಶಾಲಿನಾಂ ।
ಪ್ರಭಾವಂ ನಾಸ್ತಿ ಸಂಖ್ಯಾತುಂ ವಾಸುಕೇರಪಿ ಶಕ್ತತಾ ॥೨೦॥

ಹರಿವಕ್ಷೋಗತಾ ಲಕ್ಷ್ಮೀರಪಿ ಶೋಭಾರ್ಥಮೇವ ಯತ್ ।
ಬಿಭರ್ತಿ ಕಮಲಂ ಹಸ್ತೇ ಕಾನ್ಯಾಶಂಸಾಧಿಕಾ ಭವೇತ್ ॥೨೧॥

ಸಿತಾಸಿತಾಭ್ಯಾಂ ರೂಪಾಭ್ಯಾಂ ಕಮಲೋತ್ಪಲಖಂಡಯೋಃ ।
ವೈಸಾದೃಶ್ಯಂ ಭವೇತ್ಕಿಂತು ಸಮಾ ಜಡಜಡೈಕಯೋಃ ॥೨೨॥

ಸಾಮ್ಯಂ ನ ಫುಲ್ಲವಿಪಿನೇನ ಸರಃಸು ಯಾತಿ
ವ್ಯೋಮ್ನಾ ನ ತಾರಕಯುತೇನ ನ ಚೇಂದುವೃಂದೈಃ ।

---

೧೯. ಪದ್ಮದ ಗುಣಗಳನ್ನು ಏನು ಹೇಳೋಣ! ಸಚ್ಛಿದ್ರಗಳು, ಅದೃಢಗಳು, ಸೂಕ್ಷ್ಮಗಳು, ಗೋಪಿತಗಳು, ಜಾಡ್ಯಸಂಯುತಗಳು, ಅನಲ್ಪಗಳು ನಿಸ್ಸಾರಗಳು.

೨೦. ಗುಣಸೌಂದರ್ಯಶಾಲಿಗಳಾದ ಮಹಾ ಕುಲಪದ್ಮಗಳ ಪ್ರಭಾವವನ್ನು ಎಣಿಸಲು ವಾಸುಕಿಗೂ ಶಕ್ತಿಯಿಲ್ಲ.

೨೧. ಶ್ರೀಹರಿಯ ವಕ್ಷಸ್ಸಿನಲ್ಲಿರುವ ಮಹಾಲಕ್ಷ್ಮಿಯೇ ಶೋಭಾರ್ಥವಾಗಿ ಕಮಲವನ್ನು ಹಸ್ತದಲ್ಲಿ ಧರಿಸಿರುವಳು ಎಂದಮೇಲೆ ಅದಕ್ಕೆ ಮತ್ತೆ ಯಾವ ಅಧಿಕವಾದ ಪ್ರಶಂಸೆಯು ಬೇಕು?

೨೨. ಕಮಲ ಕನ್ನೈದಿಲೆಗಳಿಗೆ ಜಲದಲ್ಲಿ ಹುಟ್ಟಿರುವುದು, ಜಡವಾಗಿರುವುದು, ಚಂದ್ರಸೂರ್ಯರನ್ನು ದ್ವೇಷಿಸುವುದು ಎಂಬ ದುರ್ಗುಣಗಳೆಲ್ಲ ಸಮವಾಗಿದ್ದರೂ ಬೆಳ್ಳಗಿರುವುದೊಂದು ಕಪ್ಪಗಿರುವುದೊಂದು ಎಂಬ ರೂಪವೈಸಾದೃಶ್ಯವು ಮಾತ್ರ ಉಂಟು.

೨೩. ಸರಸ್ಸುಗಳೂ ಫುಲ್ಲವಾದ ಪಂಕಜವನದ ನವೋದಿತ ಸೌಭಾಗ್ಯವು, ಫುಲ್ಲವಿಪಿನಕ್ಕೂ ಇಲ್ಲ; ಇಂದುವೃಂದಗಳಿಂದಲೂ ತಾರಕೆಗಳಿಂದಲೂ ಕೂಡಿರುವ

ನೃತ್ಯದ್ವಧೂವಿಹಸಿತಾನನಶೋಭಯೈತಿ
ಫುಲ್ಲಸ್ಯ ಪಂಕಜವನಸ್ಯ ನವೋದಿತಾ ಶ್ರೀಃ ॥೨೩॥

ಯೇಷಾಂ ಪುಷ್ಪಲತಾಸ್ವಾದೈರನನ್ಯಮನಸಾಂ ಗತಂ ।
ಭೃಂಗಾಣಾಮಾಯುರಾಯಾಮಿ ತ ಏವ ಸುಭಗೋತ್ತಮಾಃ ॥೨೪॥

ಚೂತಚಾರುಚಮತ್ಕಾರಂ ಚಂಚರೀಕಾಶ್ಚರಂತಿ ಯೇ ।
ತ ಏವ ಸಚಮತ್ಕಾರಾ ಇತರೇ ಜಾತಿಪೂರಣಂ ॥೨೫॥

ಮತ್ತಾ ಮಧುಮದಾಮೋದೈಃ ಪುಷ್ಕರೇಷು ರಣಂತಿ ಯೇ ।
ತುಷ್ಟಾನಾಮಿತರಸ್ವಾದೈರ್ಭ್ರಮರಾಣಾಂ ಹಸಂತಿ ತೇ ॥೨೬॥

---

ಆಕಾಶಕ್ಕೂ ಇಲ್ಲ; ಆನಂದದಿಂದ ನರ್ತಿಸುವ ನಗುವ ವಧುವಿನ ಮುಖಕಾಂತಿಗೆ ಮಾತ್ರ ಉಂಟು.

೨೪. ಪುಷ್ಪಲತಾಸ್ವಾದಗಳಿಂದ ಅನನ್ಯಮನಸ್ಕರಾಗುವ ಭೃಂಗಗಳು ದೀರ್ಘವಾದ ಆಯುಸ್ಸನ್ನು (ಆ ಮಧುಪಾನದಲ್ಲಿ) ಕಳೆಯುವುವು. ಆದರಿಂದ ಅವೇ ಸೌಭಾಗ್ಯವಂತರಲ್ಲೆಲ್ಲಾ ಶ್ರೇಷ್ಠವು.

೨೫. ಚೂತವೃಕ್ಷದ ಸುಗಂಧಿಯಾದ ಮಕರಂದರಸವನ್ನು (ನವಾಂಕುರ ಕಷಾಯರಸವನ್ನೂ) ಅನುಭವಿಸುವ ಚಂಚರಿಕಗಳೇ ನಿಜವಾಗಿಯೂ ಬುದ್ಧಿವಂತರು. ಇತರರು ಆ ಜಾತಿಯಲ್ಲಿ ಹುಟ್ಟಿದವರು ಅಷ್ಟೇ !

೨೬. ಪುಷ್ಕರ (ಕಮಲ) ಗಳಲ್ಲಿ ಮಧುಮದಾಮೋದಗಳಿಂದ ಮತ್ತರಾಗಿ ಗಾನಮಾಡುವ ಭ್ರಮರಗಳು ಇತರ ಸ್ವಾದಗಳಿಂದ ತೃಪ್ತರಾಗುವ ಭ್ರಮರಗಳನ್ನು ಹಾಸ್ಯಮಾಡುವುವು.

ಯೇನೋಷಿತಂ ವಿಹತಮುಲ್ಲಸಿತಂ ಪ್ರಸುಪ್ತಂ
ಪದ್ಮೋದರೇಷು ಶಶಿಕೋಟರಕೋಮಲೇಷು ।
ಭೃಂಗಃ ಸ ಏಷ ಶಿಶಿರೇ ವಿರಸೇಷು ಭಾವಂ
ಕಷ್ಟಂ ಕರಿಷ್ಯತಿ ಕಥಂ ತರುಪುಷ್ಪಕೇಷು ॥೨೭॥

ಅಫುಲ್ಲಮಲ್ಲಿಕೋದ್ದಾಮಮುಕುಲೋಪರಿ ಷಟ್ ಪದಃ ।
ದೃಶ್ಯತೇ ಕಾಲರುದ್ರೇಣ ಶೂಲೇ ಪ್ರೋತ ಇವಾಂಧಕಃ ॥೨೮॥

ಆಸ್ವಾದಯನ್ವಿವಿಧಪುಷ್ಪಮಧೂನಿ ಭೃಂಗ
ನಿತ್ಯಂ ಭ್ರಮನ್ಸಕಲಶೈಲಲತಾಗೃಹೇಷು ।
ನಾದ್ಯಾಪಿ ತುಷ್ಯಸಿ ಕಿಮಂಗ ದುರಾಶಯೋಽಸಿ
ಮನ್ಯೇ ದ ಸಾರಮುಪಗಚ್ಛಸಿ ವಾ ವನೇಭ್ಯಃ ॥೨೯॥

---

೨೭. ಚಂದ್ರಮಂಡಲದಂತೆ ಕೋಮಲವಾಗಿರುವ ಪದ್ಮೋದರಗಳಲ್ಲಿ ವಾಸ ಮಾಡಿ, ಹಾಡಿ, ಉಲ್ಲಾಸದಿಂದ ಇದ್ದು, ಮಲಗಿ, ಸುಖಿಸಿದ ಭೃಂಗವು ಶಿಶಿರದಲ್ಲಿ ಯಾವುದೋ ಮರಗಳ ರಸಹೀನವಾದ ಹೂವುಗಳಲ್ಲಿಯೂ ಆಸಕ್ತಿಯನ್ನು ಬಹು ಕಷ್ಟದಿಂದ ವಹಿಸುವುದು.

೨೮. ಅರಳದಿರುವ ಮಲ್ಲಿಗೆಯ ದೊಡ್ಡ ಮೊಗ್ಗಿನಮೇಲೆ ಕುಳಿತಿರುವ ದುಂಬಿಯು, ಕಾಲರುದ್ರನು ಶೂಲದಲ್ಲಿ ತಿವಿದು ಮೇಲಕ್ಕೆತ್ತಿರುವ ಅಂಧಕನೋ ಎಂಬಂತಿರುವುದು.

೨೯. ಭೃಂಗವೇ, ವಿವಿಧವಾದ ಪುಷ್ಪಗಳ ಮಧುಗಳನ್ನು ಆಸ್ವಾದಿಸುವೆ. ಸಕಲ ಶೈಲ ಲತಾಗೃಹಗಳಲ್ಲಿಯೂ ನಿತ್ಯವೂ ಸುತ್ತುವೆ; ಆದರೂ ಇದುವರೆಗೂ ನಿನಗೆ ತೃಪ್ತಿಯಾಗಿಲ್ಲವೆಂದರೆ, ನೀನು ನಿಜವಾಗಿಯೂ ದುರಾಶಯನು; ಅಥವಾ ವನಗಳಿಂದ ನಿನಗೆ ಸಾರವಾದುದೇನೋ ಅದೇ ಸಿಕ್ಕಿಲ್ಲವೋ?

ಕಮಲಕುಲಕವಲಕೋವಿದ ಗಚ್ಛ ಸರೋ ಮಧುಪಮಾರೂಢಂ |
ಬದರದರೀಷು ವಿದೀರ್ಣಂ ದೇಹಂ ಕುರು ಕಂಟಕಕ್ರಕಚ್ಚೈಃ ||೩೦||

ಅತಸೀಕುಸುಮೇ ಕುವಲಯದಲವಲಯೇ ವಿಕಸಿತೇ ಚ ತಾಪಿಚ್ಛೇ |
ಪರಭಾಗಮೇಹಿ ಮಧುನಾ ತಾಸು ವಿಸದೃಶೀವ ಪಂಡಿತಃ ಪುರುಷಃ ||೩೧||

ಪಶ್ಯೈಷಾ ನಾಭಿನಲಿನೀ ಕೇಸರೈಃ ಪಾಲಿತಾ ಶ್ರಿಯಾ |
ಹಂಸಮಾಲಾಮಲಾವಲ್ಲೀ ಸಾಮಗಾಯನಕೂಜಿತಾ ||೩೨||

---

೩೦. ಕಮಲಕುಲಗಳ ಕವಲವನ್ನು ಆಸ್ವಾದಿಸುವ ಕೋವಿದನಾದ ಮಧುಪನೆ ಸರಸ್ಸನ್ನು ಕುರಿತು ಹೋಗು ಎಲಚಿಗಿಡಗಳಿಗೆ ಹೋಗಿ ಅಲ್ಲಿರುವ ಮುಳ್ಳಿನ ಗರಗಸಗಳಿಗೆ ಸಿಕ್ಕಿ ನಿನ್ನ ದೇಹವನ್ನು ಕೊರೆಯಿಸಿಕೊಳ್ಳಬೇಡ.

೩೧. (ನಿನಗೆ ಕಮಲಗಳು ದೊರೆಯದ ಕಾಲದಲ್ಲಿ) ನಿನ್ನಂತೆಯೇ ಕಪ್ಪಗಿರುವ ಕುವಲಯದಲದ ವಲಯಗಳಲ್ಲಿ, ಅತಸೀಕುಸುಮಗಳಲ್ಲಿ, ವಿಕಸಿತವಾದ ತಮಾಲಗಳಲ್ಲಿ ದೊರೆಯುವ ಮಧುವಿನಿಂದ ಸಂತೋಷಪಟ್ಟುಕೊಂಡು ಉಳಿದ ಆಯುಸ್ಸನ್ನು ಕಳೆ. ಪಂಡಿತನು ಪ್ರಭುವೂ ಸಮಾಜವೂ ತನಗೆ ವಿಹಿತವಾಗಿಲ್ಲದಿದ್ದರೆ, ತನಗೆ ಬೇಕಾದ ಪ್ರಭುವನ್ನೂ ಸಮಾಜವನ್ನೂ ಹುಡುಕಿಕೊಂಡು ಹೋಗುವನಲ್ಲವೆ?

(ಯಥಾ ಪಂಡಿತಃ ಪುರುಷಃ ಸ್ವಾನುರೂಪಪ್ರಭುಸಮಾಜಾದ್ಯಲಾಭೇ ವಿಸದೃಶಿಪ್ರಭೌ ಏಷನ್ನಪಿ ವಿದ್ವತ್ತ್ವಾಪ್ರಾಪ್ತಯೇ ವಸತಿ ನ ಕಿರಾತಕುಲೇತದ್ವದಿತ್ಯರ್ಥಃ–ತಾ. ಪ್ರ.)

೩೨. ಪರಮಾತ್ಮನ ನಾಭಿಕಮಲದ ಕೇಸರಗಳಿಂದ ಮಹಾಲಕ್ಷ್ಮಿಯೇ ವರ್ಧಿಸಿರುವ ಈ ಬ್ರಾಹ್ಮ ಹಂಸಮಾಲೆಯು, ನೋಡು, ಸಾಮಗಾಯನವನ್ನು ಮಾಡುತ್ತಿರುವುದು.

(ಸರೋವರದ ನಡುವೆ ನಲಿನೀಕೇಸರಗಳಿಂದ ಪಾಲಿತವಾದ ಹಂಸಮಾಲೆಯೆಂಬ ಅಮಲವಲ್ಲಿಯು, ತನ್ನ ಭಾಗ್ಯದಿಂದ, ಕೂಜಿತಮಾಡುತ್ತಿದ್ದರೆ, ಸಾಮಗಾನವಿದ್ದಂತಿರುವುದು.)

ದೋಲಾಕಮಲನೀಲಸ್ಥಾಂ ದೃಷ್ಟ್ವಾ ಖೇ ಪ್ರತಿಬಿಂಬಿತಾಂ ।
ಹಂಸೋ ಹಂಸೀಮನುಸರನ್ಮಂಡಲೇ ನೇಹ ಚೇತತಿ ॥೩೩॥

ಮಾ ಭೂತ್ಕಸ್ಯಚಿದೇವೈಷಾ ರಾಜನ್ವ್ಯಸನಿತಾ ಭೃಶಂ ।
ಪಶ್ಯೈತಾಂ ಬಿಂಬಿತಾಂ ಹಂಸೋ ಹಂಸೀಮನುಸರನ್ಮೃತಃ ॥೩೪॥

ಹೇಲಯಾ ರಾಜಹಂಸೇನ ಯತ್ಕೃತಂ ಕಲಕೂಜಿತಂ ।
ನ ತದ್ವರ್ಷಶತೇನಾಪಿ ಜಾನಾತ್ಯಾಶಿಕ್ಷಿತುಂ ಬಕಃ ॥೩೫॥

ಸಮಾನೇಷ್ವಾಕರಾಕಾರಜಾತಿಚೇಷ್ಟಾಶನಾದಿಷು ।
ಹಂಸಸ್ಯ ರಾಜಹಂಸಸ್ಯ ದೂರಮತ್ಯಂತಮಂತರಂ ॥೩೬॥

---

೩೩. ಹಂಸಿಯನ್ನು ಸರೋವರದಲ್ಲಿ ಹುಡುಕುತ್ತಿದ್ದ ಹಂಸವು ಕಮಲದ ಉಯ್ಯಾಲೆಯಲ್ಲಿ ಪ್ರತಿಬಿಂಬಿಸಿರುವ ಹಂಸಿಯನ್ನು ಕಂಡು, (ಅವಳನ್ನು ಪಡೆಯಲಾರದೆ) ಮೂರ್ಛೆಹೋದನು.

೩೪. ಎಲೈ ರಾಜನೆ, ಇಂತಹ ವ್ಯಸನಿತೆಯೂ ಯಾರಿಗೂ ಬೇಡ. ನೋಡು, ಪ್ರತಿಬಿಂಬಿತವಾಗಿರುವ ಹಂಸಿಯನ್ನು ನೋಡಿ, ಅದನ್ನು ಪಡೆಯುವುದಕ್ಕೆ ಹೋಗಿ ಹಂಸವು ತಾನೇ ಸತ್ತಿತಲ್ಲಾ !

೩೫. ರಾಜಹಂಸವು ಲೀಲೆಯಿಂದ ಯಾವ ಮನೋಹರವಾದ ಕೂಜಿತವನ್ನು ಮಾಡುವುದೋ ಅದನ್ನು ಬಕವು ವರ್ಷಶತವಾದರೂ ಕಲಿಯಲಾರದು.

೩೬. ಆಕರ, ಆಕಾರ, ಜಾತಿ, ಚೇಷ್ಟಾ, ಅಶನಾದಿಗಳಲ್ಲಿ ಹಂಸವೂ ರಾಜಹಂಸವೂ ಒಂದೇ ಆದರೂ ಎರಡಕ್ಕೂ ಅಂತರವೂ ದೂರವೂ ಬಹಳ ಹೆಚ್ಚು.

(ಆಕರೋ ಜನ್ಮಸ್ಥಾನಂ । ಆಕಾರಃ ಸಂಸ್ಥಾನಂ ।........ ಯತಸ್ತೇ (ರಾಜಹಂಸಾಃ) ಮಾನಸೇ ಸ್ವರ್ಣಪದ್ಮವನೇ ಕ್ರೀಡಂತಿ, ಸಮುದ್ರೇಚ ನಿಮಜ್ಜ್ಯ ಮುಕ್ತಾಃ ಖಾದಂತಿ, ಸರ್ವಪಕ್ಷ್ಯಗಮ್ಯೇ ಊರ್ಧ್ವಭಾಗೇ ನಭಸಃ ಸಂಚರಂತಿ, ನಾನ್ಯೇ ಇತಿ ಭಾವಃ " ರಾಜಹಂಸಾಸ್ತುತೇ ಚಂಚು ಚರಣೈರ್ಲೋಹಿತೈಃ ಸಿತಾಃ "—ತಾ. ಪ್ರ.)

ಶುಕ್ಲಪಕ್ಷಸ್ಥಿತೋ ವ್ಯೋಮ್ನಿ ಕುಮುದಾಕಾರಭಾಸಕಃ ।
ಆಹ್ಲಾದಯತಿ ಚೇತಾಂಸಿ ಹಂಸಶ್ಚಂದ್ರ ಇವೋತ್ಥಿತಃ ॥೩೭॥

ಉನ್ನಾಲನಲಿನೀನಾಲಕದಲೀಸ್ತಂಭಸಂಕುಲೇ ।
ವನೇ ವಿಹರತಾಂ ಲಕ್ಷ್ಮೀಂ ಹಂಸಾನಾಮೇತಿ ಕಃ ಖಗಃ ॥೩೮॥

ತರಂಗವಲಯಾಲೋಲಸೀಕರೋತ್ಕರಹಾರಿಣಿ ।
ಕುಮುದೋತ್ಪಲಕಹ್ಲಾರಪುಷ್ಪಸಂಭಾರಸುಂದರೀ ॥೩೯॥

---

೩೭. ಹಂಸವು ಚಂದ್ರನಂತೆ ಮೆರೆಯುವುದು. ಶುಕ್ಲಪಕ್ಷದಲ್ಲಿ ಸ್ಥಿತನು ಚಂದ್ರನು ಶುಕ್ಲವಾದ ಪಕ್ಷಗಳಿಂದ ಸ್ಥಿತವು ಹಂಸವು. ಕುಮುದಾಕರಗಳಾದ ಸರಸ್ಸುಗಳನ್ನು ಚಂದ್ರನು ಸಂತೋಷಪಡಿಸುವನು. ಕು (ಭೂಮಿ) ಗೆ ಸಂತೋಷವನ್ನುಂಟುಮಾಡುವ ಆಕಾರದಿಂದ ಮೆರೆಯುವುದು ಹಂಸವು. ಇಬ್ಬರೂ ಮನಸ್ಸನ್ನು ಆಹ್ಲಾದಪಡಿಸುವರು.

೩೮ ಕದಲೀಸ್ತಂಭಗಳಂತೆ ಎತ್ತರವಾದ ನಾಲಗಳುಳ್ಳ ನಲಿನೀನಾಳಗಳ ವನದಲ್ಲಿ ವಿಹಾರಮಾಡುವ ಹಂಸಗಳ ಸೌಭಾಗ್ಯವು ಇನ್ನು ಯಾವ ಹಕ್ಕಿಗುಂಟು?

(ಯೋಗೇನ ಊರ್ಧ್ವೀಕೃತನಾಲಾಯಾ ಹೃದಯಪದ್ಮಲಕ್ಷಣಾ ನಲಿನೀ ತಸ್ಯಾಃ ಪ್ರಾಣಾಯಾಮಾಭ್ಯಾಸಾದ್ವಿಕಾಸೇನ ಕದಲೀವದ್ಯಃ ಸ್ತಂಭನಂ ಸ್ತಂಭಃ ತತ್ಸಂಕುಲೇ ಪ್ರಾಗುಕ್ತ ಹೃತ್ಪದ್ಮತ್ರಯಲಕ್ಷಣೇ ವನೇ ನಿರಸ್ತ ತ್ರಿವಿಧತಾಪ ನಿರತಿಶಯಾನಂದಾಸ್ವಾದನೇನ ಸದಾ ವಿರಹತಾಂ ಹಂಸಾನಾಂ ಯತೀನಾಂ ಜೀವನ್ಮುಕ್ತಿ ಸುಖಸಾಮ್ರಾಜ್ಯಲಕ್ಷಣಾಂ ಲಕ್ಷ್ಮೀಂ ಸಂಪದಃ, ಖಗೋದೇವೋಪಿ ಕ ಏತಿ ಪ್ರಾಪ್ನೋತೀತ್ಯರ್ಥಃ —ತಾ. ಪ್ರ.)

೩೯. ತರಂಗಗಳೆಂಬ ವಲಯಗಳೂ ಆಲೋಲವಾದ ಸೀಕರೋತ್ಕರಗಳೆಂಬ ಹಾರಗಳೂ, ಕುಮುದ, ಉತ್ಪಲ, ಕಹ್ಲಾರ, ಪುಷ್ಪಭಾರಗಳೂ ಉಳ್ಳವಳಾಗಿ ಈ ಸರಸ್ಸು ಸುಂದರಿಯಂತಿರುವುದು.

ಭೃಂಗಲೋಲಾಲಕಲತಾ ರಣತ್ಸಾರಸನೂಪುರಾ ।
ವರ್ತುಲಾವರ್ತನಾಭೀಕಾ ಚಲದ್ವೀಚಿವಿಲೋಚನಾ ॥೪೦॥

ಪ್ರತೀಕ್ಷಮಾಣಾ ದಯಿತಂ ರಸಪೂರಕರಂಧರಂ ।
ನಾರೀವ ಸರಸೀ ಚಾರುಹಂಸಕಾಭ್ಯಾಂ ವಿರಾಜತೇ ॥೪೧॥

ಹೇ ಹಂಸ ಮದ್ಗುಬಕಕಾಕಶರಾರುಸಾರೇ
ಮಾ ತ್ವಂ ಸರಸ್ಯವಿರತಂ ಕುರು ವಾಸಮೇಕಃ ।
ಆಪದ್ಯಪೀಹ ಸಮಶೀಲವಯೋವಚೋಭಿಃ
ಶ್ರೇಯಃಫಲಾ ಭವತಿ ಸಂಗತಿರಾತ್ಮವರ್ಗ್ಯೈಃ ॥೪೨॥

---

೪೦. ಭೃಂಗಗಳೆಂಬ ಲೋಲ-ಅಲಕಲತೆಗಳೂ, ಧ್ವನಿಮಾಡುತ್ತಿರುವ ಸಾರಸಗಳೆಂಬ ನೂಪುರಗಳೂ, ವರ್ತುಲವಾದ ಆವರ್ತವೆಂಬ ನಾಭಿಯೂ, ಚಂಚಲವಾದ ವೀಚಿಗಳೆಂಬ ವಿಲೋಚನಗಳೂ

೪೧. ರಸ ಪೂರ ಕರಂಧರನಾದ ದಯಿತನನ್ನು ಪ್ರತೀಕ್ಷೆ ಮಾಡುತ್ತಿರುವ ನಾರಿಯಂತೆ ಸರಸಿಯು ಹಂಸಕಗಳಿಂದ ವಿರಾಜಿಸುವುದು.

(ರಸೋ ಮನೋರಥೋ ಜಲಂಚ, ತಸ್ಯಪೂತಿನಃ ಪೂರಃ, ತತ್ಕರಂಧರಂ ಪರ್ವತಂ ಪ್ರತೀಕ್ಷಮಾಣಾ—ಹಂಸಕಾಭ್ಯಾಂ ಮಂಜರೀಭ್ಯಾಂ ಹಂಸಪೋತಾಭ್ಯಾಂ ಚ—ತಾ. ಪ್ರ.)

೪೨. ಎಲೈ ಹಂಸವೇ, ನೀರುಕಾಗೆ, ಬಕ, ಕಾಕ, ಮೊದಲಾದ ಹಿಂಸ್ರ ಪಕ್ಷಿಗಳು ತುಂಬಿರುವ ಸರಸಿಯಲ್ಲಿ ನೀನೊಬ್ಬನೇ ಬಹಳಕಾಲವಿರಬೇಡ. ಆಪತ್ಕಾಲದಲ್ಲೂ ಶೀಲ, ವಯಸ್ಸು ವಾಕ್ಕುಗಳಿಂದ ಸಮಾನರಾದ ಆತ್ಮೀಯರೊಡನೆ, ಇರುವುದರಿಂದ ಶ್ರೇಯಸ್ಸಾಗುವುದು.

ಪಾದಾಕ್ರಾಂತಮಹೇಭಮಸ್ತಕತಟಃ ಪದ್ಮಾಕರೈಕಾಲಯಃ ।
ಕಹ್ಲಾರೋತ್ಪಲಕುಂದಚಂಪಕಲತಾಸಂಭೋಗಸೌಭಾಗ್ಯವಾನ್ ॥
ಭೃಂಗೋಽಪ್ಯೇಷ ವಿಧೇರ್ವಶೇನ ಶಿಶಿರೇ ಲೋಷ್ಟಂ ತೃಣಂ ಸ್ವಾದಯನ್ ।
ಶೀತೇ ಶುಷ್ಕಬಕತ್ಯಹೋ ನು ವಿಪದಾ ದೈನ್ಯೇ ಮನೋ ದೀಯತೇ ॥೪೩॥

ಪುತ್ರಸ್ಯೇಹ ದಲೋದರೇ ದ್ಯುತಿತರತ್ತಾರಂ ಚಿರಂ ಸಂಸ್ಕೃತಂ ।
ಹಂಸಸ್ಯಾಂಸವಿನುನ್ನನಾಲಗಹನೇ ಸಂಚಾರಿಣಾ ಭೋ ಮಯಾ ॥
ಶಂಕ್ಲಾಸಾರಮಿವಾಬ್ಜಿನೀ ವಿಕಿರತಿ ಸ್ವಂ ವಾರಿಬಿಂದೂತ್ಕರಂ ।
ಮಧ್ಯಾಹ್ನೇ ಶಿಶಿರಂ ವಿಕಾಸಿ ಸಹಸಾ ಮೂರ್ಧ್ನಿ ಸ್ಫುಟಂ ದೃಶ್ಯತಾಂ ॥೪೪॥

ವ್ಯೋಮ್ನೀಂದೋರಿವ ಸೌಮ್ಯವಾರಿಣಿ ಚಿರಂ ನಿಃಶಬ್ದಕಂ ಸರ್ಪತೋ ।
ಹಂಸಸ್ಯಾಂಸಹತಾಬ್ಜನಾಲವಲನಾನಿಷ್ಕಂಪಟಂಕಕ್ಷತೈಃ ॥

---

೪೩. ಈ ಭೃಂಗವು ಮಹೇಭಮಸ್ತಕತಟದಮೇಲೆ ಕಾಲಿಟ್ಟಿತು; ಪದ್ಮಾಕರವನ್ನೇ ಮನೆಮಾಡಿಕೊಂಡಿತು; ಕಹ್ಲಾರ, ಉತ್ಪಲ, ಕುಂದ, ಚಂಪಕ ಇತ್ಯಾದಿಗಳಲ್ಲಿ ಬೇಕಾದಹಾಗೆ ಭೋಗಪಟ್ಟ ಸೌಭಾಗ್ಯವಂತನು. ಆದರೂ ಈ ಭೃಂಗವು ವಿಧಿವಶದಿಂದ ಶಿಶಿರಕಾಲದಲ್ಲಿ ಲೋಷ್ಠ (ಮಣ್ಣು) ವನ್ನೂ ತೃಣವನ್ನೂ ತಿನ್ನುವನು. ಶೀತಕಾಲದಲ್ಲಿ ಶುಷ್ಕಬಕದಂತೆ ಆಚರಿಸುವನು ಅಹಹಾ! ವಿಪತ್ಕಾಲದಲ್ಲಿ ಎಂಥವರಿಗಾದರೂ ಮನಸ್ಸು ದೀನವಾಗುವುದು.

೪೪. ಹಂಸಪಕ್ಷಿಗಳು ತಮ್ಮ ಪಕ್ಷಗಳಿಂದ ಕಮಲನಾಲಗಳನ್ನು ನೂಕಿಕೊಂಡು ತಿರುಗುವ ಪದ್ಮವನದಲ್ಲಿ ಹಂಸದ ಮರಿಯನ್ನು ಪದ್ಮದಲ್ಲಿಟ್ಟಿನು. ಅದು ಅಲ್ಲಿಂದ ಹೊರಕ್ಕೆ ಬಂದು ಗಟ್ಟಿಯಾಗಿ ಬಹುಕಾಲ " ತಾತ, ಈ ಪದ್ಮಿನಿಯು ಮುತ್ತಿನಂತಿರುವ ನೀರಿನ ಬಿಂದುಗಳನ್ನು ಎಸೆಯುತ್ತಿರುವಳು ಮಧ್ಯಾಹ್ನದಲ್ಲಿ ತಣ್ಣಗಿರುವ ಹಿಮವು ತಲೆಯಮೇಲೆ ಬೀಳುತ್ತಿರುವುದು ನೋಡು " ಎಂದು ಕೂಗಿಕೊಂಡಿತು (?)

೪೫. ಎಲೈ ರಾಜನೆ, ಆಕಾಶದಲ್ಲಿರುವ ಚಂದ್ರನಂತೆ, ಸೌಮ್ಯವಾಗಿರುವ ನೀರುಳ್ಳ ಈ ಸರಸ್ಸಿನಲ್ಲಿ ನಿಶ್ಶಬ್ದವಾಗಿ ಸಂಚರಿಸುವ ಹಂಸದ ಪಕ್ಷಗಳಿಂದ ಅಬ್ಜನಾಲ

ಗಂಗಾವಾರಿವದತ್ರ ಪುಷ್ಕರಪುಟಾದ್ಬ್ರಾಹ್ಮಾನಿವಾಸ್ಯೋಪರಿ ।
ಭ್ರಷ್ಟಾ ಯೇ ಜಲಬಿಂದವೋ ಜಲಚರಾ ಹೃಷ್ಟಾಃ ಪಿಬಂತ್ಯಾಶು ತಾಂ ॥೪೫॥

ಇತ್ಯಾರ್ಷೇ ವಾಸಿಷ್ಠಮಹಾರಾಮಾಯಣೇ ವಾಲ್ಮೀಕಿಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ "ಅವಿದ್ಯೋಪಾಖ್ಯಾನಾಂತರ್ಗತ
ವಿಪಶ್ಚಿದುಪಾಖ್ಯಾನೇ ಪದ್ಮಭ್ರಮರಹಂಸವರ್ಣನಂ" ನಾಮ
ಸಪ್ತದಶಾಧಿಕ ಶತತಮಃ ಸರ್ಗಃ

---

ಗಳು ಮುರಿದುಹೋದುವು ಅವುಗಳನ್ನು ಕೊಕ್ಕುಗಳಿಂದ ಹಿಡಿದು ಕಡಿಯಿತು ಆಗ ಬ್ರಹ್ಮನ ಆಸನವಾದ ತಾವರೆಯಿಂದ ಸುರಿಯುವ ಗಂಗಾವಾರಿಯಂತೆ, ಈ ಹಂಸದಮೇಲೆ ಜಲಬಿಂದುಗಳು ಉರುಳಿದುವು ಅವುಗಳನ್ನು ಇತರ ಜಲಚರಗಳು ಬಹು ಸಂತೋಷದಿಂದ ಕುಡಿದುವು

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಪದ್ಮಭ್ರಮರಹಂಸವರ್ಣನ" ಎಂಬ
ನೂರ ಹದಿನೇಳನೆಯ ಸರ್ಗವು

---

# ಅಷ್ಟಾದಶಾಧಿಕಶತತಮಃ ಸರ್ಗಃ

ಸಹಚರ ಸಹಚರ್ಯೌ ಕ್ರಮೇಣೋಚುಃ—

ನಿರ್ಗುಣಸ್ಯ ಬಕಸ್ಯಾಸ್ಯ ಗುಣ ಏಕೋಽಸ್ತಿ ದೃಶ್ಯತಾಂ ।
ಯದ್ಪ್ರಾವೃಷಂ ಸ್ಮಾರಯತಿ ಪ್ರಾವೃಟ್‌ಪ್ರಾವೃಡಿತಿ ಬ್ರುವನ್ ॥೧॥

ಬಕ ಹಂಸ ಇವಾಭಾಸಿ ಸರಃಸ್ಥೋ ಮದ್ಗುಸೌಹೃದಂ ।
ನೃಶಂಸತ್ವಂ ಚ ವಾಣೀಂ ಚ ತ್ಯಕ್ತ್ವಾ ಹಂಸೋ ಭವ ಸ್ಫುಟಂ ॥೨॥

ಗಂಭೀರಂ ವಾರಿಗರ್ಭಂ ಪ್ರಸೃತಜಲಚರಂ ಯೇ ಪ್ರವಿಶ್ಯ ಪ್ರವಿಶ್ಯ ।
ಪ್ರಾಜ್ಯತ್ಸ್ಯನ್ಪ್ರೋತಚಂಚ್ವಶ್ಚತುರತರಪರಂ ಜಗ್ಧವಂತೋ ವಿದಗ್ಧಾಃ ॥
ತೇ ಕೇನಾಪ್ಯದ್ಯ ದಿಷ್ಟ್ಯಾ ಮೃತತಿಮಿಗಮಿತಾಃ ಕಾಲಯುಕ್ತೇ ಮಹಿಮ್ನಾ ।
ನಾಕ್ರಾಮಂತಿ ಕ್ರಮಸ್ಥಾಃ ಸುಹರಮಪಿ ಪುರಃ ಪಂಗವೋ ಮದ್ಗವೋಽಮೀ ॥೩॥

---

# ನೂರಹದಿನೆಂಟನೆಯ ಸರ್ಗವು

ಸಹಚರ ಸಹಚರಿಯರು ಕ್ರಮವಾಗಿ ಹೇಳಿದರು—

೧. ನಿರ್ಗುಣವಾದ ಬಕದಲ್ಲಿಯೂ ಒಂದು ಗುಣವಿದೆ: ನೋಡು. ಪ್ರಾವೃಟ್, ಪ್ರಾವೃಟ್, ಎಂದು ಯಾವಾಗಲೂ ಪ್ರಾವೃಟ್ಕಾಲವನ್ನೇ ಸ್ಮರಿಸುತ್ತಿರುವುದು.

೨. ಎಲೈ ಬಕವೆ, ನೀನು ಸರಸ್ಸಿನಲ್ಲಿದ್ದಾಗ ಹಂಸದಂತೆಯೇ ಕಾಣುವೆ. ಆದರೆ, ಆ ನೀರುಕಾಗೆಯ ಸ್ನೇಹವನ್ನೂ, ನೃಶಂಸತ್ವವನ್ನೂ, ವಾಣಿಯನ್ನೂ ಬಿಟ್ಟು ಹಂಸವೇ ಆಗಬಾರದೆ ?

೩. ಜಲಚರಗಳು ಓಡಾಡುತ್ತಿರುವ ಗಂಭೀರವಾದ ವಾರಿಯನ್ನು ಮತ್ತೆ ಮತ್ತೆ ಹೊಕ್ಕು ಕೊಕ್ಕುಗಳನ್ನು ನೀಡಿ ಮತ್ಸ್ಯಗಳನ್ನು ಬೇಕಾದಹಾಗೆ ತಿಂದು ಹಾಕಿದ ಪಂಡಿತರಾದ ಈ ನೀರುಕಾಗೆಗಳು, ಎಲೈ ಚತುರತರನಾದ ಅರಸೇ,

ಏವಂ ವಿಹನ್ಯತೇ ಲೋಕಃ ಸ್ವಾರ್ಥೇನೇತಿ ಪ್ರದರ್ಶಯನ್ ।
ಮದ್ಗುರ್ಮದ್ಗುರುತಾಂ ಯಾತ ಇತ್ಯೇವಂ ಸ್ತೌತಿ ದುರ್ಜನಃ ॥೪॥

ಉತ್ಕಂಧರೋ ವಿತತನಿರ್ಮಲಚಾರುಪಕ್ಷೋ ।
ಹಂಸೋಽಯಮತ್ರ ನಭಸೀತಿ ಜನೈಃ ಪ್ರತೀತಃ ॥
ಗೃಹ್ಣಾತಿ ಪಲ್ವಲಜಲಾಚ್ಛಫರೀಂ ಯದಾಸೌ ।
ಜ್ಞಾತಸ್ತದಾ ಖಲು ಬಕೋಽಯಮಿತೀಹ ಲೋಕೈಃ ॥೫॥

ಅತಿಬಹುಕಾಲವಿಲೋಲಾನವಲೋಕ್ಯ ಬಕಾಂಸ್ತಪೋದಂಭಾನ್ ।
ಅತ್ರೈವಾತಿಮಿಸ್ಥಾಂಸ್ತಟವನಿತಾ ವಿಸ್ಮಿತಾ ಧೂರ್ತಾನ್ ॥೬॥

---

ಯಾವುದೋ ದೈವದ ಮಹಿಮೆಯಿಂದ ಸತ್ತ ತಿಮಿಗಳನ್ನು ತಿಂದು ಕಂಠರೋಗವನ್ನು ತಂದುಕೊಂಡು ಒದ್ದಾಡುತ್ತ ಸರೋವರದ ತೀರದಲ್ಲಿ ಸಾಲುಗಟ್ಟಿಕೊಂಡು ನಿಂತಿರುವುವು. ಈಗ ಹಸಿವಿನ ಹೊತ್ತಾದರೂ, ಮೀನುಗಳು ತಮ್ಮ ಹತ್ತಿರವೇ ಬಂದರೂ ಕೈಗೆ ಸಿಕ್ಕುವಂತಿದ್ದರೂ ರೋಗಮಹಿಮೆಯಿಂದ, ಪಂಗುಗಳಂತೆ ಆಗಿ, ಅವುಗಳನ್ನು ಮುಟ್ಟದೆ ಇರುವುವು.

೪. ಹೀಗೆ ಸ್ವಾರ್ಥಿಯಾದ ಲೋಕವು ಸ್ವಾರ್ಥದಿಂದಲೇ ಹತವಾಗುವುದು ಎಂದು ತೋರಿಸುತ್ತ ಮದ್ಗುವು ಮದ್ಗುರುವಾಯಿತು ಎಂದು ದುರ್ಜನನೂ ಅದನ್ನು ಹೊಗಳುವನು.

೫. ಕತ್ತನ್ನೆತ್ತಿಕೊಂಡು ನಿರ್ಮಲವೂ ಮನೋಹರವೂ ಆದ ರೆಕ್ಕೆಗಳನ್ನು ಬಿಚ್ಚಿಕೊಂಡು ಆಕಾಶದಲ್ಲಿ ಹಾರುತ್ತಿದ್ದಾಗ ಜನರು ಇದನ್ನು ಹಂಸ ಹಂಸ ಎಂದು ಕೊಳ್ಳುತ್ತಿದ್ದರು. ಪಲ್ವಲವನ್ನು ಕಂಡು ಕೆಳಗಿಳಿದು ಪುಟ್ಟ ಮೀನನ್ನು ಹಿಡಿದುಕೊಂಡಾಗ "ಸರಿ, ಸರಿ, ಇದು ಬಕ" ಎಂದುಕೊಂಡರು.

೬. ಅತಿ ಬಹುಕಾಲ ಮತ್ಸ್ಯಾರ್ಥವಾಗಿ ಒದ್ದಾಡುತ್ತಿದ್ದು, ತಪಸ್ಸುಮಾಡುವವರಿಗಿಂತ ಹೆಚ್ಚಾಗಿ, ಕತ್ತಲಾಗುವವರೆಗೂ ನಿಂತಿರುವ ಈ ಧೂರ್ತ ಬಕಗಳನ್ನು ಕಂಡು ತಟವನಿತೆಯು ವಿಸ್ಮಿತಳಾದಳು.

ಅತ್ರ ಜಲೇ ಹಿಮುಹೇಲಾಃ ಪಶ್ಯ ಕೃತಾ ಆಪಹರಂತಿ ಸಿತಪದ್ಮಾನ್ ।
ಇಚ್ಛಸಿ ತಾ ಅನುಗಂತುಂ ನಾಹಂ ತೇ ವಲ್ಲಭಾ ವ್ರಜಾಮೀತಿ ॥೭॥

ಕುಪಿತಾಂ ತಾಮನುನೇತುಂ ಯತ್ನವತಃ ಪಾಂಥ ಏಷ ಪಥಿ ಕಾಂತಾಂ ।
ಅವಲೋಕಯ ನರನಾಯಕ ಕುಸುಮಲತಾಕುಹರಕೇಲಿತೀರವನೇ ॥೮॥

ಇತಿ ಹಾವಭಾವವಿಲಸಿತವಿವಲನಕೋಪಾರ್ಧದೃಷ್ಟಿಹಸಿತಾನಿ ।
ಕುರ್ವಾಣಾ ವರವನಿತಾ ಕಥಯತಿ ತೇ ದೃಶ್ಯತಾಂ ರಾಜನ್ ॥೯॥

ಬಕಮದ್ಗುಶರಾರೂಣಾಂ ಸಿಕ್ಯಮೇಕೌಕಸಾಮಪಿ ।
ಸಂಕರೋಸ್ತಿ ವಿಧೋ ಬುದ್ಧೇರ್ನ ಮೂರ್ಖವಿದುಷಾಮಿವ ॥೧೦॥

ಚಂಚ್ವಗ್ರೇ ಖಂಜರೀಟಸ್ಯ ಕೀಟಃ ಕಿಟಿಕಿಟಾಯತೇ ।
ದೌರ್ಭಾಗ್ಯಸ್ಯ ಪುರಾಣಸ್ಯ ಪತಾಕೇವೋಚ್ಛ್ರಿತೋನ್ನತೇ ॥೧೧॥

---

೭. ಇಲ್ಲಿ ನೋಡು, ಈ ಸರಸ್ಸಿನ ಜಲದಲ್ಲಿ ಹಿಮವನ್ನು ಗಣಿಸದೆಯೇ ಹೆಣ್ಣುಗಳು ಬಿಳಿಯ ಕಮಲಗಳನ್ನು ಕೊಯ್ಯುತ್ತಿರುವರು. ನೀನು ಅವರ ದಾರಿಯನ್ನು ಹಿಡಿಯಬೇಕೆಂದಿರುವೆ. ಅದರಿಂದ ನಾನು ನಿನ್ನ ವಲ್ಲಭೆಯಲ್ಲ: ನಾನು ಹೋಗುವೆನು.

೮. ಹೀಗೆ ಕೋಪಗೊಂಡಿರುವ ಅವಳನ್ನು ಸಮಾಧಾನಪಡಿಸಲು, ಈ ದಾರಿಯಲ್ಲಿ ಈ ಪಾಂಥನು ಎಲೈ ನರಪತಿಯೆ, ಕುಸುಮಲತೆಗಳಿಂದ ಆಗಿರುವ ಈ ತೀರದ ಕೇಲೀವನದಲ್ಲಿ ಪ್ರಯತ್ನಮಾಡುತ್ತಿರುವನು.

೯. ಹೀಗೆಂದು ಹಾವಭಾವವಿಲಸಿತಗಳಿಂದಲೂ, ಕುಲುಕುಗಳಿಂದಲೂ, ಕೋಪದಿಂದಲೂ, ಅರ್ಧದೃಷ್ಟಿಯಿಂದಲೂ, ಹಸಿತಗಳಿಂದಲೂ, ವರವನಿತೆ (ವಾರಾಂಗನೆ)ಯು ಹೇಳುತ್ತಿರುವಳು. ರಾಜನೆ, ನೋಡು.

೧೦. ಬಕ, ಜಲಕಾಕ ಈ ಹಿಂಸ್ರಜಂತುಗಳು ಒಂದೇಕಡೆ ಇರುವವಾದರೂ ಒಂದನ್ನೊಂದು ಎಂದುಕೊಳ್ಳುವುದಿಲ್ಲ; ಮೂರ್ಖರನ್ನೂ ವಿದ್ವಾಂಸರನ್ನೂ ಒಂದೇ ಎನ್ನುವುದುಂಟೇನು ?

೧೧. ಖಂಜದ ಹುಳುವಿಗೆ ಸಿಕ್ಕಿರುವ ಹುಳುವು ಕಿಟಿಕಿಟಿ ಎಂದು ಒದ್ದಾಡುವುದು. ಅದನ್ನು ನೋಡಿದರೆ ಜನ್ಮಾಂತರ ದೌರ್ಭಾಗ್ಯದ ಪತಾಕವನ್ನು ಎತ್ತರವಾದೆಡೆಯಲ್ಲಿ ನೆಟ್ಟಂತೆ ತೋರುವುದು.

ತಾರಂ ತೀರತರೌ ಸ ರೌತಿ ತರಲೋ ಯಾವದ್ಬಕಃ ಪ್ರೋಲ್ಲಸಂ- ।
ಸ್ತಾವತ್ಪಲ್ವಲಗೋಷ್ಪದೇಂಬುಕಲಿಲೇ ಯಾವದ್ಬಲಾದ್ದೇಹಕಂ ॥
ಮಜ್ಜಂತ್ಯಾ ಪ್ರಿಯವಕ್ಷಸೀವ ನಿಪುಣಂ ತ್ರಾತಂ ಶಫರ್ಯಾ ಭಯಾ- ।
ದ್ಧೃಲಂಧ್ಬಂಗೇನ ಮಹಾಪದೀಹ ಹಿ ಮೃತೇರ್ನಾನ್ಯದ್ಭವೇತ್ಸೌಖ್ಯದಂ ॥೧೨॥

ಬಕಾಜಗರಮದ್ಗೂನಾಂ ಹೃದಿ ಯಾ ಪ್ರಾಣಿನೀಂ ಧೃತಿಃ ।
ಅಚರ್ವಿತನಿಗೀರ್ಣಾನಾಂ ಮನ್ಯೇ ನಿದ್ರೋಪಮೈವ ಸಾ ॥೧೩॥

ಆಸನ್ನಮದ್ಗುಬಕಗೃಧ್ರಬಿಡಾಲಸರ್ಪ- ।
ದೃಷ್ಟ್ಯೈವ ಭಯಂ ಭವತಿ ಯತ್ಸಲಿಲಾಶಯಾನಾಂ ॥
ತಸ್ಯಾಗ್ರತಸ್ತೃಣಮಿವಾಶನಿಪಾತಭಂಗೋ ।
ಜಾತಿಸ್ಮರೇಣ ವಿದುಷೋಕ್ತಮದಃ ಪುರಾ ಮೇ ॥೧೪॥

ಇಹ ಸರೋವರತೀರತರೋಸ್ತಲೇ ।
ಕುಸುಮಶಾಲಿನಿ ಮುಗ್ಧಮೃಗಾನ್ಪುರಃ ।

---

೧೨. ಬಕವು ತೀರದಲ್ಲಿರುವ ಮರದಮೇಲೆ ಕುಳಿತು ಸಂತೋಷದಿಂದ ಕೂಗಿದುದನ್ನು ಕೇಳಿ, ಪಲ್ವಲವೆಂಬ ಗೋಷ್ಪದದಲ್ಲಿ, ಕೆಸರಿನ ನಡುವೆ, ಶಫರಿಯು ತನ್ನ ದೇಹವನ್ನು ಪ್ರಿಯವಕ್ಷಸ್ಸಿನಲ್ಲಿ ಭಯದಿಂದ ಅಡಗಿಕೊಳ್ಳುವಂತೆ ಅಡಗಿಸಿಕೊಂಡು ಬುದ್ಧಿವಂತಿಕೆಯಿಂದ ಉಳಿದುಕೊಂಡಿತು. ಮಹಾಪದಗಳು ಒದಗಿದಾಗ ಎದೆಯೊಡೆದು ಸಾಯುವುದಕ್ಕಿಂತ ಇನ್ನು ಸೌಖ್ಯವಿಲ್ಲ.

೧೩. ಬಕ, ಅಜಗರ, ಜಲಕಾಕಗಳು ನಿರ್ವಿಷಣ್ಣವಾಗಿ ನುಂಗಿಬಿಡುವ ಪ್ರಾಣಿಗಳ ಚಿತ್ತಸ್ಥಿತಿಯು ನಿದ್ರೋಪಮವೋ ಏನೋ?

೧೪. ಸಮೀಪದಲ್ಲಿರುವ ಜಲಕಾಕ, ಬಕ, ಗೃಧ್ರ, ಬಿಡಾಲ, ಸರ್ಪಗಳ ದೃಷ್ಟಿಯಿಂದಲೇ ಜಲಚರಗಳಿಗೆ ಭಯವಾಗುವುದು. ಆ ಭಯವು ಸಿಡಿಲಿಗೆ ಸಿಕ್ಕಿದ ತೃಣಕ್ಕೆ ಆಗುವ ಭಯಕ್ಕಿಂತಲೂ ಹೆಚ್ಚು. ಈ ರಹಸ್ಯವನ್ನು ಜಾತಿಸ್ಮರನಾದ ವಿದ್ವಾಂಸನೊಬ್ಬನು ನನಗೆ ಹೇಳಿದನು.

ಸಮವಲೋಕಯ ಲೋಕಮಲೌ ಬಲಾ- ।
ತ್ಸಮುವಕೀರ್ಣನವೋತ್ಪಲಕೇತಕಾನ್ ॥೧೫॥

ಬರ್ಹೀ ಪ್ರೋನ್ನತಚಿತ್ತತ್ವಾತ್ತೋಯಮಿಂದ್ರಂ ಪ್ರಯಾಚತೇ ।
ಸ ಪೂರಯತಿ ತೇನಾಸ್ಯ ಮಹಾತ್ಮಾ ನಿಖಿಲಾಂ ಮಹೀಂ ॥೧೬॥

ಮೇಘಾನನುಸರಂತ್ಯೇತೇ ಮಯೂರಾಸ್ತನಪಾ ಇವ ।
ಮಲಿನೋ ಮಲಿನಸ್ಯೈವ ಪುತ್ರ ಇತ್ಯನುಮೀಯತೇ ॥೧೭॥

ಮೃಗಾನಾಲೋಕ್ಯ ಪಥಿಕಶ್ಚಿಂತಯನ್ದಯಿತೇಕ್ಷಣೇ ।
ಪುರಃಸ್ಥೇಷು ಪದಾರ್ಥೇಷು ಯಂತ್ರಪುತ್ರಿಕತಾಂ ಗತಃ ॥೧೮॥

ಶಿಖೀ ವಾರ್ಯಪಿ ನಾದತ್ತೇ ಭೂಮೇರ್ಭುಂಕ್ತೇ ಬಲಾದಹಿಂ ।
ದೌರಾತ್ಮ್ಯಂ ತನ್ನ ಜಾನೇ ಕಿಂ ಸರ್ಪಸ್ಯ ಶಿಖಿನೋಥವಾ ॥೧೯॥

---

೧೫. ಇಲ್ಲಿ ಸರೋವರ ತೀರದಲ್ಲಿರುವ ಮರದ ಬುಡದಲ್ಲಿರುವ ಮುಗ್ಧ ಮೃಗಗಳನ್ನೂ, ಭ್ರಮರವು ಎದುರಿಗಿರಲು ಚೆಲ್ಲಾಡಿರುವ ನವೋತ್ಪಲಗಳನ್ನೂ, ಕೇತಕಗಳನ್ನೂ ನೋಡು.

೧೬. ನವಿಲು ಚಿತ್ತೋನ್ನತಿಯುಳ್ಳುದು ; ಅದರಿಂದ ಇತರರನ್ನು ಯಾಚಿಸದೆ ಇಂದ್ರನನ್ನು ನೀರು ಕೊಡು ಎಂದು ಪ್ರಾರ್ಥಿಸುವುದು. ಮಹಾತ್ಮನಾದ ಇಂದ್ರನು ನಿಖಿಲ ಭೂಮಂಡಲವನ್ನೂ ನೀರಿನಿಂದ ತುಂಬಿಸುವನು.

೧೭. ಈ ಮಯೂರಗಳು ಸ್ತನ್ಯಪಾನಮಾಡುವ ಶಿಶುಗಳಂತೆ ಮೇಘಗಳನ್ನು ಅನುಸರಿಸಿ ಹೋಗುವುವು. ಮಲಿನನ ಮಗನು ಮಲಿನನೇ ಎಂಬುದು ಅನುಮಾನದಿಂದ ಸಿದ್ಧವಾಗುವುದು.

೧೮. ಪಥಿಕನು ಮೃಗಗಳನ್ನು ನೋಡಿ, ಪ್ರಿಯೆಯ ಕಣ್ಣುಗಳನ್ನು ಚಿಂತಿಸುತ್ತಿದ್ದವನು, ಅವಳೇ ಎದುರಿಗೆ ಬಂದಾಗ, ಯಂತ್ರದ ಬೊಂಬೆಯಾದನು.

೧೯. ಭೂಮಿಗೆ ನೀರನ್ನೂ ಕೊಡದ ನವಿಲು ಹಾವನ್ನು ಹಿಡಿದು ತಿನ್ನುವುದು. ಈ ದೌರಾತ್ಮ್ಯಕ್ಕೆ ಕಾರಣವು ಯಾರು? ನವಿಲೋ ಹಾವೋ ನಾನರಿಯೆ !

ಸಜ್ಜನಾಶಯನೀಕಾಶಂ ತ್ಯಕ್ತ್ವಾ ಬರ್ಹೀ ಮಹತ್ಸರಃ ।
ಪಿಬತ್ಯಂಬ್ವಭ್ರನಿಷ್ಠ್ಯೂತಂ ಮನ್ಯೇ ತನ್ನತಿ ಭೀತಿತಃ ॥೨೦॥

ಲಸತ್ಕಲಾಪಜಲದಾಃ ಪಶ್ಯ ನೃತ್ಯಂತಿ ಬರ್ಹಿಣಃ ।
ಧುನ್ವಾನಾಃ ಪಿಚ್ಛಕಾಂತೀಂದುಂ ಪ್ರಾವೃಷಃ ಪೋತಕಾ ಇವ ॥೨೧॥

ವರವನೇ ವನವಾತವಿಸಾರಿಣಾಂ ಚಪಲಚಂದ್ರಕಚಾರುತರಂಗಿಣಾಂ ।
ಇಹ ಪಯೋನಿಧಿರೇವ ಕಲಾಪಿನಾಂ ವಿಸೃತಮುಕ್ತತಯೇವ ವಿಲಾಸನಃ ॥೨೨॥

ಚರ ತೃಣಾನಿ ಪಿಬಾಂಬು ವನಾವನೌ ಕಲಯ ವಿಶ್ರಮಣಂ ಕದಲೀವನೇ ।
ಚಕಿತಚಾತಕ ಪಾವಕದೂಷಿತಾ ನಹಿ ಸುಖಾಯ ಭವತ್ಯತಿಮಾನಿತಾ ॥೨೩॥

---

೨೦. ಸಜ್ಜನರ ಹೃದಯದಂತೆ ನಿರ್ಮಲವಾಗಿರುವ ಮಹತ್ಸರಸ್ಸನ್ನೂ ಬಿಟ್ಟು ಬರ್ಹಿಯು (ಚಾತಕವು) ಮೋಡದಿಂದ ಇಳಿಯುವ ನೀರನ್ನೇ ಕುಡಿಯುವುದು. ಆ ಸರಸ್ಸಿಗೆ ತಲೆಬಗ್ಗಿಸುವುದು ಅದಕ್ಕೆ ಇಷ್ಟವಿಲ್ಲ.

೨೧. ತಮ್ಮ ಬಾಲವೆಂಬ ಮೋಡಗಳುಳ್ಳ ನವಿಲುಗಳು ತಮ್ಮ ಗರಿಗಳಲ್ಲಿರುವ ಚಂದ್ರನನ್ನು ಅಲ್ಲಾಡಿಸುತ್ತ ಮಳೆಗಾಲದ ಮಕ್ಕಳೋ ಎಂಬಂತೆ ಕುಣಿಯುತ್ತಿರುವುವು.

೨೨. ವರವನದಲ್ಲಿ ವನವಾತವು ಬಾಲವನ್ನು ಕೆದರಲು ಚಂಚಲವಾದ ಚಂದ್ರಬಿಂಬಗಳಿಂದ ಮನೋಹರವಾದ ತರಂಗಗಳಂತೆ ಗರಿಗಳು ಕಾಣುತ್ತಿರಲು, ಕೊಡುಗೈಯ್ಯಿಂದ ಸಮುದ್ರವೇ ಈ ನವಿಲುಗಳನ್ನು ಕುಣಿಸುತ್ತಿರುವುದು.

೨೩. ಹೆದರಿರುವ ಚಾತಕವೆ, (ದಾವಾಗ್ನಿಯಿಂದ ನಿನ್ನ ಮನೆಯು ಸುಟ್ಟು ಹೋಯಿತು. ನಾನು ಯಾರನ್ನೂ ಬೇಡುವುದಿಲ್ಲವೆಂಬ) ಅತಿಮಾನಿತೆಯನ್ನು ಬಿಡು. ಅದರಿಂದ ನಿನಗೆ ಸುಖವಿಲ್ಲ. ವನಭೂಮಿಯಲ್ಲಿ ಹುಲ್ಲು ತಿಂದು ನೀರು ಕುಡಿದು ಕದಲೀವನದಲ್ಲಿ ವಿಶ್ರಾಂತಿಯನ್ನು ಹೊಂದು.

ನಾಯಂ ಮಯೂರಮಕರಾಲಯವಾರಿಪೂರಪೂರ್ಣೋದರೋ ಜಲಧರೋಂಬರ
ಮಾರುರುಕ್ಷುಃ।
ದಾವಾಗ್ನಿದಗ್ಧವನಪಾದಪಕೋಟರಾಗ್ರಧೂಮಾವಲೀವಲಯ ಉತ್ಥಿತ ಏವ
ಶೈಲಾತ್ ॥೨೪॥

ಯೇನಾಬ್ದೇನ ಶರದ್ವಿಧಾವಪಿ ಶಿಖೀ ಸಂತರ್ಪಿತೋ ವಾರಿಭಿ।
ರ್ನೋ-ವರ್ಷಾಸ್ವಪಿ ಪೂರಯೇದ್ಯದಿ ಸರಸ್ತದ್ಬಾಲಲೋಕೋಚಿತಂ।
ಆರಬ್ಧಂ ಸಮವೇಕ್ಷ್ಯ ಸಜ್ಜನಜನೋ ಹಾಸೇವ ದುಃಖೋ ಭವೇ।
ದ್ಬರ್ಹೀತ್ಯಾತ್ಮತೃಷೈವ ನೇತುಮಖಿಲಂ ಕಾಲಂ ಸಮಭ್ಯುದ್ಯತಃ ॥೨೫॥

ಸ್ಫಟಿಕವಿಮಲಂ ಪೀತ್ವಾ ತೋಯಂ ಘನೋದರ ನಿರ್ಗತಂ।
ಪಿಬತಿ ನ ಪುನರ್ವಾರ್ಗರ್ತೇ ಕ್ಷುಭ್ಯಂಸ್ತೃಷಾಪಿ ಶಿಖೀ ಜಲಂ।
ಸ್ಫುರತಿ ಚ ಘನಂ ಸ್ಮೃತ್ವಾ ಸ್ಮೃತ್ವಾ ನ ಚಾಪಿ ವಿಪದ್ಯತೇ।
ಗುಣವತಿ ಜನೇ ಬದ್ಧಾಶಾನಾಂ ಶ್ರಮೋಪಿ ಸುಖಾವಹಃ ॥೨೬॥

---

೨೪. ಎಲೈ ಮಯೂರವೆ, ಈ ಆಕಾಶಕ್ಕೆ ಹತ್ತುತ್ತಿರುವುದು ಸಮುದ್ರದ ನೀರು ಕುಡಿದು ಪೂರ್ಣೋದರವಾದ ಮೇಘವಲ್ಲ. ದಾವಾಗ್ನಿಯು ಸುಟ್ಟ ವನಗಳಲ್ಲಿದ್ದ ಮಹಾವೃಕ್ಷಗಳ ಕೋಟರದಿಂದ ಏಳುತ್ತಿರುವ ಹೊಗೆಯು ಶೈಲಾಗ್ರದಿಂದ ಹೊರಟಿರುವುದು.

೨೫. ಶರತ್ಕಾಲದಲ್ಲಿಯೂ ನೀರು ಕೊಟ್ಟು ನವಿಲನ್ನು ಸಂತೋಷಗೊಳಿಸುವ ಮೇಘವು ತಾನು ವರ್ಷಿಸುವ ಕಾಲದಲ್ಲಿಯೂ ಸರಸ್ಸನ್ನು ತುಂಬಲಿಲ್ಲವೆಂದರೆ ಅದು ನಿಜವಾಗಿಯೂ ಬಾಲಚೇಷ್ಟೆಯೇ ಅಲ್ಲವೆ? "ಔದಾರ್ಯ ಯೋಗ್ಯ ಸಮಯದಲ್ಲಿಯೂ ತೋರಿಸಿದ ಈ ಅನೌದಾರ್ಯವನ್ನು ಕಂಡು ಪಾಮರರು ಹಾಸ್ಯಮಾಡುವರು. ಅವನ್ನು ಕಂಡು ಸಜ್ಜನರು ದುಃಖಪಡುವರು.'' ಎಂದು ಮಯೂರವು ಚಿಂತಿಸಿ ತನ್ನ ತೃಷೆಯನ್ನು ಎಲ್ಲಾ ಕಾಲದಲ್ಲಿಯೂ ಸಹಿಸಿಕೊಳ್ಳುವುದಕ್ಕೆ ಸಿದ್ಧವಾಯಿತು.

೨೬. ಮೇಘದಿಂದ ಬಂದ ಸ್ಫಟಿಕ ವಿಮಲವಾದ ನೀರನ್ನು ಕುಡಿದು ಸಂತೋಷಿಸಿದ ನವಿಲು ಬಾಯಾರಿದ್ದರೂ ದಾರಿಯಲ್ಲಿರುವ ಕೊಚ್ಚೆಯ ನೀರನ್ನು ಕುಡಿಯುವುದಿಲ್ಲ. ತನಗೆ ನೀರನ್ನು ಕೊಟ್ಟ ಮೇಘವನ್ನು ಸ್ಮರಿಸಿಕೊಳ್ಳುತ್ತ ಬದುಕಿರುವುದೇ ಹೊರತು ಸಾಯುವುದಿಲ್ಲ. ಗುಣವಂತರಾದ ಜನರಲ್ಲಿ ಪ್ರೀತಿಯನ್ನು ಇಟ್ಟುಕೊಂಡಿರುವುದು ಶ್ರಮವಾದರೂ ಸುಖಕರವು.

ಇಹಾತಿವಾಹಯಂತ್ಯೇತೇ ಮಾರ್ಗದೌಸ್ಥ್ಯಂ ಘನಾಗಮೇ ।
ಕಥಾಭಿಃ ಪಥಿಕಾಃ ಪ್ರಾಯೋ ವಿಮೂಢಾ ಜೀವಿತಂ ಯಥಾ ॥೨೭॥

ಪಶ್ಯಾತ್ರ ನಾಥ ಸರಸಃ ಕಮಲೋತ್ಪಲಕುಮುದಬಿಸಮೃಣಾಲಾನಾಂ ।
ಕಹ್ಲಾರಪತ್ರಪಯಸಾಂ ಭಾರಾನಾದಾಯ ಬಾಲಿಕಾಶ್ಚಲಿತಾಃ ॥೨೮॥

ಕಿಮಿದಂ ನ ಯಥೇತಿ ತತಃ ಪೃಷ್ಟಾಭಿಸ್ತಾಭಿರುಕ್ತಮೇತಸ್ಯ ।
ವ್ಯಸನಜ್ವರತಪ್ತಾಯಾಃ ಪಥಿಕ ವಯಂ ಬಾಲಸಖ್ಯ ಇತಿ ॥೨೯॥

ಅಥ ರಾಗರಕ್ತಹೃದಯಾಃ ಸ್ತನಭರವಿತತಾ ವಿಲಾಸಲಲಿತಾಂಗ್ಯಃ ।
ಪಥಿಕಾನಾಂ ಸ್ಮರಣಪಥಂ ಭೂಯೋಽಪ್ಯನಯಸ್ತ್ರಿಯಾಃ ಸ್ವಗೇಹಸ್ಥಾಃ ॥೩೦॥

---

೨೭. ವಿಮೂಢರಾದವರು ಜೀವಿತವನ್ನು ಕಥೆಗಳಿಂದ ಕಳೆಯುವಂತೆ, ಈ ಮಳೆಗಾಲವು ಬರಲು ದೀರ್ಘವಾಗುವ ಮಾರ್ಗದ ಶ್ರಮಗಳನ್ನು ಪಥಿಕರು ಕಥಾ ವಿನೋದದಿಂದ ಕಳೆಯುವರು.

೨೮. ನಾಥ, ಸರಸ್ಸಿನಿಂದ ಕಮಲ, ಕುಮುದ, ಬಿಸ, ಮೃಣಾಲಯುಗಳನ್ನು ಕಹ್ಲಾರ ಪತ್ರಗಳಲ್ಲಿ ನೀರನ್ನೂ, ತಮ್ಮ ಕೈಯಲ್ಲಾದಷ್ಟು ತೆಗೆದುಕೊಂಡು ಈ ಬಾಲಿಕೆಯರು ಹೋಗುತ್ತಿರುವುದನ್ನು ನೋಡು.

೨೯. ಇದನ್ನು ಏಕೆ ತೆಗೆದುಕೊಂಡು ಹೋಗುತ್ತಿರುವಿರಿ ಎಂದು ಕೇಳಲು, ಅವರು "ಪಥಿಕ, ವ್ಯಸನ ಜ್ವರ ತಪ್ತಳಾದವಳ ಬಾಲಸಖಿಯರು ನಾವು" ಎಂದು ಹೇಳಿದರು.

೩೦. ಆಗ ಆ ಪಥಿಕರಿಗೆ ರಾಗರಂಜಿತ ಹೃದಯೆಯರೂ ಸ್ತನ ಭರ ವಿತತರರೂ ವಿಲಾಸ ಲಲಿತಾಂಗಿಯರೂ ಆದ ತನ್ನ ಮನೆಯಲ್ಲಿರುವ ಪ್ರಿಯೆಯರ ನೆನಪಾಯಿತು.

ಸಾ ನೂನಂ ಮಮ ಕಾಂತಾ ದೃಷ್ಟ್ವಾ ಸುಸ್ನಿಗ್ಧಘನತಮಃ ಶ್ಯಾಮಂ ।
ಗಗನಂ ಚ ಶೂನ್ಯಗಹನಂ ಪ್ರಲಪತಿ ಭುವಿ ಪತತಿ ವಿಸ್ಖಲತಿ　　॥೩೮॥

ಭೃಂಗಾವಲೀಕುವಲಯಾವಲಿತಾಬ್ಜಪಾತ್ರ ।
ಸಂಪ್ರೇರ್ಯಮಾಣನಲಿನೀಮಧುಪಾನಮತ್ತಃ ।
ಹಾ ವಾತಿ ತೀರತರುಪಲ್ಲವಲಾಸ್ಯಲಬ್ಧ ।
ಸಂಮುಗ್ಧ ಶಬ್ದಗಣಗೀತಗುಣೋ ನಭಸ್ವಾನ್　　॥೩೨॥

**ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಅವಿದ್ಯೋಪಾಖ್ಯಾನಾಂತರ್ಗತ ವಿಪಶ್ಚಿದುಪಾಖ್ಯಾನೇ "ಹರಿಣಮಯೂರ ಬಕಮುಗ್ಧಾದಿ ವರ್ಣನಂ" ನಾಮಾಷ್ಟಾದಶಾಧಿಕ ಶತತಮಃ ಸರ್ಗಃ**

---

೩೧. "ಅಯ್ಯೋ ಪಾಪ! ಆ ನನ್ನ ಕಾಂತೆಯು ಸುಸ್ನಿಗ್ಧವಾಗಿರುವ ಮೋಡಗಳು ಮುಚ್ಚಿರಲು ತಮಸ್ಸಿನಿಂದ ಕಪ್ಪಾಗಿ, ಶೂನ್ಯ ಗಹನದಂತಿರುವ ಗಗನವನ್ನು ನೋಡಿ, ಅಳುವಳು: ನೆಲದಮೇಲೆ ಬಿದ್ದು ಹೊರಳಾಡುವಳು: ಎದ್ದು ಓಡಾಡಲೂ ಶಕ್ತಿಯಿಲ್ಲದವಳಾಗುವಳು.

೩೨. ಭೃಂಗಾವಲಿಗಳೂ ಕುವಲಯಗಳೂ ಸುತ್ತುಗಟ್ಟಿರುವ ಅಬ್ಜಪಾತ್ರವು ಕರೆದು ಕೊಟ್ಟ ನಲಿನೀ ಮಧುವನ್ನು ಪಾನಮಾಡಿ ಮತ್ತನಾಗಿ, ತೀರದಲ್ಲಿರುವ ತರುಪಲ್ಲವಗಳನ್ನು ಕುಣಿಸಿ, ಆ ಮುಗ್ಧಗಣದಿಂದ ಹೊಗಳಿಸಿಕೊಂಡು ಹೆಚ್ಚಿರುವ ಈ ವಾಯುವು ಬೀಸುತ್ತಿರುವನಲ್ಲಾ!

**ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ "ಮುಗ್ಧಾದಿ ವರ್ಣನ" ಎಂಬ ನೂರ ಹದಿನೆಂಟನೆಯ ಸರ್ಗವು**



## ಏಕೋನವಿಂಶಾಧಿಕ ಶತತಮಃ ಸರ್ಗಃ

ಸಹಚರಾ ಊಚುಃ—

ಕಥಯತ್ಯೇಷ ಪಥಿಕಃ ಪಶ್ಯ ಮಂದರಗುಲ್ಮಕೇ ।
ಪ್ರಿಯಾಯಾಶ್ಚಿರಲಬ್ಧಾಯಾ ವೃತ್ತಾಂ ವಿರಹಸಂಕಥಾಂ ॥೧॥

ಏಕತ್ರ ಶೃಣು ಕಿಂನ್ವೃತ್ತಮಾಶ್ಚರ್ಯಮಿದಮುತ್ತಮಂ ।
ದಾತುಂ ತ್ವನ್ನಿಕಟೇ ದೂತಮಹಂ ಚಿಂತಾನ್ವಿತೋ(ವದಂ ॥೨॥

ಅಸ್ಮಿನ್ಮಹಾಪ್ರಲಯಕಾಲಸಮೇ ವಿಯೋಗೇ ।
ಯೋ ಮಾಂ ತಯೇಹ ಮಮ ಯಾತಿ ಗೃಹಂ ಸ ಕಃ ಸ್ಯಾತ್ ।
ನೈವಾಸ್ತ್ಯಸೌ ಜಗತಿ ಯಃ ಪರದುಃಖಶಾಂತ್ಯೈ ।
ಪ್ರೀತ್ಯಾ ನಿರಂತರತರಂ ಸರಲಂ ಯತೇತ ॥೩॥

---

## ನೂರ ಹತ್ತೊಂಭತ್ತನೆಯ ಸರ್ಗವು

ಸಹಚರರು ಹೇಳಿದರು:—

೧. ಈ ಪಥಿಕನು ಈ ಮಂದಾರ ಗುಲ್ಮದಲ್ಲಿ ಬಹುಕಾಲದ ಹಿಂದೆ ತಪ್ಪಿ ಹೋಗಿದ್ದ ಪ್ರಿಯೆಯನ್ನು ಪಡೆದು ತನ್ನ ವಿರಹದ ಕಥೆಯನ್ನು ಹೇಳಿಕೊಳ್ಳುತ್ತಿರುವನು ನೋಡು.

೨. ಎಲೈ ಪ್ರಿಯೆಯೆ, ನೀನು ಇಲ್ಲದಾಗ ಎಂತಹ ಆಶ್ಚರ್ಯವಾಯಿತು ಬಲ್ಲೆಯಾ? ಆ ವಿಷಯವನ್ನು ನಿನಗೆ ತಿಳಿಸಬೇಕೆಂದು ಒಬ್ಬ ದೂತನನ್ನು ಕರೆದು ಹೀಗೆ ಹೇಳಿದನು :—

೩. ಈ ವಿಯೋಗವು ಮಹಾ ಪ್ರಲಯಕಾಲದಂತಿರುವುದು. ನನ್ನನ್ನೂ ಅವಳನ್ನೂ ಸೇರಿಸುವ ಮಹಾಪುರುಷನಾದರೂ ಇರುವನೆ? ಪರದುಃಖ ಶಾಂತಿಗಾಗಿ ಸರಲವಾಗಿಯೂ ನಿರಂತರವಾಗಿಯೂ ಪ್ರೀತಿಯಿಂದ ದುಡಿಯುವವರು ಈ ಜಗತ್ತಿನಲ್ಲಿ ಇಲ್ಲವೇ ಇಲ್ಲ.

ಅ ಏಷ ಶಿಖರೇ ಮೇಘಃ ಸ್ಮರಾಶ್ವ ಇವ ಸಂಯುತಃ ।
ವಿದ್ಯುಲ್ಲತಾವಿಲಾಸಿನ್ಯಾ ವಲಿತೋ ರಸಿಕಃ ಸ್ಥಿತಃ ॥೪॥

ಭ್ರಾತರ್ಮೇಘ ಮಹೇಂದ್ರಚಾಪಮುಚಿತಂ ವ್ಯಾಲಂಬ್ಯ ಕಂಠೇ ಗುಣಂ ।
ನೀಚೈರ್ಗರ್ಜ ಮುಹೂರ್ತಕಂ ಕುರು ದಯಾಂ ಸಾ ಬಾಷ್ಪಪೂರ್ಣೇಕ್ಷಣಾ ।
ಬಾಲಾ ಬಾಲಮೃಣಾಲಕೋಮಲತನುಸ್ತನ್ವೀ ನ ಸೋಢುಂ ಕ್ಷಮಾ ।
ತಾಂ ಗತ್ವಾ ಸುಗತೇ ಗಲಜ್ಜಲಲವೈರಾಶ್ವಾಸನಯಾತ್ಮಾನಿಲೈಃ ॥೫॥

ಚಿತ್ತತೂಲಿಕಯಾ ವ್ಯೋಮ್ನಿ ಲಿಖಿತ್ವಾಲಿಂಗಿತಾ ಸತೀ ।
ನ ಜಾನೇ ಕ್ವಾಧುನೈವೇತಃ ಪಯೋದ ದಯಿತಾ ಗತಾ ॥೬॥

---

೪. ಅಯ್ಯೋ! ಈ ಗಿರಿಶಿಖರದಲ್ಲಿ ಮೇಘವು ಸ್ಮರನ ಕುದುರೆಯಂತೆ, ವಿದ್ಯುಲ್ಲತೆಯೆಂಬ ವಿಲಾಸಿನಿಯೊಡನೆ ಸೇರಿ ಮಹಾರಸಿಕನಂತೆ ಬಂದುನಿಂತಿರುವುದು.

(ಅ ಇದಾನೀಂ ಸ್ಮೃತಃ ಪೂರೋವರ್ತಿ-ಗಿರಿಶಿಖರೇ ಏಷಪರಿದೃಶ್ಯಮಾನೋ ಮೇಘಃ ಪ್ರೀತ್ಯಾ ಸತತಂ ಪರದುಃಖೋಪಶಮನಾದಿಗುಣೈಃ ಸಂಯುತಃ ಸ್ಮರಸ್ಯ ಅಶ್ವ ಇವ ಶೀಘ್ರಂ ಮದ್ಗೃಹಗಮನ ಸಮರ್ಥಃ, ಪರೋಪಕಾರ ರಸಿಕಃ,ವಿದ್ಯುಲ್ಲತಾ ಲಕ್ಷಣಯಾ ವಿಲಾಸಿನ್ಯಾ ವಲಿತಃ ಸ್ಥಿತೋಽಸ್ತೀತ್ಯರ್ಥಃ—ತಾ. ಪ್ರ)

೫. ಎಲೈ ಮೇಘವೇ ಒಡಹುಟ್ಟಿ, ನಿನ್ನ ಕತ್ತಿನಲ್ಲಿ ಮಹೇಂದ್ರ ಚಾಪವನ್ನು ಸಗುಣವಾಗಿ ಧರಿಸು, ಸಣ್ಣಗೆ ಗರ್ಜಿಸು, ಒಂದು ಮುಹೂರ್ತ ನನ್ನಲ್ಲಿ ದಯೆ ಮಾಡು, ಅವಳು ಕಣ್ಣುತುಂಬಾ ನೀರಿಟ್ಟುಕೊಂಡು ಅಳುತ್ತಿರುವಳು. ಬಾಲಮೃಣಾಲ ಕೋಮಲ ತನುವಾದ ಆ ಬಾಲೆಯು, ಕೃಶವಾಗಿ ಹೋಗಿ ಈ ವಿರಹವನ್ನು ಸಹಿಸಲು ಅಶಕ್ತಳಾಗಿರುವಳು. ಅಂತಹ ಅವಳನ್ನು, ಎಲೈ ಸುಗತಿಯೆ, (ಶೋಭನ ನಭೋಮಾರ್ಗಗಾಮಿಯೆ) ನೀನು ಹೋಗಿ ಸಣ್ಣಸಣ್ಣ ಜಲಕಣಗಳನ್ನು ಚಿಮುಕಿಸಿ, ನಿನ್ನ ಗಾಳಿಗಳನ್ನು ಬೀಸಿ, ಸಮಾಧಾನ ಮಾಡು.

೬. ಎಲೈ ಪಯೋದವೆ, ಚಿತ್ತವೆಂಬ ಕುಂಚದಿಂದ, ಆಕಾಶದಲ್ಲಿ ಅವಳನ್ನು ಬರೆದು ಆಲಿಂಗಿಸಿಕೊಂಡೆನು. ಆದರೆ, ಅಯ್ಯೋ, ಆ ದಯಿತೆಯು ಎಲ್ಲಿ ಹೋದಳೋ ಅರಿಯೆನು.

ಇತ್ಥಂ ಚಿಂತಾಪರವಶಮತೇಸ್ತನ್ವಿ ಸಾರ್ಥಂ ತ್ವಯಾ ಸಾ ।
ಮತರ್ಲೀನಪ್ರಸರಮನಸಃ ಕ್ವಾಪಿ ಯಾತಾ ಸ್ಮೃತಿರ್ಮೇ ।
ಸಂಪನ್ನೋಽಹಂ ಪರವಶವಪುಃ ಕಾಷ್ಠಕುಡ್ಯೋಪಮಾಂಗೋ ।
ಭಂಗಂ ಸೋಢುಂ ಕ ಇವ ವಿರಹಕ್ಲೇಶಜಂ ನಾಮ ಶಕ್ತಃ ॥೭॥

ಪಶ್ಚಾಜ್ಜಾತಃ ಕಲಕಲರವಃ ಸಂತತೇ ಪಾಂಥಸಾರ್ಥೇ ।
ದೀನಾಲಾಪೈರ್ವ್ಯಸನ ವಿಧುರೈರಾಲಪಂತೇ ಚ ಮೋಘಂ ।
ಕಷ್ಟಂ ಪಾಂಥೋ ಮೃತ ಇತಿ ಮಹಾರಂಭಸಂಪನ್ನ ಹಾಹಾ ।
ಶಬ್ದಃ ಪ್ರೋದ್ಯತ್ಪಥಿಕ ವನಿತಾವಿಸ್ತೃತೋರಹಃ ಪ್ರಹಾರಃ ॥೮॥

ಲೋಕೇನಾಯಂ ಮೃತ ಇತಿ ತತೋ ಬಾಷ್ಪಸಂಪೂರಿತಾಕ್ಷಂ ।
ಶಾವೀಂ ಪೂಜಾಂ ವಿರಚಿತವತಾ ಸಂಬಯಿಾಕೃತ್ಯ ದಾರು ।

---

೭. ಹೀಗೆ ಹೇಳಿ ಚಿಂತಾಪರವಶನಾದ ನನಗೆ, ಎಲೌ ತನ್ವಿಯೆ, ಆ ಒಳಗಿನ ಚಿಂತೆಯಲ್ಲಿ ಮಗ್ನವಾಗಿ ಮನಸ್ಸು ಲೀನವಾಗಿ ನನ್ನಸ್ಮೃತಿಯೋ ಎಲ್ಲಿಯೋ ಹೋಗಿ ಬಿಟ್ಟಿತು. ನಾನು ಹೀಗಾಗಲು ದೇಹವು ನಿಶ್ಚೇಷ್ಟವಾಯಿತು : ಕಾಷ್ಠ ಕುಡ್ಯಗಳಿಗೆ ಸಮವಾಯಿತು : ವಿರಹ ದುಃಖದಿಂದ ಉಂಟಾಗುವ ಭಂಗವನ್ನು ಯಾರು ತಾನೇ ಸಹಿಸಬಲ್ಲರು ?

೮. ಹಾಗೆ ಆದ ನನ್ನನ್ನು ನೋಡಿ, ಆ ಪಥಿಕ ಸಮೂಹವು ಅಯ್ಯೋ ಈ ಮೇಘದಿಂದ ಹೀಗೆ ಆಯಿತು ಎಂದು ನೊಂದುಕೊಂಡು ದೀನಾಲಾಪಗಳಿಂದ ಬಹು ವಾಗಿ ವ್ಯಥಿಸಿದರು. ಪಥಿಕ ವನಿತೆಯರು ಬೇಕಾದ ಹಾಗೆ ಎದೆಗಳನ್ನು ಬಡಿದು ಕೊಳ್ಳುತ್ತಾ "ಅಯ್ಯೋ, ಈ ಪಾಂಥನು ಸತ್ತನಲ್ಲಾ" ಎಂದು ದೊಡ್ಡದಾಗಿ ಹಾಹಾ ಎಂದು ಅತ್ತರು.

೯. ಇವನು ಸತ್ತನೆಂದು ಕಣ್ಣೀರು ಹಾಕಿಕೊಂಡು ಶವಕ್ಕೆ ಸಲ್ಲಬೇಕಾದ ಪೂಜಾದಿಗಳನ್ನು ಮಾಡಿ ಸೌದೆಯನ್ನೆಲ್ಲಾ ಸಂಗ್ರಹಿಸಿ, ಸುಡುವುದಕ್ಕೆ ಸ್ಮಶಾನಕ್ಕೆ ತೆಗೆದುಕೊಂಡು ಹೋದರು. ಅಲ್ಲಿ ಚಿತಿಗಳು ಅನಂತವೋ ಎಂಬಂತೆ ಉರಿಯುತ್ತಾ

ದಗ್ಧಂ ಸೀತೋಸ್ಮ್ಯತಿಭಯಮಹಂ ಪ್ರಜ್ವಲಚ್ಚಿತ್ಯನಂತ ।
ಸ್ಫ್ರೋದ್ಯತ್ಸ್ಫೋಟಸ್ಫುಟಪಟಪಟಾರಾವರೌದ್ರಂ ಶ್ಮಶಾನಂ ॥೯॥

ತತ್ರಾಹಂ ತೈಃ ಕಮಲವದನೇ ಬಾಷ್ಪಪೂರ್ಣಾಕ್ಷಿಪಕ್ಷ್ಮೈ ।
ನ್ಯಸ್ತಃ ಕೈಶ್ಚಿಚ್ಚಿತಿಶಯನಕೇ ಬದ್ಧಲೋಕಾಲಿಲೇಖೇ ।
ಧೂಮೋದ್ಗಾರಾವಿರಲಜಟಿಲೈಃ ಮಸ್ತಕೇ ಮತ್ತಮೃತ್ಯೋಃ ।
ಚೂಡಾರತ್ನೋತ್ತಮ ಇವ ಕಲಾಮಾತ್ರದೃಶ್ಯೋಗ್ನಿಹೇಮ್ನಿ ॥೧೦॥

ಅಸ್ಮಿನ್ಕಾಲೇ ಕುವಲಯಲತಾಕೋಮಲಾ ಧೂಮಲೇಖಾ ।
ನಾಸಾರಂಧ್ರಂ ಮೃದುಗಲಬಿಲಂ ಮೇ ಪ್ರವೃತ್ತಾ ನಿಯಾತುಂ ।
ಉಷ್ಣಾ ಕೃಷ್ಣಾ ನಕುಲಕಲಿತಾ ಸತ್ವರಂ ಬಾಲಸರ್ಪೀ ।
ಭೂಮೇ ರಂಧ್ರಂ ತನುಮಿವ ದಧಾದ್ದೈರ್ಘ್ಯಸಂಕೋಚಕುಬ್ಜಾ ॥೧೧॥

---

ಆಗಾಗ ಸ್ಫೋಟವಾಗಿ, ಸ್ಫುಟವಾಗಿ ಪಟಪಟ ಎನ್ನುತ್ತಾ ಆ ಶಬ್ದವೇ ರೌದ್ರವಾಗಿರಲು ಆ ಸ್ಮಶಾನವು ಅತಿ ಭಯಂಕರವಾಗಿತ್ತು.

೧೦. ಅಲ್ಲಿ, ಎಲೌ ಕಮಲ ವದನೆಯೆ, ಕಣ್ಣೀರಿಟ್ಟುಕೊಳ್ಳುತ್ತ ಕೆಲವರು ನನ್ನನ್ನು ಚಿತಿಯಲ್ಲಿ ಇಟ್ಟರು. ಬೇಕಾದ ಹಾಗೆ ತಿಂದು ಮತ್ತನಾಗಿರುವ ಮೃತ್ಯುವಿನ, ಬೆಂಕಿಯೆಂಬ ಚಿನ್ನದಲ್ಲಿ ಕಟ್ಟಿರುವ ಚೂಡಾರತ್ನೋತ್ತಮವೋ ಎಂಬಂತೆ ಕಲಾಮಾತ್ರದಿಂದ ಕಾಣುತ್ತಿರುವ, ಭ್ರಮರಗಳ ಸಾಲುಗಳನ್ನು ಹಿಡಿದು ಕಟ್ಟಿರುವಂತೆ ಕಾಣುವ ಧೂಮವನ್ನು ಅವಿರಲವಾಗಿ ಕಾರುತ್ತ ಜಟಿಲವಾಗಿ ಆ ಚಿತಿಯು ಕಾಣುತ್ತಿತ್ತು.

೧೧. ಆಗ, ಕುವಲಯ ಲತೆಯಂತೆ ಕೋಮಲವಾದ ಉಷ್ಣವೂ ಕೃಷ್ಣವೂ ಆಗಿ ಸಣ್ಣಗಿರುವ ಧೂಮಲೇಖೆಯು, ಮುಂಗುಸಿಯನ್ನು ಕಂಡು ಹೆದರಿದ ಮರಿ ಹಾವು ಮೈಯನ್ನು ಸಣ್ಣದು ಮಾಡಿಕೊಂಡು ಭೂಮಿಯ ರಂಧ್ರವನ್ನು ಹೊಗುವಂತೆ ನನ್ನ ಮೂಗಿನ ಹೊಳ್ಳೆಯನ್ನು ಪ್ರವೇಶಿಸಲು ಆರಂಭಿಸಿತು.

ತ್ವತ್ಸಂಕಲ್ಪಾಮೃತ ಕವಚಿತೋ ಸಾಪವಿಧ್ವಸ್ತಯಾಹಂ ।
ಕುಂತಶ್ರೇಣ್ಯಾ ದೃಢಪತನಯಾ ವಜ್ರಕಾಯೋ ಯಥಾಜಃ ।
ತ್ವಾಮಾಸನ್ನಾಂ ಮದನಸರಿತಂ ಹೃದ್ಗೃಹೇ ಗಾಹಮಾನೋ ।
ಮರ್ಮಚ್ಛೇದೇಷ್ವಪಿ ವಿಲಸಿತಾ ನಾವಿದಂ ವೇದನಾಸ್ತಾಃ ॥ ೨

ಏತಾವಂತಂ ಸಮಯಮುಚಿತಂ ತನ್ವಿ ಸಾರ್ಧಂ ತ್ವಯಾಂತ ।
ರ್ಲೀಲಾಲೋಲಂ ಹೃದಿ ಚಿರತರಂ ತನ್ಮಯಾತ್ರಾನುಭೂತಂ ।
ಯಸ್ಮಿನ್ದೃಷ್ಟೇ ಮೃತಕ್ರದ ಇವೋನ್ಮಜ್ಜನೌಘೈರ್ಯಥಾಸೌ ।
ರಾಜ್ಯಾಭೋಗೋ ವಿಶಸನ ಮಿವಾಲ್ಪಾಲ್ಪ ಮೇವೇತಿ ಬುದ್ಧಿಃ ॥೧೩॥

ಸಾ ಲೀಲಾ ತೇ ವಿಲಾಸಾ ವಚನಮಪಿ ಚ ತತ್ಸಸ್ಮಿತಂ ತೇ ಕಟಾಕ್ಷಾ ।
ಸಾನಂದಾನಂತರಸ್ಯ ಪ್ರಸರಸಮುಚಿತಾ ದೂರಮುಕ್ತೈಕಭೂಷಾ ।
ತಾನೀಹಾರಾವ ಸಾರಾವಹಸನ ಚಲನಾವೇಗವಿಕ್ಷೋಭಿತಾಸಿ ।
ಕಿಂವಾ ತತ್ತನ್ನ ಯತ್ಸಂಸ್ಮೃತಮಮೃತರಸಾಹ್ಲಾದಮಂತಃ ಕರೋತಿ ॥೧೪॥

---

೧೨. ನೀನು ಬೇಕೆಂಬ ಸಂಕಲ್ಪ ಕವಚವು ನನ್ನನ್ನು ಮುಚ್ಚಿತ್ತಾಗಿ, ವಜ್ರಕಾಯನಾದ ಬ್ರಹ್ಮನು ಮೃತ್ಯುವಿನ ಕುಂತ ಶ್ರೇಣಿಗಳ ದೃಢಪ್ರಹಾರಗಳನ್ನೂ ಸಹಿಸುವಂತೆ, ಆ ಘೋರ ಸಂಕಟವು ಏನೂ ಮಾಡಲಿಲ್ಲ. ಅಷ್ಟೇ ಅಲ್ಲ. ಹೃದಯವೆಂಬ ಗುಹೆಯಲ್ಲಿ ಇದ್ದ ನೀನು ಎಂಬ ಅಮೃತ ನದಿಯಲ್ಲಿ ಮೀಯುತ್ತಿದ್ದ ನನಗೆ ಅಗ್ನಿಯು ಮರ್ಮಚ್ಛೇದ ಮಾಡುತ್ತಿದ್ದರೂ ವೇದನೆಯು ತಿಳಿಯಲೇ ಇಲ್ಲ.

೧೩. ಅಷ್ಟು ಹೊತ್ತೂ ಎಲೌ ತನ್ವಿಯೆ, ಹೃದಯದಲ್ಲಿ ನಿನ್ನೊಡನೆ ಚಿರತರವೋ ಎಂಬಂತೆ ಸುಖವನ್ನು ಅನುಭವಿಸಿದೆನು. ಆ ಸೌಖ್ಯಾಮೃತ ಹ್ರದದಲ್ಲಿ ಮುಳುಗುತ್ತಿದ್ದರೆ, ರಾಜ್ಯಭೋಗವೂ ಕೂಡವೂ ಸಾವಿನಷ್ಟು ತುಚ್ಛವೆನಿಸುವುದು.

೧೪. ಎಲೌ ಪ್ರಿಯೆಯೆ, ನಿನ್ನ ಆ ಅನುಭವೈಕಗಮ್ಯವಾದ ನಿರತಿಶಯಾನಂದ ರೂಪವಾದ ಅನುಪಮ ಲೀಲೆಗಳೂ, ಆ ನಿನ್ನ ವಿಲಾಸಗಳೂ, ನಿನ್ನ ಪ್ರೇಮ ವಚನಗಳೂ, ಸಸ್ಮಿತವಾದ ಕಟಾಕ್ಷಗಳೂ, ಸುರತಾನಂತರ ಕಾಲದ ಪ್ರೇಮಾಲಿಂಗನಾದಿಗಳಿಗೆ ಅನುಕೂಲವಾದ ಏಕಾವಲಿಯೂ, ಆ ಪ್ರಣಯ ಚೇಷ್ಟೆಗಳೂ, ಆ ರತಿಕೂಜಿತಾದಿ ಆರಾವಗಳೂ, ಅವಕ್ಕಿಂತಲೂ ಪ್ರಿಯವಾದ ಆ ಬಿಟ್ಟಬಾಯಿನ ನಗೆಗಳೂ ಚಲನಗಳ ವೇಗದಿಂದ ಚಿತ್ತವನ್ನು ವಿಕ್ಷೋಭಿಸುವಿಕೆಯೂ, ಏನು ಹೇಳಲಿ, ನೆನೆಸಿಕೊಳ್ಳುತ್ತಿದ್ದರೆ ಹೃದಯದಲ್ಲಿ ಅಮೃತರಸದಂತೆ ಆಹ್ಲಾದವನ್ನು ಮಾಡುವುದು.

ತ್ವತ್ಸಂಗಮೇ ಸುರತಸೌಖ್ಯರಸಾಯನೇನ।
ಬಾಲೇ ತತೋಽಹಮತಿತೃಪ್ತತಯಾ ಶ್ರಮಾರ್ತಃ।
ತತ್ರ ಸ್ಥಿತೋ ಮೃದುನಿ ತಲ್ಪತಲೇ ಶಶಾಂಕ।
ಬಿಂಬೇ ಶರಚ್ಛಿಶಿರನಿರ್ಮಲಶೋಚಿಷೀವ ॥೧೫॥

ಅತ್ರಾಂತರೇ ಝುಟಿತಿ ಚಂದನಪಂಕಶೀತಾ।
ದ್ದೀರ್ಘಾದಿವೇಂದುಶಕಲಾದಶನಿಃ ಸಶಬ್ದಃ।
ದೃಷ್ಟೋ ಮಯಾ ಚಿತಿತಲ ಜ್ವಲಿತೋ ಹುತಾಶಃ।
ಕ್ಷೀರಾಬ್ಧಿವಾಡವ ನಿಭೋಽಂಗಗತಃ ಸ್ವತಲ್ಪಾತ್ ॥೧೬॥

ಸಹಚರ್‍ಯಾ ಊಚೇ :—

ಇತ್ಯುಕ್ತವತಿ ಕಾಂತೇಽಸ್ಮಿನ್ ಹಾ ಹತಾಸ್ಮೀತಿ ವಾದಿನೀ।
ಮುಗ್ಧಾ ಮೌಗ್ಧ್ಯಾದ್ವರಾವರ್ತಶಂಕಯಾ ಮೂರ್ಚ್ಛಿತಾ ಸ್ಥಿತಾ ॥೧೭॥

---

೧೫. ನಿನ್ನನ್ನು ಕೂಡಿ ಸೌಖ್ಯರಸಾಯನದಂತಿರುವ ಸುರತವನ್ನು ಅನುಭವಿಸಿ, ಎಲೌ ಬಾಲೇ, ಅತಿ ತೃಪ್ತನಾಗಿ, ಆ ತೃಪ್ತಿಯಿಂದಲೇ ಆಯಾಸಪಟ್ಟೆನು (ಸೊಕ್ಕಿದೆನು.) ಅಲ್ಲಿ ಮೃದುವಾದ ಕಲ್ಪತಲವೆಂಬ ಶಶಾಂಕ ಬಿಂಬದಲ್ಲಿ ಶರತ್ಕಾಲದ ತಂಪಾದ ನಿರ್ಮಲವಾದ ಚಂದ್ರಕಿರಣಗಳಲ್ಲಿಯೇ ಇದ್ದುಬಿಟ್ಟೆನು.

೧೬. ಅಷ್ಟರಲ್ಲಿ, ಥಟಕ್ಕನೆ, ಚಂದನ ಪಂಕ ಶೀತವಾದ ದೀರ್ಘಚಂದ್ರ ಖಂಡದಿಂದ, ಸಶಬ್ದವು ಅಶನಿಯು ಉದಯಿಸಿದಂತೆ ಆಯಿತು. ಚಿತಿಯಲ್ಲಿ ಜ್ವಲಿಸುತ್ತಿರುವ ಅಗ್ನಿಯನ್ನು ಕಂಡೆನು. ಕ್ಷೀರಾಬ್ಧಿಯಲ್ಲಿರುವ ವಾಡಬದಂತೆ ನನ್ನ ಹಾಸುಗೆಯಿಂದಲೇ ಎದ್ದು ನನ್ನ ಅಂಗಗಳನ್ನು ಸುಡುತ್ತಿರುವುದನ್ನು ಕಂಡೆನು.

೧೭. ಕಾಂತನು ತನ್ನನ್ನು ಕುರಿತು ಹೀಗೆ ಹೇಳುತ್ತಿರಲು, ಹಾ! ಹತಳಾದೆನು ಎಂದು ಹೇಳುತ್ತ, ಎಲ್ಲವೂ ಮುಗಿದುಹೋಯಿತು ಎಂಬ ಶಂಕೆಯಿಂದ ಆ ಮುಗ್ಧೆಯೂ ಮೂರ್ಚ್ಛಿತಳಾದಳು.

ತಾಮೇನಾಮೇಷ ನಲಿನೀದಲಬೀಜೇನ ವಾರಿಭಿಃ ।
ಆಶ್ವಾಸಯಂಸ್ತಥಾವಸ್ಥಾಂ ಕಂಠೇಕೃತ್ವಾತ್ರ ಸಂಸ್ಥಿತಃ ॥೧೮॥

ಪುನಃ ಪೃಷ್ಟೋನಯಾ ವಕ್ತಿ ಪಶ್ಯ ತಾಮೇವ ಸಂಕಥಾಂ ।
ಏಷ ಪಾರ್ಶ್ವಗತಾಮೇನಾಂ ಗೃಹೀತ್ವಾ ಚಬುಕೇ ಪ್ರಿಯಾಂ ॥೧೯॥

ಹಾಹಾ ಹುತಾಶ ಇತಿ ಕಿಂಚಿದಿವೋಪಜಾತ ।
ಖೇದೋ ವದಾಮಿ ಖಲು ಯಾವದಹಂ ತ್ವರಾವಾನ್ ।
ತಾವಚ್ಚಿತಿರ್ಝಟಿತಿ ತೈರವಲುಂಠಿತಾ ಸಾ ।
ಪಾಂಥೈಃ ಕ್ಷಣಾತ್ಸರಭಸಾಕುಲಿತಾಲಸದ್ಭಿಃ ॥೨೦॥

ಪಾಂಥಾಸ್ತತಸ್ತರಲತಾಲವಿಲಾಸವಾದ್ಯ ।
ಮಾಲಿಂಗ್ಯ ಮಾಮುತನುಶೇಖರಪೂರಿತಾಂಗಂ ।
ಉತ್ಥಾಪಿತ ಸ್ಥಿತಿಮಲಂ ಪರಿವಾರ್ಯ ಸರ್ವೇ ।
ನೇದುರ್ಜಗುರ್ಜಹಸುರಾನನೃತುರ್ವವಲ್ಗುಃ ॥೨೧

---

೧೮. ಆಗ ಅವನು ಅವಳನ್ನು ನಲಿನೀದಲಗಳಿಂದ ಬೀಸಿ, ನೀರು ತಟ್ಟಿ ಸಮಾಧಾನ ಮಾಡುತ್ತ, ಮೂರ್ಛಿತಳಾದ ಅವಳನ್ನು ಎದೆಯಮೇಲೆ ಒರಗಿಸಿ ಕೊಂಡು ಕುಳಿತನು.

೧೯. ಅವಳು ಎಚ್ಚರಗೊಂಡು ಮುಂದಕ್ಕೆ ಎನ್ನಲು ಮಗ್ಗುಲಲ್ಲಿರುವ ಅವಳ ಚುಬುಕವನ್ನು ಹಿಡಿದುಕೊಂಡು ಅದೇ ಕಥೆಯನ್ನು ಮುಂದಕ್ಕೆ ಹೇಳುವನು ನೋಡು.

೨೦. ಹಾಹಾ! ಬೆಂಕಿ, ಬೆಂಕಿ, ಎಂದು ಗಾಬರಿಗೊಂಡು ನಾನು ಕೂಗು ತ್ತಿದ್ದ ಹಾಗೆಯೇ, ಆ ಪಾಂಥರೆಲ್ಲರೂ ಸೇರಿ ಸಂತೋಷದಿಂದ ಸರಸರನೆ ಚಿತಿಯನ್ನು ಕಿತ್ತೆಸೆದರು.

೨೧. ಪಾಂಥರು ಚಿತಿಯಿಂದ ನನ್ನನು ಕೊಂಡು, ಸಂತೋಷದಿಂದ ಕೈಚ ಪ್ಪಾಳೆಗಳನ್ನು ಇಕ್ಕುತ್ತ, ನನ್ನನ್ನು ಆಲಿಂಗಿಸಿಕೊಂಡು, ಬೇಕಾದ ಹಾಗೆ ಮಂಗಲ ದ್ರವ್ಯಾದಿಗಳಿಂದ ನನ್ನನ್ನು ಅಲಂಕರಿಸಿ, ಕೂಗಿದರು: ಹಾಡಿದರು: ನಕ್ಕರು: ಕುಣಿ ದರು: ಹಾರಿದರು.

ವಿಷಮವಿನಾಯಕಸುಖದಂ ವಲಿತಂ ಭಸ್ಮಾಹಿಶವಶಿರಃ ಪ್ರಕರೈಃ ।
ಶಶಿಧವಲಾಸ್ಥಿಕಪಾಲಂ ವಪುರಿವ ರೌದ್ರಂ ಶ್ಮಶಾನಮಥ ದೃಷ್ಟಂ ॥೨೨॥

ಪಾರ್ಶ್ವಚ್ಛಾಯಾಂ ಹರಂತೋ ವಿಚಲಿತವಿದಲಕ್ಲಿನ್ನಕಂಕಾಲಗಂಧಾ ।
ಸ್ತನ್ವಂತೋ ಭೂರಿಭಸ್ಮಪ್ರವಿತತಮಿಹಿಕಾಮಾಧುನಾನಾಃ ಶವಾನಾಂ ।
ಕೇಶಾನಾಕಾಶಕೋಶೇ ಶಶಿಗಲಿತಶರಾಕಾರಿಣಃ ಶಾಂಕರಾಣಾ ।
ಮಸ್ಥಿನಾಂ ಟಾಂಕೃತೇನಾರಚಿತ ಖರಗಿರಸ್ತತ್ರ ವಾತಾ ವಹಂತಿ ॥೨೩॥

ಜ್ವಲದನಲಚಿತಿ ಪ್ರವಾಹಸಿರ್ಯತ್ಪವನಹತೋಷ್ಮವಿಶುಷ್ಕಪರ್ಣವೃಕ್ಷಾ ।
ಜ್ವಲನಪವನಭಾಸ್ಕರಾತ್ಮಜಾನಾಂರಮಣಗೃಹಾನುಕೃತಿಂ ಬಿಭರ್ತಿ ಸಾ ಭೂಃ ॥೨೪॥

---

೨೨. ವಿಷಮ ವಿನಾಯಕ ಸುಖಪ್ರದವಾಗಿ, ಭಸ್ಮ, ಅಹಿ, ಶವ ಶಿರಗಳ ಸಮೂಹಗಳಿಂದ ಶಶಿಧವಲವಾದ ಅಸ್ಥಿ ಕಪಾಲಗಳಿಂದ ಕೂಡಿ, ಸ್ಮಶಾನವು ರೌದ್ರವಾಗಿ ರುದ್ರದೇಹದಂತೆ ಕಾಣುತ್ತಿತ್ತು.

೨೩. ಮಗ್ಗುಲಲ್ಲಿರುವ ವನಗಳ ಹಸುರನ್ನು ಬೂದಿಯನ್ನು ತೂರಿ ಹಾರಿಸುತ್ತಾ, ಕೊಳೆಯುತ್ತಿರುವ ಅಸ್ಥಿಪಂಜರಗಳನ್ನು ಅಲ್ಲಾಡಿಸಿ ಅದರ ಗಂಧವನ್ನು ಹೊತ್ತುಕೊಂಡು, ಭೂರಿ ಭಸ್ಮವು ತುಂಬಿರುವ ಮಂಜನ್ನು ಮಾಡುತ್ತಾ, ಶವಗಳ ಕೇಶಗಳನ್ನು ಕೆದರುತ್ತಾ, ಆಕಾಶವೆಂಬ ಕೋಶದಲ್ಲಿರುವ ಚಂದ್ರನಿಂದ ಇಳಿದ ಬಾಣಗಳೆಂಬಂತಿರುವ ಶಂಕರನು ಧರಿಸಿದ ಅಸ್ತಿಗಳನ್ನು ಟಂ ಎಂದು ಸದ್ದುಮಾಡಿ ಆ ಕಟುಶಬ್ದಗಳನ್ನು ಹಂಚುತ್ತಾ ಸ್ಮಶಾನ ವಾಯುಗಳು ಬೀಸುವುವು.

೨೪. ಉರಿಯುತ್ತಿರುವ ಬೆಂಕಿಯುಳ್ಳ ಚಿತಿಗಳ ಅಗ್ನಿಪ್ರವಾಹದಿಂದ ಹೊರಡುವ ಬಿಸಿ ಗಾಳಿಯಿಂದ ಹತವಾಗಿ ಒಣಗಿದ ಎಲೆಗಳುಳ್ಳ ವೃಕ್ಷಗಳುಳ್ಳ ಸ್ಮಶಾನ ಭೂಮಿಯ ಅಗ್ನಿ, ಪವನ, ಭಾಸ್ಕರ, ಇವರು ಮಕ್ಕಳಿಗಾಗಿ ಕಟ್ಟಿಸಿಟ್ಟಿರುವ ರಮಣ ಗೃಹಗಳಿಗೆ ಅನುಕೂಲವಾದ ಭೂಮಿಯಂತಿರುವುದು.

ದೃಷ್ಟಂ ಶ್ಮಶಾನಂ ತದನಂತಭೀಮಕರಂಕಕಂ ಕಾಲಘನಾಮಗಂಧಿ ।
ಮಾದ್ಯಚ್ಛಿವಾವಾಯಸಕಂಕಗೃಧ್ರ ಪಿಶಾಚವೇತಾಲವಿರಾವರೌದ್ರಂ ||೨೫||

ಆನೀತನಾನಾಶವಬಂಧುಸಾರ್ಥಸಂರೋದನಾಹ್ವಾದಿದಿಗಂತಕುಂಜಂ ।
ಖಗಾವಕೃಷ್ಟಾರ್ದ್ರಶಿರಾಂತ್ರ ತಂತ್ರೀನಿಬದ್ಧ ದಗ್ಧದ್ರುಮಖಂಡಜಾಲಂ ||೨೬||

ಕ್ವಚಿಚ್ಚಿತಿಕ್ಷೋಭಕೃತಪ್ರಕಾಶಂ ಕ್ವಚಿನ್ಮಹಾಕೇಶಕೃತಾಬ್ದವೃದಂ ।
ಕ್ವಚಿಚ್ಚ ರಕ್ತಾಕ್ತಧರಾವಿತಾನಂ ನಕ್ತಂ ಸ್ತನತ್ತ್ವಭ್ರಮಿವಾಸ್ತಶೈಲಂ ||೨೭||

**ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಅವಿದ್ಯೋಪಾಖ್ಯಾನಾಂತರ್ಗತ ವಿಪಶ್ಚಿದುಪಾಖ್ಯಾನೇ "ಪಥಿಕಾವಿರಹವೃತ್ತ ವರ್ಣನಂ" ಏಕೋನವಿಂಶಾಧಿಕ ಶತತಮಃ ಸರ್ಗಃ**

---

೨೫. ಆ ಶ್ಮಶಾನದಲ್ಲಿ ಭಯಂಕರವಾದ ಅರ್ಧದಗ್ಧ ಶವಗಳು ಅನಂತವಾಗಿದ್ದು ಅದರ ದುರ್ಗಂಧವು ತಾನೇತಾನಾಗಿತ್ತು. ಶಿವ (ನರಿ) ವಾಯಸ, ಕಂಕ, ಗೃಧ್ರ, ಪಿಶಾಚ, ವೇತಾಲ, ಇವುಗಳ ವಿಕಟವಾದ ಕೂಗಿನಿಂದ ರೌದ್ರವಾಗಿ ಹುಚ್ಚು ಹಿಡಿಸುವಂತಿತ್ತು.

೨೬. ಅಲ್ಲಿಗೆ ತಂದಿರುವ ನಾನಾ ಶವಗಳೊಡನೆ ಬಂದಿರುವ ಬಂಧು ಗಣವು ಅಳುವ ಅಳುವಿನಿಂದ ದಿಗಂತ ಕುಂಜಗಳೆಲ್ಲವೂ ಅಳುತ್ತಿರುವುವು. ಹಕ್ಕಿಗಳು ಹೆಣಗಳಿಂದ ಹಸಿಯ ವೇಣಿ ಮೊದಲಾದುವುಗಳನ್ನು ಕಿತ್ತು ಆ ಒಣಗಿದ ಮರಗಳ ಮೇಲೆ ಹಾಕಿರುವುವು.

೨೭. ಕೆಲವೆಡೆ ಚಿತಿಯ ಉರಿಯಿಂದ ಪ್ರಕಾಶವು ಕಾಣುವುದು. ಇನ್ನು ಕೆಲವೆಡೆ ಕೇಶರಾಶಿಗಳು ಬಿದ್ದಿರಲು, ಮೋಡಗಳನ್ನೆಸೆದಂತಿರುವುದು. ಕೆಲವೆಡೆಗಳಲ್ಲಿ ರಕ್ತವು ಸುರಿದು ನೆಲವನ್ನು ನೆನೆಸಿರುವುದು. ಅಲ್ಲಿ ರಾತ್ರಿಯು ಬೆಟ್ಟಗಳನ್ನೆಲ್ಲಾ ಮುಚ್ಚಿ ಗರ್ಜಿಸುತ್ತಿರುವ ಮೋಡದಂತಿರುವುದು.

**ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ "ಪಥಿಕವಿರಹವೃತ್ತಾ ವರ್ಣನೆ" ಎಂಬ ನೂರ ಹತ್ತೊಂಭತ್ತನೆಯ ಸರ್ಗವು**



# ವಿಂಶಾಧಿಕ ಶತತಮಃ ಸರ್ಗಃ

ಸಹಚರಾ ಊಚುಃ :—

ಏವಂಪ್ರಾಯಾಃ ಕಥಾಃ ಕುರ್ವತ್ಪಶ್ಯೈನಂಮಿಥುನಂ ಮಹತ್ ।
ಪಾನಂ ಪ್ರವೃತ್ತವತ್ಸಾರಂ ಪಾತುಂ ಪದ್ಮನಿಭೇಕ್ಷಣ ॥೧॥

ಕದಲೀಕಂದಲೀಸ್ವಚ್ಛಗುಚ್ಛಾಛ್ಛೋಟನ ಪಂಡಿತಾಃ ।
ವಿವಿಧಾ ವಾಯವೋ ವಾಂತಿ ಪುಷ್ಪಕೇಸರಮಂಡಿತಾಃ ॥೨॥

ವಾಂತಿ ವಾತಾ ವನೋದ್ಧ್ವಾಂತವಿವಿಧಾಮೋದಮಾಂಸಲಾಃ ।
ಪೀತಘರ್ಮಕಣಾಃ ಕಾಂತಲಲನಾಲಕಲಾಲಕಾಃ ॥೩॥

---

# ನೂರಿಪ್ಪತ್ತನೆಯ ಸರ್ಗವು

ಸಹಚರರು ಹೇಳಿದರು: —

೧. ಇಂತಹ ಕಥೆಗಳನ್ನು ಹೇಳಿಕೊಳ್ಳುತ್ತಿರುವ ಈ ಮಿಥುನವು ಪಾನಗಳಲ್ಲೆಲ್ಲಾ ಸಾರವಾದ ಸೀಧು:ಪಾನವನ್ನು ಮಾಡಲು ಪ್ರವೃತ್ತವಾಗಿರುವುದು, ಪದ್ಮನಿಭೇಕ್ಷಣನೇ, ನೋಡು.

೨. ಕದಲಿಯ ಮೊಗ್ಗುಗಳು ತುಂಬಿರುವ ಹೂಗೊಂಚಲನ್ನು ಅರಳಿಸಬಲ್ಲ ಪಾಂಡಿತ್ಯವುಳ್ಳ, ಪುಷ ಕೇಸರಗಳನ್ನು ಮುಡಿದಿರುವ ನಾನಾ ವಾಯುಗಳು ಬೀಸುವುವು.

೩. ವನವು ಕಾರುವ ನಾನಾ ವಿಧವಾದ ಆಮೋದಗಳನ್ನು ಹೊತ್ತು ತರುವ ಸ್ವೇದ ಬಿಂದುಗಳನ್ನು ಪಾನಮಾಡಿ, ಕಾಂತವಾದ ಲಲನಾಲಕಗಳನ್ನೂ ಅಲ್ಲಾಡಿಸಿ ಈ ಗಾಳಿಗಳು ಬರುವುವು.

ಕುಲಾಚಲಗುಹಾಗೇಹವಲನೋದ್ಯನ್ಮೃಗಾಧಿಪಾಃ ।
ಸರಂತ್ಯಸುರಸಂರಂಭೈರ್ಲವಣಾರ್ಣವ ಮಾರುತಾಃ ॥೪॥

ತಮಾಲತಾಲತರಲ ಲೀಲಾನ್ದೋಲನಲಾಲಿತಾಃ ।
ಅನಿಲಾಜಲಕಲ್ಲೋಲೋತ್ಕ್ರಾಂತ ಕೋಮಲಪಲ್ಲವಾಃ ॥೫॥

ಲಲನ್ನವಲತಾವಾಂತಪುಷ್ಪಧೂಲಿ ವಿಧೂಸರಾಃ ।
ಸರಂತಿ ಮರುತೋ ಮಂದಮುದ್ಯಾನೇಷು ನೃಪಾ ಇವ ॥೬॥

ಮಧುರಂ ವಂಶವಿಶ್ರಾಂತೋ ಗಾತುಮೇಷ ವನಾನಿಲಃ ।
ಪ್ರವೃತ್ತಃ ಪಾಂಡುನಗರನಾರೀಭಿರಿವ ಶಿಕ್ಷಿತಃ ॥೭॥

---

೪. ಕುಲಾಚಲಗಳ ಗುಹಾಗೇಹಗಳನ್ನು ನುಗ್ಗಿ ಬರುವ ಮೃಗೇಂದ್ರಗಳಂತೆ, ಅಸುರರಂತೆ ಸುರಸ್ಥಾನಗಳನ್ನು ಆಕ್ರಮಿಸಬೇಕೆಂದು ಬರುವಂತೆ ಲವಣಾರ್ಣವ ಮಾರುತಗಳು ಬೀಸುವುವು.

೫. ತಮಾಲ ತಾಲಗಳ ತಾರಲ್ಯದಿಂದ ಲೀಲಾಂದೋಲನದಲ್ಲಿ ಲಾಲಿತರಾದಂತೆ, ಜಲದಲ್ಲಿ ಕಲ್ಲೋಲವನ್ನುಂಟುಮಾಡಿ ಮೇಲೆ ಹಾರಿ ಕೋಮಲಪಲ್ಲವಗಳನ್ನು ಹಿಡಿದವರಂತೆ ಈ ಗಾಳಿಗಳು ಬೀಸುವುವು.

೬. ಬಳಕುತ್ತಿರುವ ನವಲತೆಗಳು ಎರಚುವ ಪುಷ್ಪಧೂಳಿಗಳಿಂದ ವಿಧೂಸರರಾಗಿ, ಈ ಗಾಳಿಗಳು ಉದ್ಯಾನದಲ್ಲಿ ನರಪತಿಗಳಂತೆ ಮೆತ್ತಗೆ ಹೋಗುವುವು.

೭. ಈ ವನವಾಯುವು ಮಧುರವಾಗಿ ಹಾಡಬೇಕು ಎಂದು ಬಿದಿರುಮೆಳೆಯಲ್ಲಿ ನಿಲ್ಲುವನು. ಪಾಂಡುನಗರ ನಾರಿಯರಿಂದ ಶಿಕ್ಷಿತನಾದಂತೆ ಹೊರಡುವನು.

(ಪಾಂಡುನಗರೇ ಹಸ್ತಿನಾಪುರೇ ನಾರ್ಯೋ ಗಾನವಿದ್ಯಾ ಕುಶಲಾ ಇತಿ ಪ್ರಸಿದ್ಧಿಃ—ತಾ. ಪ್ರ.)

ನಿಕಾರಃ ಕರ್ಣಿಕಾರೇಣ ಪವನಸ್ಯ ಯದಾ ಕೃತಃ ।
ತದಾ ಪರಿಹರಂತ್ಯೇನಂ ಭ್ರಮರಾ ಅಪಿ ದೂರತಃ ॥೮॥

ನ ದದಾತಿ ಫಲಂ ಕಿಂಚಿದರ್ಥಿನೇ ನ ಚ ಪಲ್ಲವಂ ।
ತಾಲಃ ಸ್ತಂಭತಯಾ ರಂಭಂ ಹ್ಯರೂಪ್ಯೆವ ವಿನಾಕೃತಿಃ ॥೯॥

ರಾಗ ಏವ ಹಿ ಶೋಭಾಯೈ ನಿರ್ಗುಣಾನಾಂ ಜಡಾತ್ಮನಾಂ ।
ರಾಜೇವ ರಾಜತೇ ರಾಜನ್ರಾಗೇಣೈವೈಷ ಕಿಂಶುಕಃ ॥೧೦॥

ಆಗಚ್ಛ ಕರ್ಣಿಕಾರೋಽಯಂ ವಿಕಾರಸ್ಯೈವ ಭಾಜನಂ ।
ನಿರಾಮೋದಃ ಕಿಮೇತೇನ ನಿರ್ಗುಣೇನೇವ ಜಂತುನಾ ॥೧೧॥

---

೮. ಕರ್ಣಿಕಾರವು ಗಂಧಪರಾಗಾದಿಗಳನ್ನೊಪ್ಪಿಸದೆ ವಾಯುವಿಗೆ ಅವ ಮಾನ ಮಾಡಿತು. ಆದರಿಂದ ಭ್ರಮರಗಳೂ ಕೂಡ ಅದನ್ನು ದೂರದಿಂದಲೇ ಪರಿಹರಿಸುವುವು.

೯ ತಾಲವೃಕ್ಷವು ಬೇಕೆಂದವರಿಗೆ ಹಣ್ಣನ್ನು ಕೊಡುವುದಿಲ್ಲ: ಪಲ್ಲವವೂ ಪ್ರಯೋಜನವಿಲ್ಲ: ಬರಿಯ ಸ್ತಂಬದಂತೆ ಇದ್ದು ದುರಾರೋಹವಾದ ಆಕೃತಿಯುಳ್ಳ ಮರವು ಇದ್ದರೂ ಇದ್ದಂತಲ್ಲ.

೧೦. ನಿರ್ಗುಣರಾದ ಜಡಾತ್ಮರಿಗೆ ರಾಗವೇ ಶೋಭಾವಹವಾದುದು. ಕಿಂಶುಕವನ್ನು ನೋಡು, ರಾಜನೇ, ರಾಗವೊಂದೇ ಇದ್ದರೂ ರಾಜನಂತೆ ರಾಜಿಸುವುದು.

(ಔದಾರ್ಯಾದಿ ಗುಣ ಶೂನ್ಯಾನಾಂ ಜಡಾತ್ಮನಾಂ ಮೂರ್ಖಾಣಾಂ ವಸ್ತ್ರಾಲಂಕಾರಾದ್ಯಾಡಂಬರೇಣ ರಾಗಃ ಶರೀರ ರಂಜನ ಮೇವ–ಕಿಂಶುಕಃ ಪುಷ್ಪಿತಃ ಪಲಾಶಃ—ತಾ. ಪ್ರ.)

೧೧. ಹೊರಟು ಬಾ. ಈ ಕರ್ಣಿಕಾರವು ಕೇವಲ ಆಶಾಭಂಗ ರೂಪವಾದ ವಿಕಾರಕ್ಕೆ ಕಾರಣವು. ನಿರಾಮೋದವಾದ ಇದರಿಂದ ಏನು ಆದೀತು ? ನಿರ್ಗುಣವಾದ ಜಂತುವಿನಂತೆ ಇದೂ ನಿಷ್ಪ್ರಯೋಜನಕಾರಿಯು.

ವಿಲೋಲಮಂಜರೀಜಾಲತಡಿತ್ಸಂಗಸ್ಥಿತೋಸಿತಃ ।
ಚಾತಕಸ್ಯಾಂಬುದಭ್ರಾಂತಿಂ ತಮಾಲಃ ಕುರುತೇ ಮುಧಾ ॥೧೨॥

ಪತ್ರಾಲಾ ಘನಸಂಘಾತಾಃ ಸಚ್ಛಾಯಾವೃತಭೂಭೃತಃ ।
ಗುಣಾನಾಂ ಮಹತಾಂ ಯೋಗ್ಯಾ ವಂಶಾ ವಂಶಾ ಇವೋನ್ನತಾಃ ॥೧೩॥

ಹೇಮಸಾನ್ವಾಸನಸ್ಥೋಗ್ರ್ಯೇ ವಾತವ್ಯಾಧಿತಟೋಂಬುಧಃ ।
ತಡಿತ್ಪೀತಾಂಬರಂ ಧತ್ತೇ ಕ್ಷುಬ್ಧಂ ಹರಿರಿವೋದ್ಭವಃ ॥೧೪॥

---

೧೨. ವಿಲೋಲವಾದ ಮಂಜರಿಗಳ ಜಾಲದಿಂದ ಮಿಂಚು ಕೂಡಿರುವಂತಿರಲು, ಕಪ್ಪಾದ ಈ ತಮಾಲವು ಚಾತಕಕ್ಕೆ ಅನ್ಯಾಯವಾಗಿ ಅಂಬುದ ಭ್ರಾಂತಿಯನ್ನು ಉಂಟುಮಾಡುತ್ತಿರುವುದು.

೧೩. ಪತ್ರ (ಪರ್ಣ–ವಾಹನ) ಗಳಿಂದ ಭೂಷಿತರೂ, ಘನವಾದ ಸಂಘಾತವುಳ್ಳವರು, ಸಚ್ಛಾಯೆಯಿಂದ ಕೂಡಿರುವ ಭೂಭೃತರ (ಸತಾಂ ಛಾಯಾರ್ಥಂ ವೃತಾಃ ಸ್ವೀಕೃತಾ ಭೂಭೃತೋ ರಾಜಾನಃ) ಮಹತ್ತರವಾದ ಗುಣಗಳಿಗೆ (ಗುಣ–ಧನುಸ್ಸಿನ ಹೆದೆ) ಯೋಗ್ಯರೂ ಆದ ವಂಶ (ಕುಲ–ಬಿದಿರು) ಗಳು ವಂಶಗಳಂತೆ ಉನ್ನತವಾಗಿರುವುವು.

೧೪. ಮೇಘಗಳು ಹೇಮಸಾನುವಾದ ಮೇರು ಪರ್ವತದಲ್ಲಿ ಮೇಲುಗಡೆ ಆಸನದಲ್ಲಿ ಕುಳಿತುಕೊಂಡಿದ್ದರೂ, ವಾತವ್ಯಾಧಿಗಳು ಅವುಗಳನ್ನು ಬಿಟ್ಟಿಲ್ಲ. ಮತ್ತೆ ಅವತಾರಮಾಡಿದ ಹರಿಯಂತೆ ಅವೂ ಕ್ಷುಬ್ಧವಾದ (ಕ್ಷಣಿಕವಾದ) ತಟತ್ತೆಂಬ ಪೀತಾಂಬರವನ್ನು ತಳೆದಿರುವುವು.

(ಉದ್ಭವಃ ಊರ್ಧ್ವಭವಃ ಉತ್ಕೃಷ್ಟೈಶ್ವರ್ಯಃ—ತಾ. ಪ್ರ.)

ಪ್ರವೇಶನಿರ್ಗಮವ್ಯಗ್ರತರತ್ಖಗಶಿಲೀಮುಖಃ |
ಪ್ರಫುಲ್ಲಕಿಂಶುಕೋ ಭಾತಿ ವೀರೋ ರಕ್ತ ಇವಾಸೃಜಾ ||೧೫||

ಮಂದಾರಮಂಜರೀಪುಂಜಪಿಂಜರಾಂಭೋದಮಂದಿರೇ |
ಮಹೇಂದ್ರಮಸ್ತಕೇ ಮತ್ತಾಃ ಸುಪ್ತಾ ಗಂಧರ್ವಕಾಮಿನಃ ||೧೬||

ಕಲ್ಪದ್ರುಮವನಚ್ಛಾಯಾವಿಶ್ರಾಂತಾವಿತತಾನ್ವಿತಾಃ |
ಪಶ್ಯ ಪಾರ್ಥಿವ ಗಾಯಂತಿ ಸಿದ್ಧವಿದ್ಯಾಧರಾಧ್ವಗಾಃ ||೧೭||

ಪಶ್ಯ ಕಲ್ಪದ್ರುಮಸ್ಯಾಸ್ಯಾ ಪಲ್ಲವೇ ಪಲ್ಲವೇ ವನೇ |
ವಿಶ್ರಾಂತಾಃ ಸುರಸುಂದರ್ಯೋ ಗಾಯಂತಿ ಚ ಹಸಂತಿ ಚ ||೧೮||

---

೧೫. ಪ್ರವೇಶ, ನಿರ್ಗಮಗಳಲ್ಲಿ ಕುತೂಹಲಿಗಳಾದ ಖಗಗಳೂ ಶಿಲೀಮುಖ (ಬಾಣ–ದುಂಬಿ) ಗಳೂ ಉಳ್ಳ ಪ್ರಫುಲ್ಲ ಕಿಂಶುಕವು, ಯುದ್ಧದಲ್ಲಿ ರಕ್ತದಿಂದ ರಕ್ತನಾಗಿರುವ ವೀರನಂತಿರುವುದು.

೧೬. ಮಹೇಂದ್ರಪರ್ವತದ ಮಸ್ತಕದಲ್ಲಿ ಮಂದಾರಮಂಜರೀಪುಂಜಗಳಿಂದ ಪಿಂಜರ (ಎಣ್ಣೆಗೆಂಪಾಗಿರುವ) ಅಂಭೋದಮಂದಿರದಲ್ಲಿ ಗಂಧರ್ವಕಾಮಿಗಳು ಕುಡಿದು ಎಚ್ಚರತಪ್ಪಿ ಮಲಗಿರುವರು.

೧೭. ಕಲ್ಪದ್ರುಮವನಚ್ಛಾಯೆಗಳಲ್ಲಿ ವಿಶ್ರಾಂತರಾಗಿರುವ ಸಿದ್ಧ ವಿದ್ಯಾಧರ ಪಥಿಕರು ವೀಣಾದಿ ವಾದ್ಯಗಳನ್ನು ಬಾರಿಸಿಕೊಂಡು ಹಾಡುತ್ತಿರುವರು. ಅರಸನೇ ನೋಡು.

೧೮. ಅರಸನೆ, ಕಲ್ಪದ್ರುಮವನದಲ್ಲಿ ಪಲ್ಲವಪಲ್ಲವದಲ್ಲಿಯೂ ವಿಶ್ರಾಂತರಾಗಿರುವ ಸುರಸುಂದರಿಯರು ಹಾಡುತ್ತಿರುವರು ; ನಗುತ್ತಿರುವರು.

ಮಂದಿರಂ ಮಂದಪಾಲಸ್ಯ ಮಂದರೇ ಮೃದುಮಂದಿರೇ ।
ಮುನೇರಿದಮುದಾರಸ್ಯ ಭಾರ್ಯಾ ಸಾ ಯಸ್ಯ ಪಕ್ಷಿಣೀ ॥೧೯॥

ಅನ್ಯೋನ್ಯಾಮತಸಿಂಹೇಭ ನಕುಲೋರಗಕೇಲಿಕಾಂ ।
ಪಶ್ಯ ಮುನ್ಯಾಶ್ರಮಶ್ರೇಣಿಸರ್ವರ್ತುಕುಸುಮದ್ರುಮಾಂ ॥೨೦॥

ವಿದ್ರುಮದ್ರುಮಮಿಶ್ರಾಣಾಮಂಭೋಧಿತಟವೀರುಧಾಂ ।
ಬಿಂಬಿತಾರ್ಕಾಃ ಕಚಂತ್ಯೇತೇ ಪಲ್ಲವೇಷೂದಬಿಂದವಃ ॥೨೧॥

ವೀಚಯೋ ರತ್ನಮಾಣಿಕ್ಯಪದೇಷ್ವಾವರ್ತವೃತ್ತಿಭಿಃ ।
ವಿಲಸಂತಿ ವಿಲಾಸಿನ್ಯೋ ವಕ್ಷಃಸ್ವಿವ ವಿಲಾಸಿನಾಂ ॥೨೨॥

ನಾಗಲೋಕೇಂದ್ರಲೋಕಸ್ತ್ರೀಗಮನಾಗಮನೋದ್ಭವಃ ।
ದಿವ್ಯೋ ಭೂಷಣಝಾಂಕಾರಃ ಶ್ರೂಯತೇ ನಭಸಃ ಶೃಣು ॥೨೩॥

---

೧೯. ಮೃದುಮಂದಿರವಾದ ಮಂದರದಲ್ಲಿ ಮಂದಪಾಲನ ಮಂದಿರವಿದು. ಆ ಮಹಾಮುನಿಗೆ ಜರಿತಾ ಎಂಬ ಪಕ್ಷಿಯು ಹೆಂಡತಿಯಾಗಿದ್ದಳು.

೨೦. ಒಂದಕ್ಕೊಂದು ವೈರಿಗಳಾದ ಸಿಂಹಗಜಗಳೂ, ನಕುಲ ಉರಗಗಳೂ ಇಲ್ಲಿ ವೈರವನ್ನು ಬಿಟ್ಟು ಆಟವಾಡಿಕೊಂಡಿರುವುವು. ನೋಡು. ಈ ಮುನಿಯ ಆಶ್ರಮದಲ್ಲಿ ಮರಗಳೆಲ್ಲವೂ ಸರ್ವರ್ತುಗಳಲ್ಲಿಯೂ ಕುಸುಮವನ್ನು ಬಿಡುವುವು.

೨೧. ಅಂಭೋಧಿಯ ತಟದಲ್ಲಿ ಬೆಳೆದಿರುವ ಮರಗಳೊಡನೆ ಹವಳದ ಮರಗಳೂ ಸೇರಿರುವುವು. ಈ ಮರಗಳ ಪಲ್ಲವಗಳಲ್ಲಿ ಬಿಂಬಿಸಿರುವ ಸೂರ್ಯನುಳ್ಳ ನೀರಿನ ಬಿಂದುಗಳಿರುವುವು.

೨೨. ವಿಲಾಸಿಯಾದ ಕಾಂತನ ವಕ್ಷಸ್ಸಿನಲ್ಲಿ ವಿಲಾಸವಾಡುವ ವಿಲಾಸಿನಿಯಂತೆ,ರತ್ನಮಾಣಿಕ್ಯಗಳಿರುವ ಸ್ಥಾನಗಳಲ್ಲಿ ತರಂಗಗಳು ಆವರ್ತಗಳಾಗಿ ಸುತ್ತುವುವು.

೨೩. ನಾಗಲೋಕ, ಇಂದ್ರಲೋಕಗಳಿಂದ ಬಂದುಬಂದು ಹೋಗುತ್ತಿರುವ ಸ್ತ್ರೀಯರ ದಿವ್ಯಭೂಷಣಗಳ ಝುಂಕಾರವು ಆಕಾಶದಲ್ಲಿ ಕೇಳುವುದು. ಕೇಳಿನೋಡು.

ಶ್ರವಣೋಪಾಂತವಿಭ್ರಷ್ಟಮುದಮತ್ತಾಲಿನೀಸ್ವನೈಃ ।
ಐರಾವಣಸ್ನಾನಭೂಮೋ ಗಾಯಂತೀವ ಗುಹಾಗಿರೇಃ ॥೨೪॥

ಪ್ರಸತೋನುದಿನಂ ಕೃಷ್ಣಪಕ್ಷೇ ಕೃಷ್ಣಾಂತಲೇಖಿಕಾಃ ।
ದೃಶ್ಯಂತೇ ಕೃಶಗಾತ್ರಸ್ಯ ವಾಸ್ತುಕಾವಲಯೋಂಬುಧೇಃ ॥೨೫॥

ಆಮೋದಗಂಧಶ್ವಸನಾ ಸಚ್ಛಾಯಾ ಶೀತಲಾಂಗಿಕಾ ।
ಏಕಾಂತದರ್ಶಿತಾಕಾರಾ ನಾನಾಕುಸುಮಪೂರಿತಾ ॥೨೬॥

ವನವಿನ್ಯಾಸವಸನಾ ನಿರ್ಝರಾಮಲಹಾಸಿನೀ ।
ಆಸ್ತೀರ್ಣಪುಷ್ಪಾಸ್ತರಣಾ ಧನ್ಯಾ ವನವಿಲಾಸಿನೀ ॥೨೭॥

ರಮಂತೇ ನಂದನೋದ್ಯಾನೇ ನ ತಥೋದಾರಬುದ್ಧಯಃ ।
ಯಥೋಪಶಾಂತಶಬ್ದಾಸು ಶುದ್ಧಾಸು ವನಭೂಮಿಷು ॥೨೮॥

೨೪. ಈ ಗಿರಿಯ ಬಳಿ ಐರಾವತದ ಸ್ನಾನಭೂಮಿಯಿರುವುದು. ಅಲ್ಲಿ ಅದರ ಕಿವಿಯಬಳಿಯಿಂದ ಉರುಳಿಬಿದ್ದ ಮತ್ತಭ್ರಮರಿಯ ನಿಸ್ವನಗಳು ಗುಹೆಗಳು ಹಾಡುವಂತಿರುವುವು.

೨೫. ಕೃಷ್ಣಪಕ್ಷದಲ್ಲಿ ಅನುದಿನವೂ ಸೊರಗುವ ಸಮುದ್ರದ ಅಂಚು ಗೆರೆಗಳನ್ನು ಬಿಡುವುದು. ಆ ಕರೆಯ ಕರಿಯಗೆರೆಗಳು ವಲಯಗಳಂತೆ ಕಾಣಿಸುತ್ತಿರುವುವು.

೨೬–೨೭. ಈಕೆಯ ಶ್ವಾಸವು ಆಮೋದದಿಂದ ಕೂಡಿರುವುದು. ಈಕೆಯು ಸಚ್ಛಾಯೆಯುಳ್ಳವಳು. ಶೀತಲಾಂಗವುಳ್ಳವಳು. ಏಕಾಂತದಲ್ಲಿ ತನ್ನ ಆಕಾರವನ್ನು ತೋರಿಸುವಳು. ನಾನಾಕುಸುಮಗಳಿಂದ ಕೂಡಿರುವಳು. ವನವಿನ್ಯಾಸವೇ ವಸನವಾಗುಳ್ಳವಳು. ನಿರ್ಝರಗಳೆಂಬ ನಿರ್ಮಲವಾದ ಹಾಸ್ಯವುಳ್ಳವಳು. ವಿಶಾಲವಾದ ಪುಷ್ಪಶಯ್ಯೆಯುಳ್ಳವಳು. ಇಂತಹ ಈ ವನವಿಲಾಸಿನಿಯು ಏನು ಧನ್ಯಳೋ!

೨೮. ಉದಾರಬುದ್ಧಿಗಳಾದ ದೇವಾದಿಗಳು ಶುದ್ಧಗಳಾಗಿ ನಿಶ್ಶಬ್ದಗಳಾಗಿರುವ ವನಭೂಮಿಗಳಲ್ಲಿ ಸಂತೋಷಪಡುವಷ್ಟು ನಂದನೋದ್ಯಾನಗಳಲ್ಲಿಯೂ ಸಂತೋಷಪಡುವುದಿಲ್ಲ.

ಸುವಿರಕ್ತಂ ಮುನೇಶ್ಚೇತೋ ರಕ್ತಂ ಚ ವಿಷಯಾರ್ಥಿನಃ ।
ರಮಯಂತಿ ಸಮಂ ರಮ್ಯಾ ವಿಜನಾ ವನಭೂಮಯಃ ॥೨೯॥

ಸಲಿಲಾಧೌತಪ್ರಾಣಾಮಂಭೋಧಿತಟಭೂಭೃತಾಂ ।
ನೂಪುರೈರಿವ ರತ್ನಾಢ್ಯೈಃ ಪಾದಾ ಭಾಂತಿ ಧ್ವನಂತಿ ಚ ॥೩೦॥

ಪುನ್ನಾಗನಗವಿಶ್ರಾಂತಾಃ ಕಾಂತಕಾಂಚನಕಾಂತಯಃ ।
ಹೇಮಚೂಡಾ ಖಗಾ ಭಾಂತಿ ದಿವಿ ದೇವಗಣಾ ಇವ ॥೩೧॥

ಭ್ರಮರಾಂಭೋದಧೂಮಾಢ್ಯಾಃ ಫುಲ್ಲಚಂಪಕಕಾನನಾಃ ।
ಕಂಪಂತೇ ಪಶ್ಯ ವಾತೇನ ಜ್ವಲಿತಾ ಇವ ಪರ್ವತಾಃ ॥೩೨॥

ಕುರ್ವಂತಂ ಕರವೀರಾಗ್ರಲತಾನ್ದೋಲಾವದೋಲಕಂ ।
ಕೋಕಿಲಂ ಕೋಕಿಲಾಲಿಂಗ್ಯ ಲೋಲಾಲಾಪಯತಿ ಪ್ರಿಯಂ ॥೩೩॥

---

೨೯. ವಿಜನವಾದ ಈ ವನಭೂಮಿಗಳಲ್ಲಿ ಮುನಿಯ ವೈರಾಗ್ಯಸಂಪನ್ನವಾದ, ಕಾಮಿಯ ವಿಷಯಾಸಕ್ತಿಯುಳ್ಳ ಮನಸ್ಸುಗಳೆರಡೂ ಸಮನಾಗಿ ಸಂತೋಷಪಡುವುವು

೩೦. ಕಡಲ ತಡಿಯಲ್ಲಿರುವ ಬೆಟ್ಟಗಳ ಕೆಬ್ಬರಿಗಳೆಲ್ಲವೂ ನೀರಿನಿಂದ ನೆನೆದಿರಲು, ರತ್ನಖಚಿತಗಳಾದ ನೂಪುರಗಳುಳ್ಳ ಪಾದಗಳಂತೆ ಹೊಳೆಯುವುವು; ಮತ್ತು ಸದ್ದುಮಾಡುವುವು.

೩೧. ಪುನ್ನಾಗದ ಮರದಲ್ಲಿರುವ, ಮನೋಹರವಾದ ಕಾಂಚನವರ್ಣವುಳ್ಳ ಹೇಮಚೂಡಗಳೆಂಬ ಪಕ್ಷಿಗಳು ಆಕಾಶದಲ್ಲಿರುವ ದೇವಗಣಗಳಂತೆ ಹೊಳೆಯುವುವು.

೩೨. ಅರಳಿರುವ ಸಂಪಗೆಗಳ ಅರಣ್ಯಗಳು ಭ್ರಮರಗಳ ಸಮೂಹಗಳೆಂಬ ಧೂಮದಿಂದ ಕೂಡಿ, ಗಾಳಿಯಿಂದ ಆಡುತ್ತಿದ್ದರೆ, ನೋಡು, ಜ್ವಲಿಸುವ ಪರ್ವತಗಳಂತೆ ಕಾಣುವುವು.

೩೩. ಕರವೀರದ ಕೊನೆಯ ಉಯ್ಯಾಲೆಯಲ್ಲಿ ಕುಳಿತು ಆಡುತ್ತಿರುವ ಕೋಕಿಲವನ್ನು ಕೋಕಿಲೆಯು ಆಲಿಂಗಿಸಿ ಆಟವಾಡುತ್ತ ಪ್ರಿಯನನ್ನು ಮಾತಾಡಿಸುತ್ತಿರುವುದು.

ಲಸತ್ಕಲಕಲಾರಾವಮೇತಾ ಲಾವಣಸೈಂಧವೀ ।
ಪೂರ್ಣಾಸ್ತಟಭುವೋ ಭೂಪೈಃ ಪಶ್ಯೋಪಾಯನಪಾಣಿಭಿಃ ॥೩೪॥

ಆ ಪೂರ್ವದಾ ಪರಸ್ಮಾಲ್ಲವಣಜಲನಿಧೇರೋತ್ತರಾದ್ದಕ್ಷಿಣಾದ್ವಾ ।
ದೇವೋದಗ್ರಾಜಿಶಿಷ್ಟಾ ಇಹ ನರಪತಯಃ ಪಾದಪೀಠೀಕ್ರಿಯಂತಾಂ ॥
ದೀಯಂತಾಂ ಮಂಡಲಾನಾಂ ದಿಶಿದಿಶಿ ಚ ಯಥಾಶಾಸ್ತ್ರಮಸ್ತ್ರಾಣ್ಯವಸ್ಥ್ಯಾ ।
ರಕ್ಷಾಯೈ ಕ್ಷ್ಮಾಂತಿಪೂರ್ವಂ ಚಿರಮತುಲಬಲಂ ಶಾಂತಯಾ ಶಾಸನಾನಿ ॥೩೫॥

ಇತ್ಯಾರ್ಷೇ ವಾಸಿಷ್ಠಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ "ಅವಿದ್ಯೋಪಾಖ್ಯಾನಾಂತರ್ಗತ ವಿಪಶ್ಚಿದುಪಾಖ್ಯಾನೇ ದಿಗಂತರವೃತ್ತಿವಾಯ್ವಾದಿವರ್ಣನಂ" ನಾಮ ವಿಂಶತ್ಯಧಿಕ ಶತತಮಃ ಸರ್ಗಃ

---

೩೪ ಕಲಕಲಾರವ ಮಾಡುತ್ತಿರುವ, ಉಪ್ಪು ಕಟ್ಟಿರುವ, ತೀರಭೂಮಿಗಳು ಉಪಾಯನವನ್ನು ಹಿಡಿದು ನಿಂತಿರುವ ಭೂಪತಿಗಳಿಂದ ತುಂಬಿರುವುವು

೩೫ ಲವಣಸಮುದ್ರದ ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣಗಳಿಂದ ಎಲೈ ದೇವನೆ, ಯುದ್ಧಮಾಡಬೇಕೆಂಬ ಕುತೂಹಲವುಳ್ಳ ನರಪತಿಗಳು ಬಂದಿರುವರು ಅವರನ್ನು ನಿನ್ನ ಪಾದಪೀಠದ ಬಳಿ ಇರಿಸಿಕೊಂಡು, ಅವರಿಗೆ ಅಸ್ತ್ರಗಳನ್ನು ಕೊಟ್ಟು ಅವರವರು ತಮ್ಮತಮ್ಮ ದಿಕ್ಕುಗಳಲ್ಲಿ ಯಥಾಶಾಸ್ತ್ರವಾಗಿ ರಕ್ಷಿಸಬೇಕೆಂದು ಆಜ್ಞೆಗಳನ್ನು ದಯಪಾಲಿಸಬೇಕು

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ "ದಿಗಂತರವೃತ್ತಿವಾಯ್ವಾದಿವರ್ಣನೆ" ಎಂಬ ನೂರಿಪ್ಪತ್ತನೆಯ ಸರ್ಗವು

# ಏಕವಿಂಶತ್ಯಧಿಕಶತತಮಃ ಸರ್ಗಃ

ಶ್ರೀವಸಿಷ್ಠ ಉವಾಚ—

ಅಥ ತೇಷ್ವರ್ಣವತಟೇಷ್ವೇತೇ ಭೂಪೌ ವಿಪಶ್ಚಿತಃ ।
ಉಪವಿಶ್ಯೈತದಖಿಲಂ ಚಕ್ರಂ ರಾಜ್ಯಪ್ರಯೋಜನಂ ॥೧॥

ತದಾ ತತ್ರೈವ ತೇ ವಾಸಭೂಮಿಂ ಕೃತ್ವಾ ಯಥಾಕ್ರಮಂ ।
ತಸ್ಥುರ್ಮಂಡಲಮರ್ಯಾದಾಂ ಸ್ಥಾಪಯಾಮಾಸುರಕ್ಷತಾಂ ॥೨॥

ಅಥ ವರ್ಣಯಿತುಂ ಶ್ರೀಮಾಂಸ್ತತ್ಪ್ರತಾಪಮಿವಾಗತಂ ।
ಸಂಪ್ರವಿಶ್ಯ ಸಮುದ್ರಾಂತರನ್ಯಲೋಕಾಂತರಂ ರವಿಃ ॥೩॥

---

# ನೂರಿಪ್ಪತ್ತೊಂದನೆಯ ಸರ್ಗವು

ಶ್ರೀವಸಿಷ್ಠನು ಹೇಳಿದನು—

೧. ಅನಂತರ ಅರ್ಣವ ತಟಭೂಮಿಯಲ್ಲಿ ಈ ನಾಲ್ವರು ವಿಪಶ್ಚಿತರೂ ಕುಳಿತು ರಾಜ್ಯಪ್ರಯೋಜನವನ್ನೆಲ್ಲ ಮಾಡಿದರು.

೨. ಅಲ್ಲಿಯೇ ಅವರು ಯಥಾಕ್ರಮವಾಗಿ ವಾಸಭೂಮಿಯನ್ನು ಮಾಡಿಕೊಂಡು ನಿಂತರು. ಮಂಡಲಮರ್ಯಾದೆಯನ್ನು ಅಕ್ಷತವಾದ ರೀತಿಯಲ್ಲಿ ಸ್ಥಾಪಿಸಿದರು.

೩. ಆ ವಿಪಶ್ಚಿತರ ಪ್ರತಾಪವನ್ನು ವರ್ಣಿಸಬೇಕೆಂದು, ಸಮುದ್ರಾಂತದಲ್ಲಿ ಅನ್ಯಲೋಕಾಂತರವನ್ನು ಪ್ರವೇಶಿಸಿದನೋ ಎಂಬಂತೆ ಶ್ರೀಮಂತನಾದ ರವಿಯು ಮುಳುಗಿದನು.

ಆಯಯೌ ಯಾಮಿನೀಶ್ಯಾಮಾ ಮೇಘಲೇಖೇವ ತಾನವಂ ।
ಸಂಪಾದಿತಾಹವ್ಯಾರ್ಪಾರಾಸ್ತಸ್ಥುಃ ಸ್ವಶಯನೇಷು ತೇ ॥೪॥

ಆಸಮುದ್ರಂ ನದೀವಾಹಾ ಇವ ದೂರಾದುಪಾಗತಾಃ ।
ಇದಂ ಸಂಪಾದಯಾಮಾಸುರ್ವಿಸ್ಮಯಾಕುಲಚೇತಸಃ ॥೫॥

ಅಹೋ ನು ದೂರಮಧ್ವಾನಂ ಪ್ರಾಪ್ತಾ ವಯಮಯತ್ನತಃ ।
ಪ್ರಭಾವಾದ್ದೇವದೇವಸ್ಯ ವಹ್ನೇರ್ದಿವ್ಯೈಃ ಸ್ವವಾಹನೈಃ ॥೬॥

ಕಿಯತೀ ಸ್ಯಾತ್ಪ್ರವಿಸ್ತೀರ್ಣಾ ದೃಶ್ಯಶ್ರೀರಿಯಮಾತತಾ ।
ಇತಃ ಸಮುದ್ರಾಸ್ತದನು ದ್ವೀಪಭೂರಂಬುಧಿಃ ಪ್ರಭುಃ ॥೭॥

ಇತೋ ದ್ವೀಪಂ ತತೋಂಭೋಧಿಃ ಕಿಮಂತೇ ಸ್ಯಾತ್ತತೋಪಿ ಚ ।
ಕಿಯತೀ ಕೀದೃಶೀ ವಾ ಸ್ಯಾನ್ಮಾಯೇಯಂ ಚೇತ್ಯರೂಪಿಣೀ ॥೮॥

---

೪　ಯಾಮಿನಿಯ ಶ್ಯಾಮತೆಯು ಮೇಘದಂತೆ ಹರಡಿತು. ಹಗಲಿನ ಕಾರ್ಯಗಳನ್ನೆಲ್ಲ ಮುಗಿಸಿಕೊಂಡು ಆ ವಿಪಶ್ಚಿತರು ಶಯನವನ್ನು ಸೇರಿದರು.

೫.　ನದೀಪ್ರವಾಹಗಳಂತೆ ಸಮುದ್ರದವರೆಗೂ ದೂರದಿಂದ ಬಂದಿದ್ದ ಅವರು ವಿಸ್ಮಯಪಡುತ್ತ ಹೀಗೆ ಚಿಂತಿಸಿದರು :—

೬.　ಎಲೆಲಾ ! ನಾವು ಬಹುದೂರ ಅಯತ್ನವಾಗಿ ಬಂದುಬಿಟ್ಟೆವು. ದೇವದೇವನಾದ ಅಗ್ನಿಯು ಕರುಣಿಸಿದ ದಿವ್ಯವಾಹನಗಳು ನಮ್ಮನ್ನು ಇಲ್ಲಿಗೆ ತಂದುದು ಆತನ ಪ್ರಭಾವವು.

೭.　ಹೀಗೆ ಹರಡಿರುವ ದೃಶ್ಯಶ್ರೀಯು ಎಷ್ಟು ಇರಬಹುದು ? ಜಂಬೂದ್ವೀಪವಾದಮೇಲೆ ಲವಣಸಮುದ್ರವೂ ಆದಾದಮೇಲೆ ಪ್ಲಕ್ಷದ್ವೀಪವು, ಆಮೇಲೆ ಲವಣಸಮುದ್ರದ ಎರಡರಷ್ಟಿರುವ ಇಕ್ಷುಸಮುದ್ರವು.

೮.　ಅನಂತರ ಕುಶದ್ವೀಪವು, ಅನಂತರ ಸುರಾಸಮುದ್ರವು. ಅದರ ಆಚೆ ಸಪ್ತದ್ವೀಪಸಮುದ್ರಗಳು ಕಳೆದಮೇಲೆ ಏನಿದ್ದೀತು ? ಚೇತ್ಯರೂಪವಾಗಿ ಹರಡಿರುವ ಈ ಮಾಯೆಯು ಎಷ್ಟು ಇದ್ದೀತು ? ಯಾವ ರೂಪವಾಗಿ ಇದ್ದೀತು ?

ತತ್ಪ್ರಾರ್ಥಯಾಮಹೇ ದೇವಂ ಹುತಾಶಂ ತದ್ವರಾದಿಮಾಃ |
ಪ್ರೇಕ್ಷಾಮಹೇ ದಿಶಃ ಸರ್ವಾ ಆಪರ್ಯಂತಮಖೇದಿನಃ ||೯||

ಇತಿ ಸಂಚಿಂತ್ಯ ತೇ ಸರ್ವೇ ಯಥಾಸ್ಥಾನಮವಸ್ಥಿತಾಃ |
ಸಮಮೇವಾಹ್ವಯಾಮಾಸುರ್ಭಗವಂತಂ ಹುತಾಶನಂ ||೧೦||

ಬಭೂವ ಭಗವಾನೇಷಾಮಥ ದೃಶ್ಯೋ ಹುತಾಶನಃ |
ಆಕಾರವಾನ್ವರಂ ಪುತ್ರಾಃ ಪ್ರಗೃಹ್ಣೀತೇತ್ಯುವಾಚ ಚ ||೧೧||

**ವಿಪಶ್ಚಿತ ಊಚುಃ—**

ಪಂಚಭೂತಾತ್ಮಕಾಯಸ್ಯ ದೃಶ್ಯಸ್ಯಾಂತಂ ಸುರೇಶ್ವರ |
ದೇಹೇನ ಮಂತ್ರದೇಹೇನ ತದಂತೇ ಮನಸಾಪಿ ಚ ||೧೨||

---

೯. ಆದರಿಂದ ಅಗ್ನಿದೇವನನ್ನು ಪ್ರಾರ್ಥಿಸೋಣ. ಅತನ ವರದಿಂದ ದಿಕ್ಕುಗಳನ್ನೆಲ್ಲಾ ಆ ಪರ್ಯಂತವಾಗಿ, ಅಖೇದಿಗಳಾಗಿ ನೋಡೋಣ.

೧೦. ಹೀಗೆಂದು ಯೋಚಿಸಿ ಆ ನಾಲ್ವರೂ, ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತು ಏಕಕಾಲದಲ್ಲಿ ಭಗವಂತನಾದ ಹುತಾಶನನನ್ನು ಆಹ್ವಾನ ಮಾಡಿದರು.

೧೧. ಭಗವಂತನಾದ ಹುತಾಶನನು ಇವರಿಗೆ ದರ್ಶನವನ್ನು ಕೊಟ್ಟನು. ಆಕಾರವಂತನಾಗಿ ಎದುರು ನಿಂತು, ಪುತ್ರರೆ, ವರವನ್ನು ಕೊಳ್ಳಿ ಎಂದು ಹೇಳಿದನು.

**ವಿಪಶ್ಚಿತರು ಹೇಳಿದರು:—**

೧೨. ಎಲೈ ಸುರೇಶ್ವರನೆ, ದೇಹದಿಂದಲೂ ಮಂತ್ರದೇಹದಿಂದಲೂ, ಮನಸ್ಸಿನಿಂದಲೂ, ಪಂಚಭೂತಾತ್ಮಕವಾಗಿರುವ ಈ ದೃಶ್ಯದ ಅಂತವನ್ನು ನೋಡಬೇಕೆಂದಿರುವೆವು.

ಯಾವತ್ಸಂವೇದನಂ ಯಾವತ್ಸಂಭವಂ ಯಾವದಾತ್ಮಕಂ ।
ಪಶ್ಯೇಮ ಇತಿ ನೋ ದೇವ ದೀಯತಾಮುತ್ತಮೋ ವರಃ ॥೧೩॥

ಅಸಿದ್ಧಗವ್ಯೂಡುಧ್ವಾನಂ ಪಶ್ಯೇಮ ವಪುಷಾ ವಯಂ ।
ತದಂತೇ ಮನಸೈವಾಥ ದೃಶ್ಯಂ ಪಶ್ಯೇಮ ಭೋ ಪ್ರಭೋ ॥೧೪॥

ಅಸಿದ್ಧಗವ್ಯುಮಧ್ವಾನಂ ಮೃತ್ಯುರಸ್ಮಾಕಮಸ್ತು ಮಾ ।
ಅಧ್ವನ್ಯಸಂಭವದ್ದೇಹೇ ಮನ ಏವ ಪ್ರಯಾತು ನಃ ॥೧೫॥

ಶ್ರೀ ವಸಿಷ್ಠ ಉವಾಚಃ—

ಅಥೈವಮಸ್ತ್ವಿತಿ ಪ್ರೋಚ್ಯ ಪಾವಕಃ ಸಹಸಾಗಮತ್ ।
ಕ್ಷಣಾದೌರ್ವತಯಾ ಯಾತುಂ ಸಮುದ್ರ ಇವ ಸತ್ವರಃ ॥೧೬॥

---

೧೩. ಸಂವೇದನವು ಎಲ್ಲಿಯವರೆಗೋ, ಸಂಭವವು ಎಲ್ಲಿಯವರೆಗೋ, ಯಾವುದಾಗಿರುವುದೋ, ಅದಷ್ಟನ್ನೂ ನೋಡಿ ಎಂದು ವರೋತ್ತಮವನ್ನು ಕರುಣಿಸು.

೧೪. ಸಿದ್ಧಗವ್ಯವಾದ ಹಾದಿಯನ್ನು ಹಿಡಿದು ಹೋಗಿ ನಾವು ದೇಹದಿಂದ ಅದರಿಂದಾಚೆಗೆ ಮನಸ್ಸಿನಿಂದ, ಎಲೈ ಪ್ರಭುವೆ ದೃಶ್ಯವನ್ನು ನೋಡುವೆವು.

೧೫. ಸಿದ್ಧಗವ್ಯವಾದ ಹಾದಿಯಲ್ಲಿ ನಮಗೆ ಮೃತ್ಯುವು ಬರದಿರಲಿ. ದೇಹವು ಹೋಗಲಾರದ ಹಾದಿಯಲ್ಲಿ ನಮ್ಮ ಮನಸ್ಸೇ ಹೋಗಲಿ.

ಶ್ರೀ ವಸಿಷ್ಠನು ಹೇಳಿದನು: —

೧೬. ಪಾವಕನು ಹಾಗೇ ಆಗಲೆಂದು ಹೇಳಿ ಥಟ್ಟನೆ, ಔರ್ವನಾಗಿ ಸಮುದ್ರವನ್ನು ಹೋಗಬೇಕೆಂದ, ಅವಸರದಿಂದ ಹೋಗುವಂತೆ, ಅಂತರ್ಧಾನವನ್ನು ಹೊಂದಿದನು.

ಅಗ್ನಿರ್ಜಗಾಮಾಥ ಸಮಾಜಗಾಮ ನಿಶಾ ವಿಲಂಬ್ಯಾಥ ಜಗಾಮ ಸಾಪಿ ।
ಸಮಾಜಗಾಮಾಪಿ ರವಿರ್ಜಗಾಮ ತೇಷಾಂ ಚ ಧೀರಾರ್ಣವಲಂಘನೇಹಾ ॥೧೭॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಅವಿದ್ಯೋಪಾಖ್ಯಾನಾಂತರ್ಗತ ವಿಪ
ಶ್ಚಿದುಪಾಖ್ಯಾನೇ "ವಿಪಶ್ಚಿನ್ನಿರ್ಣಯೋ ನಾಮೈಕವಿಂಶತ್ಯಧಿಕ ಶತತಮಃ ಸರ್ಗಃ"

---

೧೭ ಅಗ್ನಿಯು ಹೋಗುತ್ತಲೂ ನಿಶೆಯು ಬಂತು ಕೊಂಚಕಾಲವಿದ್ದು ಅದೂ ಹೋಯಿತು ಸೂರ್ಯನೂ ಬಂದನು ಸಮುದ್ರವನ್ನು ದಾಟಿಹೋಗಬೇಕೆಂಬ ಅವರ ಇಚ್ಛೆಯೂ ಬಲವಾಯಿತು

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ವಿಪಶ್ಚಿನ್ನಿರ್ಣಯ" ಎಂಬ
ನೂರಿಪ್ಪತ್ತೊಂದನೆಯ ಸರ್ಗವು



# ದ್ವಾವಿಂಶತ್ಯಧಿಕ ಶತತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ:—

ತತಃ ಪ್ರಭಾತೇಪ್ರಸಭಂ ಪೃಥಿವ್ಯಾಃ ಕೃತ್ವಾ ಯಥಾಶಾಸ್ತ್ರಮಲಂ ವ್ಯವಸ್ಥಿತಂ |
ಆವಿಷ್ಟದೇಹಾ ಇವ ತೇ ರಸೇನ ನಿಷೇಧ್ಯಮಾನಾ ಇವ ಮಂತ್ರಿಮುಖ್ಯೈಃ ||೧||

ನಿವಾರ್ಯ ಸರ್ವಂ ಪರಿವಾರಮಾತ್ರಮಾಕ್ರಂದಮಾನಂ ವದನ್ಯೈ ರುದದ್ಭಿಃ |
ನಿರಸ್ಯ ಚಾಸ್ನೇಹತಯಾಭಿಮಾನಮಾತ್ಸರ್ಯಲೋಭಾಭಿಭವೈಷಣಾದಿ ||೨||

ದಿಗಂತಮಾಲೋಕ್ಯ ಸಮುದ್ರಪಾರೇ ಕ್ಷಣಾತ್ಸಮಾಯಾಮ ಇತಿ ಬ್ರುವಂತಃ|
ಸ್ವಮಂತ್ರಶಕ್ತ್ಯೋತ್ತಮತಾಂ ಗತೈಸ್ತೈರದ್ಭಿಃ ಪದ್ಭಿರೇವ ತದಾ ಪ್ರವಿಷ್ಟಃ ||೩||

---

# ನೂರಿಪ್ಪತ್ತೆರಡನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:—

೧. ಅನಂತರ ಅವರು ಪ್ರಭಾತದಲ್ಲಿ ಪೃಥಿವಿಯ ವ್ಯವಸ್ಥೆಯನ್ನು ಯಥಾಶಾಸ್ತ್ರವಾಗಿ ಸರಿಯಾಗಿ ಬೇಗಬೇಗ ಮಾಡಿ, ಆಸ್ಥೆಯಿಂದ ಆವೇಶವನ್ನು ಹೊಂದಿದವರಂತೆ, ಮಂತ್ರಿಮುಖ್ಯರಿಗೆ ಇಷ್ಟವಿಲ್ಲದಿದ್ದರೂ,

೨. ಅಳುತ್ತಿರುವ ಪರಿಜನರೆಲ್ಲರನ್ನೂ ಹಿಂದೆಯೇ ಬಿಟ್ಟು, ಅಭಿಮಾನ, ಮಾತ್ಸರ್ಯ, ಲೋಭ, ಅಭಿಭವ, ಏಷಣಾ ಮೊದಲಾದವೆಲ್ಲವನ್ನೂ ಅಸ್ನೇಹದಿಂದ ತ್ಯಾಗಮಾಡಿ,

೩. ಸಮುದ್ರದ ಕೊನೆಯ ದಿಗಂತಗಳನ್ನು ನೋಡಿ, ಒಂದೇ ಕ್ಷಣದಲ್ಲಿ ಬರುವೆವು ಎಂದು ಹೇಳುತ್ತಾ, ಸ್ವಮಂತ್ರ ಶಕ್ತಿಯಿಂದ ಉತ್ತಮತೆಯನ್ನು ಪಡೆದು ಪಾದಗಳಿಂದಲೇ ಸಮುದ್ರವನ್ನು ಪ್ರವೇಶ ಮಾಡಿದರು.

ವಿಪಶ್ಚಿತಸ್ತೇ ದಿಶಿದಿಶ್ಯನಲ್ಪೈರ್ಭೃತ್ಯೈಃ ಸಮುದ್ರಂ ಪ್ರವಿಶದ್ಭಿರೇವ ।
ಭೃತ್ಯೈಶ್ಚ ಕೈಶ್ಚಿತ್ತ್ವನುಗಮ್ಯಮಾನಾ ಯಯುರ್ಯಥಾ ವಾರಿಣಿ ಪದ್ಭಿರೇವ ॥೪॥

ತರಂಗಜಾಲೇಷು ಪದಾನಿ ಕೃತ್ವಾ ಪೃಷ್ಠೇ ಸ್ಥಲಸ್ಯೇವ ಜಲಸ್ಯ ಚಾಂತಃ ।
ಚತ್ವಾರ ಏಕೈಕತಯೈವ ಯುಕ್ತಾ ಭೃಶಂ ವಿಯುಕ್ತಾ ನಿಜಸೇನಯಾ ತೇ ॥೫॥

ಪದಕ್ರಮೇಣೈವ ಮಹಾರ್ಣವಾಂತಸ್ತಾವತ್ಪ್ರವಿಷ್ಟಾ ಅವಲೋಕಿತಾಸ್ತೇ ।
ತಟಸ್ಥಿತೈರ್ಯಾವದದೃಶ್ಯಭಾವಂ ಶರನ್ನಭೋ ಮೇಘಲವಾ ಇವಾಪುಃ ॥೬॥

ತಮುಧ್ವಾನಮುಧೋಹುಸ್ತೇ ಜಲಧೌ ಪಾದಚಾರಿಣಃ ।
ವಿಕತಾಧ್ಯವಸಾಯೇನ ಬದ್ಧಕಕ್ಷಾ ಹರಾ ಇವ ॥೭॥

---

೪. ಆ ವಿಪಶ್ಚಿತರು ನೀರಿನಲ್ಲಿ ಕಾಲಿಂದಲೇ ನಡೆದುಕೊಂಡು ಹೊರಡಲು ಅನೇಕ ಭೃತ್ಯರೂ ಅವರೊಡನೆ ಸಮುದ್ರವನ್ನು ಪ್ರವೇಶಿಸಿದರು: ಕೆಲವರು ಅವರೊಡನೆಯೇ ಹೋದರು.

೫. ತರಂಗ ಜಾಲಗಳಲ್ಲಿ ನೆಲದಮೇಲೆ ಹೇಗೋ ಹಾಗೆಯೇ ನೀರಿನಮೇಲೆಯೂ, ನಡೆಯುತ್ತ, ಆ ನಾಲ್ವರೂ ಏಕೈಕತೆಯಿಂದ ಕೂಡಿ ನಿಜಸೇನೆಯನ್ನು ಬಿಟ್ಟು ಹೊರಟರು.

೬. ಕಾಲುನಡೆಯಿಂದಲೇ ಮಹಾರ್ಣವವನ್ನು ಅವರು ಪ್ರವೇಶಿಸಿದುದನ್ನು ದಡದಲ್ಲಿ ಇದ್ದವರು ನೋಡಿದರು: ಹಾಗೆಯೇ ಶರನ್ನಭದಲ್ಲಿ ಮೇಘಲವವು ಅದೃಶ್ಯವಾಗುವಂತೆ ಅದೃಶ್ಯಭಾವವನ್ನೂ ಹೊಂದಿದರು.

೭. ಅವರು ಕೃತನಿಶ್ಚಯರಾಗಿ ಆ ಜಲಧಿಯಲ್ಲಿ ಪಾದಚಾರಿಗಳಾಗಿಯೇ ಹೊರಟರು. ಅದು ಕಟ್ಟಿರುವ ಕಟ್ಟೆಯನ್ನೂ ಒಡೆಯುವ ಆನೆಗಳ ನಿಶ್ಚಯದಂತೆ ಇತ್ತು (?)

ಉನ್ನತಾವನತಾಮದ್ರಿಸಮಾರೋಹಾವರೋಹಣೈಃ ।
ಶ್ರಿಯಂ ವಾರಿತರಂಗಾಣಾಂ ಹರಂತೋ ಹರಿಮೂರ್ತಯಃ ॥೮॥

ಆವರ್ತೇಷು ತೃಣಾನಿವ ಭ್ರಾಂತಾ ವಿಗತಸಂಭ್ರಮಂ ।
ಚಿರಂ ಚಂಚಲಮತ್ತಾಭ್ರ ಚಂದ್ರಮಂಡಲಶೋಭಿಷು ॥೯॥

ಮಂತ್ರವಿದ್ಯಾಬಲೌಜೋಭಿರ್ದುರ್ಜಯಾಃ ಶಸ್ತ್ರಪಾಣಯಃ ।
ಕ್ವಚಿತ್ಪ್ರಮತ್ತೈರ್ಮಕರೈರ್ನಿಗೀರ್ಣೋದ್ಗೀರ್ಣದೇಹಕಾಃ ॥೧೦॥

ಜಲಕಲ್ಲೋಲವಿಶ್ರಾಂತ ವಾತೋತ್ಸಾರಿತಮೂರ್ತಯಃ ।
ನೀತಾನೀತಾಃ ಕ್ಷಣೆನೈವ ಯೋಜನಾನಾಂ ಶತಂ ಶತಂ ॥೧೧॥

---

೮. ಹಿಂದೆ ಮಂಥನ ವೇಳೆಯಲ್ಲಿ ತರಂಗಗಳನ್ನುಹತ್ತಿ ಇಳಿದುಹೋಗಿ ಲಕ್ಷ್ಮಿಯನ್ನು ಕರೆತಂದ ಮಹಾ ವಿಷ್ಣುವಿನಂತೆ ಅವರೂ ತರಂಗಗಳ ಜೊತೆಯಲ್ಲಿ ಏರೇರಿ ಇಳಿದಿಳಿದರು.

೯. ಆವರ್ತಗಳಲ್ಲಿ ತೃಣಗಳಂತೆ, ವಿಗತ ಸಂಭ್ರಮರಾಗಿ ಚಂಚಲವಾದ ಮತ್ತ ಮೇಘಗಳಲ್ಲಿ ಶೋಭಿಸುವ ಚಂದ್ರಮಂಡಲದಂತೆ ತರಂಗಗಳಲ್ಲಿ ಚಿರಕಾಲ ಅಲೆದರು.

೧೦. ಮಂತ್ರವಿದ್ಯಾಬಲದಿಂದ ಪಡೆದಿರುವ ಓಜಸ್ಸುಳ್ಳವರಾಗಿ, ದುರ್ಜಯರಾಗಿ, ಶಸ್ತ್ರಪಾಣಿಗಳಾಗಿ ಹೊರಟರೂ, ಒಂದೊಂದೆಡೆ, ಪ್ರಮತ್ತವಾದ ಮಕರಗಳು ಅವರನ್ನು ನುಂಗಿದುವು: ಮತ್ತೆ ಕಕ್ಕಿದುವು.

೧೧. ಜಲಕಲ್ಲೋಲದಿಂದ ಅವರು ದಣಿದರೂ ಗಾಳಿಯು ಅವರನ್ನು ಹೊತ್ತುಕೊಂಡು ಹೋಯಿತು. ಒಂದು ಕಡೆ ನೀತರಾಗಿ, ಇನ್ನೊಂದುಕಡೆ ಅನೀತರಾಗಿ ಒಂದೇ ಕ್ಷಣದಲ್ಲಿ ನೂರಾರು ಯೋಜನಗಳನ್ನು ದಾಟಿದರು.

ಜಲಕಲ್ಲೋಲಮಾತಂಗ ತುಂಗಿತಾಂಗತಯಾ ತಯಾ ।
ದಧಾನಾ ನಿಜರಾಜ್ಯೇಭಪೃಷ್ಠರೋಹಸ್ಥಿತಿಶ್ರಿಯಂ ॥೧೨॥

ವಿಸ್ತೀರ್ಣೋರ್ಮಿಘಟಾಪಟ್ಟ ಪಾಟಪಟ್ಟನಪಾಟವೈಃ ।
ದರ್ಶಯಂತೋ ಜಲಾಂಭೋದನಿಷ್ಕ್ರಾಂತಿಂ ಮಾರುತಾ ಇವ ॥೧೩॥

ತರತ್ತರಲಮಾತಂಗತರಂಗೌಘೆ ವಿಘಟ್ಟಿತಾಃ ।
ಅತ್ಯಜಂತೋ ನಿಜಂ ಧೈರ್ಯಂ ವೇಲಾವರತಟಾ ಇವ ॥೧೪॥

ಮಹೋರ್ಮಿಮುಕ್ತಾ ಮಾಣಿಕ್ಯಮಂಡಲಪ್ರತಿಬಿಂಬಿತಾಃ ।
ಏಕಾಕಿನೋಽಪಿ ಪರಿತಃ ಪೌರುಷೇಯವೃತಾ ಇವ ॥೧೫॥

---

೧೨. ಜಲಕಲ್ಲೋಲವೆಂಬ ಮಾತಂಗಗಳು ತಮ್ಮನ್ನು ಧರಿಸಿಕೊಂಡಿರಲು, ತಮ್ಮ ಪಟ್ಟದಾನೆಯ ಮೇಲೆಯೇ ಕುಳಿತುಕೊಂಡು ಹೋಗುವ ವೈಭವದಿಂದ ಹೋದರು.

೧೩. ವಿಸ್ತೀರ್ಣವಾಗಿರುವ ತರಂಗ ಗಣಗಳೆಂಬ ಬಂಡೆಗಳನ್ನು ಉರುಳಿಸುವ ಚಮತ್ಕಾರವನ್ನು ತೋರಿಸುತ್ತ, ಗಾಳಿಗಳ ಹಾಗೆ ಜಲವೆಂಬ ಮೋಡಗಳನ್ನು ದಾಟಿ ಹೋದರು.

೧೪. ಆನೆಗಳಂತಿರುವ ಚಂಚಲ ತರಂಗಗಳು ಬಂದು ಘಟ್ಟಿಸುತ್ತಿದ್ದರೂ ನಿಜಧೈರ್ಯವನ್ನು ಬಿಡದೆ, ವೇಲಾ ತಟಗಳಂತೆ ಇದ್ದರು.

೧೫. ಮಹಾ ತರಂಗಗಳಲ್ಲಿಯೂ ಮುಕ್ತಾ ಮಾಣಿಕ್ಯ ಮಂಡಲಗಳಲ್ಲಿಯೂ ಪ್ರತಿಬಿಂಬಿತರಾಗಿ, ತಾವು ಒಬ್ಬೊಬ್ಬರೇ ಇದ್ದರೂ ಅನೇಕ ಪುರುಷರಿಂದ ಪರಿವೃತ ರಾದಂತೆ ಇದ್ದರು.

ಪಾಂಡುಡಿಂಡೀರಪಿಂಡೇಷು ಕುರ್ವಂತೋ ಲಾಘವಾತ್ಪದಂ ।
ಶ್ವೇತಪದ್ಮಪರಿಕ್ರಾಂತ ರಾಜಹಂಸಶ್ರಿಯಂ ದಧುಃ ॥೧೬॥

ಘನನಿರ್ಘಾತ ನಿರ್ಘೋಷ ಭೀಷಣಾರ್ಣವಘುಂಘುಮಾತ್ ।
ನ ಭೀತಾ ಭೂಭೃತಸ್ತತ್ರ ವೇಲಾವಲನಜೃಂಭಿತಾತ್ ॥೧೭॥

ಅಭ್ರಂಲಿಹಜಲಾದೀಂದ್ರಪಾತೋತ್ಪಾತ ವಿಘಟ್ಟಿತಾಃ ।
ಕ್ಷಣಂ ಪಾತಾಲಮಾಜಗ್ಮುಃ ಕ್ಷಣಮರ್ಕಾಸ್ಪದಂ ಯಯುಃ ॥೧೮॥

ಅಶಂಕಿತೋತ್ಪತದ್ವಾರಿಪೂರಪಾತಪಟಾವೃತಾಃ ।
ಉತ್ಪಾತಪಾತನಿಪತದ್ವಿತಾನಕವೃತಾ ಇವ ॥೧೯॥

---

೧೬. ಬೆಳ್ಳಗೆ ಇರುವ ನೊರೆಗಳ ಹಿಂಡಿನ ಮೇಲೆ ಲಘುವಾಗಿ ಪದಗಳನ್ನು ಇಡುತ್ತ, ಶ್ವೇತಪದ್ಮಗಳನ್ನು ದಾಟಿಕೊಂಡು ಹೋಗುವ ರಾಜಹಂಸಗಳ ಸೌಭಾಗ್ಯ ವನ್ನು ಮೆರೆದರು.

೧೭. ಮೋಡಗಳ ಗುಡುಗುಗಳಿಂದಲೂ ಅರ್ಣವಗಳ ಘುಂಘುಂಗಳಿಂದಲೂ ತೀರದಲ್ಲಿ ಆಗುವ ತರಂಗಗಳ ಜೃಂಭಣದಿಂದಲೂ, ಭೂಭೃತ್ತು (ಕ್ಷತ್ರಿಯ ಪರ್ವತ) ಗಳಂತೆ ಭೀತಿಪಡದೆ ಇದ್ದರು.

೧೮. ಆಕಾಶದೆತ್ತರವಿರುವ ಜಲಮಯವಾದ ಪರ್ವತೇಂದ್ರಗಳ ಪಾತ–ಉತ್ಪಾತಗಳಿಂದ ವಿಘಟ್ಟಿತರಾಗಿ ಒಂದು ಕ್ಷಣದಲ್ಲಿ ಪಾತಾಳಕ್ಕೆ ಇನ್ನೊಂದು ಕ್ಷಣ ದಲ್ಲಿ ಸೂರ್ಯನ ಹತ್ತಿರಕ್ಕೆ ಹೋದರು.

೧೯. ಅನಿರೀಕ್ಷಿತವಾಗಿ ಹಾರಿ ಮೇಲೆ ಬೀಳುವ ಜಲಪೂರಗಳ ಪಟಗಳು ತಮ್ಮನ್ನು ಆವರಿಸಲು, ಉತ್ಪಾತ ಕಾಲದಲ್ಲಿ ಮುಚ್ಚುವ ಮೇಘ ಪಟಲಗಳಿಂದ ಆವೃತರಾದಂತೆ ಇದ್ದರು.

ಪ್ರಕ್ರಾಂತಾಸ್ತೇಂಬುರಾಶೌ ಸಹಚರಮಕರಾಃ ಶೂರನಕ್ರೈಃ ಕುಳೀರೈಃ ।
ವ್ಯಾಪ್ತಾವರ್ತಾವಿವೃತ್ತಾಃ ಸಲಿಲತರುಲತಾಸೀಕರೈರಂತರಾಳೈಃ ।
ಕುರ್ವಂತಃ ಕಾಂತಿಯುಕ್ತಂ ವಪುರಿವ ಕುಸುಮೈರ್ಭ್ರಾಂತಮಾಣಿಕ್ಯಮುಕ್ತೈ ।
ವ್ಯಕ್ತಾವ್ಯಕ್ತಾಂಶುಜಾಲೈಃ ಪ್ರತಿಪದಮಿತರೈರಭ್ರರೂಪೈರದಭ್ರೈಃ ॥೨೦॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಅವಿದ್ಯೋಪಾಖ್ಯಾನಾಂತರ್ಗತ ವಿಪಶ್ಚಿದುಪಾಖ್ಯಾನೇ "ಅರ್ಣವಪರಿಕ್ರಮಣಂ ನಾಮ ದ್ವಾವಿಂಶಾಧಿಕಶತತಮಃ ಸರ್ಗಃ"

---

೨೦ ಅವರು ಆ ಜಲರಾಶಿಯಲ್ಲಿ ಮಕರಗಳು ಸಹ ಚರಗಳಾಗಿ ಜರುತ್ತಿರಲು ಮುಂದೆ ಮುಂದೆ ಹೋದರು ಆ ಮಕರಗಳು ಶೂರನಕ್ರಗಳಿಂದಲೂ ಕರ್ಕಟಕಗಳಿಂದಲೂ ತುಂಬಿದ ಆವರ್ತಗಳಿಗೆ ಸಿಕ್ಕಿ ಹಿಂತಿರುಗುತ್ತಿದ್ದುವು ಜಲಮಯವಾದ ತರುಲತೆಗಳಂತಿರುವ ತರಂಗಗಳು ಹಾರಿಸುವ ಜಲಬಿಂದುಗಳೆಂಬ ಕುಸುಮಗಳ ಬಹುವಾಗಿ ಆಕಾಶರೂಪವಾಗಿರುವ, ವ್ಯಕ್ತವೂ ಅವ್ಯಕ್ತವೂ ಕಿರಣಗಳ ಕಾಂತಿಯಿಂದ ಮಾಣಿಕ್ಯ ಮುಕ್ತಾಫಲಗಳೋ ಎಂಬ ಭ್ರಾಂತಿಯನ್ನು ಉಂಟುಮಾಡುತ್ತಿರಲು, ಹೆಜ್ಜೆಹೆಜ್ಜೆಗೂ ಅವುಗಳಿಂದ ತಮ್ಮ ದೇಹಗಳನ್ನು ಅಲಂಕರಿಸಿಕೊಂಡು ಕಾಂತಿಯುಕ್ತವಾಗಿ ಮಾಡಿಕೊಳ್ಳುತ್ತಿದ್ದರು

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ಅರ್ಣವಪರಿಕ್ರಮಣ" ಎಂಬ
ನೂರಿಪ್ಪತ್ತೆರಡನೆಯ ಸರ್ಗವು



# ತ್ರಯೋವಿಂಶಾಧಿಕ ಶತತಮಃ ಸರ್ಗಃ

ಶ್ರೀ ವಸಿಷ್ಠ ಉವಾಚ:—

ಇತ್ಯೇತೇ ದೃಶ್ಯರೂಪಾಯಾ ಅವಿದ್ಯಾಯಾ ವಿಚಾರಣೇ ।
ಪ್ರವೃತ್ತಾಃ ಪಾದಚಾರೇಣ ಸಮುದ್ರದ್ವೀಪಗಾಮಿನಃ ॥೧॥

ಅಬ್ಧೇರ್ದ್ವೀಪಂ ಪುನರ್ದ್ವೀಪಾದಬ್ಧಿಂ ದ್ವೀಪಂ ಗಿರಿಂ ವನಂ ।
ಲಾಘವಾಲ್ಲಂಘಯಾಮಾಸುಶ್ಛೇದಭೇದವಿವರ್ಜಿತಾಃ ॥೨॥

ಪೀತೋ ವಿಪಶ್ಚಿತ್ಪಾಶ್ಚಾತ್ಯೋ ಮೀನೇನಾಪುರಮಾನಿನಾ ।
ವಿಷ್ಣುಮೀನಕುಲೋತ್ಥೇನ ವಿತಸ್ತಾವಾಹನೌಜಸಾ ॥೩॥

---

# ನೂರಿಪ್ಪತ್ತಮೂರನೆಯ ಸರ್ಗವು

ಶ್ರೀ ವಸಿಷ್ಠನು ಹೇಳಿದನು:

೧. ಹೀಗೆ ಈ ನಾಲ್ವರೂ ದೃಶ್ಯರೂಪವಾದ ಅವಿದ್ಯೆಯ ವಿಚಾರಣದಲ್ಲಿ ಪ್ರವೃತ್ತರಾಗಿ ಪಾದಚಾರಿಗಳಾಗಿ ಸಮುದ್ರ ದ್ವೀಪಗಳನ್ನು ಕುರಿತು ಹೊರಟರು.

೨. ಸಮುದ್ರವಾಗುತ್ತಲೂ ದ್ವೀಪ, ದ್ವೀಪವಾಗುತ್ತಲೂ ಸಮುದ್ರ, ದ್ವೀಪ, ಗಿರಿ, ವನ ಇವುಗಳನ್ನು ಲಾಘವದಿಂದ ಛೇದ ಭೇದಗಳಿಲ್ಲದೆ ದಾಟಿದರು.

೩. ಪಶ್ಚಿಮ ದಿಕ್ಕನ್ನು ಕುರಿತು ಹೊರಟ ವಿಪಶ್ಚಿತನು ವಿತಸ್ತಾ ನದಿಯಲ್ಲಿ ಹೋಗುವ ವಾಹನಗಳ ವೇಗವುಳ್ಳ ವಿಷ್ಣುಮೀನದ ಕುಲದಲ್ಲಿ ಹುಟ್ಟಿದ, ತಾನು ಅಮರನೆಂಬ ಅಭಿಮಾನವುಳ್ಳ ಮೀನದಿಂದ ನಿಗೀರ್ಣನಾದನು.

(ವಿತಸ್ತಾ ನದೀ ಅತ್ಯಂತ ಶೀಘ್ರಗಾ ಪ್ರಸಿದ್ಧಾ—ತಾ. ಪ್ರ.)

ಕ್ಷೀರೋದಂ ಪ್ರಾಪ್ಯ ಮತ್ಸ್ಯೇನ ತೇನೋದ್ಗೀರ್ಣಃ ಸುದುರ್ಜರಃ ।
ತೇನ ಕ್ಷೀರೋದಮುಲ್ಲಂಘ್ಯ ಗತೋ ದೂರಂ ದಿಗಂತರಂ ॥೪॥

ದಕ್ಷಿಣೋ ಯಕ್ಷನಗರೀ ಸಂಪ್ರೇಕ್ಷ್ಯೇಕ್ಷುರಸಾರ್ಣವೇ ।
ಶಿಕ್ಷಾ ದಕ್ಷಿಣಯಾಕ್ಷಿಪ್ಯ ಯಕ್ಷಿಣ್ಯಾ ಕಾಮುಕೀಕೃತಃ ।೫॥

ಪೂರ್ವೋ ಮಕರಮಾಕ್ರಮ್ಯ ಯದಾ ಗಂಗಾಂ ನಿಕೃತ್ತವಾನ್ ।
ಗಂಗಯಾ ಸ ತದಾನೀಯ ಕನ್ಯಾಕುಬ್ಜೇ ಸಮುಜ್ಝಿತಃ ॥೬॥

ಉತ್ತರಸ್ತೂತ್ತರಕುರೂನಾರಾಧ್ಯ ಪ್ರಾಪ್ತವಾನ್ ಶ್ರಿಯಂ ।
ತಂ ತಯ್ಯೈನಂ ನ ಬಾಧಂತೇ ದಿಗಂತೇ ಮೃತಭೀತಯಃ ॥೭॥

---

೪. ಆ ಮತ್ಸ್ಯವು ಕ್ಷೀರಸಮುದ್ರಕ್ಕೆ ಹೋಗಿ ಜೀರ್ಣವಾಗದೆ ಹೊಟ್ಟೆಯುಲ್ಲಿದ್ದ ಅವನನ್ನು ಕಕ್ಕಿತು. ಅವನು ಕ್ಷೀರಸಮುದ್ರವನ್ನು ದಾಟಿ ದಿಗಂತರಕ್ಕೆ ಹೋದನು.

೫, ದಕ್ಷಿಣಕ್ಕೆ ಹೋದ ವಿಪಶ್ಚಿತನು ಇಕ್ಷುರ ಸಾರ್ಣವದಲ್ಲಿರುವ ಯಕ್ಷನಗರದಲ್ಲಿ ವಶೀಕರಣ ವಿದ್ಯವನ್ನು ಚೆನ್ನಾಗಿ ಬಲ್ಲ ಯಕ್ಷಿಣಿಯ ಕಾಲಾದನು.

೬. ಪೂರ್ವದಿಕ್ಕಿಗೆ ಹೋದ ವಿಪಶ್ಚಿತನು ಬಂದು ಮಕರವನ್ನು ಎದುರಿಸಿ ಸೀಳುತ್ತಿರುವಾಗ, ಗಂಗೆಯ ಪ್ರವಾಹಕ್ಕೆ ಸಿಕ್ಕಿ (ಪರಾವೃತ್ತ್ಯಾ–ಆನೀಯ) ಕನ್ಯಾಕುಬ್ಜ ನಗರಕ್ಕೆ ಬಂದು ಬಿದ್ದನು.

೭. ಉತ್ತರನು ಉತ್ತರ ಕುರುದೇಶದಲ್ಲಿರುವ ದೇವೀ ಸಹಿತನಾದ ಅಣಿಮಾದ್ಯೈಶ್ವರ್ಯಗಳನ್ನು ಪಡೆದು ಮರಣಭೀತಿ ರಹಿತನಾಗಿ ಅಮರನಾದನು.

ತಯಾ ಮಕರಮಾತಂಗನಿಗೀರ್ಣೋದ್ಗೀರ್ಣಮೂರ್ತಿಮಾನ್ ।
ಅತಿಚಕ್ರಾಮ ಸುಬಹೂನ್ದ್ವೀಪಾಂತರಕುಲಾಚಲಾನ್ ॥೮॥

ಪಶ್ಚಿಮಃ ಪೃಷ್ಠಮಾರೋಪ್ಯ ಹೇಮಚೂಡೇನ ಪಕ್ಷಿಣಾ ।
ಕುಶದ್ವೀಪೇ ಕುಶಾಂಗಶ್ರೀಸ್ತರಸಾ ತಾರಿತೋರ್ಣವಾನ್ ॥೯॥

ಕ್ರೌಂಚದ್ವೀಪಾಚಲೇ ಪೂರ್ವೋ ನಿಗೀರ್ಣೋ ರಕ್ಷಸಾ ವನೇ ।
ತದ್ರಕ್ಷಃ ಪಾಟಿತಂ ತೇನ ಹೃದಯೇಂತ್ರವಿಕರ್ತನೈಃ ॥೧೦॥

ದಕ್ಷಿಣೋ ದಕ್ಷಶಾಪೇನ ಯಕ್ಷತಾಮಾಗತಃ ಕ್ಷಣಾತ್ ।
ಶಾಕದ್ವೀಪೇ ಶತೇನಾಸೌ ವರ್ಷಾಣಾಂ ಮೋಕ್ಷಮಾಗತಃ ॥೧೧॥

---

೮. ಆ ಸಿದ್ಧಿಗಳೊಡನೆ ಅವನು ಮುಂದೆ ಹೋಗಿ ಮಕರ ಮಾತಂಗಗಳಿಂದ ಉದ್ಗೀರ್ಣನೂ ನಿಗೀರ್ಣನೂ ಆಗಿ, ಬಹುವಾದ ದ್ವೀಪಗಳನ್ನೂ ಕುಲಾಚಲಗಳನ್ನೂ ದಾಟಿದನು.

೯. ಪಶ್ಚಿಮನು ಕುಶದ್ವೀಪದಲ್ಲಿ ಹೇಮಚೂಡವೆಂಬ ಪಕ್ಷಿಯನ್ನು ಏರಿ ಕುಶದಂತೆ ಅಂಗ ಶ್ರೀಯುಳ್ಳವನಾಗಿ ಶೀಘ್ರವಾಗಿ ಅರ್ಣವವನ್ನು ದಾಟಿದನು.

(ಕುಶದ್ವೀಪೇ ಹಿ ಕುಶಸ್ತಂಬೇ ಸ್ಥಿತೋ ಗರುಡಃ ಪೂಜಾದಿನಾ ಪ್ರಸಾದಿತಃ ತದ್ದ್ವೀಪಮರ್ಣವಾಂಶ್ಚ ತಾರಯತೀತಿ ಪ್ರಸಿದ್ಧಿಃ—ತಾ.ಪ್ರ.)

೧೦. ಪೂರ್ವನು ಕ್ರೌಂಚದ್ವೀಪದ ಪರ್ವತದಲ್ಲಿ ರಾಕ್ಷಸನಿಂದ ನಿಗೀರ್ಣನಾಗಿ ಅವನ ಎದೆಯಲ್ಲಿರುವ ಅಂತ್ರಗಳನ್ನು ಕತ್ತರಿಸಿ ಅವನನ್ನು ಕೊಂದು ಈಚೆಗೆ ಬಂದನು.

೧೧. ದಕ್ಷಿಣನು ದಕ್ಷಶಾಪದಿಂದ ಒಂದು ಕ್ಷಣದಲ್ಲಿ ಯಕ್ಷನಾಗಿ, ಶಾಕದ್ವೀಪವನ್ನು ಸೇರಿ ಒಂದು ನೂರು ವರ್ಷಕಾಲ ಯಕ್ಷನಾಗಿದ್ದು ಶಾಪ ಮೋಕ್ಷವನ್ನು ಪಡೆದನು.

ಉತ್ತರಸ್ತರಸೋತ್ತೀರ್ಣತಾರಾವರತರಂಗಿಣಃ ।
ಮಹಾರ್ಣವಸುವರ್ಣೋರ್ವ್ಯಾಂ ಸಿದ್ಧಶಾಪಾಚ್ಛಿಲಾಂ ಗತಃ ॥೧೨॥

ತತೋ ವರ್ಷಶತೇನಾಸೌ ಪ್ರಸಾದಾಜ್ಜಾತವೇದಸಃ ।
ತೇನೈವೋನ್ಮೋಚಿತಸ್ತತ್ರ ಸಿದ್ಧೇನ ರತಿಮಾಪ್ತವಾನ್ ।೧೩॥

ವರ್ಷಾಣ್ಯಷ್ಟಾವಭೂದ್ರಾಜಾ ನಾಲಿಕೇರ ನಿವಾಸಿನಾಂ ।
ಪೂರ್ವಃ ಪರಮಧರ್ಮಿಷ್ಠಃ ಪ್ರಾಪ್ತವಾನ್ಪ್ರಾಕ್ಸ್ಮೃತಿಂ ತತಃ ॥೧೪।

ಕಲ್ಪವೃಕ್ಷವನೇ ಮೇರೋರುತ್ತರೇಪ್ಸರಸಾ ಸಹ ।
ಉವಾಸ ದಶವರ್ಷಾಣಿ ನಾಲಿಕೇರಫಲಾಶನಃ ।೧೫॥

---

೧೨. ಉತ್ತರನು ಬಲುಬೇಗ ಸಣ್ಣ ದೊಡ್ಡ ನದೀ ಸಮುದ್ರಗಳನ್ನು ದಾಟಿ ಮಹರ್ಣವ (ಸ್ವಾದೂದಕ ಸಮುದ್ರ) ದ ಆಚೆ ಇರುವ ಸುವರ್ಣ ಭೂಮಿಯಲ್ಲಿ ಸಿದ್ಧ ಶಾಪದಿಂದ ಶಿಲೆಯಾದನು.

೧೩. ಅನಂತರದಲ್ಲಿ ನೂರುವರ್ಷಗಳಾದ ಮೇಲೆ, ಅಗ್ನಿದೇವನ ಕೃಪೆಯಿಂದ ಆದೇ ಸಿದ್ಧನಿಂದಲೇ ಶಾಪಮೋಕ್ಷವನ್ನು ಪಡೆದು, ಸಿದ್ಧನ ಕೃಪೆಗೆ ಪಾತ್ರನಾದನು.

೧೪. ಪೂರ್ವನು ಕನ್ಯಾಕುಬ್ಜದಿಂದ ಉತ್ತರಕ್ಕೆ ಇರುವ ನಾಲಿಕೇರ ಪ್ರಧಾನ ದೇಶಕ್ಕೆ ಅರಸಾಗಿ ಎಂಟು ವರ್ಷ ಪರನು ಧರ್ಮಿಷ್ಠನಾಗಿ ರಾಜ್ಯವಾಳಿ ತನ್ನ ಹಿಂದಿನದೆಲ್ಲವನ್ನೂ ನೆನೆದುಕೊಂಡನು.

೧೫. ಅವನು ಮೇರುಪರ್ವತದ ಉತ್ತರದಲ್ಲಿ ಕಲ್ಪವೃಕ್ಷ ವನದಲ್ಲಿ ನಾಲಿಕೇರ ಫಲಾಶನನಾಗಿ ಹತ್ತು ವರ್ಷಗಳು ಅಪ್ಸರಿಯೊಬ್ಬಳೊಡನೆ ಸುಖವಾಗಿದ್ದನು.

ವಿಹಗಾಶ್ವಾಸ ತತ್ತ್ವಜ್ಞಃ ಶಾಲ್ಮಲಿದ್ವೀಪಶಾಲ್ಮಲೌ ।
ಪಶ್ಚಿಮಃ ಪಕ್ಷಿಣೀನೀಡೇ ಕ್ರೀಡಯಾ ನ್ಯವಸತ್ಸಮಾಃ ॥೧೬॥

ಮಂದರಾದ್ರೌ ಮೃದುಲತೇ ಮಂದಾರತರುಮಂದಿರೇ ।
ಕಿಂನರೀ ಮಂದರೀನಾಮ್ನೀ ದಿನಮೇಕಮಸೇವತ ॥೧೭॥

ಕ್ಷೀರೋದವೇಲಾವನ ಕಲ್ಪವೃಕ್ಷ ವನಾವಲೀನಂದನದೇವತಾಭಿಃ ।
ಸಾರ್ಧಂ ಸಮಾಃ ಸಪ್ತತಿಮಪ್ಸರೋಭಿರ್ನಿನಾಯ ಕಾಮಾಕುಲಿತೋಥ ಪೂರ್ವಾಃ ॥೧೮॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಅವಿದ್ಯೋಪಾಖ್ಯಾನಾಂತರ್ಗತ ವಿಪಶ್ಚಿದುಪಾಖ್ಯಾನೇ "ದಿಗ್ವಿಹರಣಂ ನಾಮ ತ್ರಯೋವಿಂಶಾಧಿಕ ಶತತಮಃ ಸರ್ಗಃ"

---

೧೬. ಪಕ್ಷಿಗಳನ್ನು ವಶಪಡಿಸಿಕೊಳ್ಳುವ ವಿದ್ಯೆಯನ್ನು ಬಲ್ಲ ಪಶ್ಚಿಮನು ಶಾಲ್ಮಲೀ ದ್ವೀಪದ ಶಾಲ್ಮಲೀವೃಕ್ಷದಲ್ಲಿ ಪಕ್ಷಿಣಿಯೊಬ್ಬಳೊಡನೆ ಕ್ರೀಡೆಯಾಡಿಕೊಂಡು ಅನೇಕ ಸಂವತ್ಸರಗಳು ಇದ್ದನು.

೧೭. ಅನಂತರ ಮಂದರಾದ್ರಿಯಲ್ಲಿ ಮಂದಾರ ತರುವಿನ ಮೃದುಲತೆಗಳಿಂದಾದ ಮಂದಿರದಲ್ಲಿ ಅವನನ್ನು ಮಂದರೀ ಎಂಬ ಹೆಸರಿನ ಕಿನ್ನರಿಯು ಒಂದು ದಿನವೆಲ್ಲಾ ಉಪಚರಿಸಿದಳು.

೧೮. ಪೂರ್ವನು ಕ್ಷೀರಸಮುದ್ರ ತಟದಲ್ಲಿರುವ ಕಲ್ಪವೃಕ್ಷ ವನದಲ್ಲಿ ನಂದನ ದೇವತೆಗಳೊಡನೆ, ಅಪ್ಸರೆಯರೊಡನೆ, ಕಾಮ ವ್ಯಾಪಾರದಲ್ಲಿ ಎಪ್ಪತ್ತು ವರ್ಷಗಳನ್ನು ಕಳೆದನು.

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ ನಿರ್ವಾಣ ಪ್ರಕರಣದಲ್ಲಿ "ದಿಗ್ವಿಹರಣ" ಎಂಬ ನೂರಿಪ್ಪತ್ತ ಮೂರನೆಯ ಸರ್ಗವು

## ಚತುರ್ವಿಂಶಾಧಿಕ ಶತತಮಃ ಸರ್ಗಃ

ಶ್ರೀರಾಮ ಉವಾಚಃ—

ಏಕಸಂವಿನ್ಮಯಾಃ ಸರ್ವ ಏವೈಕವಪುಷೋಽಪಿ ತೇ ।
ವಿವಿಧೇಚ್ಛಾಃ ಕಥಂ ಬ್ರಹ್ಮನ್ಸಂಪನ್ನಾ ಏಕದೇಹಿನಃ ॥೧॥

ಶ್ರೀ ವಸಿಷ್ಠ ಉವಾಚಃ—

ಏಕಸಂವಿದ್ಘನಾಕಾಶಮಪ್ಯನಾನ್ಯೈವ ಸರ್ವಗಂ ।
ಸ್ವಯಂನಾನೇವ ಸಂಪನ್ನಂ ಸುಪ್ತೇ ಚಿತ್ತಮಿವಾತ್ಮನಿ ॥೨॥

---

## ನೂರಿಪ್ಪತ್ತ ನಾಲ್ಕನೆಯ ಸರ್ಗವು

ಶ್ರೀರಾಮನು ಕೇಳಿದನು :—

೧. ಆ ನಾಲ್ವರೂ ಏಕಸಂವಿತ್ತುಳ್ಳವರು: ಎಲ್ಲರೂ ಒಂದೇ ದೇಹದಿಂದ ಆದವರು: ಹೀಗಿರಲು ಏಕದೇಹಿಗಳಾದ ಅವರಿಗೆ ವಿವಿಧವಾದ ಇಚ್ಛೆಗಳು ಹೇಗೆ ಉದಯಿಸಿದುವೋ, ಎಲೈ ಬ್ರಹ್ಮನ್, ಹೇಳು.

ಶ್ರೀ ವಸಿಷ್ಠನು ಹೇಳಿದನು: —

೨. ಸಂವಿದ್ಘನಾಕಾಶವು ಒಂದೇ ಆದರೂ, ಯಾವಾಗಲೂ ಅನಾನಾ ಆಗಿದ್ದರೂ, ಕನಸಿನಲ್ಲಿ ಚಿತ್ತವು ಆಗುವಂತೆ, ಸ್ವಯಂ ನಾನಾ ಎಂಬಂತೆ ಆಗುವುದು.

(ಏಕಸ್ಯಾಪಿ ಜೀವಸ್ಯ ಅವಿದ್ಯಯಾ ಸ್ವಪ್ನೇ ನಾನಾ ದೇಹಾದಿ ಕಲ್ಪನ ದರ್ಶನಾತ್ ತೇಷು ಚ ಶತ್ರುಮಿತ್ರೋದಾಸೀನ ಭಾವ ಕಲ್ಪನೇ ನಾನೇಚ್ಛತ್ವ ದರ್ಶನಾಚ್ಚ ಸರ್ಗಾದೌ ಬ್ರಹ್ಮಣಿ ಜೀವೇ ಜಾಗ್ರತ್ಯಪಿ ತಾ ದೃಶಕರ್ಮ ಸತ್ತ್ವೇ ಸರ್ಪಸಂಭವ ಇತ್ಯಾಶಯೇನ ವಸಿಷ್ಠ ಉತ್ತರಮಾಹ—ತಾ.ಪ್ರ)

ತಸ್ಯಾಚ್ಛತ್ವಾತ್ತಥಾಭೂತಮಾತ್ಮೈವಾತ್ಮನಿ ಬಿಂಬತಿ ।
ತಾದೃಶಸ್ಯ ತಥಾಭೂತೌ ಮುಕುರಸ್ಯೇವ ನಿರ್ಮಲಾ ॥೩॥

ಏಕಲೋಹಮಯಾ ಏವ ಯಥಾದರ್ಶಾಃ ಪರಸ್ಪರಂ ।
ತಥೈವ ಪ್ರತಿಬಿಂಬಂತಿ ಪದಾರ್ಥಾಃ ಪಾರಮಾರ್ಥಿಕಾಃ ॥೪॥

ತೇನ ಯಸ್ಯ ಯದಾ ಯದ್ಯತ್ಪುರೋ ಭವತಿ ವಸ್ತ್ವಸೌ ।
ಯದರ್ಥಂ ಯುಜ್ಯತೇ ತೇನ ಚಿದ್ಘನೈಕಸ್ವಭಾವತಃ ॥೫॥

---

೩. ಆ ಸಂವಿದ್ಘನಾಕಾಶವು ಅತಿ ಸ್ವಚ್ಛವಾದುದರಿಂದ ಆತ್ಮವು ಆತ್ಮನಲ್ಲಿ ಯೇ ಬಿಂಬಿಸುವುದು. ಅದು ಹಾಗಾಗುವುದಕ್ಕೆ ದರ್ಪಣದಂತೆ ನಿರ್ಮಲವಾಗಿರು ವುದೇ ಕಾರಣವು.

೪. ಏಕಲೋಹ ಪಿಂಡದಿಂದಲೇ ಆಗಿದ್ದರೂ ಆದರ್ಶ (ಕನ್ನಡಿ)ಗಳು ಒಂ ದನ್ನೊಂದು ಪ್ರತಿಬಿಂಬಿಸುವಂತೆ ಪಾರಮಾರ್ಥಿಕವಾದ ಪದಾರ್ಥಗಳೆಲ್ಲವೂ ಪರ ಸ್ಪರ ಪ್ರತಿಬಿಂಬಿಸುವುವು.

(ಪಾರಮಾರ್ಥಿತಾಃ ಪರಮಾರ್ಥ ಚಿದ್ರೂಪಾಃ । ಮಾಯೋಪಾಧೇರಚಿಂತ್ಯ ಶಕ್ತಿತ್ವಾತ್ ಗಂಧರ್ವನಗರ ಸ್ಫಟಿಕ ಕುಡ್ಯರೂಪೇ ನಭಸಿ ಸ ಚಂದ್ರಾರ್ಕ ಮಹಾ ನಭಃ ಪ್ರತಿಬಿಂಬನ ದರ್ಶನಾಚ್ಚೇತಿ ಭಾವಃ—ತಾ. ಪ್ರ.)

೫. ಅದರಿಂದ ಯಾವನಿಗೆ ಯಾವಾಗ ಯಾವ ವಸ್ತುವು ಎದುರಿಗೆ ಬರು ವುದೋ, ಅದನ್ನು ತಾನು ಚಿದ್ಘನೈಕ ಸ್ವಭಾವನಾದ್ದರಿಂದ ತದರ್ಥವಾಗಿಯೇ ಉಪ ಯೋಗಿಸುವನು.

(ಅತಏವ ಅಧ್ಯಸ್ತ ಭೋಗ್ಯ ಜಗದಾಕಾರಂ ಬ್ರಹ್ಮ ವಿಷಯೇಂದ್ರಿಯ ಸಂ ಯೋಗೇ ಬುದ್ಧ್ಯವಚ್ಛಿನ್ನ ಜೀವಚಿತಿ ಪ್ರಿಯಾಪ್ರಿಯ ವಿಷಯ ಭೋಗಾಕಾರೇಣ ಪ್ರತಿಬಿಂಬತೀತ್ಯಾಹ....ಯದಿ ಭೋಗ್ಯಂ ವಸ್ತುಬುದ್ಧೌ ನ ಪ್ರತಿಬಿಂಬೇತ ಭೋಗ ಏವನ ಯುಜ್ಯೇತ ಇತ್ಯರ್ಥಃ—ತಾ. ಪ್ರ.)

ಇತ್ಯನಾನ್ಯೈವ ನಾನೇದಂ ನಾನಾನಾನಾ ಚ ವಸ್ತುತಃ ।
ನಚ ನಾನಾ ನ ಚಾನಾನಾ ನಾನಾನಾನಾತ್ಮಕಂ ತತಃ ॥೬॥

ತೇನ ಯಸ್ಯ ಯದಾಯಾತಂ ಪುರೋವಸ್ತು ವಿಪಶ್ಚಿತಃ ।
ಸ ತೇನ ಸಂವಿನ್ಮಯತಾಮೇತ್ಯ ತದ್ವಶಮಾಗತಃ ॥೭॥

ಏಕದೇಶಗತಾ ವಿಶ್ವಗ್ವ್ಯಾಪ್ಯ ಕರ್ಮಾಣಿ ಕುರ್ವತೇ ।
ಯೋಗಿನಸ್ತ್ರಿಷು ಕಾಲೇಷು ಸರ್ವಾಣ್ಯನುಭವಂತ್ಯಪಿ ॥೮॥

ಅಬ್ದೋಽಪಿ ವ್ಯಾಪ್ತಿಮಾನೇಕಸ್ತುಲ್ಯಕಾಲಂ ಪೃಥಕ್ ಕ್ರಿಯಾಃ ।
ಆಹ್ಲಾದಸ್ತೇನ ಪಾದೇನ ಕರೋತ್ಯನುಭವತ್ಯಪಿ ॥೯॥

---

೬. ಹೀಗೆ ಅನಾನಾನೇ ನಾನಾ ಆಗಿರುವುದು. ವಸ್ತುತಃ ನಾನಾ ಆಗಿರುವುದೆಲ್ಲ ಅನಾನಾ ನೇ ! ನಿಜವಾಗಿ ನಾನಾ ಇಲ್ಲ: ಅನಾನಾ ಇಲ್ಲ. ಆದರಿಂದ ಇರುವುದೆಲ್ಲ ನಾನಾ–ಅನಾನಾ ಆತ್ಮಕವು.

೭. ಅದರಿಂದ ಆಯಾ ವಿಪಶ್ಚಿತನಿಗೆ ಪುರೋವಸ್ತುವಾಗಿ ಯಾವುದು ಬಂತೋ, ಅದು ಸಂವಿನ್ಮಯತೆಯನ್ನು ಹೊಂದಿ, ಅದನ್ನು ಅವನು ಭೋಗಿಸುವ ಹಾಗೆ ಮಾಡಿತು.

೮. ಯೋಗಿಗಳು ಏಕದೇಶಗತರಾಗಿದ್ದರೂ ಬೇಕಾದೆಡೆಗಳಲ್ಲೆಲ್ಲ ಇದ್ದು ಎಲ್ಲ ಕರ್ಮಗಳನ್ನೂ ಮಾಡುವರು. ಮೂರುಕಾಲಗಳಲ್ಲಿಯೂ ಸರ್ವವನ್ನೂ ಅನುಭವಿಸುವರು.

೯. ಮೇಘವು ಒಂದೇ ಒಂದಾದರೂ ವ್ಯಾಪ್ತಿಧರ್ಮದಿಂದ ಏಕಕಾಲದಲ್ಲಿಯೆ ನಾನಾ ಕ್ರಿಯೆಗಳನ್ನು ಬೇರೆಬೇರೆಯಾಗಿ ಮಾಡುತ್ತ, ಒಂದೊಂದು ಅಂಶದಿಂದ ಆಹ್ಲಾದವನ್ನು ಉಂಟುಮಾಡುವುದು: ತಾನು ಅನುಭವಿಸುವುದು.

ತುಲ್ಯಕಾಲಮಸಂಖ್ಯಾತಮಿಮಾಪ್ಪರ ಪ್ರತಿಯೋಗಿನಃ ।
ಕರ್ಮಜಾಲಂ ಜಗಜ್ಜಾತಂ ಕುರ್ವಂತ್ಯನುಭವಂತಿ ಚ ॥೧೦॥

ಏಕೋ ವಿಷ್ಣುಶ್ಚತುರ್ಭಿಃ ಸ್ವೈರ್ಬಾಹುಭಿರ್ವಾ ಶರೀರಕೈಃ ।
ಪೃಥಕ್ಕರ್ವನ್ಕ್ರಿಯಾಃ ಪಾತಿ ಜಗದ್ಭುಂಕ್ತೇ ವರಾಂಗನಾಃ ॥೧೧॥

ಬಹುಬಾಹುರ್ಯದಾ ದ್ವಾಭ್ಯಾಂ ಹಸ್ತಾಭ್ಯಾಂ ವ್ಯರ್ಥಸಂಗ್ರಹಂ ।
ಕರೋತಿ ಬಹುಭಿರ್ಯೋಧಃ ಸಂಗ್ರಾಮಂ ಸತತಂ ಕರೈಃ ॥೧೨॥

---

(ನಾನಾದೇಶೇಷು ಯುಗಪದೇಕಸ್ಯ ಭಿನ್ನಕ್ರಿಯಾ ಕಾರಿತ್ವೇ ತತ್ತದ್ದೇಶ ವ್ಯಾಪ್ತಿರೇವೋಪ ಯುಜ್ಯತೇ ನಜೀವಭೇದ ಇತ್ಯಾಹ–ಯಥಾ ಘರ್ಮಾರ್ತಾರ್ನ್ ಆಹ್ಲಾದಯತೀತಿ ಆಹ್ಲಾದಃ ಅಬ್ದೋ ಮೇಘೋಪಿ ಮಹತ್ವಾದೇವ ನಾನಾನಗರ ಗಿರಿ ನದೀ ಕ್ಷೇತ್ರಾದಿ ವ್ಯಾಪ್ತಿಪೂರ್ವ ತುಲ್ಯಕಾಲಂ ಸೌಧಕ್ಷಾಲನ ಕೂಟಭೇದನ ಜಲವರ್ಧನ ಸಸ್ಯಪೋಷಣಾದಿ ಪೃಥಕ್ ಕ್ರಿಯಾಃ ತುಲ್ಯಕಾಲಂ ತೇನತೇನ ಪಾದೇನಾಂಶೇನ ಕರೋತಿ ತದಭಿಮಾನೀ ಜೀವಸ್ತು ಮಯಾ ಇಮಾಃ ಕ್ರಿಯಾಃ ಕೃತಾ ಇತ್ಯನುಭವತ್ಯಪಿ ತದ್ವದ್ವಾ ಅತ್ರೋಪಪತ್ತಿ ರ್ಯೋಧ್ಯಾ ಇತ್ಯರ್ಥಃ—ತಾ.ಪ್ರ.)

೧೦. ಅಸಂಖ್ಯಾತರಾದ ಯೋಗಿಗಳು ಅಣಿಮಾದ್ಯೈಶ್ವರ್ಯಗಳನ್ನು ಪಡೆದು, ತುಲ್ಯಕಾಲದಲ್ಲಿ ಕರ್ಮಜಾಲವನ್ನು ಮಾಡುತ್ತ, ಜಗಜ್ಜಾತವನ್ನು ಅನುಭವಿಸುವರು.

೧೧. ವಿಷ್ಣುವು ಒಬ್ಬನೇ ಆಗಿದ್ದರೂ ತನ್ನ ನಾಲ್ಕು ಕೈಗಳಿಂದ, ಶರೀರಗಳಿಂದ ನಾನಾ ಕ್ರಿಯೆಗಳನ್ನು ಮಾಡುತ್ತ ಜಗತ್ತನ್ನು ಪಾಲಿಸುವನು: ಶ್ರೇಷ್ಠರಾದ ಅಂಗನೆಯರನ್ನು ಭೋಗಿಸುವನು.

೧೨. ಎರಡು ಕೈಗಳಿಂದ ಎರಡು ಕೆಲಸಗಳನ್ನು ಮಾಡುವಂತೆ ಬಹುಬಾಹುಗಳಿಂದ ಸಂಗ್ರಾಮವನ್ನು ಸತತವಾಗಿ ಮಾಡುವನು.

ತಥೈವ ತೈರ್ವಿಪಶ್ಚಿದ್ಭಿಃ ಸರ್ವದಿಕ್ಕಂ ತಥಾ ಸ್ಥಿತೈಃ ।
ತಥಾ ವ್ಯವಹೃತಂ ಪ್ರಾಪ್ತಮೇಕಸಂವಿನ್ಮಯೈರಪಿ ॥೧೩॥

ಸುಪ್ತಂ ತೈರ್ಭೂಮಿಶಯ್ಯಾಸು ಭುಕ್ತಂ ದ್ವೀಪಾಂತರೇಷು ಚ ।
ವಿಹೃತಂ ವನಲೇಖಾಸು ಪ್ರಕ್ರಾಂತಂ ಮರುಭೂಮಿಷು ॥೧೪॥

ಉಷಿತಂ ಗಿರಿಮಾಲಾಸು ಭ್ರಾಂತಂ ಸಾಗರಕುಕ್ಷಿಷು ।
ವಿಶ್ರಾಂತಂ ದ್ವೀಪಲೇಖಾಸು ನಿಲೀನಂ ಘನಮಾಲಿಷು । ॥೧೫॥

ರೂಢಮರ್ಣವಮಾಲಾಸು ವಾತ್ಯಾಸು ಜಲವೀಚಿಷು ।
ಕ್ರೀಡಿತಂ ಭೂಭೃದಬ್ಧೀನಾಂ ತಟೇಷು ನಗರೀಷು ಚ ॥೧೬॥

ಶಾಕದ್ವೀಪೋದಯಗಿರಿತಟೇ ಸಪ್ತವರ್ಷಾಣಿ ಸುಪ್ತಂ ।
ಪೂರ್ವೇಣಾಂತರ್ವಿದಲಗಹನೇ ಯಕ್ಷಸಂಮೋಹಿತೇನ ।
ಪಾಷಾಣಾಂಬು ಪ್ರಸಭಮಮುನೈವಾತ್ರ ಪೀತ್ವಾ ದೃಷತ್ವಾ ।
ಮಾಗತ್ಯಾಂತಃ ಸ್ಥಿತಮಥ ಸಮಾಃ ಸಪ್ತ ಜಾಡ್ಯೇನ ಭೂಮೇಃ ॥೧೭॥

---

೧೩. ಹಾಗೆಯೇ ಏಕಸಂವಿನ್ಮಯರಾದರೂ ನಾಲ್ವರಾಗಿ ಸರ್ವದಿಕ್ಕುಗಳನ್ನೂ ಸೇರಿದ ಆ ವಿಪಶ್ಚಿತರು ಪ್ರಾಪ್ತವಾದುದರಲ್ಲಿ ವ್ಯವಹಾರ ಮಾಡಿದರು.

೧೪. ಅವರು ಭೂಮಿಶಯ್ಯೆಗಳಲ್ಲಿ ಮಲಗಿದರು : ದ್ವೀಪಾಂತರಗಳಲ್ಲಿ ಭೋಗಿಸಿದರು : ವನಲೇಖೆಗಳಲ್ಲಿ ವಿಹರಿಸಿದರು : ಮರುಭೂಮಿಗಳಲ್ಲಿ ಸಂಚರಿಸಿದರು.

೧೫. ಗಿರಿಮಾಲೆಗಳಲ್ಲಿ ವಾಸಮಾಡಿದರು : ಸಾಗರ ಕುಕ್ಷಿಗಳಲ್ಲಿ ಅಲೆದರು : ದ್ವೀಪಲೇಖೆಗಳಲ್ಲಿ ವಿಶ್ರಾಂತಿಯನ್ನು ಪಡೆದರು : ಘನ ಮಾಲೆಯುಳ್ಳ ಪರ್ವತಾಗ್ರಗಳಲ್ಲಿ ಎಲ್ಲವನ್ನೂ ಮರೆತು ಇದ್ದರು.

೧೬. ಅರ್ಣವ ಮಾಲೆಗಳಲ್ಲಿ, ವಾಯುಗಳಲ್ಲಿ, ಜಲತರಂಗಗಳಲ್ಲಿ, ಪರ್ವತಗಳಲ್ಲಿ, ಸಮುದ್ರ ತಟಗಳಲ್ಲಿ, ನಗರಗಳಲ್ಲಿ ಬೇಕಾದಹಾಗೆ ಕ್ರೀಡಿಸಿದರು.

೧೭. ಶಾಕದ್ವೀಪದ ಉದಯಗಿರಿಯ ತಟದಲ್ಲಿ ಏಳು ವರ್ಷಗಳು ಪೂರ್ವನು ಯಕ್ಷಸಂಮೋಹಿತನಾಗಿ, ದಲರಹಿತವಾದ ಸ್ನುಹೀ ವೃಕ್ಷವನದಲ್ಲಿ ನಿದ್ದೆಹೋ

ಶಾಕದ್ವೀಪೇಸ್ತ ಶೈಲಸ್ಯ ಶಿರಸ್ಯಭ್ರಗುಹಾಗೃಹೇ
ಪಿಶಾಚಾಪ್ಸರಸಾ ಮಾಸಂ ಪಾಶ್ಚಾತ್ಯಃ ಕಾಮುಕೀಕೃತಃ ॥೧೮॥

ಯತ್ರ ಶಾಂತಭಯೇ ವರ್ಷೇ ಜಲಧಾರೇ ಮಹಾಗಿರೌ ।
ಹರೀತಕೀವನೇ ವರ್ಷಂ ಪೂರ್ವೋಂತರ್ಧಾನ ಮಾಯಯಾ ॥೧೯॥

ಅತ್ರ ರೈವತಕೇ ಶೈಲೇ ವರ್ಷೇ ಶಿಶಿರನಾಮನಿ ।
ದಶರಾತ್ರಮಭೂತ್ಸಿಂಹಃ ಪೂರ್ವೋ ಯಕ್ಷವಶೀಕೃತಃ ॥೨೦॥

ಅತ್ರ ಕಾಂಚನ ಶೈಲಾದಿದರೀದರ್ದುರತಾಂ ಗತಃ ।
ಪಿಶಾಚಮಾಯಾಫಲಿತೋ ದಶವರ್ಷಾಣ್ಯುವಾಸ ಸಃ ॥೨೧॥

---

ದನು. ಪಾಷಾಣವನ್ನು ಮಾಡುವ ನೀರನ್ನು ಕುಡಿದು ಆ ಕೂಡಲೇ ಪಾಷಾಣ ವಾಗಿ ಭೂಗರ್ಭದಲ್ಲಿ ಇತರ ಪಾಷಾಣಗಳೊಡನೆ ಏಳು ವರ್ಷಗಳು ಇದ್ದನು.

೧೮. ಪಶ್ಚಿಮ ವಿಪಶ್ಚಿತನು ಶಾಕದ್ವೀಪದ ಅಸ್ತಶೈಲದ ಶಿರಸ್ಸಿನಲ್ಲಿ ಮೋಡ ಗಳು ಮುಚ್ಚಿರುವ ಗ ಹಾಗೃಹದಲ್ಲಿ ಪಿಶಾಚಾಪ್ಸರೆಯ ನಾಯಕನಾಗಿ ಒಂದು ಮಾಸ ವಿದ್ದನು.

೧೯. ಶಾಂತಭಯ ವರ್ಷದಲ್ಲಿ ಜಲಧಾರೆಯುಳ್ಳ ಮಹಾಗಿರಿಯಲ್ಲಿ ಹಾರೀ ತಕೀವನದಲ್ಲಿ ಪೂರ್ವನು ಎಪ್ಪತ್ತು ವರ್ಷಗಳು ಅದೃಶ್ಯನಾಗಿದ್ದನು.

೨೦. ಪೂರ್ವನು ರೈವತಕ ಪರ್ವತದಲ್ಲಿ ಶಿಶಿರನಾಮ ವರ್ಷದಲ್ಲಿ, ಯಕ್ಷ ನಿಂದ ವಶೀಕೃತನಾಗಿ ಹತ್ತು ರಾತ್ರಿಗಳು ಸಿಂಹವಾಗಿದ್ದನು.

೨೧. ಅವನೇ ಇಲ್ಲಿ ಕಾಂಚನಾ ಶೈಲದ ದರಿಯಲ್ಲಿ ಪಿಶಾಚ ಮಾಯೆಯಿಂದ ವಂಚಿತನಾಗಿ ಹತ್ತು ವರ್ಷಗಳು ಕಪ್ಪೆಯಾಗಿದ್ದನು.

ಕೌಮಾರಂ ವರ್ಷಮಾಸಾದ್ಯ ಶ್ಯಾಮಾದ್ರೇರುತ್ತರಸ್ತಟಂ ।
ಶಾಕದ್ವೀಪೇಂಧಕೂಪೇಂಧೋ ನ್ಯವಸಚ್ಛರದಾಂ ಶತಂ ॥೨೨॥

ಮರೀಚಕೇಕರೋದ್ವರ್ಷೇ ವರ್ಷಾಣ್ಯತ್ರ ಚತುರ್ದಶ ।
ವಿದ್ಯಾಧರತ್ವಂ ಸಾಶ್ಯಾತ್ಯಃ ಸ ವಿದ್ಯಾಧರವಿದ್ಯಯಾ ॥೨೩॥

ರತಕ್ಲಮಕ್ಲಾಂತಪುರಾರಿಲಕ್ಷ್ಮೀಚಲಾಂಗಲೇಖಾಶ್ರಮಶೀಕರಾಕ್ತಂ ।
ಏಲಾಲತಾಲಿಂಗನಲಬ್ಧಗಂಧಮಾಲಂಬ್ಯ ವೇಲಾವನಗಂಧವಾಹಂ ॥೨೪॥

ಇತ್ಯಾರ್ಷೇ ವಾಸಿಷ್ಠ ಮಹಾರಾಮಾಯಣೇ ವಾಲ್ಮೀಕೀಯೇ ದೇವದೂತೋಕ್ತೇ
ಮೋಕ್ಷೋಪಾಯೇಷು ನಿರ್ವಾಣಪ್ರಕರಣೇ ಉತ್ತರಾರ್ಧೇ ಅವಿದ್ಯೋಪಾಖ್ಯಾನಾಂತರ್ಗತ ವಿಪ
ಶ್ಚಿದುಪಾಖ್ಯಾನೇ "ವಿಪಶ್ಚಿದ್ವ್ಯಾಪಾರ ವರ್ಣನಂ" ನಾಮ
ಚತುರ್ವಿಂಶಾಧಿಕ ಶತತಮಃ ಸರ್ಗಃ

---

೨೨ ಕೌಮಾರ ವರ್ಷಕ್ಕೆ ಬಂದು, ಶ್ಯಾಮ ಪರ್ವತದ ಉತ್ತರ ತಟದಲ್ಲಿ, ಶಾಕದ್ವೀಪದ ಅಂಧಕೂಪದಲ್ಲಿ ಅಂಧನಾಗಿ ನೂರು ವರ್ಷಗಳು ಇದ್ದನು

೨೩ ಮರೀಚಕ ವರ್ಷದಲ್ಲಿ ವಿದ್ಯಾಧರ ವಿದ್ಯೆಯ ಬಲದಿಂದ ವಿದ್ಯಾಧರನಾಗಿ ಪಾಶ್ಚಾತ್ಯನು ಹದಿನಾಲ್ಕು ವರ್ಷವಿದ್ದನು

೨೪ ಸುರತ ಶ್ರಮದಿಂದ ಬಳಲಿದ ಪುರಾರಿಯು, ಶೋಭಾಸಂಪನ್ನವಾಗಿ ಚಲಿಸುವ ಅಂಗಗಳ ಸ್ವೇದಬಿಂದುಗಳನ್ನು ಹೊತ್ತುತಂತ, ಏಲಾಲತಾಲಿಂಗನದಿಂದ ಸುಗಂಧವನ್ನು ಪಡೆದ, ವೇಲಾವನದಿಂದ ಬಂದ ಗಂಧವಾಹ (ವಾಯು) ನನ್ನು ಆಲಂಬಿಸಿ ಅವನು ವಿದ್ಯಾಧರ ವಿದ್ಯೆಯನ್ನು ಪಡೆದು ವಿದ್ಯಾಧರನಾದನು

ಇಂತಿದು ಆರ್ಷವೂ ವಾಲ್ಮೀಕಿಪ್ರೋಕ್ತವೂ ಆದ ವಾಸಿಷ್ಠ ಮಹಾ ರಾಮಾಯಣದ
ನಿರ್ವಾಣ ಪ್ರಕರಣದಲ್ಲಿ "ವಿಪಶ್ಚಿದ್ವ್ಯಾಪಾರ ವರ್ಣನ" ಎಂಬ
ನೂರಿಪ್ಪತ್ತನಾಲ್ಕನೆಯ ಸರ್ಗವು

ಇಪ್ಪತ್ತನೆಯ ಸಂಪುಟವು ಮುಗಿದುದು